# ದೇವದಾಸಿಯರ ತೌಲನಿಕ ಅಧ್ಯಯನ

(ಬಳ್ಳಾರಿ ಜಿಲ್ಲೆಯ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರನ್ನು ಅನುಲಕ್ಷಿಸಿ)

ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ


ಸಂಶೋಧನ ವಿದ್ಯಾರ್ಥಿನಿ

**ರಾಧ ಟಿ**

ಮಾರ್ಗದರ್ಶಕರು

**ಪ್ರೊ ಕೆ ಎಂ ಮೇತ್ರಿ**







ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ -೫೮೩ ೨೭೬

೨೦೧೮

# ದೇವದಾಸಿಯರ ತೌಲನಿಕ ಅಧ್ಯಯನ

(ಬಳ್ಳಾರಿ ಜಿಲ್ಲೆಯ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಎಚ್ ಡಿ(ಸಮಾಜಶಾಸ್ತ್ರ) ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ

ಸಂಶೋಧನ ವಿದ್ಯಾರ್ಥಿನಿ

**ರಾಧ ಟಿ**

ಮಾರ್ಗದರ್ಶಕರು

**ಡಾ ಕೆ ಎಂ ಮೇತ್ರಿ**

**ಪ್ರಾಧ್ಯಾಪಕರು**





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ – ೫೮೩ ೨೭೬

೨೦೧೮

## ಸಂಶೋಧಕರ ಪ್ರಮಾಣ ಪತ್ರ

"ದೇವದಾಸಿಯರ ತೌಲನಿಕ ಅಧ್ಯಯನ" (ಬಳ್ಳಾರಿ ಜಿಲ್ಲೆಯ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರನ್ನು ಅನುಲಕ್ಷಿಸಿ)ಎಂಬ ಶೀರ್ಷಿಕೆಯಲ್ಲಿ ಪಿಎಚ್ ಡಿ (ಸಮಾಜಶಾಸ್ತ್ರ) ಮಹಾಪ್ರಬಂಧವನ್ನು **ಪ್ರೊ ಕೆ ಎಂ ಮೇತ್ರಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗಿದೆ. ಈ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

ದಿನಾಂಕ: 05.11.2018
ಸ್ಥಳ : ವಿದ್ಯಾರಣ್ಯ

**ರಾಧ ಟಿ**
ಸಂಶೋಧನ ವಿದ್ಯಾರ್ಥಿನಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

**ರಾಧ ಟಿ** ಅವರು "**ದೇವದಾಸಿಯರ ತೌಲನಿಕ ಅಧ್ಯಯನ**" (**ಬಳ್ಳಾರಿ ಜಿಲ್ಲೆಯ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರನ್ನು ಅನುಲಕ್ಷಿಸಿ**) ಎಂಬ ಶೀರ್ಷಿಕೆಯಲ್ಲಿ ಪಿಎಚ್ ಡಿ (ಸಮಾಜಶಾಸ್ತ್ರ) ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ದಿನಾಂಕ: ೨೫.೧೧.೧೮
ಸ್ಥಳ : ವಿದ್ಯಾರಣ್ಯ

**ಪ್ರೊ ಕೆ ಎಂ ಮೇತ್ರಿ**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಪರಿವಿಡಿ

# ಅಧ್ಯಾಯ: ಒಂದು
## ಪ್ರವೇಶ

೧.೧. ಪ್ರಸ್ತಾವನೆ

೧.೨.ಅಧ್ಯಯನದ ಉದ್ದೇಶ

೧.೩. ಅಧ್ಯಯನದ ವ್ಯಾಪ್ತಿ

೧.೪.ಅಧ್ಯಯನದ ವಿಧಾನ

೧.೫.ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

೧.೬.ಅಧ್ಯಯನದ ಸ್ವರೂಪ

# ಅಧ್ಯಾಯ: ಒಂದು
# ಪ್ರವೇಶ

## ೧.೧. ಪ್ರಸ್ತಾವನೆ

ಭಾರತ ದೇಶವು ವೈವಿಧ್ಯಮಯ ರಾಷ್ಟ್ರವಾಗಿದೆ. ಅದರಲ್ಲಿ ಕರ್ನಾಟಕ ರಾಜ್ಯವು ತನ್ನದೇ ಆದ ಭಾಷೆ, ಸಂಸ್ಕೃತಿ, ಸಂಪ್ರದಾಯ, ಆಚರಣೆ, ನಂಬಿಕೆಗಳನ್ನು ಹೊಂದಿದೆ. ಇಂತಹ ಆಚರಣೆಗಳಲ್ಲಿ ಮತ್ತು ಸಂಪ್ರದಾಯಗಳಲ್ಲಿ ಸ್ತ್ರೀ ಶೋಷಣೆಗಾಗಿ ಹುಟ್ಟಿಕೊಂಡ ಆಚರಣೆಗಳೇ ಹೆಚ್ಚು ಕಾಣಬಹುದು. ಅವುಗಳೆಂದರೆ, ಬಾಲ್ಯವಿವಾಹ, ಸತಿಸಹಗಮನ, ಬಹುಪತ್ನಿತ್ವ, ಪರದಾ ಪದ್ಧತಿ ಹಾಗೂ ದೇವದಾಸಿ ಪದ್ಧತಿ ಬಹು ಮುಖ್ಯವಾದವು. ಇವುಗಳು ಸಾಮಾಜಿಕ ಬದಲಾವಣೆ ಮತ್ತು ಜನರ ಪ್ರಜ್ಞಾವಂತಿಕೆಯಿಂದಾಗಿ ಇತ್ತೀಚಿನ ದಿನಗಳಲ್ಲಿ ಕಡಿಮೆಯಾಗಿವೆ. ಆದರೆ ದೇವದಾಸಿಯಂತಹ ಪದ್ಧತಿಗಳು ಜೀವಂತವಾಗಿಯೇ ಉಳಿದಿವೆ.

ದೇವದಾಸಿ ಪದ್ಧತಿ ಎನ್ನುವುದು ಆಧುನಿಕ ಜಗತ್ತಿನಲ್ಲಿ ಒಂದು ಸಾಮಾಜಿಕ ಪಿಡುಗಾಗಿದೆ. ಪ್ರಾಚೀನ ಕಾಲದಿಂದಲೂ ಈ ಪದ್ಧತಿ ಬೆಳೆದು ಬಂದಿದೆ ಎಂದು ಹೇಳಲಾಗುವುದು. ಈ ಹಿಂದೆ ರಾಜರು ತಮ್ಮ ವೈಭವ, ಆನಂದಗಳನ್ನು ಹೆಚ್ಚಿಸುವ ಸಲುವಾಗಿ ದೇವದಾಸಿಯರ ದೊಡ್ಡದೊಂದು ದಂಡನ್ನೇ ನೇಮಿಸಿದ್ದರು. ನಮ್ಮ ಮಹಾಕಾವ್ಯ ಮಹಾಭಾರತದ ಪ್ರಕಾರ ಆ ಕಾಲದಲ್ಲಿ ರಾಜರು ತಮ್ಮ ಸ್ಥಾನಮಾನ, ವೈಭವ ಹಾಗೂ ಆನಂದದ ಸಂಕೇತವಾಗಿ ಈ ದೇವದಾಸಿಯರನ್ನು ಹೆಚ್ಚಿನ ಸಂಖ್ಯೆಯಲ್ಲಿ ಸಾಕುತ್ತಿದ್ದರು ಎಂಬ ಅಂಶವನ್ನು ತಿಳಿಯಲಾಗುತ್ತದೆ. ವೇದಗಳ ಕಾಲದ ನಂತರ ಪುರಾಣಗಳ ಯುಗವು ಜನ ಸಾಮಾನ್ಯರಿಗೆ ಧರ್ಮಾಚರಣೆಯನ್ನು ಸರಳಗೊಳಿಸಿಕೊಟ್ಟಿತ್ತು. ಈ ಕಾಲದಲ್ಲೇ ದೇವಾಲಯ ಧರ್ಮ ಮತ್ತು ಸಂಸ್ಕೃತಿಗಳು ಭಾರತದಲ್ಲಿ ಅಭಿವೃದ್ಧಿಗೊಂಡವು. ಜಾತಿ ವ್ಯವಸ್ಥೆಯಲ್ಲಿ ಮೊದಲ ಸ್ಥಾನವನ್ನು ಪುರೋಹಿತ ವರ್ಗವು ಆಕ್ರಮಿಸಿಕೊಂಡಿತು. ಆದ್ದರಿಂದಲೇ ಕ್ಷತ್ರಿಯನು ನಾಯಕಸಾನಿಯರ ಪಡೆಯನ್ನೆ ಕಟ್ಟಿಕೊಂಡು ವೈಭವ ಆನಂದಗಳಿಂದ ಮೆರೆಯುತ್ತಿದ್ದುದನ್ನು ನೋಡಿ ಸಹಿಸಲು ಸಾಧ್ಯವಾಗಲಿಲ್ಲ. ಅದಕ್ಕಾಗಿ ದೇವತೆಗಳ ಮತ್ತು ದೇವಾಲಯಗಳ ಸೇವೆಗಾಗಿ ಹುಡುಗಿಯರನ್ನು ಅಪೇಕ್ಷಿಸುವ ಪದ್ಧತಿಯನ್ನು ಒಂದು ಪವಿತ್ರ ಕಾರ್ಯವೆಂದು ಬೋಧಿಸತೊಡಗಿದರು. ಆ ಕಾಲಕ್ಕೆ ಆಗಲೆ ಜನರಿಗೆ ಸ್ವರ್ಗ, ನರಕಗಳ ಬಗ್ಗೆ ನಂಬಿಕೆಯು ಹುಟ್ಟಿಕೊಂಡಿತ್ತು.

ಧರ್ಮ, ದೇವರುಗಳು ಮತ್ತು ದೇವಾಲಯಗಳಿಗೆ ಸಂಬಂಧಿಸಿದ ಹಲವಾರು ಪದ್ಧತಿಗಳಲ್ಲಿ ಕೆಲವು ಪಟ್ಟಭದ್ರ ಹಿತಾಸಕ್ತಿಗಳನ್ನು ಉಳಸಿಕೊಳ್ಳಲು ಬ್ರಾಹ್ಮಣ ಪುರೋಹಿತರಿಗೆ ಅವಕಾಶ ನೀಡುವಲ್ಲಿ ಬದಲಾದ ಕಾಲದೊಂದಿಗೆ ಧರ್ಮ ಮತ್ತು ಆಚರಣೆಗಳು ಬದಲಾವಣೆಗೆ ಒಳಗಾದವು. ಹಿಂದೂ ಧರ್ಮ ಮತ್ತು ಪುರಾಣಗಳಲ್ಲಿ ವಿವಿಧ ಪಾತ್ರಗಳನ್ನೊಳಗೊಂಡ ಅನೇಕಾನೇಕ ದೇವರುಗಳು, ಉಪದೇವತೆಗಳು ಅತಿಮಾನುಷ ಶಕ್ತಿಗಳು ಜನಸಾಮಾನ್ಯರನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವ ಸಲುವಾಗಿ ದೃಷ್ಟಿಭೂತ ಪ್ರೇತಗಳನ್ನು ಸೃಷ್ಟಿಸಲಾಯಿತು. ದೇವಾನುದೇವತೆಗಳಿಂದ ಆಶೀರ್ವಾದಗಳನ್ನು ಪಡೆಯಲು ಮತ್ತು ಭೂ ಪ್ರೇತಾದಿಗಳನ್ನು ಪ್ರಸನ್ನಗೊಳಿಸಲು ಸಂಭವನೀಯ ಅನೇಕ ವಿಧಾನಗಳಲ್ಲಿ ಸುಂದರ ಹುಡುಗಿರನ್ನು ದೇವರುಗಳಿಗೆ ಅರ್ಪಿಸುವುದು ಒಂದು ವಿಧಾನ ಎಂದು ಸಲಹೆ ನೀಡುತ್ತಿದ್ದರು. ಗಂಡು ಸಂತಾನವಿಲ್ಲದೆ ಮೋಕ್ಷ ಸಿಗುವುದಿಲ್ಲ ಎಂಬುದಕ್ಕಾಗಿ ಮೊದಲು ಹೆಣ್ಣು ಸಂತಾನ ಪಡೆದಿದ್ದರೆ ಆ ಹೆಣ್ಣನ್ನು ದೇವಾಲಯಕ್ಕೆ ಅರ್ಪಿಸಿದರೆ ಗಂಡು ಸಂತಾನವಾಗುವುದು ಎಂದು ಸಲಹೆ ನೀಡುತ್ತಿದ್ದರು. ಆ ಪುರೋಹಿತ ವರ್ಗವು ಕೆಳಜಾತಿಯ ಜನರು ಸಣ್ಣ ವಯಸ್ಸಿನ ಹುಡುಗಿಯರನ್ನು ತಮ್ಮ ಸಮುದಾಯದಿಂದ ದೇವರ ಹೆಸರಿಗೆ ಬಿಡಬೇಕೆಂದು ಅವರ ಮೇಲೆ ನಿಬಂಧನೆ ಹಾಕಿದರು. ಈ ಮೂಲಕ ಬ್ರಾಹ್ಮಣರು ತಮ್ಮ ಉಳಿದ ಜಾತಿಯ ಜನರು ಒಂದಕ್ಕಿಂತ ಹೆಚ್ಚಿನ ಹುಡುಗಿಯರನ್ನು ಮದುವೆಯಾಗದೆಯೇ, ಲೈಂಗಿಕ ಸಂಬಂಧಗಳನ್ನು ಹೊಂದುವುದು ಸಾಧ್ಯವಾಯಿತು. ಅಂತಹ ದೇವದಾಸಿಯರ ಕುಟುಂಬದವರಿಗೆ ಆರ್ಥಿಕ ಸಹಾಯ ಮಾಡುತ್ತಿದ್ದರು ಹಾಗಾಗಿ ಕೆಳಜಾತಿಯಲ್ಲಿ ಬಡತನದಿಂದ ಇರುವವರು ಈ ಪದ್ಧತಿಗೆ ಮಕ್ಕಳನ್ನು ಒಳಪಡಿಸುತ್ತಿದ್ದರು.

ಕ್ರಿ.ಶ.ಏಳನೇಯ ಶತಮಾನದ ವೇಳೆಗೆ ದಕ್ಷಿಣ ಭಾರತದಲ್ಲಿ ರಾಜರುಗಳ ಆಸಕ್ತಿಯಿಂದಾಗಿ ದೇವಾಲಯಗಳ ನಿರ್ಮಾಣದ ಕಾರ್ಯಗಳು ಹೆಚ್ಚಾಗತೊಡಗಿದವು. ಇದರಿಂದಾಗಿ ಈ ದೇವದಾಸಿ ಪದ್ಧತಿಯು ಭಾರತೀಯ ಸಂಸ್ಕೃತಿಯಲ್ಲಿ ಅಷ್ಟೋಂದು ಆಳವಾಗಿ ಬೇರು ಬಿಡಲು ಕಾರಣವಾಯಿತು. ಸೂರ್ಯ ದೇವಾಲಯವು ಶೃಂಗಾರಕ್ಕೆ ಪ್ರಸಿದ್ಧವಾಗಿದೆ. ಈ ದೇವಾಲಯದಲ್ಲಿ ದೇವದಾಸಿಯರ ಸಂಖ್ಯೆ ಹೆಚ್ಚಾಗಿ ಕಾಣಲಾಗುವುದು. ಹೀಗೆ ಹತ್ತನೇ ಶತಮಾನದ ಅಂತ್ಯದ ವೇಳೆಗೆಲ್ಲಾ ದೇವದಾಸಿಯರ ಸಂಖ್ಯೆ ಹೆಚ್ಚುತ್ತಾ ಹೋಯಿತು. ಭಾರತದಲ್ಲಿ ಮುಸ್ಲಿಮರ ಆಕ್ರಮಣದ ಕಾಲದಿಂದಲೇ ದೇವದಾಸಿ ಪದ್ಧತಿ ಉತ್ತರ ಭಾರತದಲ್ಲಿ ಕಡಿಮೆಯಾಗುತ್ತಾ ಬಂತು. ಸೋಮನಾಥ ದೇವಾಲಯಗಳಂಥ ಅನೇಕ ದೇವಾಲಯಗಳನ್ನು, ವಿಗ್ರಹಗಳನ್ನು ನಾಶಗೊಳಿಸಿ ಹಿಂದೂಗಳನ್ನು ಇಸ್ಲಾಂ ಧರ್ಮಕ್ಕೆ ಮತಾಂತರಿಸಿ ದೇವಾಲಯಗಳ ಸ್ಥಳದಲ್ಲಿ ಮಸೀದಿಗಳನ್ನು ಕಟ್ಟಿಸಿದಾಗ ಸಂಪೂರ್ಣವಾಗಿ ಈ ಪದ್ಧತಿ ಕೊನೆಗೊಂಡಿತು. ಆದರೆ ದಕ್ಷಿಣ ಭಾರತದಲ್ಲಿ ಹಿಂದೂ ರಾಜರುಗಳ ಆಳ್ವಿಕೆಯೆ ಇತ್ತು. ಹಾಗಾಗಿ ಈ ಪದ್ಧತಿ ಇಲ್ಲಿ ಬೆಳೆದು ಇಪ್ಪತ್ತನೇ ಶತಮಾನದ ವೇಳೆಗೆ ವ್ಯಾಪಾರೀಕರಣಗೊಂಡಿತು. ಹೀಗಾಗಿ ಪವಿತ್ರ ಸ್ಥಾನದಲ್ಲಿದ್ದ ದೇವದಾಸಿ ಪದ್ಧತಿ ಅವನತಿಗೊಂಡು ಧಾರ್ಮಿಕ ವೇಶ್ಯಾವೃತ್ತಿಯಾಗಿ ಪರಿವರ್ತನೆಗೊಂಡಿದೆ.

ದೇವದಾಸಿ ಎಂದರೆ ದೇವರಿಗೆ ದಾಸಿಯಾದವಳು ಎಂದು ಅರ್ಥವಾಗುತ್ತದೆ. ದೇವರದಾಸಿ, ಸೇವಕಿ, ಪವಿತ್ರದಾಸಿ, ದೇವಾಲಯದ ಕನ್ಯೆ, ದೇವಾಲಯದ ನರ್ತಕಿ, ದೇವರ ಗುಡಿಸೆಟ್ಟಿ ಮತ್ತು

ದೇವರ ನಾಯಕಸಾನಿ ಎಂಬ ಅರ್ಥಗಳಲ್ಲಿ ಇದನ್ನು ಬಳಸಲಾಗುತ್ತದೆ. ಈ ಪದ್ಧತಿಯಲ್ಲಿ ಚಿಕ್ಕ ಹುಡುಗಿಯರನ್ನು ದೇವ-ದೇವತೆಗಳ ಅಥವಾ ಪೂಜೆಗೊಂಡ ಯಾವುದೊ ಒಂದು ವಸ್ತುವಿನ ಎದುರಿಗೆ ಸಾರ್ವಜನಿಕ ಸಮಾರಂಭದಲ್ಲಿ ಆ ಕನ್ಯೆಯು ಕಲಿತ ಸಂಗೀತ ಹಾಗೂ ನರ್ತನೆಯನ್ನು ಪ್ರದರ್ಶಿಸಿ ಆ ದೈವಕ್ಕೆ ಅವಳನ್ನು ವಿವಾಹ ಮಾಡಿ ಅರ್ಪಿಸಲಾಗುತ್ತಿತ್ತು. ಹೀಗೆ ಅರ್ಪಣೆಗೊಂಡ ದೇವದಾಸಿಯರ ಬಗೆಗಳೆಂದರೆ ಪಾತರದವರು, ಬಸವಿಯರು, ಜೋಗತಿಯರು ಧಾರ್ಮಿಕ ಕಟ್ಟುಪಾಡುಗಳು, ಮೂಢನಂಬಿಕೆ ದೈವಭಕ್ತಿ ಮತ್ತು ಪರಂಪರೆ ಹೀಗೆ ನಂಬಿಸಿ ವಿವಿಧ ಹೆಸರುಗಳಲ್ಲಿ ಪುರುಷ ಪ್ರಧಾನ್ಯ ಮೌಲ್ಯಗಳು ತಮ್ಮ ಆಸೆಯನ್ನು ತೀರಿಸಿಕೊಳ್ಳಲು ಸಂಚು ಹೂಡಿದವು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಈ ಮೇಲೆ ಹೇಳಿದ ಎಲ್ಲಾ ನಂಬಿಕೆಗಳನ್ನು ಮೌಲ್ಯವಾಗಿಸಿ ಬಡತನ ಮತ್ತು ಹಸಿವಿನಿಂದ ಗುಲಾಮರಾಗಿದ್ದ ಕೆಳ ಜಾತಿಯ ಹೆಣ್ಣು ಮಕ್ಕಳ ಮೇಲೆ ಹೇರಿರುವುದು. ಇವರನ್ನು ಪಾತರದವರು, ದೇವದಾಸಿಯರು, ಬಸವಿಯರು, ನಾಯಕಸಾನಿಯರು, ಸೂಳೆಯರು, ಜೋಗತಿಯರು, ವೇಶ್ಯೆಯರು ಎಂದು ಕರೆಯತೊಡಗಿದರು. ಇವು ಒಂದಕ್ಕೊಂದು ಸೂಕ್ಷ್ಮವಾದ ಭಿನ್ನತೆ ಮತ್ತು ಗುಣಲಕ್ಷಣಗಳನ್ನು ಹೊಂದಿವೆ. ಆದರೆ ಇವರೆಲ್ಲರು ಬಡವರು ಮತ್ತು ಕೆಳಜಾತಿಗೆ ಸೇರಿದ ಹೆಣ್ಣುಗಳಾಗಿದ್ದಾರೆ.

ಪ್ರಸ್ತುತ ಸಂದರ್ಭದಲ್ಲಿ ಈ ಪದ್ಧತಿಯ ಆಚರಣೆಯಲ್ಲಿ ಬದಲಾವಣೆಯನ್ನು ಕಾಣಬಹುದು. ೧೯೮೨ರಲ್ಲಿ ದೇವದಾಸಿ ನಿಷೇದ ಕಾಯ್ದೆ ಬಂದ ನಂತರದಲ್ಲಿ ಕಾನೂನಿನ ಕಣ್ಣು ತಪ್ಪಿಸಿ ಕದ್ದು ಮುಚ್ಚಿ ಈ ಪದ್ಧತಿ ಆಚರಣೆ ಮಾಡುವ ಸಂಗತಿಗಳನ್ನು ಈಗಲೂ ಕಾಣಬಹುದಾಗಿದೆ. ಈ ಪದ್ಧತಿಗೆ ಒಳಗಾದ ದೇವದಾಸಿಯರಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗದ ಮಹಿಳೆಯರು ಮಾತ್ರ ಇದ್ದಾರೆ. ಆಧುನಿಕತೆಯಲ್ಲಿ ದೇವದಾಸಿ ಪದ್ಧತಿಯು ಒಂದು ಸಾಮಾಜಿಕ ಪಿಡುಗಾಗಿದೆ. ಧರ್ಮದ ಹೆಸರಿನಲ್ಲಿ ಕೆಳವರ್ಗದ ಜನರಿಗೆ ಹೇರಲ್ಪಟ್ಟ ಒಂದು ಅನಿಷ್ಟ ಪದ್ಧತಿ ಎಂದೇ ಹೇಳಬಹುದಾಗಿದೆ. ಹಿಂದಿನ ಕಾಲದಲ್ಲಿ ದೇವದಾಸಿಯರಿಗೆ ಇದ್ದ ಗೌರವ, ಮಾರ್ಯಾದೆ, ದೈವಿಭಾವನೆಗಳು ಆಧುನಿಕ ಯುಗದಲ್ಲಿನ ದೇವದಾಸಿಯರಿಗೆ ಕಂಡುಬರುವುದಿಲ್ಲ. ಒಬ್ಬ ದೇವದಾಸಿಯಾದ ಸ್ತ್ರೀ ತನ್ನ ಬದುಕಿನುದ್ದಕ್ಕೂ ಸಮಸ್ಯೆಗಳೆಂಬ ಕಷ್ಟದಲ್ಲಿ ಸಿಲುಕುವ ಸಾಧ್ಯತೆಗಳನ್ನು ಪ್ರಸ್ತುತ ಸಮಾಜದಲ್ಲಿ ಕಾಣಬಹುದು. ಸಮಾಜದಲ್ಲಿ ಒಂದು ಗಂಡಿನ ಆಸರೆ ಇಲ್ಲದೆ ಹೆಣ್ಣು ತಾನೊಬ್ಬಳೇ ಮಕ್ಕಳನ್ನು ಕಟ್ಟಿಕೊಂಡು ಬದುಕು ಎಂಬ ಯುದ್ಧದಲ್ಲಿ ಹೋರಾಟ ಮಾಡುತ್ತಾಳೆ. ನೂರಾರು ಕಷ್ಟಗಳು ಮತ್ತು ಸಮಾಜದಲ್ಲಿ ಉತ್ತಮ ಸ್ಥಾನಮಾನಗಳು ಸಿಗದಿರುವ ಪರಿಸ್ಥಿತಿಯಲ್ಲೂ ಅವಳು ಬದುಕುತ್ತಿರುತ್ತಾಳೆ. ಜೀವನ ಸಾಗಿಸಲು ಆ ಹೆಣ್ಣು ಕೂಲಿ, ಕೃಷಿ ಕೂಲಿ, ವ್ಯಾಪಾರ ಮುಂತಾದ ಕೆಲಸವನ್ನು ಮಾಡುತ್ತಿದ್ದಾಳೆ. ಇನ್ನೂ ಕೆಲವರು ಒತ್ತಡಗಳಿಂದ ವೇಶ್ಯಾವೃತ್ತಿಗೆ ಇಳಿದಿರುವ ಪ್ರಸಂಗಗಳನ್ನು ಕಾಣುತ್ತೇವೆ.

ದೇವದಾಸಿ ಪದ್ಧತಿಯು ಅನಿಷ್ಟವಾಗಿ ಪರಿಣಮಿಸಿದ್ದರಿಂದ ಸರ್ಕಾರ ೧೯೮೨ ರಲ್ಲಿ ದೇವದಾಸಿ ನಿಷೇಧ ಕಾಯ್ದೆಯನ್ನು ಜಾರಿಗೊಳಿಸಿತು. ೧೯೮೨ರ ನಂತರವೂ ಸರ್ಕಾರದ ಕಣ್ಣು ತಪ್ಪಿಸಿ ಸಮಾಜವು ಹೆಣ್ಣು ಮಕ್ಕಳನ್ನು ಈ ಪದ್ಧತಿಗೆ ಒಳಪಡಿಸಿದ ಎಷ್ಟೋ ಸಂಗತಿಗಳನ್ನು ಕಾಣಬಹುದು. ಅಷ್ಟೇ ಅಲ್ಲದೆ

ದೇವದಾಸಿಯರಿಗೆ ಸರ್ಕಾರವು ವಿಶೇಷವಾದ ಸೌಲಭ್ಯಗಳನ್ನು ಒದಗಿಸುವ ಕಾರ್ಯವನ್ನು ಕೈಗೆತ್ತಿಕೊಂಡಿದೆ. ದೇವದಾಸಿಯರ ಪುನರ್‌ವಸತಿ ಕಾರ್ಯಕ್ರಮವನ್ನು ಜಾರಿಗೆ ತಂದು ಅವರ ಉತ್ತಮ ಜೀವನಕ್ಕೆ ಭವಿಷ್ಯ ರೂಪಿಸಿಕೊಟ್ಟಿದೆ ಎಂದೇ ಹೇಳಬಹುದು. ಮತ್ತೊಂದು ದುರಂತದ ಸಂಗತಿಯೆಂದರೆ ಅವುಗಳು ದೇವದಾಸಿಯರಿಗೆ ತಲುಪುವಲ್ಲಿ ಅನೇಕ ಸಮಸ್ಯೆಗಳನ್ನು ಕಾಣಲಾಗುತ್ತದೆ. ಹಾಗಾಗಿ ಅವರ ಸಮಸ್ಯೆಗಳು ಹಾಗೆಯೇ ಉಳಿದಿವೆ. ಈ ಹಿನ್ನೆಲೆಯಲ್ಲಿ ದೇವದಾಸಿಯರ ಸ್ಥಿತಿಗತಿಗಳನ್ನು ತಿಳಿಯುವ ಅಧ್ಯಯನ ಅವಶ್ಯವೆನಿಸಿದೆ.

ದೇವದಾಸಿ ಪದ್ದತಿಯು ಪರಿಶಿಷ್ಟ ಮತ್ತು ಹಿಂದುಳಿದ ವರ್ಗಗಳ ಸಮುದಾಯಗಳಲ್ಲಿ ಆಚರಣೆಯಲ್ಲಿದೆ. ಅವುಗಳೆಂದರೆ, ಚಲುವಾದಿ, ಚೆನ್ನದಾಸರು, ಡೊಂಬರು, ವಡ್ಡರು, ಬೇಡರು, ಗಂಗಾಮತಸ್ಥರು, ಕುರುಬರು ವಿಶೇಷವಾಗಿ ಅಸ್ಪೃಶ್ಯರಾದ ಮಾದಿಗರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇಲ್ಲಿಯವರೆಗಿನ ಅಧ್ಯಯನಗಳು ಪ್ರತ್ಯೇಕವಾಗಿ ಸಮುದಾಯಗಳ ಬಿಡಿ ಬಿಡಿ ಭಾಗಗಳಾಗಿ ನಡೆದಿವೆ. ಈ ಮೂರು ವರ್ಗಗಳು ವಿಭಿನ್ನವಾಗಿದ್ದು, ಒಂದೇ ಪದ್ಧತಿಯನ್ನು ಹೊಂದಿವೆ. ಹಾಗಾಗಿ ಆಯಾ ವರ್ಗಗಳ ದೇವದಾಸಿಯರನ್ನು ಸಾಮಾಜಿಕ, ಧಾರ್ಮಿಕ,ಆರ್ಥಿಕ, ಶೈಕ್ಷಣಿಕ, ರಾಜಕೀಯ ನಿಟ್ಟಿನಲ್ಲಿ ದೇವದಾಸಿಯರನ್ನು ತೌಲನಿಕವಾಗಿ ಅಧ್ಯಯನ ನಡೆಸಲಾಗಿದೆ.

### ೧.೨. ಅಧ್ಯಯನದ ಉದ್ದೇಶ

ಸಂಶೋಧನೆಯ ಕ್ಷೇತ್ರವು ಸಮಸ್ಯೆಗಳನ್ನು ಇಟ್ಟುಕೊಂಡು ಆ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳುವುದಾಗಿದೆ. ಉತ್ತರವು ವೈಯಕ್ತಿಕವಾಗಿರಬಹುದು ಅಥವಾ ಸಾಮೂಹಿಕವಾಗಿರಬಹುದು. ಒಟ್ಟಿನಲ್ಲಿ ಸಂಶೋಧನೆಯಿಂದ ಹೊರಹೊಮ್ಮಿದ ಫಲಿತಾಂಶ ಉಪಯೋಗವಾಗಿರಬೇಕು ಸಂಶೋಧನೆಯ ಉದ್ದೇಶಗಳು ನಿರ್ಧಿಷ್ಟ ಯೋಜನೆಯಡಿಯಲ್ಲಿ ಬರುವ ಒಟ್ಟು ಕೆಲಸಗಳ ಒಂದು ಸ್ಥೂಲ ಚಿತ್ರಣವನ್ನು ಕೊಡುತ್ತವೆ. ಸಮಸ್ಯೆ ರೂಪದಲ್ಲಿ ಎತ್ತಿದ ಪ್ರಶ್ನೆಗಳಿಗೆ ಉತ್ತರ ಹುಡುಕುವ ಕೆಲಸವನ್ನು ಉದ್ದೇಶ ಸೂಚಿಸುತ್ತದೆ. ಅಧ್ಯಯನದ ಉದ್ದೇಶಗಳು ಸಂಶೋಧನಾ ಕೆಲಸಕ್ಕೆ ಒಂದು ಮಾರ್ಗಸೂಚಿಯಂತೆ ಕೆಲಸ ಮಾಡುತ್ತವೆ. ನಿರ್ಧಿಷ್ಟ ಉದ್ದೇಶಗಳನ್ನು ಇಟ್ಟುಕೊಂಡು ಕಾರ್ಯನಿರ್ವಹಿಸಿದಾಗ ಅಧ್ಯಯನ ಪರಿಪೂರ್ಣವಾಗುತ್ತದೆ. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ದೇವದಾಸಿಯರ ತೌಲನಿಕ ಅಧ್ಯಯನ ಎಂಬ ವಿಷಯವನ್ನು ಸಂಶೋಧನೆಗೆ ಒಳಪಡಿಸಲಾಗಿದೆ. ಈ ಅಧ್ಯಯನ ಪ್ರಮುಖ ಉದ್ದೇಶಗಳು ಈ ಕೆಳಗಿನಂತಿವೆ.

• ಪಾತರದವರು, ದೇವದಾಸಿ, ಬಸವಿ ಮತ್ತು ಜೋಗತಿ ಪದ್ಧತಿಗಳ ತುಲಾನಾತ್ಮಕ ವಿವರಣೆ ಮತ್ತು ಆಚರಣೆಗಳನ್ನು ಶೋಧಿಸಲಾಗಿದೆ.

• ಪರಿಶಿಷ್ಟ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರ ಸಾಮಾಜಿಕ, ಧಾರ್ಮಿಕ, ಆರ್ಥಿಕ,ಶೈಕ್ಷಣಿಕ, ರಾಜಕೀಯ, ಆರೋಗ್ಯ ಮತ್ತು ಕಲಾಜೀವನಗಳ ಕುರಿತು ಇರುವ ಹೋಲಿಕೆ ಮತ್ತು ವ್ಯತ್ಯಾಸಗಳನ್ನು ತಿಳಿಸಲಾಗಿದೆ.

- ದೇವದಾಸಿ ಪುನರ್ವಸತಿ ಯೋಜನೆಗಳನ್ನು ಪಡೆಯುವಲ್ಲಿ ದೇವದಾಸಿಯರ ಸಾದಕ ಮತ್ತು ಬಾದಕಗಳ ಕುರಿತು ವಿಶ್ಲೇಕ್ಷಿಸಲಾಗಿದೆ.
- ಪ್ರಸ್ತುತ ಸಂದರ್ಭ ಸಮುದಾಯಗಳಲ್ಲಿನ ದೇವದಾಸಿಯರ ಬದಲಾವಣೆಗಳನ್ನು ತಿಳಿಯಲಾಗಿದೆ.

### ೧.೩. ಅಧ್ಯಯನದ ವ್ಯಾಪ್ತಿ

ಯಾವುದೇ ಒಂದು ಸಂಶೋಧನೆಯು ಯಶಸ್ವಿಯಾಗಬೇಕಾದರೆ ಅದಕ್ಕೆ ವ್ಯಾಪ್ತಿ ಬಹಳ ಮುಖ್ಯವಾಗುತ್ತದೆ. ಸಾಮಾನ್ಯ ಅರ್ಥದಲ್ಲಿ ವ್ಯಾಪ್ತಿ ಎಂದರೆ ಎಲ್ಲೆ, ಮೇರೆ, ಗಡಿ ಎಂದಾಗುತ್ತದೆ. ನಿರ್ದಿಷ್ಟ ಹಾಗೂ ಉದ್ದೇಶ ಪೂರಿತವಾದ ಸಂಶೋಧನೆಯು ಗುರಿ ತಲುಪಬೇಕಾದರೆ ಅದಕ್ಕೆ ತನ್ನದೇ ಆದ ಚೌಕಟ್ಟಿನ ಕ್ರಮ ಮುಖ್ಯ. ಆಗ ಬದ್ಧತೆಯಿಂದ ಸ್ಪಷ್ಟವಾಗಿ, ಸಂಪೂರ್ಣವಾಗಿ ಮಾಹಿತಿ ಸಂಗ್ರಹಿಸಲು ಸಾಧ್ಯವಾಗುತ್ತದೆ. ವ್ಯಾಪ್ತಿಗಳಿಲ್ಲದ ಅಧ್ಯಯನವು ಗೊಂದಲಕ್ಕೆ ಒಳಗಾಗಿಸಂಶೋಧಕರ ದಾರಿ ತಪ್ಪಿಸುತ್ತದೆ. ಆದ್ದರಿಂದ ಅದಕ್ಕೆ ಸಂಶೋಧನೆಗೆ ವ್ಯಾಪ್ತಿ ಮುಖ್ಯವಾಗುತ್ತದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಬಳ್ಳಾರಿ ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯ ಏಳು ತಾಲೂಕುಗಳನ್ನು ಹೊಂದಿದೆ. ಅವುಗಳೆಂದರೆ ಬಳ್ಳಾರಿ, ಹೊಸಪೇಟೆ, ಸಂಡೂರು, ಸಿರುಗುಪ್ಪ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ಮತ್ತು ಹೂವಿನ ಹಡಗಲಿ, ಇವುಗಳೆಲ್ಲವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಇಲ್ಲಿರುವ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರ ಸ್ಥಿತಿಗಳನ್ನು ವ್ಯಕ್ತಿ ಅಧ್ಯಯನದ ಮೂಲಕ ಮಾಹಿತಿ ಸಂಗ್ರಹಿಸಿ ದೇವದಾಸಿಯರನ್ನು ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ, ರಾಜಕೀಯ ಮುಂತಾದ ದೃಷ್ಟಿಕೋನದಿಂದ ತೌಲನಿಕವಾಗಿ ಅಧ್ಯಯನ ನಡೆಸುವ ಪ್ರಯತ್ನವನ್ನು ಮಾಡಲಾಗಿದೆ.

### ೧.೪. ಅಧ್ಯಯನದ ವಿಧಾನ

ಅಧ್ಯಯನದ ಉದ್ದೇಶಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಯಾವ ಮೂಲದಿಂದ ಮತ್ತು ಯಾವ ಕ್ರಮದಲ್ಲಿ ಸಂಗ್ರಹಿಸಬೇಕೆನ್ನುವ ವಿವರಗಳನ್ನು ವಿಧಾನ ತಿಳಿಸುತ್ತದೆ. ಸಂಶೋಧನೆ ನಡೆಸಿಕೊಂಡು ಹೋಗಲು ಉಪಯುಕ್ತ ಕ್ರಮಬದ್ಧವಾದ ಅಧ್ಯಯನ ಇರಬೇಕಾಗುತ್ತದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ದೇವದಾಸಿಯರ ತೌಲನಿಕ ಅಧ್ಯಯನ (ಬಳ್ಳಾರಿ ಜಿಲ್ಲೆಯ ಪರಿಶಷ್ಟರ ಮತ್ತು ಹಿಂದುಳಿದ ವರ್ಗಗಳನ್ನು ಅನುಲಕ್ಷಿಸಿ) ಎಂಬ ವಿಷಯವನ್ನು ಆಯ್ದುಕೊಳ್ಳಲಾಗಿದೆ. ಈಗಾಗಲೇ ಈ ಕ್ಷೇತ್ರದಲ್ಲಿ ಸಂಶೋಧನೆ ಆಗಿರುವ ವಿಷಯಗಳನ್ನು ಪರಾಮರ್ಶಿಸಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಅದಕ್ಕಾಗಿ ಈ ಕೆಳಗಿನ ಅಧ್ಯಯನದ ವಿಧಾನಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

#### ೧.೪.೧. ಪ್ರಶ್ನಾವಳಿಯ ವಿಧಾನ

ದೇವದಾಸಿ ಪದ್ಧತಿಯ ಅಧ್ಯಯನಕ್ಕೆ ಅಗತ್ಯವಿರುವ ಉದ್ದೇಶಿತ ಮಾಹಿತಿಗಳನ್ನು ಸಂಗ್ರಹಿಸಲು ಈ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದ ಸಾಹಿತ್ಯ ಅವಲೋಕನೆಯಿಂದ

ದೇವದಾಸಿರನ್ನು ಅಧ್ಯಯನ ಮಾಡಲು ಮತ್ತು ಮಾಹಿತಿ ಪಡೆಯಲು ಪ್ರಶ್ನಾವಳಿಯು ಪ್ರಮುಖ ಪಾತ್ರ ವಹಿಸುತ್ತದೆ. ಅಧ್ಯಯನದ ಮುಖ್ಯ ಉದ್ದೇಶಗಳಿಗೆ ಅನುಗುಣವಾಗಿ ವಿವಿಧ ಆಯಾಮಗಳಲ್ಲಿ ಹಲವಾರು ಪ್ರಶ್ನೆಗಳನ್ನು ಹೊಂದಿರುವ ಸೂಕ್ತ ಪ್ರಶ್ನಾವಳಿಯನ್ನು ತಯಾರಿಸಿಕೊಂಡು ಮಾಹಿತಿಯನ್ನು ಪಡೆಯಲಾಗಿದೆ. ಈ ಮೂಲಕ ದೇವದಾಸಿಯರನ್ನು ಮುಖಾಮುಖಿ ಸಂದರ್ಶನ ಮಾಡಿ ಮಾಹಿತಿಯನ್ನು ಸಂಗ್ರಹಣೆ ಮಾಡಲಾಗಿದೆ. ಇದರ ಮೂಲಕ ನಿಜವಾದ ಚಿತ್ರಣವನ್ನು ತಿಳಿದುಕೊಳ್ಳಲು ಅನುಕೂಲವಾಗಿದೆ.

**೧.೪.೨.ಸಂದರ್ಶನ ವಿಧಾನ**

ಈ ವಿಧಾನದಲ್ಲಿ ದೇವದಾಸಿಯರ ಆಯ್ದ ಕುಟುಂಬಗಳು ಮತ್ತು ದೇವದಾಸಿಯರ ಜೊತೆ ಅವರ ವ್ಯಾಪ್ತಿಗೆ ಬರುವ ಇತರೆ ವ್ಯಕ್ತಿಗಳೊಂದಿಗೆ ಸಂದರ್ಶನ ನಡೆಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಒಟ್ಟಾರೆ ಬಳ್ಳಾರಿಯ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗದ ದೇವದಾಸಿಯರನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸಲಾಗಿದೆ.

**೧.೪.೩.ಐತಿಹಾಸಿಕ ವಿಧಾನ**

ಈ ವಿಧಾನವು ದೇವದಾಸಿ ಸಂಪ್ರದಾಯದ ಹಿನ್ನೆಲೆ ಮತ್ತು ಚರಿತ್ರೆ ತಿಳಿಯಲು ಬಳಸಲಾಗಿದೆ. ಈ ವಿಧಾನವನ್ನು ಅವರ ಆಚರಣೆಯಲ್ಲಿನ ವ್ಯತ್ಯಾಸಗಳು, ನಂಬಿಕೆಗಳು ಇತ್ಯಾದಿಗಳ ಬಗ್ಗೆ ಆ ಸಮುದಾಯದ ಹಿರಿಯರಿಂದ ಅವರ ಅನುಭವ, ಅವರ ಸಂಸ್ಕೃತಿಯಸ್ವರೂಪ ಇತಿಹಾಸವನ್ನು ತಿಳಿಯಲು ಬಳಸಲಾಗಿದೆ.

**೧.೪.೪. ನಮೂನೆ ಅಥವಾ ಮಾದರಿ ವಿಧಾನ**

ಸಂಶೋಧನೆಯ ಕ್ಷೇತ್ರವು ಬಹಳ ವಿಶಾಲವಾದುದ್ದರಿಂದ ಅದನ್ನು ಒಂದೇ ಬಾರಿಗೆ ಅಧ್ಯಯನ ಮಾಡುವುದು ಕಷ್ಟಕರವಾಗಿದೆ.ಆದ್ದರಿಂದ ಆ ಕ್ಷೇತ್ರದ ಸಾಮಾನ್ಯ ಗುಣಗಳನ್ನು ಹೊಂದಿರುವ ಅದನ್ನು ಪ್ರತಿನಿಧಿಸಬಹುದಾದಂತಹ ಅದರ ಭಾಗವೊಂದನ್ನು ಅಧ್ಯಯನದ ದೃಷ್ಟಿಯಿಂದ ಆಯ್ದುಕೊಳ್ಳುವುದಾಗಿದೆ. ಈ ಅಧ್ಯಯನದಲ್ಲಿ ದೇವದಾಸಿಯರನ್ನು ನಮೂನೆ ವಿಧಾನದ ಮೂಲಕ ಆಯ್ದುಕೊಂಡು ತೌಲನಿಕ ಅಧ್ಯಯನ ಮಾಡಲಾಗಿದೆ.

**೧.೪.೫. ತೌಲನಿಕ ವಿಧಾನ**

ಈ ವಿಧಾನವನ್ನು ಅಧ್ಯಯನಕ್ಕೆ ಮುಖ್ಯವಾದ ಸಂಶೋಧನಾ ವಿಧಾನವಾಗಿ ಬಳಸಿಕೊಳ್ಳಲಾಗಿದೆ. ತೌಲನಿಕ ವಿಧಾನವು ಬಹುಕಾಲದಿಂದಲೂ ಸಮಾಜ ವಿಜ್ಞಾನಗಳಲ್ಲಿ ಪ್ರಚಲಿತವಾಗಿದೆ. ಸಮಾಜಶಾಸ್ತ್ರದ ಅಧ್ಯಯನದಲ್ಲಿ ಪ್ರಯೋಗಕ್ಕೆ ಅವಕಾಶವಿಲ್ಲದೆ ಅವಲೋಕನದಿಂದಲೇ ಆನೇಕ ಮಾಹಿತಿಯನ್ನು ಸಂಗ್ರಹಿಸಲು ಸಾಧ್ಯವಾಗಿದೆ. ಸಮಾಜದ ಪ್ರಕ್ರಿಯೆಗಳು ಹಲವು ಭಾರಿ ಹತ್ತಾರು ವರ್ಷಗಳ ಅಂತರಕ್ಕೆ ಪಸರಿಸುತ್ತದೆ. ನಾವು ಹತ್ತಾರು ವರ್ಷಗಳವರಗೆ ಕಾದು ಕುಳಿತು ಸಾಮಾಜೀಕ ಘಟನೆಗಳನ್ನು

ಅವಲೋಕಿಸಲು ಸಾಧ್ಯವಿಲ್ಲ. ಆದುದರಿಂದ ವಿವಿಧ ಸಂದರ್ಭಗಳನ್ನು ಒಳಗೊಂಡ ಸಮಾಜಗಳನ್ನು ಹೋಲಿಸಿ ಆ ಸಂದರ್ಭಗಳ ವ್ಯತ್ಯಾಸಕ್ಕೆ ಕಾರಣಗಳನ್ನು ನಿರ್ಣಯಿಸಲಾಗಿದೆ.

ಅಧ್ಯಯನ ಕ್ಷೇತ್ರವಾದ ಬಳ್ಳಾರಿ ಜಿಲ್ಲೆಯ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರ ಸಾಮಾಜಿಕ, ಧಾರ್ಮಿಕ,ಆರ್ಥಿಕ, ಶೈಕ್ಷಣಿಕಮತ್ತು ರಾಜಕೀಯ ಇವುಗಳ ನಡುವಿನ ಸಾಮ್ಯತೆ ಮತ್ತು ವ್ಯತ್ಯಾಸವನ್ನು ಅರಿತುಕೊಳ್ಳಲು ಈ ತೌಲನಿಕ ವಿಧಾನವನ್ನು ಅಳವಡಿಸಲಾಗಿದೆ.

### ೧.೪.೬. ಸಹಭಾಗಿತ್ವ ಅವಲೋಕನ ವಿಧಾನ

ದೇವದಾಸಿ ಪದ್ಧತಿಯಲ್ಲಿನ ಆಚರಣೆಗಳನ್ನು, ದೇವದಾಸಿಯರ ಧಾರ್ಮಿಕ ಆಚರಣೆಗಳನ್ನು ಮತ್ತು ಜೀವನ ಕ್ರಮಗಳ ಕುರಿತಾಗಿ ತಿಳಿಯಲು ಮತ್ತು ದೇವದಾಸಿ ವಿಮೋಚನಾ ಸಂಘಟನೆಗಳಿಗೆ ಭೇಟಿ ನೀಡಿ ಇದರ ನಿರ್ಮೂಲನೆಗಿರುವ ಕ್ರಮಗಳ ಬಗ್ಗೆ ಹಾಗೂ ಇವುಗಳನ್ನು ಬಗೆಹರಿಸಲು ಅವರು ಸೂಚಿಸುವ ವಿಧಾನಗಳ ಬಗ್ಗೆ ಮಾಹಿತಿ ಸಂಗ್ರಹಿಸಲು ಹಾಗೂ ಅವರ ವಿಶೇಷವಾದ ಸಾಂಸ್ಕೃತಿಕ ಆಚರಣೆಗಳನ್ನು ತಿಳಿಯಲು ಈ ವಿಧಾನವನ್ನು ಬಳಸಲಾಗಿದೆ.

### ೧.೪.೭. ವ್ಯಕ್ತಿ ಅಧ್ಯಯನ ವಿಧಾನ

ಪರಿಶಿಷ್ಟ ಜಾತಿಯಲ್ಲಿ ಆರವತ್ತು, ಪರಿಶಿಷ್ಟ ಪಂಗಡದಲ್ಲಿ ಮೂವತ್ತು ಮತ್ತು ಹಿಂದುಳಿದ ವರ್ಗಗಳಲ್ಲಿ ಹತ್ತು ಜನ ದೇವದಾಸಿಯರನ್ನು ವ್ಯಕ್ತಿ ಅಧ್ಯಯನ ಮಾಡಲಾಗಿದೆ.ಯಾವ ಸಮುದಾಯಗಳಲ್ಲಿ ದೇವದಾಸಿ ಪದ್ಧತಿ ಹೆಚ್ಚಾಗಿ ಕಂಡು ಬರುತ್ತದೆ. ಹಾಗೂ ಬೇರೆ ಕಡೆ ಇದರ ನಿರ್ಮೂಲನೆಗಾಗಿ ಅನುಸರಿಸಿದ ಮಾರ್ಗಗಳು ಯಾವುವು? ಇಲ್ಲಿ ಹೆಚ್ಚಾಗಿ ಈ ಪದ್ಧತಿ ಕಂಡು ಬರುವುದಕ್ಕೆ ಇರುವ ಸಮುದಾಯದ ಒಳಗಿನ ಮತ್ತು ಹೊರಗಿನ  ಕಾರಣಗಳನ್ನು ಆಯಾ ಜಾತಿ ಅಥವಾ ವರ್ಗದ ದೇವದಾಸಿಯರ ಅಧ್ಯಯನ ಮಾಡಲು ಮತ್ತು ಅವರ ಇಡೀ ಜೀವನದ ಸಿಹಿ-ಕಹಿ ಅನುಭವಗಳನ್ನು ತಿಳಿಯಲು ಈ ವಿಧಾನ ಬಳಸಿಕೊಳ್ಳಲಾಗಿದೆ.

### ೧.೫. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ದೇವದಾಸಿ ಪದ್ಧತಿಯು ವೇದಗಳ ಕಾಲದಿಂದಲೂ ಇದೆ ಎನ್ನುವುದಕ್ಕೆ ಅನೇಕ ನಿದರ್ಶನಗಳಿವೆ. ಪುರಾಣ ಪುಣ್ಯಕಥೆಗಳಲ್ಲಿ ಮತ್ತು ಶಾಸನಗಳಲ್ಲಿ ದೇವದಾಸಿಯರ ಬಗ್ಗೆ ಉಲ್ಲೇಖಗಳು ದೊರೆತಿವೆ. ದೇವದಾಸಿ ಪದ್ಧತಿಗೆ ಸಂಬಂಧಿಸಿದಂತೆ ಈವರೆಗಿನ ಅಧ್ಯಯನದ ವಿವರಗಳು ಇಂತಿವೆ.

ದೇವದಾಸಿ ಸಂಪ್ರದಾಯದ ಶಾಸ್ತ್ರೀಯ, ಚಾರಿತ್ರಿಕ ಅಧ್ಯಯನವನ್ನು ಸ್ವಾತಂತ್ರಪೂರ್ವದಲ್ಲಿ ಪಾಶ್ಚಾತ್ಯ ವಿದ್ವಾಂಸರು, ಸ್ವಾತಂತ್ರ್ಯನಂತರ ಅವರನ್ನೇ ಬಹುತೇಕವಾಗಿ ಅನುಸರಿಸಿದ ದೇಸಿ ವಿದ್ವಾಂಸರು ಕಾಣಿಸುತ್ತಾರೆ. ಸ್ವಾತಂತ್ರಪೂರ್ವದಲ್ಲಿ ನಡೆದ ಪ್ರಮುಖ ಅಧ್ಯಯನಗಳೆಂದರೆ, ೧೮೮೬ ಸರ್ ವಿಲಿಯಂ ಹಂಟರ್‌ನ ಮಾರ್ಗದರ್ಶನದಲ್ಲಿ ಪ್ರಕಟಗೊಂಡ ಇಂಪೀರಿಯಲ್ ಗೆಜಿಟಿಯರ್ ನ ೧೧೨ ಸಂಪುಟಗಳಲ್ಲಿ  ನಾಲ್ಕನೇ ಸಂಪುಟ ಹಿಂದೂ ಧರ್ಮದ ಬಗ್ಗೆ ಅಪಾರವಾದ ಮಾಹಿತಿಯನ್ನು ಒದಗಿಸುತ್ತದೆ.

ಜೋಗನ್ ಶಂಕರ್‌ರವರು ತಮ್ಮ ದೇವದಾಸಿ ಸಂಪ್ರದಾಯ ಎಂಬ ಕೃತಿಯಲ್ಲಿ ಭಾರತದಲ್ಲಿ ನಡೆದ ಧಾರ್ಮಿಕ ಅಧ್ಯಯನಗಳನ್ನು ಐದು ವಿಭಾಗಗಳಲ್ಲಿ ಗುರುತಿಸುತ್ತಾರೆ. 'ಅವರು ಆಲಹಳ್ಳಿಯಲ್ಲಿ ದೊರೆತ ಕ್ರಿ. ಶ ೧೧೧೩ ನೇಯ ಇಸವಿಯ ಶಾಸನದಲ್ಲಿ ದೇವದಾಸಿ ಪದದ ಉಲ್ಲೇಖವಿದೆ. ಈ ಪದದ ಉಲ್ಲೇಖವಿರುವ ಅತ್ಯಂತ ಪ್ರಾಚೀನ ಶಾಸನ ಇದು ಎಂದು ತಿಳಿಸಿದ್ದಾರೆ.' ಸ್ವಾತಂತ್ರ್ಯದ ಅನಂತರದ ಕಾಲದಲ್ಲಿ ನಡೆದ ಸುಧಾರಣಾ ವಾದಗಳ ಪ್ರಭಾವದ ಹಿನ್ನೆಲೆಯಲ್ಲಿ ಕೆಳವರ್ಗದ ಜನರಲ್ಲಿ ರೂಢಿಯಲ್ಲಿದ್ದ ಅನಿಷ್ಟ ಸಂಪ್ರದಾಯವಾಗಿ ಪರಿಣಮಿಸಿದ ದೇವದಾಸಿ ಪದ್ಧತಿಯನ್ನು ಕಾನೂನಿನ ಮೂಲಕ ತಡೆಯಲಾಯಿತು. ಆದರೂ ಕೂಡ ಇನ್ನೂ ಈ ಪದ್ಧತಿ ಸಾಮಾಜದಲ್ಲಿ ಜೀವಂತವಾಗಿರುವುದನ್ನು ಗಮನಿಸಬಹುದು.

೧೯೯೪ ರಲ್ಲಿ ಎಚ್. ಎಂ. ಮರುಳಸಿದ್ದಯ್ಯರವರು ಭಾರತ ಸಮಾಜ ಕಾರ್ಯ ವಿಶ್ವಕೋಶ ಸಂಪುಟ ಒಂದರಲ್ಲಿ ದೇವದಾಸಿಯರ ಕುರಿತು ವಿವರಣೆ ನೀಡಿದ್ದಾರೆ. ಈ ಪದ್ಧತಿಯ ಮೂಲರೂಪ ಬೆಳೆದು ಬಂದ ದಾರಿಯ ಕುರಿತು ವಿಶ್ಲೇಷಿಸಿದ್ದಾರೆ. ಕ್ರಿ.ಶ. ಏಳನೇ ಶತಮಾನದ ವೇಳೆಗೆ ದಕ್ಷಿಣ ಭಾರತದಲ್ಲಿ ರಾಜರುಗಳ ಆಸಕ್ತಿಯಿಂದಾಗಿ ದೇವಾಲಯಗಳ ನಿರ್ಮಾಣದ ಚಟುವಟಿಕೆಗಳು ತೀವ್ರವಾಗಿದ್ದವು. ಸೂರ್ಯದೇವಾಲಯವು ಶೃಂಗಾರಕ್ಕೆ ಪ್ರಸಿದ್ಧವಾಗಿದೆ. ಈ ದೇವಾಲಯದ ಶಿಲ್ಪಗಳಲ್ಲಿ ದೇವದಾಸಿಯರ ತಂಡೋಪತಂಡಗಳನ್ನು ಕಾಣಬಹುದು ಎಂದು ತಿಳಿಸಿಕೊಟ್ಟಿದ್ದಾರೆ.

ಈ ಅಧ್ಯಯನ ವಿಷಯಕ್ಕೆ ಪ್ರಮುಖವಾಗಿ ಸ್ತ್ರೀವಾದಿ ಅಧ್ಯಯನಗಳು ಆಕರ ಸಾಮಗ್ರಿಗಳಾಗಿವೆ. ಲಿಂಗತಾರತಮ್ಯ ಮತ್ತು ಲೈಂಗಿಕ ಶೋಷಣೆಗಳನ್ನು ಪ್ರಧಾನ ಸಮಸ್ಯೆಯಾಗಿರಿಸಿಕೊಂಡು ನಡೆದಮಹಿಳಾ ಅಧ್ಯಯನಗಳು, ಅಚಲ ತ್ರೈಮಾಸಿಕ ಪತ್ರಿಕೆ, ಮಹಿಳಾ ಅಧ್ಯಯನ ಸಂಚಿಕೆ ಮತ್ತು ಮಹಿಳಾ ವಿಜಯ ಮಾಸಿಕ ಪತ್ರಿಕೆಗಳು ಮಹಾಪ್ರಬಂಧಕ್ಕೆ ಪ್ರಮುಖ ದೃಷ್ಟಿಕೋನ ರೂಪಿಸುವಲ್ಲಿ ಕೆಲಸ ಮಾಡಿವೆ. ೧೯೯೯ ರಲ್ಲಿ ಶೈಲಜ ಹೀರೆಮಠರವರು 'ಸ್ತ್ರೀಕಥನ ಪಾತರದವರು' ಎಂಬ ಕೃತಿಗಳಲ್ಲಿ ಸ್ತ್ರೀಯ ಬಗೆಗಿನ ವಿಭಿನ್ನ ಪಾತ್ರಗಳು, ಮಾತೃಪ್ರಧಾನತೆಯಿಂದ ಪಿತೃ ಪ್ರಧಾನತೆಯವರೆಗೆ ಮಹಿಳೆಯ ಸ್ಥಿತಿಗತಿಗಳು ಮತ್ತು ದೇಸಿಯ ಒಂದು ರೂಪವಾದ ಪಾತರದವರ ಬಗ್ಗೆ ಅಪಾರ ಮಾಹಿತಿಗಳನ್ನು ನೀಡಿದ್ದಾರೆ.

ಎಂ ಚಿದಾನಂದ ಮೂರ್ತಿ ಮತ್ತು ಚೆನ್ನಕ್ಕ ಎಲಿಗಾರ ಇವರುದೇವದಾಸಿ ಮಹಿಳೆಗೆ ಸಂಬಂಧಿಸಿದಂತೆ ಐತಿಹಾಸಿಕ ಶಾಸನ ಆಧಾರಾಂಶಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಈ ನಿಟ್ಟಿನಲ್ಲಿ ಕೆ. ಎಸ್. ಗೀತ, ದು. ನಿಂ. ಬೆಳಗಲಿ ಮುಂತಾದವರು ದೇವದಾಸಿ ಸಂಪ್ರದಾಯಕ್ಕೆ ಸಂಬಂಧಿಸಿದಂತೆ ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಮಾಹಿತಿ ನೀಡಿ ನಿವಾರಣ ಮಾರ್ಗೋಪಾಯಗಳನ್ನು ಸೂಚಿಸಿದ್ದಾರೆ. ಡಾ ಶಿವರಾಮಕಾರಂತ, ಬಸವರಾಜಕಟ್ಟಿಮನಿ, ಎಂ. ಕೆ. ಇಂದಿರಾ ಮತ್ತು ಗೀತಾ ನಾಗಭೂಷಣರು ವೇಶ್ಯಾ ಸಮಸ್ಯೆಯ ಬಗ್ಗೆ ವಿಭಿನ್ನ ದೃಷ್ಟಿಕೋನಗಳಿಂದ ಚಿಂತನೆ ನಡೆಸಿದ್ದಾರೆ. ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ನೆಲೆಗಳಲ್ಲಿ ನೋಡುವುದರ ಮೂಲಕ ಹಲವಾರು ಸಿದ್ಧಾಂತಗಳಿಗೂ ಬದ್ಧತೆಯನ್ನು ತೋರಿಸಿದ್ದಾರೆ. ದು. ನಿಂ. ಬೆಳಗಲಿಯವರು ತಮ್ಮ ದೇವದಾಸಿ ಕಾದಂಬರಿಯಲ್ಲಿ ಇದೊಂದು ಸಾಮಾಜಿಕ ಸಂಸ್ಥೆಯಾಗಿದ್ದು,

ಧಾರ್ಮಿಕ ಮುಸಿಕಿನಲ್ಲಿ ವ್ಯವಸ್ಥಿತವಾಗಿ ಬೆಳೆಯುತ್ತಿದ್ದದ್ದರ ಕುರಿತಾಗಿ ತಿಳಿಸಿದ್ದಾರೆ. ಚೆನ್ನಣ್ಣವಾಲಿಕರ್ ಅವರು ಸಮಗ್ರ ಅಧ್ಯಯನ ನಡೆಸಿ ಭಾರತ ಮತ್ತು ಕರ್ನಾಟಕದ ವಿವಿಧ ಭಾಗಗಳಲ್ಲಿ ಪ್ರಚಲಿತದಲ್ಲಿರುವ ದೇವದಾಸಿ ಪದ್ಧತಿಯ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ನೀಡಿದ್ದಾರೆ.

೨೦೦೨ ರಲ್ಲಿ ಪುತ್ತಿ ವಸಂತಕುಮಾರ್‌ರವರು 'ಬಸ್ರೂರಿನ ದೇವದಾಸಿ ಪದ್ಧತಿ' ಎಂಬ ಪ್ರೌಢ ಪ್ರಬಂಧದಲ್ಲಿ ಬಸ್ರೂರಿನ ದೇವದಾಸಿ ಪದ್ಧತಿಯ ಬಗ್ಗೆ ಮತ್ತು ಅಲ್ಲಿನ ಕಲಾವಂತ ಸಮಾಜವಾಗಿ ಪರಿವರ್ತನೆಯಾದ ದೇವದಾಸಿಯರ ಸಂಪೂರ್ಣ ಚಿತ್ರಣವನ್ನು ನೀಡಿದ್ದಾರೆ.೨೦೦೩ ರಲ್ಲಿ ಟಿ. ಕೆ. ವಾಣಿಶ್ರೀಯವರು ಪಿಎಚ್ ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ 'ಕರ್ನಾಟಕದ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು' ಎಂಬ ಅಪ್ರಕಟಿತ ಗ್ರಂಥದಲ್ಲಿ ದೇವಾಲಯದಲ್ಲಿ ಅಂಗಭೋಗ ಮತ್ತು ರಂಗಭೋಗ ಎಂಬ ದೇವ ಸೇವಕಿಯರಿದ್ದರು ಅವರನ್ನು ದೇವದಾಸಿ ಎಂದು ಕರೆಯುವ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ೨೦೦೫ ರಲ್ಲಿ ಲೀಲಾ ಸಂಪಿಗೆಯವರು 'ಜನಪದ ಮತ್ತು ಆಧುನಿಕ ಬುಡಕಟ್ಟು ಸಮುದಾಯಗಳಲ್ಲಿ ವೇಶ್ಯಾವಾಟಿಕೆ ಪರಂಪರೆ ಮತ್ತು ಸಮಸ್ಯೆ' ಎಂಬ ಮಹಾ ಪ್ರಬಂಧದಲ್ಲಿ ದೇವದಾಸಿ ಪದ್ಧತಿ ಬಗ್ಗೆ ಮತ್ತು ಈ ಪದ್ಧತಿಯ ಮೂಲಕ ವೇಶ್ಯಾವೃತ್ತಿಗೆ ಇಳಿದ ದೇವದಾಸಿಯರ ಸಾಮಾಜಿಕ, ಆರ್ಥಿಕ ಕಾರಣಗಳನ್ನು ತಿಳಿಸಿಕೊಟ್ಟಿದ್ದಾರೆ.

೨೦೦೬ರಲ್ಲಿನ ಉಮೇಶ್ ಬಸಪ್ಪ ಕಾತರಕಿ ಇವರು 'ಬಿಸರಳ್ಳಿಯ ದೇವದಾಸಿ ಪದ್ಧತಿ ಒಂದು ಅಧ್ಯಯನ' ಎಂಬ ಪ್ರೌಢ ಪ್ರಬಂಧದಲ್ಲಿ ಬಿಸರಳ್ಳಿಯಲ್ಲಿ ಈ ಪದ್ಧತಿ ಕುರಿತು ಮತ್ತು ಪಾತರದವರು, ಬಸವಿಯರು, ಜೋಗತಿಯರು, ವೇಶ್ಯೆಯರ ಮತ್ತು ದೇವದಾಸಿಯರ ತೌಲನಿಕ ವಿವರಣೆ ನೀಡಿದ್ದಾರೆ. ಜೊತೆಗೆ ಮರುಳಸಿದ್ದೇಶ್ವರ ಮಠದಲ್ಲಿರುವ ದೇವದಾಸಿ ಪದ್ಧತಿ ಕುರಿತಾಗಿ ವಿವರಣೆ ನೀಡಿದ್ದಾರೆ. ೨೦೦೭ರಲ್ಲಿ ಟಿ. ನಾಗೇಶ್‌ರವರು ಪ್ರಕಟಿಸಿದ 'ದೇವದಾಸಿ ಪದ್ಧತಿ ಸ್ತ್ರೀ ಶೋಷಣೆಯ ಒಂದು ಮಜಲು' ಎನ್ನುವ ಲೇಖನದಲ್ಲಿ ದೇವದಾಸಿ ಪದ್ಧತಿ ಎನ್ನುವುದು ಸ್ತ್ರೀಯನ್ನು ಶೋಷಣೆಗೆ ಒಳಪಡಿಸುತ್ತಿವೆ ಇದರಿಂದಾಗಿ ಅವಳ ಸ್ಥಾನಮಾನ ಸಮಾಜದಲ್ಲಿ ಹೇಗಿದೆ ಎನ್ನುವ ಬಗ್ಗೆ ತಿಳಿಸಿಕೊಟ್ಟಿದ್ದಾರೆ ಮತ್ತು ದೇವದಾಸಿ ಪದ್ಧತಿ ನಿರ್ಮೂಲನೆಗಾಗಿ ಸರ್ಕಾರ ಕೈಗೊಂಡ ಕ್ರಮಗಳ ಬಗ್ಗೆ ತಿಳಿಸಿದ್ದಾರೆ.

೨೦೦೮ರಲ್ಲಿ ಶಾಂತಾ ಮಠ ಅವರು ಪ್ರಕಟಿಸಿದ ಲೇಖನ 'ದೇವದಾಸಿ ಪದ್ದತಿ ಒಂದು ವಿಶ್ಲೇಷಣೆ'ಯಲ್ಲಿ ದೇವದಾಸಿ ಸಂಪ್ರದಾಯದ ಆಚರಣೆ, ದೇವದಾಸಿ ಪದ್ದತಿಗೆ ಬಿಡುವ ನಿಯಮ, ಅವರ ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ತಿಳಿಸಿದ್ದಾರೆ. "ಕರ್ನಾಟಕದ ೧೪ ಜಿಲ್ಲೆಗಳಲ್ಲಿ ೬೦ ಸಾವಿರಕ್ಕೂ ಹೆಚ್ಚು ದೇವದಾಸಿ ಮಹಿಳೆಯರಿರುವರು. ಯಲ್ಲಮ್ಮ, ರೇಣುಕ, ಮಾಪುರತಾಯಿ ಇತ್ಯಾದಿ ದೇವರುಗಳನ್ನು ಆರಾಧಿಸಿ ಕೆಲವು ಆಚರಣೆಗಳನ್ನು ಮಾಡುವಲ್ಲಿ ಮೇಲ್ಸಮುದಾಯದ ಜನರೂ ಇರುವರು. ಮನೆಯಲ್ಲಿಯೇ ಬೇವಿನುಡಿಗೆಯನ್ನುಟ್ಟು ಸೇವೆ ಮಾಡುವ ಪ್ರಕರಣಗಳು ಇವೆ. ಆದರೆ ಇವರ್‍ಯಾರು ಮುತ್ತು ಕಟ್ಟಿಸಿಕೊಂಡ ದೇವದಾಸಿಯರಲ್ಲ. ಆದರೆ, ದಲಿತ ಸಮುದಾಯದ ಮಹಿಳೆಯರನ್ನು ಮಾತ್ರ

ದೇವದಾಸಿಯರನ್ನಾಗಿರಿಸಲಾಗಿದೆ"*(ಶಂತಾಮಠ:೨೦೧೨:೮೮)*ಎಂಬ ಮಾಹಿತಿಯನ್ನು ತಿಳಿಸಿ ಕೊಟ್ಟಿದ್ದಾರೆ.

೨೦೦೮ರಲ್ಲಿ ಕೊಟ್ರಮ್ಮನವರು 'ಬಳ್ಳಾರಿ ಜಿಲ್ಲೆಯ ಬೇಡ ಬುಡಕಟ್ಟಿನ ದೇವದಾಸಿಯರು' ಎಂಬ ಮಹಾ ಪ್ರಬಂಧದಲ್ಲಿ ಕೂಡ್ಲಿಗಿಯಲ್ಲಿನ ಬೇಡ ಸಮುದಾಯದ ದೇವದಾಸಿಯ ಸಂಪೂರ್ಣ ಚಿತ್ರಣವನ್ನು ತೋರಿಸಿಕೊಟ್ಟಿದ್ದಾರೆ. ೨೦೧೧ರಲ್ಲಿ ಭಾರತೀಯ ಜೀವಿ ಎನ್ನುವ ಮತ್ತೊಬ್ಬ ಲೇಖಕರು 'ದೇವದಾಸಿ ಪ್ರಸಂಗದೀಪ್ತಿ' ಎಂಬ ಪುಸ್ತಕದಲ್ಲಿ ದೇವದಾಸಿಯರ ಬಗ್ಗೆ ಆಚರಣೆಗಳ ಬಗ್ಗೆ ವಿವರಣೆ ನೀಡುವ ಮೂಲಕ ನಿರ್ಮೂಲನಾ ಕ್ರಮಗಳನ್ನು ಕೈಗೊಂಡ ಬಗ್ಗೆ ತಿಳಿಸಿಕೊಟ್ಟಿದ್ದಾರೆ. ಹೀಗೆ ದೇವದಾಸಿಯರ ಕುರಿತು ಕೆಲವು ಲೇಖನಗಳು, ಗ್ರಂಥಗಳು, ಬಿಡಿ ಬಿಡಿಯಾಗಿ ಅಧ್ಯಯನ ಮಾಡಿ ಪ್ರಕಟಿಸಿದ್ದಾರೆ. ಇವುಗಳನ್ನು ಪ್ರಸ್ತುತವಾಗಿ ಪರಾಮರ್ಶನಕ್ಕೆ ಒಳಪಡಿಸಿ ದೇವದಾಸಿಯ ಪದ್ಧತಿಯ ತೌಲನಿಕ ಅಧ್ಯಯನವನ್ನು ಪರಿಶಿಷ್ಟರ ಮತ್ತು ಹಿಂದುಳಿದ ವರ್ಗದಲ್ಲಿರುವ ದೇವದಾಸಿಯರ ಬಗ್ಗೆ ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ ತೌಲನಿಕವಾಗಿ ಅಧ್ಯಯನಕ್ಕೆ ತೊಡಗಿಸಲಾಗಿದೆ.

### ೧.೬. ಅಧ್ಯಯನದ ಸ್ವರೂಪ

ಪ್ರಸ್ತುತ ಸಂಶೋಧನೆಯನ್ನು ಅಧ್ಯಯನದ ಅನುಕೂಲಕ್ಕಾಗಿ ಏಳು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. ಹಾಗೆಯೇ ಅವಶ್ಯಕತೆಗೆ ತಕ್ಕಂತೆ ಉಪವಿಭಾಗಗಳನ್ನು ಮಾಡಿಕೊಳ್ಳಲಾಗಿವೆ. ಈ ಅಧ್ಯಾಯಗಳು ಒಳಗೊಂಡಿರುವ ವಿಷಯ ಮತ್ತು ಸ್ವರೂಪ ಈ ಕೆಳಗಿನಂತಿದೆ.

ಕರ್ನಾಟಕ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ದೇವದಾಸಿಯರು ಕಂಡು ಬರುತ್ತಾರೆ. ಅದರಲ್ಲೂ ಪರಿಶಿಷ್ಟ ಮತ್ತು ಹಿಂದುಳಿದ ವರ್ಗಗಳಲ್ಲಿ ದೇವದಾಸಿಯರು ಕಂಡು ಬರುತ್ತಾರೆ. ದೇವದಾಸಿ ಪದ್ಧತಿ ಧಾರ್ಮಿಕ ಹಿನ್ನಿಲೆಯಲ್ಲಿ ಹುಟ್ಟಿಕೊಂಡು ಬಂದಿದ್ದು ಈ ಮೂರು ವರ್ಗಗಳಲ್ಲಿ. ದೇವದಾಸಿ ಪದ್ಧತಿ ಬೆಳೆದುಬಂದಿದೆ ಎಂಬ ಕಾರಣಗಳನ್ನು ತಿಳಿಯುವಲ್ಲಿ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ದೇವದಾಸಿ ಮಾಹಿಳೆಯರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಕಲಾ ಜೀವನ ಕುರಿತಾಗಿ ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಸದರಿ ಪ್ರಬಂಧವು ಏಳು ಮುಖ್ಯ ಅಧ್ಯಾಯಗಳನ್ನು ಮತ್ತು ಸಮಾರೋಪವನ್ನು ಹೊಂದಿದೆ. ಈ ಅಧ್ಯಾಯಗಳ ಸ್ವರೂಪ ಕೆಳಗಿನಂತಿವೆ.

ಮೊದಲನೆಯ ಅಧ್ಯಾಯ ಪ್ರವೇಶ ಎಂಬ ಶೀರ್ಷಿಕೆಯನ್ನು ಹೊಂದಿದೆ. ಈ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ, ಸ್ವರೂಪ, ಅಧ್ಯಯನ ವಿಧಾನಗಳು ಮತ್ತು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ ಮಾಡಲಾಗಿದೆ. ಒಟ್ಟಾರೆ ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ರೂಪುರೇಷೆಗಳನ್ನು ನೀಡಲಾಗಿದೆ.

ಎರಡನೇ ಅಧ್ಯಾಯವು ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ನೋಟ ಮತ್ತು ದೇವದಾಸಿಯರ ಜನ ಸಂಖ್ಯೆ ಎಂಬ ಶೀರ್ಷಿಕೆಯನ್ನು ಹೊಂದಿದೆ. ಇಲ್ಲಿ ಬಳ್ಳಾರಿ ನಾಮ ವಿವೇಚನೆ, ಪೌರಾಣಿಕ ಹಿನ್ನೆಲೆ,

ಚಾರಿತ್ರಿಕ ನೋಟ ಮತ್ತು ಭೌಗೋಳಿಕ ಲಕ್ಷಣಗಳನ್ನು ವಿವರಿಸಿ, ಬಳ್ಳಾರಿ ಜಿಲ್ಲೆಯ ಜನಸಂಖ್ಯೆಯೊಂದಿಗೆ ದೇವದಾಸಿಯರ ಜನಸಂಖ್ಯೆಯನ್ನು ವಿವರಿಸಲಾಗಿದೆ.

ಮೂರನೇ ಅಧ್ಯಾಯವು ದೇವದಾಸಿ ಪದ್ಧತಿಗಳ : ತೌಲನಿಕ ಅಧ್ಯಯನ ಎಂದು. ಇದರಲ್ಲಿ ಪ್ರಾಚೀನ ಕಾಲದಿಂದಲೂ ದೇವರ ಹೆಸರಿನಲ್ಲಿ ದೇವಾಲಯಗಳಗೆ ಹೆಣ್ಣು ಮಕ್ಕಳನ್ನು ಅರ್ಪಿಸುತ್ತಿದ್ದ ಪದ್ಧತಿಗಳ ಸ್ವರೂಪಗಳನ್ನು ತಿಳಿಸಲಾಗಿದೆ. ಇಲ್ಲಿ ಪಾತರದವರು ಅವರು ಪಡೆಯುವ ದೀಕ್ಷ ಪಾತರದವರು ಪರಂಪರೆ ಕುರಿತಾಗಿ ವಿವರಿಸಲಾಗಿದೆ. ಹಾಗೆ ದೇವದಾಸಿ ಪದ್ಧತಿಯು ಪ್ರಾಚೀನ ನಾಗರಿಕತೆಗಳಿಂದ ಕರ್ನಾಟಕದಲ್ಲಿ ಕಂಡು ಬಂದಿರುವ ಈ ಪದ್ಧತಿ ಇತಿಹಾಸವನ್ನು ಚರ್ಚಿಸಲಾಗಿದೆ. ಬಸವಿ ಪದ್ಧತಿಯ ಹಿನ್ನೆಲೆ ಬಸವಿಯಾನ್ನಾಗಿ ಮಾಡುವ ವಿಧಾನಗಳ ಕುರಿತಾಗಿ ವಿವರಣೆ ನೀಡಲಾಗಿದೆ. ಕೊನೆಯದಾಗಿ ಜೋಗತಿ ಪದ್ಧತಿಯಲ್ಲಿ ಜೋಗತಿ ಪರಂಪರೆ ಇದರಲ್ಲಿ ಬರುವ ಮುತ್ತುಕಟ್ಟುವ ವಿಧಾನಗಳನ್ನು, ಜೋಗತಿಯರಲ್ಲಿ ಪ್ರಮುಖವಾಗಿ ಕಂಡು ಬರುವ ಜಗ, ಕೊಡ, ಪಡಲಿಗೆ, ಬೆಳ್ಳಿಕಡಗ, ಚೌರಿ ಮುತ್ತುಗಳು ಇತ್ಯಾದಿ ದೈವಿ ಸಂಬಂಧಿ ವಸ್ತುಗಳ ಕುರಿತಾಗಿ ವಿವರಣೆ ನೀಡಲಾಗಿದೆ. ಒಟ್ಟಾರೆಯಾಗಿ ದೇವರ ಸೇವೆಯ ಹಿನ್ನೆಲೆಯಲ್ಲಿ ಬಂದಿರುವ ಈಪದ್ಧತಿಗಳನ್ನು ಪರಿಶಿಷ್ಟ ಮತ್ತು ಹಿಂದುಳಿದ ವರ್ಗಗಳಲ್ಲಿ ಯಾವ ರೀತಿಯಲ್ಲಿ ಕಂಡುಬರುತ್ತವೆ. ಎಂಬುದರ ಜೊತೆಗೆ ಅವರಲ್ಲಿ ಇರುವ ಆಚರಣೆಯಲ್ಲಿರುವ ಪದ್ಧತಿಗಳನ್ನು ತೌಲನಿಕ ದೃಷ್ಟಿಯಲ್ಲಿ ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಸಮುದಾಯಗಳ ಪರಿಚಯ ಎಂಬ ಶೀರ್ಷಿಕೆಯನ್ನು ಹೊಂದಿದೆ, ಇಲ್ಲಿ ಪರಿಶಿಷ್ಟಜಾತಿಯಲ್ಲಿ ಕಂಡು ಬರುವ ದೇವದಾಸಿಯರ ಸಮುದಾಯಗಳಾದ ಮಾದಿಗ, ಚಲುವಾದಿ, ಚೆನ್ನದಾಸರು, ಡೊಂಬರು, ವಡ್ಡರು ಮತ್ತು ಕೊರಮ ಸಮುದಾಯಗಳಲ್ಲಿ ಸ್ಥಳ ಪರಿಚಯದೊಂದಿಗೆ ಇವರು ಆಚರಿಸುವ ದೇವರಗಳ ಸಂಪ್ರದಾಯದ ಹಿನ್ನೆಲೆಯಲ್ಲಿ ದೇವದಾಸಿ ಪದ್ಧತಿ ನಡೆದು ಬಂದಿರುವ ಕುರಿತು ವಿವರಿಸಲಾಗಿದೆ. ಹಾಗೆಯೇ ಪರಿಶಿಷ್ಟ ಪಂಗಡದ ಬೇಡ ಬುಡಕಟ್ಟು ಪದದ ಅರ್ಥದ ಜೊತೆಗೆ ಸಮುದಾಯದ ಸ್ಥೂಲ ಪರಿಚಯ ಮಾಡಲಾಗಿದೆ. ಹಿಂದುಳಿದ ವರ್ಗಗಳಲ್ಲಿ ಕಂಡು ಬರುವ ಗಂಗಮತಸ್ಥರು ಮತ್ತು ಕುರುಬ ಸಮುದಾಯಗಳನ್ನು ಪರಿಚಯಿಸುತ್ತಾ, ಇವರಲ್ಲಿ ದೇವದಾಸಿ ಪದ್ಧತಿ ಕುರಿತಾಗಿ ವಿವರಣೆಯನ್ನು ನೀಡಲಾಗಿದೆ. ಒಟ್ಟಾರೇ ಪರಿಶಿಷ್ಟ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರನ್ನು ಹೊಂದಿರುವ ಸಮುದಾಯಗಳನ್ನು ಈ ಅಧ್ಯಾಯದಲ್ಲಿ ಪರಿಚಯಿಸಲಾಗಿದೆ.

ಐದನೇಯ ಅಧ್ಯಾಯವು ದೇವದಾಸಿಯರ ಜೀವನ: ತೌಲನಿಕ ಅಧ್ಯಯನ ಎಂದಿದೆ. ಈ ಅಧ್ಯಾಯದಲ್ಲಿ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರನ್ನು ಗಮನದಲ್ಲಿರಿಸಿಕೊಂಡು ಅವರ ಸಾಮಾಜಿಕ ಬದುಕಿನಲ್ಲಿನ ವಸತಿ ವ್ಯವಸ್ಥೆ, ಕುಟುಂಬವ್ಯವಸ್ಥೆ, ದೇವದಾಸಿ ಮಕ್ಕಳ ಸ್ಥಾನಮಾನಗಳ ಕುರಿತಾಗಿ ವಿವರಣೆ ನೀಡಲಾಗಿದೆ. ಧಾರ್ಮಿಕ ಜೀವನದಲ್ಲಿ ದೇವದಾಸಿಯನ್ನಾಗಿ ಮಾಡುವ ಧಾರ್ಮಿಕ ಕೇಂದ್ರಗಳು ಆಚಾರಣೆಗಳಲ್ಲಿ ದೇವದಾಸಿಯರ ಪಾತ್ರದೊಂದಿಗೆ ದೇವದಾಸಿಯರನ್ನು ವಿವರಿಸಲಾಗಿದೆ. ಆರ್ಥಿಕ ಬದುಕಿನಲ್ಲಿ ದೇವದಾಸಿಯರ ಜೀವನ ನಿರ್ವಹಣೆ ಕೃಷಿ ಕೂಲಿ, ಗಣಿಗಾರಿಕೆ, ಕಟ್ಟಡ ನಿರ್ಮಾಣ ಕೆಲಸಗಳ ಜೊತೆಗೆ ದೈವಿಸಂಬಂಧಿ ಆಚರಣೆಯಲ್ಲಿ ದುಡಿಮೆಯ ರೂಪವನ್ನು

ವಿವರಿಸಲಾಗಿದೆ. ಶೈಕ್ಷಣಿಕ ಜೀವನದಲ್ಲಿ ಅನಕ್ಷರಸ್ಥರೆ ಹೆಚ್ಚಾಗಿ ಕಂಡು ಬಂದಿರುವ ದೇವದಾಸಿಯರ ಮಕ್ಕಳ ಶಿಕ್ಷಣದಲ್ಲಿ ಶಾಲೆ ಬಿಡಲು ಅಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಕಾರಣಗಳನ್ನು ರಾಜಕೀಯ ಜೀವನದಲ್ಲಿ ದೇವದಾಸಿಯರು ಎಷ್ಟರಮಟ್ಟಿಗೆ ಪಾಲ್ಗೊಂಡಿದ್ದಾರೆ ಎಂಬುವುದನ್ನು ತಿಳಿಸಲಾಗಿದೆ. ಹಾಗೆಯೇ ದೇವದಾಸಿ ಮಹಿಳೆ ಕಲಾ ಜೀವನದಲ್ಲಿ ಬೆಳೆದು ಬಂದಿರುವುದು ರಂಗಕಲೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಕಲೆಯನ್ನು ಜೀವನವಾಗಿಸಿ ಕೊಂಡುದರ ಕುರಿತು ವಿವರಿಸಲಾಗಿದೆ. ಕೊನೆಯದಾಗಿ ದೇವದಾಸಿ ಮಹಿಳೆಯರು ಆರೋಗ್ಯ ಕುರಿತಾಗಿ ವಿವರಿಸಲಾಗಿದೆ. ಹೀಗೆ ದೇವದಾಸಿಯರ ಜೀವನವನ್ನು ತೌಲನಿಕವಾಗಿ ನೋಡಲು ಪ್ರಯತ್ನಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ದೇವದಾಸಿಯರು ಪುನರ್ವಸತಿ ಯೋಜನೆಗಳು ಎಂಬಲ್ಲಿ ಇಲ್ಲಿ ದೇವದಾಸಿಯರ ಪುನರ್ವಸತಿ ಯೋಜನೆಯನ್ನುಕುರಿತು ವಿವರಿಸುತ್ತಾ ಅಲ್ಲಿ ಕಂಡುಬರುವ ಸಮಸ್ಯೆಗಳನ್ನು ಕುರಿತು ತಿಳಿಸಲಾಗಿದೆ. ದೇವದಾಸಿಯರ ಕುರಿತಾಗಿ ಕಾಳಜಿ ಹೊಂದಿದ್ದು, ಈ ಪದ್ಧತಿಯ ನಿರ್ಮೂಲನೆಯಲ್ಲಿ ಶ್ರಮಿಸುತ್ತಿರುವ ಕರ್ನಾಟಕ ರಾಜ್ಯ ದೇವದಾಸಿ ಮಹಿಳಾ ವಿಮೋಚನಾ ಸಂಘವನ್ನು ಮತ್ತು ಅವರು ಮಾಡಿರುವ ಕೆಲಸ ಕಾರ್ಯಗಳನ್ನು ಕುರಿತಾಗಿ ವಿವರಿಸಲಾಗಿದೆ. ಕೊನೆಯಲ್ಲಿ ಯೋಜನೆಗಳಿಗೆ ಸೇರ ಬೇಕಾದ ದೇವದಾಸಿ ಮಕ್ಕಳ ಸೌಲಭ್ಯಗಳನ್ನು ತಿಳಿಸಲಾಗಿದೆ.

ಏಳನೇ ಅಧ್ಯಾಯ ಉಪಸಂಹಾರ. ಇಲ್ಲಿ ದೇವದಾಸಿಯ ತೌಲನಿಕ ಅಧ್ಯಯನವನ್ನು ಕುರಿತು ಸಮಾರೋಪ ಮಾಡಲಾಗಿದೆ. ಇದರಲ್ಲಿ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಮತ್ತು ಸಲಹೆ ಸೂಚನೆಗಳನ್ನು ನೀಡಲಾಗಿದೆ. ಕೊನೆಯಲ್ಲಿ ಪರಾಮರ್ಶ ಗ್ರಂಥಗಳನ್ನು ನೀಡಲಾಗಿದೆ. ಅನುಬಂಧದಲ್ಲಿ ತಿಳುವಳಿಕೆದಾರರ ವಿವರದಲ್ಲಿ ದೇವದಾಸಿ ಮತ್ತು ದೇವದಾಸಿಯರಲ್ಲದವರ ಹೆಸರುಗಳನ್ನು, ಬಳ್ಳಾರಿ ಜಿಲ್ಲೆಯ ದೇವದಾಸಿಯರ ಅಧ್ಯಯನದ ಕ್ಷೇತ್ರಕಾರ್ಯದ ಛಾಯಚಿತ್ರಗಳನ್ನು ತೋರಿಸಲಾಗಿದೆ.

ಹೀಗೆ ಈ ಅಧ್ಯಯನವನ್ನು ಏಳು ಅಧ್ಯಾಯಗಳಾಗಿ ಮಾಡಿಕೊಂಡು ಬಳ್ಳಾರಿ ಜಿಲ್ಲೆಯ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರನ್ನು ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ, ಕಲಾ ಜೀವನ ಮತ್ತು ಆರೋಗ್ಯದ ಕುರಿತು ತೌಲನಿಕವಾಗಿ ಅಧ್ಯಯನ ಮಾಡಲಾಗಿದ್ದು, ಈ ಮೂಲಕ ಸಮುದಾಯಗಳಲ್ಲಿರುವ ದೇವದಾಸಿಯರ ಹೋಲಿಕೆ ಮತ್ತು ವ್ಯತ್ಯಾಸಗಳನ್ನು ಕಂಡು ಕೊಳ್ಳಲಾಗಿದೆ.

**ಆಧಾರ ಗ್ರಂಥಗಳು**

ಕಮಲಾಕ್ಷ ಪಿ, *ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನ ಸಾಮಾಜಿಕ ಇತಿಹಾಸ*, ಕನ್ನಡ ಪುಸ್ತಕ ಪ್ರಾಧಿಕಾರ,ಬೆಂಗಳೂರು, ೧೯೯೪

ಭಾರತಿ ಜೀವಿ, *ದೇವದಾಸಿ: ಪ್ರಸಂಗ ದೀಪ್ತಿ*, ವಚನ್, ಗ್ರಾಫಿಕ್ಸ್ ಧಾರವಾಡ, ೨೦೧೧

ಮರುಳಸಿದ್ಧಯ್ಯ ಎಚ್ ಎಂ (ಸಂ), *ಭಾರತ ಸಮಾಜ ಕಾರ್ಯ ವಿಶ್ವಕೋಶ, ಸಂಪುಟ–೧* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

ವಿರಕ್ತಮಠ ಶಿವನಾಂದ ಎಸ್, *ಮಹಿಳಾ ಅಧ್ಯಯನ ಸಂಚಿಕೆ ೧–೨*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

ವೆಂಕಟಸ್ವಾಮಿ ಎಂ, *ಅಸ್ಪೃಶ್ಯರು*, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೩

ಸೀತಮ್ಮ ಕೆ ಕೆ, *ಮಹಿಳಾ ಅಧ್ಯಯನದ ಮಜಲುಗಳು*, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೩

ಶೈಲಜ ಹಿರೇಮಠ, *ಪಾತರದವರು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

**ಅಪ್ರಕಟಿತ ಗ್ರಂಥಗಳು**

ಪುತ್ತಿ ವಸಂತಕುಮಾರ, *ಬಸ್ರೂರಿನ ದೇವದಾಸಿ ಪದ್ಧತಿ*, ಎಂಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

ವಾಣಶ್ರೀ ಟಿ. ಕೆ, *ಕರ್ನಾಟಕ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು*, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೩.

ಉಮೇಶ್ ಬಸಪ್ಪ ಕಾತರರೆ, *ಬಿಸರಳ್ಳಿಯ ದೇವದಾಸಿ ಪದ್ದತಿ ಒಂದು ಅಧ್ಯಯನ*, ಎಂಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೬

ಕೊತ್ಲಮ್ಮ, *ಬಳ್ಳಾರಿ ಜಿಲ್ಲೆಯ ಬೇಡ ಬುಡಕಟ್ಟು ದೇವದಾಸಿಯರ ಅಧ್ಯಯನ*, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

## ಅಧ್ಯಾಯ: ಎರಡು

## ಬಳ್ಳಾರಿ ಜಿಲ್ಲೆಯ ಚಾರಿತ್ರಿಕನೋಟ ಮತ್ತು ದೇವದಾಸಿಯರ ಜನಸಂಖ್ಯೆ

೨.೧.ಬಳ್ಳಾರಿ-ನಾಮ ನಿವೇಚನೆ

೨.೨.ಪೌರಾಣಿಕ ಹಿನ್ನೆಲೆ

೨.೩.ಭೌಗೋಳಿಕ ಲಕ್ಷಣಗಳು

೨.೪.ದೇವದಾಸಿಯರ ಜನಸಂಖ್ಯೆ

# ಅಧ್ಯಾಯ: ಎರಡು

# ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ನೋಟ ಮತ್ತು ದೇವದಾಸಿಯರ ಜನಸಂಖ್ಯೆ

ಭಾರತೀಯ ಇತಿಹಾಸ ಪರಂಪರೆಯಲ್ಲಿ ಕರ್ನಾಟಕ ಸಂಸ್ಕೃತಿಗೆ ಅಗ್ರಸ್ಥಾನವಿದೆ. ಕರ್ನಾಟಕದ ಚಾರಿತ್ರಿಕ ನೋಟದಲ್ಲಿ ಬಳ್ಳಾರಿ ಜಿಲ್ಲೆಯೂ ವಿಶ್ವ ವ್ಯಾಪಿಯಾಗಿ ಪ್ರಖ್ಯಾತಿ ಹೊಂದಿದ್ದು, ಕನ್ನಡ ಸಂಸ್ಕೃತಿಗೆ ಬಳ್ಳಾರಿ ಜಿಲ್ಲೆಯ ಕೊಡುಗೆ ಅಪಾರವಾಗಿದೆ. ಈ ಜಿಲ್ಲೆಯಲ್ಲಿನ ವಿಜಯನಗರ ಸಾಮ್ರಾಜ್ಯವನ್ನು ವಿಶ್ವವೇ ಬೆರಗುಗಣ್ಣಿನಿಂದ ನೋಡುತ್ತಿದೆ. ಹಿಂದೆ ವಿಜಯನಗರ ಸಾಮ್ರಾಜ್ಯದಲ್ಲಿ ಜನಪದ ಸಾಹಿತ್ಯವು ಅತ್ಯಂತ ಮಹತ್ವ ಪಡೆದು ಬೆಳೆದಿತ್ತು. ಇದು ಪುರಾಣ ಪುಣ್ಯ ಕತೆಗಳ ನೆಲೆವೀಡಾಗಿತ್ತು. ಅಲ್ಲದೆ ಬಳ್ಳಾರಿ ಜಿಲ್ಲೆಯು ಪ್ರಾಗೈತಿಹಾಸಿಕ ಕಾಲದಿಂದಲೂ ಗುರುತಿಸಲ್ಪಟ್ಟಿದೆ. ಪೌರಾಣಿಕ ಸ್ಥಳವಾದ ಕಿಷ್ಕಿಂದೆ ಬಳ್ಳಾರಿ ಜಿಲ್ಲೆಯ ಹಂಪಿ ಪ್ರದೇಶದಲ್ಲಿದೆ. ಹೀಗೆ ಬಳ್ಳಾರಿ ಜಿಲ್ಲೆ ಪ್ರದೇಶವು ಬಹಳ ಮಹತ್ವವನ್ನು ಪಡೆದಿದೆ.

ಬಳ್ಳಾರಿ ಪದದ ಹುಟ್ಟು ಮತ್ತು ಬೆಳವಣಿಗೆಯನ್ನು ಗಮನಿಸುವುದಾದರೆ ಬಳ್ಳಾರಿಗೆ ಬಳ್ಳಾರಿ ಎಂದು ಹೆಸರು ಬರಲು ಆ ಊರಿನ ಆದಿದೈವ ಬಳ್ಳಾರಿ ದುರ್ಗಮ್ಮನೇ ಕಾರಣವೆಂಬ ವಾಡಿಕೆ ಇದೆ. ಕ್ರಿ.ಶ ೧೨ನೇ ಶತಮಾನದ ಯಶೋಧರ ಚರಿತೆಯಲ್ಲಿ ಬಳರಿ ಎಂಬ ಪದ ಉಪಯೋಗಿಸಲ್ಪಟ್ಟಿದೆ. ಅಲ್ಲದೇ ಇಲ್ಲಿನ ಊರಿನ ಹೆಸರು ದೇವತೆಗಳ ಹೆಸರಿನಿಂದ ಆರಂಭವಾಗಿವೆ. ಉದಾ:– ಬಸವನದುರ್ಗ, ಅನಂತಶಯನ ಗುಡಿ, ಮಲ್ಲಪ್ಪನ ಗುಡಿ. ಈ ರೀತಿ ಬಳ್ಳಾರಿ ದೇವತೆಗೆ ಸಂಬಂಧಿಸಿದಂತೆ ಬಳ್ಳಾರಿ ದುರ್ಗಮ್ಮ ಎಂದು ಬಳಸಲಾಗುತ್ತದೆ. ಬಹುಶಃ ಬಳರಿಯು ಉಗ್ರ ಸ್ವರೂಪದವಳಾದಂತೆ ದುರ್ಗೆಯು ಉಗ್ರ ಸ್ವರೂಪದವಳು ಎಂಬ ಸಾಮ್ಯತೆಯಂತೆಯೇ ಬಳರಿ ಎಂಬ ಹೆಸರು ಬಂದಿರಬೇಕು.

ಬಳ್ಳಾರಿ ಪದ ಉಲ್ಲೇಖವು ಕಾವ್ಯಗಳಲ್ಲಿ, ಶಾಸನಗಳಲ್ಲಿ, ಜನಪದ ಗೀತೆ ಹಾಗೂ ದಂತ ಕಥೆಗಳಲ್ಲಿ ಬಳಕೆಯಾಗಿರುವುದನ್ನು ಕಾಣಲಾಗುವುದು. ಬಳ್ಳಾರಿ ಪದವು ಉಗ್ರ ಸ್ತ್ರೀ ಸೂಚಕ, ವ್ಯಕ್ತಿ ಸೂಚಕ, ರಾಕ್ಷಸ ಸೂಚಕವಾಗಿ ಬಳಕೆಯಲ್ಲಿ ಬಂದಿದೆ. ಪ್ರಾಚೀನ ಕನ್ನಡ ಕಾವ್ಯಗಳಲ್ಲಿಯೂ ಬಳ್ಳಾರಿ ಪದ ಬಳಕೆಯಾಗಿದೆ. ಅವುಗಳೆಂದರೆ ಕ್ರಿ.ಶ. ೧೦೪೦ ರ ಚಂದ್ರರಾಜನ ಮದನತಿಲಕವೆಂಬ ಕಾಮಶಾಸ್ತ್ರ

ಗ್ರಂಥದಲ್ಲಿ, ಕ್ರಿ.ಶ. ೧೧೦೦ ರ ಬ್ರಹ್ಮಶಿವನ ಸಮಯ ಪರೀಕ್ಷೆ ಎಂಬ ಕೃತಿಯಲ್ಲಿಯೂ ಬಳ್ಳಾರಿ ಎಂಬುದು ಉಪಯೋಗಿಸಲ್ಪಟ್ಟಿದೆ. ಈ ಕೃತಿಯಲ್ಲಿನ ಒಂದು ಸಾಲಿನಲ್ಲಿ ಎಕ್ಕಲದೇವಿಗೆ ಮೊಲಕ್ಕನಿಗೂ, ಬನದ ಬಳರಿಗೆ, ಮೈಲಾರಿಗೆ ಅಳುಕದೆ ಜಾತ್ರೆಯನ್ನು ಮಾಡುವವರಿಗೆ ಬ್ರಹ್ಮಶಿವನು ಕಂಡಿಸಿದ್ದಾನೆ. ಬ್ರಹ್ಮಶಿವನ ಸ್ತುತಿಸಿದ್ದರಿಂದ ಆತನ ಜೀವ ಸಂಭೋದನೆಯಲ್ಲಿ ಗಿರಿವಾಸಿನಿ ಎಂಬ ಶಕ್ತಿ ಕಂಡು ಬರುತ್ತದೆ. ಇದರಿಂದ ಪ್ರೇರಣೆಗೊಂಡ ಬ್ರಹ್ಮ ಶಿವನು ಗಿರಿವಾಸಿನಿಯು ಗಿರಿವಾಸದಲ್ಲಿರುವಳು ಎಂಬ ಅರ್ಥ ಬರುವಂತೆ ಬನದ ಬಳಾರಿಯಾಗಿ ಬಳಸಿರಬೇಕು.

"ಕ್ರಿ.ಶ. ೧೯೬೯ ರ ಭೀಮ ಕವಿಯ ಬಸವ ಪುರಾಣದಲ್ಲಿ ದಿಟ್ಟ ಬಳಹರಿ ಮಾರಿಗೆ ಎಂದಿದ್ದಾರೆ. ಕ್ರಿ.ಶ. ೧೪೫೦ ರ ಚತುರಾಸ್ಯ ನಿಘಂಟುವಿನಲ್ಲಿ ಬಳಾರಿ ಮಹಾಕಾಳಿ ಎಂದು ಬಳಸಲಾಗಿದೆ. ಕ್ರಿ.ಶ. ೧೬೫೦ರ ರಾಜ ಶೇಖರ ವಿಳಾಸ ಕೃತಿಯಲ್ಲಿ ಒಬ್ಬ ಸೂಳೆಯು ಮೋಸ ಮಾಡಿದ ವ್ಯಕ್ತಿಯೊಬ್ಬನಿಗೆ ಬಲಿಕೊಟ್ಟ ಮನ್ಮಥ ಬಳಾರಿಗೆ ದೊಡ್ಡ ಕುರಿ ಮಾಡಿ ಕಡಿಯುತ್ತೇನೆ ಇಲ್ಲ ಬಳರಿಗೆ ಕುರಿಬಲಿ ಕೊಟ್ಟಂತೆ ಕಡಿಯಬೇಕಾಗುತ್ತದೆ ಎಂಬುದರ ಜೊತೆಗೆ ಮನ್ಮಥ ಬಳರಿ ಎಂಬ ವಿಶಿಷ್ಟ ಪದದ ಬಳಕೆ ಕಂಡು ಬರುತ್ತದೆ" *(ಹಂದ್ರಾಳು ಮಾರ್ಕಂಡೇಯ: ೨೦೦೮: ಪ.೧೮).*

**೨.೧. ಶಾಸನಗಳಲ್ಲಿ ಬಳ್ಳಾರಿ ಪದ**

ಶಾಸನಗಳ ಮೂಲದಿಂದಲೂ ಬಳ್ಳಾರಿ ಎಂಬ ಶಬ್ದ ಬಳಕೆಯನ್ನು ಗಮನಿಸಬಹುದು. ಬಳ್ಳಾರಿ ಜಿಲ್ಲೆಯ ಕುರುಗೋಡಿನಲ್ಲಿ ದೊರೆತಿರುವ ಕ್ರಿ.ಶ. ೯೭೧ ರ ಶಾಸನದಲ್ಲಿ ರಾಷ್ಟ್ರಕೂಟರ ಆಳ್ವಿಕೆ ಇತ್ತು ಎಂದು ತಿಳಿಯುತ್ತದೆ. ಆದರೆ ಬಳ್ಳಾರಿ ಪದವು ಪ್ರಸ್ತಾಪವಾಗಿಲ್ಲ. ಮೊಟ್ಟ ಮೊದಲ ಬಾರಿಗೆ ಬಳ್ಳಾರಿ ಪದ ಬಳಕೆಯಾದ ಶಾಸನವೆಂದರೆ ಸಿರಿವಾರದ ಕ್ರಿ.ಶ. ೧೦೪೪ ರ ಈಶ್ವರ ದೇವಾಲಯದ ಮುಂಭಾಗದ ಶಾಸನದಲ್ಲಿ ಎಂದು ಹೇಳಬಹುದು. ಈ ಶಾಸನದಲ್ಲಿ ಈ ರೀತಿಯ ಉಲ್ಲೇಖ ದೊರೆತಿದೆ. 'ಚಾಳುಕ್ಯದೊರೆಯ ಸಾಮಂತ ಪಲ್ಲವರಸನು ಕಪಗಲ್ಲು ಗ್ರಾಮದಲ್ಲಿ ಮಹಾ ದೇವರಿಗೆ ಎಂಟು ಮತ್ತರು ಮಕ್ಕಕ್ಕಿ ಭೂಮಿಯನ್ನು ಶಿಷ್ಟರಾಗಿ ಬಳಾರಿಗೆ ದಾರಾ ಪೂರ್ವಕವಾಗಿ ಕೊಟ್ಟರು ಎಂದು ಪ್ರಾಸ್ತಾಪವಾಗಿದೆ. ಹಾಗೆಯೇ ಕ್ರಿ.ಶ. ೧೧೦೦-೪೧ ರ ವರೆಗೆ ಆಳಿದ ವಿಷ್ಣುವರ್ಧನನ ವಶದಲ್ಲಿದ್ದ ಹೊಯ್ಸಳರ ಮಾರ್ಗಗಳಲ್ಲಿ ಬಳ್ಳಾರಿ ದುರ್ಗಮ್ಮ ಒಂದಾಗಿತ್ತು ಎಂದು ತಿಳಿಯುತ್ತದೆ. ಕ್ರಿ.ಶ. ೧೧೩೧ ರ ಚಾಳುಕ್ಯ ದೊರೆ ತ್ರಿಭುವನ ಮಲ್ಲದೇವನ ಕಾಲದ ಶಾಸನದಲ್ಲಿ ಬಳ್ಳಾರಿ ಭೀಮರಸನಿಗೆ ಭೂದಾನ ನೀಡಲಾಗಿದೆ ಎಂದು ಇದೆ. ನಂತರ ಕ್ರಿ.ಶ.೧೧೪೭ ರ ಕೋಳುರು ಸೂರ್ಯನಾರಾಯಣನ ಗುಡಿಯಲ್ಲಿರುವ ಶಾಸನದ ಉಲ್ಲೇಖದಂತೆ ಬಳಾ ೩೦ ರ ಪೊಲೆವಾರಿಗೆ ತೆರಿಗೆ ಬಿಟ್ಟಿದ್ದನ್ನು ತಿಳಿಸುತ್ತದೆ. ನಂತರ ಬಳ್ಳಾರಿಯ ದಾರಿ ಎಂಬ ವಿವರಗಳು ಕಾಣಸಿಗುತ್ತವೆ. ಕಾಕುಬಾಳು ಗ್ರಾಮ ರಸ್ತೆಯ ಕಂಪಲೆಪ್ಪಿನ ಗುಡ್ಡದಲ್ಲಿ ಅಪ್ರಕಟಿತ ಶಾಸನವೊಂದರಲ್ಲಿ 'ಬಳ್ಳಾರಿ ಸೀಮೆ' ಎಂದಿದೆ. ಇದು ಸುಮಾರು ೧೨-೧೩ ನೇ ಶತಮಾನದ್ದಿರಬೇಕೆಂದು ತಿಳಿಸಿದ್ದಾರೆ. ಶಾಸನಗಳಲ್ಲಿ ಬನದ ಬಳ್ಳಾರಿ ಎಂಬ ಉಲ್ಲೇಖವು ಎಲ್ಲಿಯೂ ಕಂಡುಬರುವುದಿಲ್ಲ. ಕೇವಲ ಬಳಾ-ಬಳರಿ-ಬಳ್ಳಾರಿ ಎಂದು ಕಂಡುಬಂದಿದೆ.

ಅನೇಕ ವಿದ್ವಾಂಸರು ಬಳ್ಳಾರಿಯ ಐತಿಹ್ಯದ ಕುರಿತಾಗಿ ಈ ರೀತಿಯಾಗಿ ತಿಳಿಸಿದ್ದಾರೆ. "ಚಂದ್ರಹಾಸನೆಂಬ ರಾಜನು ತುಂಗಾ ಭದ್ರಾ ತೀರದ ದಕ್ಷಿಣ ದಿಕ್ಕಿನ ಕುಂತಳವೆಂಬ ನಗರವನ್ನು ಆಳುತ್ತಿದ್ದು ಆಗ ಈ ಪ್ರದೇಶವೆಲ್ಲವೂ ಕಾಡಿನಿಂದ ಕೂಡಿತ್ತು. ಬಾಳಾಸುರನೆಂಬ ಒಬ್ಬ ರಾಕ್ಷಸನು ಈ ಸ್ಥಳದ ಗುಡ್ಡದ ಮೇಲೆ ಆಶ್ರಯ ಮಾಡಿಕೊಂಡು ಜೀವ ಕೋಟಿಗಳಿಗೆ ಉಪಟಳ ನೀಡುತ್ತಿದ್ದನು. ಸ್ವರ್ಗದ ದೇವಕನ್ಯೆಯರಿಗೂ ಉಪದ್ರವ ನೀಡತೊಡಗಿದನು. ಇದರಿಂದ ಬೇಸತ್ತ ದೇವಕನ್ನಿಕೆಯರು ದೇವೇಂದ್ರನಿಗೆ ಮೊರೆ ಹೋದರು. ಆಗ ಇಂದ್ರನು ಬಳಾಸುರನನ್ನು ವಧೆ ಮಾಡುವ ಸಲುವಾಗಿ ಭೂ ಲೋಕಕ್ಕೆ ಬಂದು ಅವನ ವಿರುದ್ಧ ಯುದ್ಧ ಮಾಡಿ ವಜ್ರಾಯುಧದಿಂದ ಆತನನ್ನು ಸಂಹರಿಸಿದನು. ಅಂದಿನಿಂದ ಈ ಗುಡ್ಡಕ್ಕೆ ಬಳರಿ ಎಂಬ ಹೆಸರು ಬಂದಿತು" *(ಹಂದ್ರಾಳ ಮಾರ್ಕಂಡೇಯ:೨೦೧೮:೨೦).*

ಬಳ್ಳಾರಿಯ ಕುರಿತಾಗಿ ಒಂದು ಕಥೆ ಇದೆ. ಸುಮಾರು ವರುಷಗಳ ಹಿಂದೆ ಬಳ್ಳಾರಿ ತಾಲೂಕಿನ ಕೋಳೂರು ಗ್ರಾಮದಲ್ಲಿ ಒಬ್ಬ ಶಿವಭಕ್ತ ಮಲ್ಲಯ್ಯನೆಂಬ ಧವಸ ಧಾನ್ಯಗಳನ್ನು ಮಾರಟ ಮಾಡುವ ವ್ಯಾಪಾರಿ ಇದ್ದ. ವ್ಯಾಪಾರಕ್ಕಾಗಿ ಒಂದು ದಿನ ಬಳ್ಳಾರಿಯ ಪ್ರದೇಶಕ್ಕೆ ಬಂದಿದ್ದ. ಈತನು ಬಹಳ ವರ್ಷಗಳಿಂದ ಪ್ರಸಾದವನ್ನು ಶಿವಲಿಂಗಕ್ಕೆ ನೈವೇದ್ಯ ಮಾಡಿ ಆ ಪ್ರಸಾದವನ್ನು ಮಾತ್ರ ಸೇವಿಸುತ್ತಿದ್ದ. ಒಂದು ವೇಳೆ ಲಿಂಗಪೂಜೆ ಮತ್ತು ನೈವೇದ್ಯ ಸಮರ್ಪಿಸಲು ಆಗದಿದ್ದರೆ ಬೇರೇನನ್ನೂ ಸೇವಿಸದೆ ದಿನಗಟ್ಟಲೆ ಉಪವಾಸವಿರುತ್ತಿದ್ದ. ಮಲ್ಲಯ್ಯ ಇಳಿವಯಸ್ಸಿನವನಾಗಿ ಕಣ್ಣಿಗೆ ಪೊರೆ ಬಂದು ದೃಷ್ಟಿ ಬಹಳ ಮಂದವಾಗಿತ್ತು. ಹಾಗಾಗಿ ತನ್ನ ಅಳಿಯನಾದ ಬಸವಣ್ಣ ಎಂಬುವವನನ್ನೂ ತನ್ನ ಸಹಾಯಕ್ಕೆ ಇಟ್ಟುಕೊಂಡಿದ್ದ. ಆದಿನ ವ್ರತವನ್ನು ಪಾಲಿಸಲು ಶಿವಲಿಂಗವನ್ನು ನೋಡಿಕೊಂಡು ಬರಲು ಅಳಿಯನಿಗೆ ತಿಳಿಸಿದ. ಅವನು ಸುತ್ತಲು ಹುಡುಕುತ್ತಾನೆ ಈ ಪ್ರದೇಶದಲ್ಲಿ ಎಲ್ಲಿಯೂ ಶಿವಲಿಂಗ ಕಾಣಿಸುವುದಿಲ್ಲ. ಮಾವ ವ್ರತ ಪೂರೈಸದೆ ಉಪವಾಸವಿರುತ್ತಾನೆ ಎಂದು ಮನಗಂಡ ಅಳಿಯ ತಮ್ಮಲ್ಲಿದ್ದ ಧಾನ್ಯವನ್ನು ಅಳೆಯುವ ಬಳ್ಳವನ್ನು ಬಂಡೆಯ ಮೇಲೆ ತಲೆ ಕೆಳಗೆ ಮಾಡಿ ಇಟ್ಟು ಪೂಜೆಗೆ ಎಲ್ಲಾ ತಯಾರಿಮಾಡುತ್ತಾನೆ. ನಂತರ ಮಲ್ಲಯ್ಯ ತನ್ನ ಅಳಿಯ ತೋರಿಸಿದ ಬಳ್ಳಕ್ಕೆ ಶಿವಲಿಂಗವೆಂದು ಭಕ್ತಿಯಿಂದ ನೈವೇದ್ಯ ಸಮರ್ಪಿಸಿ ಶಿವಪ್ರಸಾದವನ್ನು ಸೇವಿಸುತ್ತಾನೆ. ನಂತರ "ಶಿವಲಿಂಗವೆಂದು ನಿಷ್ಠೆಯಿಂದ ಪೂಜಿಸಿದ ಬಂಡೆಯ ಮೇಲಿನ ಬಳ್ಳವೇ "ಲಿಂಗ"ವಾಗಿತ್ತು. ಹಳೆಗನ್ನಡದಲ್ಲಿ ಬಳ್ಳ–ಅಂದರೆ ಸೇರು, ಅರೆ ಅಂದರೆ ಬಂಡೆ, ಬಳ್ಳ+ಅರೆ=ಬಳ್ಳಾರೆ ಎಂದು ಹೆಸರು ಬಂದಿದೆ. ಆ ಕಾಲದ ಶಾಸನಗಳಲ್ಲಿ ಬಳ್ಳಾರೆ ಎಂದು ಕರೆಯಲಾಗಿದೆ) ನಂತರ ವಾಡಿಕೆಯಲ್ಲಿ 'ಬಳ್ಳಾರೆ' ಬಳ್ಳಾರಿ ಆಗಿದೆ. (ಪರಿಶೀಲಿಸಿ ನೋಡಿದರೆ ಮತ್ತೀಶರ ಲಿಂಗದ ಕೆಳಗೆ ಬಂಡೆಯಿದೆ ಪೀಠವಿಲ್ಲ) ಮಹಾನ್ ಶಿವಭಕ್ತ ಮಲ್ಲಯ್ಯನಿಂದಲೇ ಈ ದೇವರಿಗೆ ಮತ್ತೀಶ್ವರನೆಂದು ಹೆಸರು ಬಂದಿದೆ"(ಹನುಮಂತರೆಡ್ಡಿ ವೈ:೨೦೦೮: ೭). ಬಳ್ಳಾರಿ ಎಂಬ ಹೆಸರು ಬಂದಿರುವ ಕುರಿತಾಗಿ ಇವೆಲ್ಲಾ ಆಧಾರಗಳನ್ನು ಅವಲೋಕಿಸುವುದಾದರೆ ಆರಾಧನೆ ಮತ್ತು ದೈವ ಶಕ್ತಿ ಭಕ್ತಿಯ ಹಿನ್ನೆಲೆಯೇ ಕಣ್ಣಿಗೆ ಗೋಚರಿಸುತ್ತವೆ.ಮಲ್ಲಯ್ಯ ಎಂಬ ಶಿವಭಕ್ತ ಶರಣನಿಂದ ಈ ಊರಿಗೆ ಬಳ್ಳಾರಿ ಹೆಸರು ಬಂದಿರುವುದು. ಬಳ್ಳವನ್ನು ಶಿವಲಿಂಗ

ವೆಂದು ಪೂಜಿಸಿರುವ ಕುರುಡ ಮಲ್ಲಯ್ಯನ ಭಕ್ತಿಯನ್ನು ಮೆಚ್ಚಿ ಶಿವ ಪ್ರತ್ಯಕ್ಷನಾಗಿದ್ದನು. ಅಂದಿನಿಂದಲೇ ಈ ಬಳ್ಳೇಶನಿಂದಲೇ ಬಳ್ಳಾರಿ ಎಂಬ ಪದ ಬಳಕೆಯಾಗಿ ರೂಢಿಗೆ ಬಂದಿದೆ ಎಂದು ತಿಳಿಯುತ್ತದೆ. ಬಳರಮ್ಮ ದೇವತೆ ಮುಂದೆ ಬಳಾರಿ ದುರ್ಗಮ್ಮ ಎಂದಾಗಿದೆ. ಇಲ್ಲಿ ದುರ್ಗ ಎಂಬುದು ಕೋಟೆ ಸೂಚಕ ಪದವಾಗಿಯೂ, ಬಳರಿ ದೇವತೆ ಕೋಟೆಯಾಗಿ ಕಾಯುವಳು ಎಂಬುದನ್ನು ಇದು ಪ್ರತಿನಿಧಿಸುತ್ತದೆ ಎಂದು ಹೇಳಬಹುದು. ಬಳ್ಳಾರಿ ದುರ್ಗಮ್ಮನ ಕುರಿತಾಗಿ ಜನರಲ್ಲಿರುವ ಭಕ್ತಿ ಆಚರಣೆಗಳು ಇಂದಿಗೂ ನಡೆಯುತ್ತಲೆ ಬಂದಿವೆ. ಇದಕ್ಕೆ ಸಾಕ್ಷಿಯಾಗಿ ಪ್ರತಿ ವರ್ಷ ನಡೆಯುವ ದುರ್ಗಮ್ಮ ಸೀಡಿಯನ್ನು ಕಾಣಲಾಗುವುದು. ಹೀಗೆ ದೇವ ದೇವತೆಗಳ ಭಕ್ತಿ–ಆರಾಧನೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಪದವೇ ಬಳ್ಳಾರಿಯಾಗಿದೆ ಎಂದು ಹೇಳಲಾಗುವುದು.

### ೨.೨ ಬಳ್ಳಾರಿ ಜಿಲ್ಲೆಯ ಪೌರಾಣಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆಯು ಸಾಕಷ್ಟು ಪೌರಾಣಿಕ ಘಟನಾವಳಿಗಳನ್ನು ಹೊಂದಿದೆ. ಇಲ್ಲಿ ದೇವಿ ಪುರಾಣದ ಚಿತ್ರಣ ರಾಮಾಯಣ ಮಹಾಭಾರತ ಪ್ರಸಂಗಗಳು ನಡೆದಿರುವ ಕುರಿತಾಗಿ ಕಂಡು ಬರುತ್ತದೆ. ಬಳ್ಳಾರಿ ಜಿಲ್ಲೆಯ ದೇವಿ ಪುರಾಣಕ್ಕೆ ಸಂಬಂಧಿಸಿದಂತೆ ದುರ್ಗಾದೇವಿ ಎಂದೇ ಪ್ರಸಿದ್ಧ ಪಡೆದಿರುವ ಬಳ್ಳಾರಿ ದುರ್ಗಮ್ಮ ದೇವಿಯು ಒಂದು ಅವತಾರವಾಗಿ ನೆಲೆಸಿದ್ದಾಳೆ. ಆದ್ದರಿಂದಲೇ ಬಳ್ಳಾರಿಯ ಒಂದು ಗ್ರಾಮ ದೇವತೆಯಂತೆ ಕಂಡು ಬರುತ್ತಾಳೆ. ಈ ಹಿಂದೆ ತಿಳಿದ ಹಾಗೆ ಬನದ ದೇವತೆ ಎಂಬ ಉಲ್ಲೇಖದಂತೆ ಈಗಿರುವ ದುರ್ಗಾದೇವಾಲಯ ಸ್ಥಳವು ಬನದ ಸ್ಥಳವಾಗಿತ್ತೆಂದು ದೃಢಪಡುತ್ತದೆ. "ಬಳ್ಳಾರಿ ದುರುಗಮ್ಮನ ಪಾರಂಪರಿಕ ಭಕ್ತರು ಗಾಣಿಗ ಜನಾಂಗದವರಾಗಿದ್ದು ಇವರಿಂದಲೇ ಸಿಡಿ ಉತ್ಸವ ನೆರವೇರುತ್ತದೆ. ಇಂದಿಗೂ ಇವರು ಬಳ್ಳಾರಿ ದುರುಗಮ್ಮನಿಗೆ ಕುರಿ ಬಲಿಕೊಟ್ಟು ಅದರ ಅಡುಗೆಯನ್ನು ನೈವೇದ್ಯ ಮಾಡಿ ನಂತರ ಮಧ್ಯಸೇವಿಸಿ ಮಾಂಸದೂಟ ಮಾಡುತ್ತಾರೆ"(ಸಿದ್ದೇಶ್ವರ ಎ. ಎನ್:೨೦೧೪ :೧೬೧). ಬನದ ಬಳಾರಿ ಎಂಬ ಉಲ್ಲೇಖಗಳು ಬಳಾರಿ ದೇವತೆಯ ದೇವಾಲಯ ಊರು ಬಿಟ್ಟು ಅರಣ್ಯ ಪ್ರದೇಶದಲ್ಲಿ ಇರುವುದನ್ನು ತಿಳಿಸುತ್ತದೆ. ಬಳಾರಿ ದುರ್ಗಮ್ಮ ಕೌಲುಬಜಾರದ ಗ್ರಾಮದೇವತೆಯಾಗಿದ್ದಾಳೆ. ಕೌಲುಬಜಾರಕ್ಕೂ ಬಳ್ಳಾರಿ ದುರುಗಮ್ಮ ದೇವಾಲಯಕ್ಕೂ ಸುಮಾರು ಅಂತರವಿದೆ. ಬಳ್ಳಾರಿಯ ಆರಾಧಕರು ಕೌಳರು, ಇವರು ನೆಲೆಸಿದ ಪ್ರದೇಶವೇ ಕೌಲು ಬಜಾರವಾಗಿದೆ. ಪ್ರಸ್ತುತದಲ್ಲಿ ಈ ದೇವಿಯನ್ನು ಪ್ರತಿಯೊಂದು ಸಮುದಾಯದವರು ಕೂಡ ಆರಾಧಿಸುತ್ತಾರೆ. ಅಲ್ಲದೇ ದುರ್ಗಮ್ಮನ ಸಿಡಿಯ ಆಚರಣೆಯಲ್ಲಿ ಇಡಿ ಬಳ್ಳಾರಿಯ ಸುತ್ತ ಮುತ್ತಲಿನ ಎಲ್ಲಾ ಭಕ್ತರು ಬಂದು ಸೇರಿರುತ್ತಾರೆ.

ರಾಮಾಯಣ ಚಿತ್ರಣಕ್ಕೆ ಸಂಬಂಧಿಸಿದಂತೆ ವಿಜಯನಗರ ಸಾಮ್ರಾಜ್ಯದ ಹಂಪಿಯಲ್ಲಿರುವ ಅನೇಕ ಸ್ಥಳಗಳು ಪ್ರಮುಖವಾಗಿವೆ. ಅದರಲ್ಲಿ ಅತ್ಯಂತ ಪ್ರಮುಖವೆಂದರೆ ಕಿಷ್ಕಿಂದಾ ಸ್ಥಳವಾಗಿದೆ. "sugreva later deivear put his brother vali, was the vanara king at the time and kishkindha which has been geneally acknowledged to have been near the present hampi in hospet taluku *(ಗೆಜಿಟಿಯರ್)* ಈ ಪ್ರದೇಶವು ರಾಮಾಯಣ

ಮಹಾಕಾವ್ಯದಲ್ಲಿ ಕಂಡು ಬರುವ ಕಿಷ್ಕಿಂದೆಯಾಗಿದೆ ಎಂದು ನಂಬಲಾಗಿದೆ. ಈ ಕಿಷ್ಕಿಂದೆಯಲ್ಲಿ ರಾಮ ಇಲ್ಲಿಗೆ ಬರುವುದಕ್ಕೆ ಮುಂಚಿತವಾಗಿ ಇಲ್ಲಿ ವಾಲಿ-ಸುಗ್ರೀವ, ಹನುಮಂತ, ಮಾತಂಗ, ಜಾಂಬವಂತ ಮುಂತಾದ ವೀರರು ಈ ಸ್ಥಳದ ಸುತ್ತ ಮುತ್ತಲೂ ಜೀವಿಸಿದ್ದರೆಂದು ತಿಳಿದುಬರುತ್ತದೆ" *(ಸುಜಾತ ಅಕ್ಕಿ:೨೦೦೪:೨೧-೨೨).* ಶಿವ ಪಾರ್ವತಿಯರು ಹಂಪೆಯಲ್ಲಿ ತಪಸ್ಸು ಮಾಡಿದ್ದು ಮತ್ತು ಶಿವ ಪಾರ್ವತಿಯ ವಿವಾಹವಾಗಿದ್ದು ಜೊತೆಗೆ ಮನ್ಮಥನನ್ನು ಶಿವನು ತನ್ನ ೩ ನೇ ಕಣ್ಣಿನಿಂದ ಸುಟ್ಟು ಭಸ್ಮ ಮಾಡಿದ ಸ್ಥಳ ಇದಾಗಿದೆ. ಈಗಿರುವ ಶಿವನ ದೇವಾಲಯಕ್ಕಿಂತ ಬೆಟ್ಟದ ತುದಿಯಲ್ಲಿ ಮೂಲ ವಿರುಪಾಕ್ಷ ಗುಡಿ ಇತ್ತು ಎಂದು ಮತ್ತು ಆ ಗುಡಿಯ ಎದುರಿಗೆ ಮನ್ಮಥ ಕುಂಡ ಇದೆ ಎಂದು ತಿಳಿದು ಬರುತ್ತದೆ. ಇಲ್ಲಿ ವಿರುಪಾಕ್ಷನಿಗೆ ವಿವಾಹ ಮಾಡಿದ ಕುರಿತು ಇಲ್ಲಿನ ಸ್ಥಳ ಪುರಾಣದಿಂದ ತಿಳಿದು ಬರುತ್ತದೆ. ವಿರುಪಾಕ್ಷ ಹಂಪಿಯಲ್ಲಿ ಖ್ಯಾತಿಯನ್ನು ಪಡೆದಿರುವ ಕುರಿತು ಜನಪದ ಐತಿಹ್ಯವಲ್ಲದೇ ಅನೇಕ ಕೃತಿಗಳಲ್ಲಿ ಹೇಮಕೂಟ, ಕಿಷ್ಕಿಂದ, ಪಂಪಾ ವಿರೂಪಾಕ್ಷ, ಪಂಪಾ ಸರೋವರ ಎಂಬ ಹೆಸರುಗಳು ಪ್ರಸ್ತಾಪಗೊಂಡಿವೆ. ವಿರೂಪಾಕ್ಷನ ಹೆಂಡತಿ ಪಂಪಾಂಬಿಕೆಯ ತವರೂರು ಹೊಸಪೇಟೆಯ ಚಿಲಕನಹಟ್ಟಿ, ಈ ಊರಿನ ಜನರು ಹಂಪೆಯ ಜಾತ್ರೆ, ಫಲ, ಪೂಜೆ ದಿವಸವನ್ನು ನಿಶ್ಚಿತಾರ್ಥದ ದಿನ ವಿವಾಹ ದಿನವನ್ನಾಗಿ ಆಚರಿಸುವುದು ಈಗಲೂ ಕಂಡು ಬರುತ್ತದೆ.

ರಾಮನ ೧೪ ವರ್ಷ ವನವಾಸದ ಸಮಯದಲ್ಲಿ ರಾವಣನು ಸೀತೆಯನ್ನು ಹೊತ್ತುಕೊಂಡು ಹೋಗಿದ್ದ. ಆ ಸಂದರ್ಭದಲ್ಲಿ ರಾಮನು ಸೀತೆಯನ್ನು ಹುಡುಕುತ್ತಾ ಹಂಪೆಯ ಕಿಷ್ಕಿಂದ ಸ್ಥಳಕ್ಕೆ ಬಂದನು ಎಂಬ ರಾಮಾಯಣದ ಘಟನೆಯ ಕುರಿತು ಸ್ಥಳ ಪುರಾಣಗಳು ತಿಳಿಸುತ್ತವೆ. ಆ ಸಂದರ್ಭದಲ್ಲಿ ಕಿಷ್ಕಿಂದೆ ವಾಲಿ-ಸುಗ್ರೀವ, ಹನುಮಂತ ಎಂಬ ವಾನರರ ಹಾಗೂ ಜಾಂಬುವಂತರ ನೆಲೆಯಾಗಿತ್ತು. ಅವರ ಸ್ನೇಹವಾದ ಬಳಿಕವೇ ವಾಲಿ-ಸುಗ್ರೀವರ ಯುದ್ಧಕ್ಕೆ ರಾಮನೆ ಅಣಿಗೊಳಿಸಿ ವಾಲಿಯನ್ನು ಕೊಲ್ಲುವ ಘಟನೆ ಇಲ್ಲಿ ಜರುಗಿತ್ತೆಂದು ತಿಳಿದು ಬರುತ್ತದೆ. ಅನಂತರ ಅವರೆಲ್ಲರ ಸಹಾಯದಿಂದ ರಾವಣನನ್ನು ಕೊಂದು ಸೀತೆಯನ್ನು ಕರೆತರುತ್ತಾರೆ. ಅಲ್ಲಿಂದ ಕಿಷ್ಕಿಂದೆ ಸ್ಥಳದ ಮಹತ್ವವನ್ನು ಸೀತೆಗೆ ತಿಳಿಸುತ್ತಾ ಕೋದಂಡರಾಮನ ಗುಡಿಯಲ್ಲಿ ಉಳಿದುಕೊಳ್ಳುತ್ತಾರೆ. ನಂತರ ಸಂಡೂರಿನ ರಾಮಘಡಕ್ಕೂ ಹೋಗಿದ್ದರೆಂದು ತಿಳಿದು ಬರುತ್ತದೆ.

ಕಿಷ್ಕಿಂದ ಪ್ರದೇಶದಲ್ಲಿ ವಾಲಿ ವಾಸವಾಗಿದ್ದರಿಂದ ವಾಲಿಭಂಡಾರವೆಂಬ ಗುಹೆಗಳು ಈಗಲೂ ಇರುವುದರ ಬಗ್ಗೆ ಆಧಾರ ಸಿಗುತ್ತದೆ. ಜೊತೆಗೆ ಕಿಷ್ಕಿಂದ ಮಾರ್ಗದಲ್ಲಿ ರಾವಣ ಸೀತೆಯನ್ನು ಕರೆದೊಯ್ಯುವಾಗ ಆಕೆ ಧರಿಸಿದ ಆಭರಣಗಳು ಪಂಪಾ ಸರೋವರದಲ್ಲಿ ಬಿದ್ದಿರುವುದು ಹಾಗೂ ಬಂಡೆಯ ಮೇಲೆ ಗೋಚರವಾಗುವ ಪಟ್ಟೆಯಾಕಾರದ ಸೀತೆಯ ಸೆರಗಿನ ಗುರುತು ನಿತ್ಯವು ರಾಮಾಯಣ ಘಟನೆಯನ್ನು ತಿಳಿಸುತ್ತದೆ. ಅಲ್ಲದೆ ಇಲ್ಲಿ ಮಾತಂಗ ಬೆಟ್ಟವಿದ್ದು ಮಾತಂಗ ಮುನಿಯು ಇಲ್ಲಿಯೇ ಇದ್ದನು ಎಂಬ ನಂಬಿಕೆ ಇದೆ. ಆತನು ಬೃಹದ್ದೇಶಿ ಎಂಬ ಕೃತಿಯನ್ನು ಇಲ್ಲಿಯೇ ರಚಿಸಿರಬೇಕು. ಜೊತೆಗೆ ಮಾತಂಗ ಮುನಿಯ ಮಗಳಾದ ಮಾತಂಗಿ ಈಗ ಸ್ತ್ರೀ ದೇವತೆಯಾಗಿ ಪೂಜೆಗೊಳ್ಳುತ್ತಿರುವಳು. ಈ ಮುನಿಯಿಂದಲೇ ಮಾತಂಗ ಪರ್ವತ ಎಂದು ಈ ಬೆಟ್ಟಕ್ಕೆ ಕರೆಯುತ್ತಾರೆ. ಜಾಂಬುವಂತನು

ತಪಸ್ಸು ಮಾಡಲು ಸ್ಥಳವನ್ನು ರಾಮನಿಗೆ ಕೇಳಿದಾಗ ರಾಮನು ಹಂಪೆಯ ದಕ್ಷಿಣ ದೆಸೆಯೊಳು ಜಂಬೂ ದ್ವೀಪವೆಂಬ ಸ್ಥಳವನ್ನು ತಿಳಿಸುತ್ತಾನೆ. ಈಗಿರುವ ಜಂಬುನಾಥ ಬೆಟ್ಟವೆ ಜಾಂಬವಂತನು ತಪಸ್ಸು ಮಾಡಿದ ಸ್ಥಳವೆಂದು ಐತಿಹ್ಯಗಳಿಂದ ತಿಳಿಯುತ್ತದೆ.

ಹೊಸಪೇಟೆ ತಾಲೂಕಿನ ನಾಗೇನಹಳ್ಳಿ ಹತ್ತಿರದ ಧರ್ಮರಗುಡ್ಡದ ಗುಹೆಗಳಲ್ಲಿ ಧರ್ಮರು ಅಂದರೆ ಪಾಂಡವರು ವಾಸವಾಗಿದ್ದರೆಂದು ಮಹಾಭಾರತಕ್ಕೆ ಸಂಬಂಧಿಸಿದ ಘಟನೆಯು ತಿಳಿಸುತ್ತದೆ. ಹಂಪೆಯ ಪಂಪಾಸರೋವರ ದಾಟಿ ಬಂದಾಗ ವಿರಾಟ ಪರ್ವದ ದಿನದಲ್ಲಿ ಅಲೆದಾಡಿಕೊಂಡು ಇಲ್ಲಿಗೆ ಬಂದಿರುತ್ತಾರಂತೆ. ಈ ಧರ್ಮರ ಗುಡ್ಡದಲ್ಲಿ ಕೆಲವು ಪುರಾವೆಗಳು ಪಾಂಡವರು ಇಲ್ಲಿ ಇದ್ದರೆಂಬುದರ ಬಹು ಸ್ಪಷ್ಟ ದಾಖಲೆಗಳಾಗಿವೆ. ಅರ್ಜುನನು ಈ ಭಾಗದಲ್ಲಿ ನೀರು ಸಿಗದೇ ಇದ್ದಾಗ ತನ್ನ ಬಾಣದಿಂದ ಹೊಡೆದು ಕಲ್ಲು ಬಂಡೆಯಿಂದ ನೀರನ್ನು ತರಿಸಿದನಂತೆ. ಅದು ಈಗಲೂ ಬತ್ತದ ಬಾವಿಯಾಗಿದೆ. ಅಲ್ಲದೆ ಭೀಮನ ಡೋಗಿ, ಪಗಡೆಕಲ್ಲು ಹಾಗೂ ಪಾಂಡವರು ಗುಂಡುಕಲ್ಲಿನ ಮೇಲೆ ಕೃಷಿ ಮಾಡಿದ ಗೆರೆಗಳು ವಿಸ್ಮಯಕಾರಿ ಸಂಗತಿಗಳಾಗಿವೆ. ಇದರಿಂದಲೇ ಪ್ರತಿ ವರ್ಷವೂ ದಸರಾ ಹಬ್ಬದ ಊರ ಬನ್ನಿ ಹಬ್ಬದ ಹಿಂದನ ದಿನ ಇಲ್ಲಿ ಗುಡ್ಡದ ಬನ್ನಿ ಎಂಬ ಆಚರಣೆ ಮಾಡುತ್ತಾರೆ. ಆದಿನ ಅಕ್ಕಪಕ್ಕದ ಊರಿನ ಜನರು ಗ್ರಾಮ ದೇವತೆಗಳನ್ನು ಹೊಸದಾಗಿ ಬಣ್ಣ ಮಾಡಿಸಿಕೊಂಡು ಪಲಕ್ಕಿಯಲ್ಲಿಟ್ಟುಕೊಂಡು ೯ ದಿನಗಳವರೆಗೆ ಮನೆ ಮನೆಗೆ ಪಲ್ಲಕ್ಕಿಯನ್ನು ಹೊರಡಿಸಿ ಪೂಜೆ ಮಾಡಿಸಿಕೊಂಡು ಬರುತ್ತಾರೆ. ಹೀಗೆ ಬನ್ನಿ ಮುಡಿಯುಲು ದೇವರುಗಳನ್ನು ಪಲ್ಲಕ್ಕಿಯಲ್ಲಿ ಹೊತ್ತುಕೊಂಡು ಧರ್ಮರ ಗುಡ್ಡದ ಹತ್ತಿರ ತರುತ್ತಾರೆ.ಈ ಗುಹೆಗಳಲ್ಲಿ ತುಂಬಾ ಸುಂದರವಾದ ಕಪ್ಪು ಕಲ್ಲಿನ ಬಸವ, ಗಣಪ, ವೀರಭದ್ರಲಿಂಗ ಹಾಗೂ ಸರ್ಪ, ಕಾಳಿಂಗ, ಗರುಡ ಎನ್ನುವ ಗುಂಡು ಕಲ್ಲುಗಳು ಕಾಣಸಿಗುತ್ತವೆ. ಧರ್ಮದ ಗುಡ್ಡಕ್ಕೆ ಗ್ರಾಮ ದೇವತೆಗಳನ್ನು ಪಲ್ಲಕ್ಕಿಯಲ್ಲಿಟ್ಟುಕೊಂಡು ಬನ್ನಿ ಮುಡಿಯಲು ಹೋಗುವಾಗ ಆಯಾ ಗ್ರಾಮಗಳ ದೇವದಾಸಿಯರು ಪಲ್ಲಕ್ಕಿಯ ಹಿಂದೆ ದೇವರ ಹಾಡುಗಳನ್ನು ಹಾಡುತ್ತಾ ಮೆರವಣಿಗೆ ಹೋಗುತ್ತಾರೆ.

### ೨.೩ ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ನೋಟ

ವಿಜಯನಗರ ಸಾಮ್ರಾಜ್ಯ ಪೂರ್ವದಲ್ಲಿ ನೊಳಂಬರು, ತಲಕಾಡಿನ ಗಂಗರು, ಕಲ್ಯಾಣಚಾಲುಕ್ಯರ ವಂಶಗಳ ಆಡಳಿತಕ್ಕೆ ಒಳಪಟ್ಟ ಪ್ರದೇಶವಾಗಿತ್ತು. ಪ್ರಾಗೈತಿಹಾಸಿಕ ಕಾಲದ ಪೂರ್ವದಲ್ಲಿ ಮಾನವನು ನೆಲೆ ನಿಂತಿರುವ ಕುರಿತು ಮಾಹಿತಿ ನೋಡುವಲ್ಲಿ ಬಳ್ಳಾರಿ ಜಿಲ್ಲೆಯ ಸಂಗನಕಲ್ಲು, ಕಪ್ಪಗಲ್ಲು, ತೊರಣಗಲ್ಲು, ಸಿರುಗುಪ್ಪ ತಾಲೂಕಿನ ತೆಕ್ಕಲಕೋಟೆಯ ನಿಟ್ಟೂರು, ಸಂಡೂರು ತಾಲೂಕಿನ ದರೋಜಿ ಕರಡಿಧಾಮ ವಲಯ, ತುಂಗಭದ್ರ ನದಿಗೆ ಹೊಂದಿಕೊಂಡಿರುವ ಬಲಭಾಗದ ಬೆಟ್ಟಗಳು, ಕೂಡ್ಲಿಗಿ ತಾಲೂಕಿನ ಗುಡೆಕೋಟೆ ಸುತ್ತಮುತ್ತಲಿನ ಬೆಟ್ಟಗಳಲ್ಲಿ ಹಳೇಶಿಲಾಯುಗ ಮತ್ತು ನೂತನ ಶಿಲಾಯುಗದ ಕುರುಹುಗಳು ಕಂಡು ಬರುತ್ತವೆ. "ನಿಟ್ಟೂರಿನಲ್ಲಿ ಎರಡು ಪ್ರಕಾರದ ಆಯುಧಗಳು ಕಂಡು ಬಂದಿವೆ. ಇವು ದಕ್ಷಿಣಭಾತರದ ಕೈಗೊಡಲಿ ಮತ್ತು ಹರೆಯುವ ಉಪಕರಣಗಳ ವರ್ಗಕ್ಕೆ

ಸೇರಿದವು"*(ವಾಸುದೇವ ಬಡಿಗೇರ:೨೦೧೨:೭).* ಸಂಗನಕಲ್ಲು, ಕುರುಗೋಡು, ಕಾಕುಬಾಳು ನೆಲೆಗಳಲ್ಲಿ ಇವರ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಅನೇಕ ಉಪಕರಣಗಳು ಕಂಡು ಬಂದಿವೆ. ಪ್ರಾಗೈತಿಹಾಸ ಮತ್ತು ಇತಿಹಾಸ ಕಾಲದ ಅವಶೇಷಗಳೊಂದಿಗೆ ಇಂದಿಗೂ ನಂಬಿಕೆ ಸಂಪ್ರದಾಯಗಳು ಹೆಣೆದು ಕೊಂಡಿವೆ. ವೆಂಕಟಪುರ ಮತ್ತು ಕುಡುತಿನಿ ಬೂದಿದಿಬ್ಬಗಳಿಗೆ ರಾಮಾಯಣದ ವ್ಯಕ್ತಿಗಳನ್ನು ತಳುಕು ಹಾಕುತ್ತಾರೆ. ವೆಂಕಟಾಪುರದ ಬೂದಿದಿಬ್ಬ ವಾಲಿಯನ್ನು ಸುಟ್ಟಿದ್ದರಿಂದ ಉಂಟಾಯಿತೆಂದು ಹೇಳುತ್ತಾರೆ. ಕುಡುತಿನಿಯ ಬೂದಿ ದಿಬ್ಬ ರಾಮ ಕಾರ್ತಿಕೇಯ ವನದಿಂದ ಕಿಷ್ಕಿಂದೆಗೆ ಬರುವಾಗ ತನ್ನನ್ನು ತಡೆದ ರಾಕ್ಷಸನನ್ನು ಬಾಣಗಳಿಂದ ಹತ್ಯೆಗೈದು ಸುಟ್ಟಿದ್ದರಿಂದ ಉಂಟಾಯಿತೆಂಬ ನಂಬಿಕೆಗಳು ಬೆಳೆದು ಬಂದಿವೆ. ಹೀಗೆ ಇದು ಬಳ್ಳಾರಿ ಜಿಲ್ಲೆಯಲ್ಲಿ ಪ್ರಾಗೈತಿಹಾಸದ ಕುರಿತಾಗಿ ತಿಳಿಸುತ್ತವೆ. ಹಾಗೆಯೆ ಈ ಜಿಲ್ಲೆಯ ಇತಿಹಾಸವನ್ನು ನೋಡುವುದಾದರೆ,ಚರಿತ್ರೆಯ ದಾಖಲೆಗಳಿಂದ ಬಳ್ಳಾರಿ ಜಿಲ್ಲೆಯ ಚರಿತ್ರೆಯು ಮೌರ್ಯರ ಕಾಲದಿಂದ ಪ್ರಾರಂಭವಾಗುತ್ತದೆ. ಇವರ ನಂತರ ಶಾತವಾಹನರು, ಕಂದಂಬರು, ಬಾದಾಮಿ ಚಾಲುಕ್ಯರು, ನೊಳಂಬರು ಮತ್ತು ಗಂಗರ ಅಧೀನಕ್ಕೆ ಈ ಜಿಲ್ಲೆಯ ಕೆಲವು ಭಾಗಗಳು ಒಳಪಟ್ಟಿದ್ದವು ಎಂಬುದು ತಿಳಿದು ಬರುತ್ತದೆ. ಕ್ರಿ.ಶ. ೯೭೩ ರಲ್ಲಿ ಕಲ್ಯಾಣಚಾಲುಕ್ಯರು ಆಳ್ವಿಕೆಯನ್ನು ಪ್ರಾರಂಭಿಸಿ ಬಳ್ಳಾರಿ ಪ್ರಾಂತ್ಯವನ್ನು ವಶಕ್ಕೆ ತೆಗೆದುಕೊಂಡ ವಿಚಾರವನ್ನು ತಿಳಿಸುವ ಶಿಲಾ ಶಾಸನಗಳು ಬಳ್ಳಾರಿ ಜಿಲ್ಲೆಯಲ್ಲಿ ದೊರೆಯುತ್ತವೆ. ಕಲ್ಯಾಣದ ಸಮಾಂತನಾಗಿದ್ದ ಉಚ್ಚಂಗಿಯ ಪಾಂಡ್ಯರು ಈ ಪ್ರದೇಶದಲ್ಲಿ ಆಳುತ್ತಿದ್ದು ಮಹಮ್ಮದ್ ಬಿನ್ ತುಗಲಕ್‌ನ ಕಾಲದ ಕೊನೆಯಲ್ಲಿ ಇದು ಪತನಗೊಂಡಿತು. ನಂತರ ಸುಮಾರು ೩೦೦ ವರ್ಷಗಳ ಕಾಲ ಇಡಿ ದಕ್ಷಿಣ ಭಾರತವನ್ನು ಒಳಗೊಂಡು ಆಳಿದ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿ ನೆಲೆಗೊಂಡಿದ್ದು ಈ ಜಿಲ್ಲೆಯ ಹೊಸಪೇಟೆ ತಾಲೂಕಿನ ಹಂಪಿಯಲ್ಲೆ ಎಂದು ಹೇಳಬಹುದು.

ಬಳ್ಳಾರಿಯ ಕಂಪಿಲನ ಆಡಳಿತದ ತರುವಾಯ ವಿಜಯನಗರದ ಸಾಮ್ರಾಜ್ಯ ಸ್ಥಾಪನೆಯಾಗುತ್ತದೆ. ಈತನ ಸಂಬಂಧಿಗಳಾದ ಹರಿಹರ ಮತ್ತು ಬುಕ್ಕ ಎಂಬ ಸಹೋದರರು ವಿದ್ಯಾರಣ್ಯರ ಮಾರ್ಗದರ್ಶನದಲ್ಲಿ ವಿಜಯನಗರವನ್ನು ಸ್ಥಾಪಿಸುತ್ತಾರೆ. ವಿಜಯನಗರದ ಸ್ಥಾಪನೆಯ ನಂತರ ದಕ್ಷಿಣ ಪ್ರಾಂತ್ಯದ ಎಲ್ಲಾ ಪ್ರದೇಶಗಳಿಗೆ ರಕ್ಷಣೆ ದೊರೆಯುತ್ತದೆ. ಅಲ್ಲದೆ ತಮ್ಮ ಸಾಮ್ರಾಜ್ಯ ವ್ಯಾಪಕವಾಗಿ ವಿಸ್ತರಿಸುತ್ತಾ ಹೋಗುತ್ತದೆ. ವಿಜಯನಗರ ಸಾಮ್ರಾಜ್ಯವನ್ನು ತುಳು, ಸಾಳವ, ಅರವೀಡು, ಸಂಗಮ ವಂಶಗಳು ಆಳ್ವಿಕೆ ಮಾಡುತ್ತವೆ. ಈ ಸಾಮ್ರಾಜ್ಯದ ಕೊನೆಯ ಅರಸನಾದ ಅಳಿಯ ರಾಮರಾಯನು ರಕ್ಕಸ ತಂಗಡಗಿ ಯುದ್ಧದಲ್ಲಿ ವಿಜಾಪುರ ಸುಲ್ತಾನರಿಂದ ಮರಣಹೊಂದಿದ. ನಂತರ ವಿಜಯನಗರ ಸಾಮ್ರಾಜ್ಯ ಅವನತಿಯ ಹಾದಿ ಹಿಡಿಯುತ್ತದೆ. ಅಳಿಯ ರಾಮರಾಯನ ಅವನತಿಯ ನಂತರ ಬಂದ ವಿಜಯನಗರದ ದೊರೆ ವೆಂಕಟಪತಿ ದೇವನು ಬಳ್ಳಾರಿ ಪ್ರಾಂತ್ಯವನ್ನು ಬಿಟ್ಟುಕೊಟ್ಟು ಪೆನುಗೊಂಡೆಗೆ ಸೇರಿದನು. ನಂತರ ಬಳ್ಳಾರಿ ಪ್ರಾಂತ್ಯವನ್ನು ಹರಪನಹಳ್ಳಿಯ ಪಾಳೆಗಾರರು ತಮ್ಮ ವಶಕ್ಕೆ ತೆಗೆದುಕೊಂಡರು. ಹೀಗೆ ವಿಜಯನಗರದ ಅವನತಿಯ ನಂತರ ಉಚ್ಚಂಗಿ ದುರ್ಗ, ಹರಪನಹಳ್ಳಿ ಮುಂತಾದ ಪಾಳೆ ಪಟ್ಟುಗಳು ಸ್ವತಂತ್ರವಾದವು. ಈ ಪಾಳೆಯ ಪಟ್ಟುಗಳ ಅಧಿಕಾರವನ್ನು ನಾಯಕ ಸಮುದಾಯದವರೇ

ವಹಿಸಿಕೊಂಡರು. ಮುಂದೆ ನಾಯಕ ಸಮುದಾಯದ ಹರಪನಹಳ್ಳಿ ಪಾಳೆಯಗಾರರಿಂದ ಕ್ರಿ.ಶ. ೧೬೭೭-೭೮ ರ ಆಜು ಬಾಜಿನಲ್ಲಿ ಮರಾಠರ ದೊರೆಯಾದ ಶಿವಾಜಿಯು ಬಳ್ಳಾರಿ ಪ್ರಾಂತ್ಯವನ್ನು ತನ್ನ ವಶಕ್ಕೆ ತೆಗೆದುಕೊಂಡನು. ಇವರ ನಂತರ ೧೬೮೦ ರಲ್ಲಿ ಔರಂಗಜೇಬನು ಬಳ್ಳಾರಿ ಪ್ರಾಂತ್ಯವನ್ನು ಮರಾಠರಿಂದ ವಶಪಡಿಸಿಕೊಂಡನು. ಮುಂದುವರೆದು ನೋಡಿದಾಗ ೧೭೬೨ ರ ಸುಮಾರಿಗೆ ಬಳ್ಳಾರಿ ಪ್ರದೇಶವು ಹೈದರನ ವಶವಾಗಿ ಅವನ ಆಳ್ವಿಕೆ ಪ್ರಾರಂಭಗೊಂಡಿತು. ಬಳ್ಳಾರಿಯ ಕೋಟೆಯನ್ನು ಹೈದರನೇ ಕಟ್ಟಿಸಿರುವ ಕುರಿತಾಗಿ ಇತಿಹಾಸದ ದಾಖಲೆಗಳು ತಿಳಿಸುತ್ತವೆ. ಹೈದರಾಲಿಯ ನಂತರ ಅವನ ಮಗ ಟಿಪ್ಪುಸುಲ್ತಾನನು ತನ್ನ ಕೊನೆಯ ಕಾಲದವರೆಗೂ ಬಳ್ಳಾರಿ ಪ್ರಾಂತ್ಯದ ಮೇಲೆ ಹಿಡಿತವನ್ನು ಹೊಂದಿದ್ದನು. ನಾಲ್ಕನೇ ಆಂಗ್ಲೋ ಮೈಸೂರು ಯುದ್ಧ (೧೭೯೯) ದಲ್ಲಿ ಟಿಪ್ಪು ಸೋಲನ್ನು ಅನುಭವಿಸುತ್ತಾನೆ. ಅವನ ನಂತರ ಮೈಸೂರು ಪ್ರದೇಶ ಹಾಗೂ ಬಳ್ಳಾರಿ, ಉತ್ತರ ಕನ್ನಡ, ದಕ್ಷಿಣ ಕನ್ನಡ ಜಿಲ್ಲೆಗಳನ್ನು ಬ್ರಿಟೀಷರು ವಶಪಡಿಸಿಕೊಳ್ಳುತ್ತಾರೆ. ಹೀಗೆ ನಿಜಾಮನಿಂದ ಸಿಕ್ಕಿರುವ ಬಳ್ಳಾರಿ ಪ್ರಾಂತ್ಯವು ನೇರವಾಗಿ ಬ್ರಿಟೀಷರ ಆಡಳಿತಕ್ಕೆ ಒಳಪಡುತ್ತದೆ. ನಂತರ ಈ ಪ್ರದೇಶ ಮುಂಬೈ ಪ್ರಾಂತ ಆಡಳಿತಕ್ಕೆ ಒಳಪಟ್ಟು ಮುಂಬೈ ಕರ್ನಾಟಕವೆಂಬ ಹೆಸರಿಗೆ ಒಳಗಾಗುತ್ತದೆ. ಬಳ್ಳಾರಿ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಕೊಳ್ಳೆಗಾಲ ಮುಂತಾದ ಪ್ರದೇಶಗಳು ಬ್ರಿಟೀಷರ ನೇರ ಆಡಳಿತಕ್ಕೆ ಒಳಪಟ್ಟು ಮದ್ರಾಸ್ ಪ್ರಾಂತಕ್ಕೆ ಸೇರಿಸಲ್ಪಟ್ಟವು. ಸ್ವಾತಂತ್ರದನಂತರ ಭಾಷಾವಾರು ಪ್ರಾಂತಗಳು ವಿಂಗಡಣೆಯಾದ ತರುವಾಯ ಬಳ್ಳಾರಿಯು ಮೈಸೂರು ರಾಜ್ಯಕ್ಕೆ ಸೇರಿಸಲ್ಪಟ್ಟಿತು. ಹೀಗೆ ಅನೇಕ ಅದಿಪತ್ಯಗಳ ಆಳ್ವಿಕೆಯಲ್ಲಿ ಇಲ್ಲಿನ ಜನಸಾಮಾನ್ಯರು ಹೆಚ್ಚು ಶೋಷಣೆಗೆ ಒಳಪಟ್ಟರು. ಈ ಜಿಲ್ಲೆಯನ್ನು ಅಧಿಪತ್ಯಕ್ಕೆ ಒಳಪಡಿಸಿಕೊಂಡಾಗ ಮೊದಲ ಅಧಿಪತ್ಯದ ಪರಿಣಾಮವನ್ನು ಅನುಭವಿಸಿದವರು ಮಹಿಳೆಯರು. ಮಹಿಳೆಯರನ್ನು ನಿಕೃಷ್ಟವಾಗಿ ಆ ಅಧಿಪತಿಗಳೆಲ್ಲರೂ ಬಳಸಿಕೊಳ್ಳುತ್ತಿದ್ದರು.

ಪ್ರಪಂಚದಲ್ಲೆ ಹಂಪಿಯನ್ನು ಐತಿಹಾಸಿಕವಾಗಿ ಹೊಗಳಲಾಗುತ್ತದೆ. ಆದರೆ ಅಲ್ಲಿನ ದಲಿತರ ಸ್ಥಿತಿಗತಿಯನ್ನು ಕುರಿತು ಯಾರು ಯೋಚಿಸುವುದಿಲ್ಲ. ಇದರ ಕುರಿತು ಪುರುಷೋತ್ತಮ ಬಿಳಿಮಲೆ ಹಾಗೂ ಚಲುವರಾಜು ಅವರು ವಿಜಯನಗರ ಕಾಲದಲ್ಲಿ ಜನ ಸಾಮಾನ್ಯರ ಸ್ಥಿತಿಗತಿ ತುಂಬಾ ನಿಕೃಷ್ಟ ಸ್ಥಿತಿಯಲ್ಲಿ ಇರುವುದನ್ನು ಆಧಾರಗಳ ಸಹಿತ 'ಹಂಪಿ ಜಾನಪದ' ಎಂಬ ಗ್ರಂಥದಲ್ಲಿ ದಾಖಲಿಸಿದ್ದಾರೆ. ದೇವದಾಸಿಯರ ಬಗ್ಗೆ ತಿಳಿಯುವ ಸಂದರ್ಭದಲ್ಲಿ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಹುಟ್ಟಿಕೊಂಡಿರುವ ದೇವದಾಸಿ, ಬಸವಿ ಪದ್ಧತಿಯ ಕುರಿತಾಗಿ ತಿಳಿಯುವ ಅಗತ್ಯವಿದೆ. ಆ ಕಾಲದಲ್ಲಿ ಗೌರವ, ವಿಶೇಷ ಸ್ಥಾನ ಪಡೆದಿದ್ದ ದೇವದಾಸಿಯರ ಇಂದಿನ ಸ್ಥಿತಿಯ ಕುರಿತಾಗಿ ಆಲೋಚಿಸುವ ಅನಿವಾರ್ಯತೆ ಕಂಡು ಬರುತ್ತದೆ.

## ೨.೪ ಭೌಗೋಳಿಕ ಲಕ್ಷಣಗಳು

ಬಳ್ಳಾರಿಯೂ ಕರ್ನಾಟಕದ ರಾಜಧಾನಿಯಿಂದ ಸುಮಾರು ೩೫೦ ಕಿ.ಮಿ ದೂರದಲ್ಲಿರುವ ಒಂದು ಜಿಲ್ಲೆಯಾಗಿದೆ. ಬಳ್ಳಾರಿ ಜಿಲ್ಲೆಯು ಅನೇಕ ರಾಜ ಮನೆತನಗಳಿಂದ ಮಹತ್ವದ ಸಾಂಸ್ಕೃತಿಕ ಕೇಂದ್ರವಾಗಿದೆ. ೧೯೫೩ ರ ವರೆಗೆ ಬಳ್ಳಾರಿ ಜಿಲ್ಲೆ ಮದ್ರಾಸ್ ಪ್ರಾಂತ್ರದ ಒಂದು ಜಿಲ್ಲೆಯಾಗಿತ್ತು.

ಕರ್ನಾಟಕದಲ್ಲಿ ಅತಿ ಹೆಚ್ಚು ಕಾಲ ಬ್ರಿಟಿಷರ ಆಳ್ವಿಕೆಯಲ್ಲಿದ್ದ ಬಳ್ಳಾರಿಯು ಹೈದರಾಬಾದ್ ನಿಜಾಮರ ಆಳ್ವಿಕೆಗೂ ಕೆಲಕಾಲ ಒಳಪಟ್ಟಿತ್ತು. ಹೀಗಾಗಿ ಬಳ್ಳಾರಿಯು ಬ್ರಿಟಿಷ್ ವಸಾಹತುಶಾಹಿಯ ಮದ್ರಾಸ್ ಪ್ರಾಂತ್ಯಕ್ಕೂ ಇತ್ತ ಹೈದರಾಬಾದ್ ನಿಜಾಮನ ಸಂಸ್ಥಾನದ ಅಧಿಕಾರ ವ್ಯಾಪ್ತಿಗೂ ಸೇರಿಕೊಂಡಿದ್ದರಿಂದ ಇದರ ಚರಿತ್ರೆ ಸಂಕೀರ್ಣ ಸ್ವರೂಪದಲ್ಲಿ ಸಾಗಿ ಬಂದಿದೆ.

ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆ ೧೪.೩೦-೧೫.೫೦ ಉತ್ತರ ಅಕ್ಷಾಂಶ ಮತ್ತು ೭೫.೪೦-೭೭.೧೧ ಪೂರ್ವ ರೇಖಾಂಶಗಳ ನಡುವೆ ಇದೆ. ಈ ಜಿಲ್ಲೆಯ ಪೂರ್ವಕ್ಕೆ ಆಂಧ್ರಪ್ರದೇಶದ ಅನಂತಪುರ ಹಾಗೂ ಕರ್ನೂಲ್, ಪಶ್ಚಿಮಕ್ಕೆ ಕೊಪ್ಪಳ, ನೈಋತ್ಯಕ್ಕೆ ದಾವಣಗೆರೆ, ದಕ್ಷಿಣಕ್ಕೆ ಚಿತ್ರದುರ್ಗ ಮತ್ತು ಉತ್ತರಕ್ಕೆ ರಾಯಚೂರು ಜಿಲ್ಲೆಗಳು ಗಡಿಗಳಾಗಿವೆ. ಬಳ್ಳಾರಿ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳಿಜಾರಾಗಿದ್ದು ಬೆಟ್ಟದಿಂದಾವರಿಸಿದೆ. ಸಂಡೂರು, ಕೂಡ್ಲಿಗಿ, ಗುಡೆಕೋಟೆ, ಹೊಸಪೇಟೆ, ಕಂಪ್ಲಿ, ದರೋಜಿ, ಕುರುಗೋಡು, ಬಳ್ಳಾರಿ ಮುಂತಾದ ಪ್ರದೇಶಗಳಲ್ಲಿ ದೊಡ್ಡ ಪ್ರಮಾಣದ ಬೆಟ್ಟಗಳಿವೆ. ತುಂಗಭದ್ರಾ ನದಿಯು ಜಿಲ್ಲೆಯ ಪೂರ್ವ ಮತ್ತು ಉತ್ತರಾಭಿಮುಖವಾಗಿ ಹರಿಯುತ್ತದೆ. ಇದರ ಉಪನದಿಗಳು ಹಗರಿ ಮತ್ತು ಚಿಕ್ಕಹಗರಿಗಳಾಗಿದ್ದು, ಕಪ್ಪು ಮಣ್ಣಿನ ಭೂಮಿ ಹೆಚ್ಚಾಗಿದೆ.

ವಿಜಯನಗರ ಸಾಮ್ರಾಜ್ಯದ ಕೇಂದ್ರ ಸ್ಥಾನವನ್ನು ಹೊಂದಿರುವ ಬಳ್ಳಾರಿ ಜಿಲ್ಲೆಯು ಐತಿಹಾಸಿಕವಾಗಿ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯನ್ನು ನೋಡುವುದಾದರೆ ೧೯೯೭ ರಲ್ಲಿ ಕರ್ನಾಟಕ ರಾಜ್ಯವು ಜಿಲ್ಲೆಗಳನ್ನು ಮರು ವಿಂಗಡಿಸಿದಾಗ ಹರಪನಹಳ್ಳಿಯು ದಾವಣಗೆರೆ ಜಿಲ್ಲೆಯ ಪಾಲಾಯಿತು. ಹೀಗಾಗಿ ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯ ಏಳು ತಾಲೂಕುಗಳನ್ನು ಮಾತ್ರ ಹೊಂದಿದೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣವು ೮೪೪೭.೦೦ ಚ.ಕಿ. ಮೀಟರ್‌ಗಳಷ್ಟಿದೆ. ಇದು ರಾಜ್ಯದ ಒಟ್ಟು ವಿಸ್ತೀರ್ಣದಲ್ಲಿ ಶೇ. ೪.೪೦ ರಷ್ಟು ವಿಸ್ತೀರ್ಣ ಹೊಂದಿದೆ.

ಬಳ್ಳಾರಿ ಜಿಲ್ಲೆಯ ಪೂರ್ವಭಾಗವು ಸಮತಟ್ಟಾದ ಭೂಮಿಯನ್ನು ಹೊಂದಿದ್ದು ಕೃಷಿಗೆ ಅನುಕೂಲಕರವಾಗಿದೆ. ಜಿಲ್ಲೆಯು ಉಷ್ಣ ಹವಾಮಾನದಿಂದ ಕೂಡಿದೆ. ಇಲ್ಲಿ ಮಳೆ ಪ್ರಮಾಣ ಕಡಿಮೆಯೆಂದೇ ಹೇಳಬಹುದು. ಬಳ್ಳಾರಿ ಜಿಲ್ಲೆಯು ರಾಜ್ಯದ ಅಧಿಕ ಉಷ್ಣಾಂಶ ಇರುವ ಜಿಲ್ಲೆಗಳಲ್ಲಿ ಒಂದಾಗಿದೆ. ಚಳಿಗಾಲದಲ್ಲಿ ಕೆಲವೊಮ್ಮೆ ೧೫ ಸೆಲ್ಸಿಯಸ್‌ನಷ್ಟು ಕನಿಷ್ಠ ಉಷ್ಣಾಂಶವನ್ನು ಹೊಂದಿರುವುದನ್ನು ಬಿಟ್ಟರೆ ವರ್ಷದ ಹೆಚ್ಚಿನ ಅವಧಿಯಲ್ಲಿ ಅಧಿಕ ಉಷ್ಣಾಂಶ ಇರುತ್ತದೆ. ಶುಷ್ಕ ವಾತಾವರಣದಿಂದ ಕೂಡಿದ ಪೂರ್ವಭಾಗದಲ್ಲಿ ಹೆಚ್ಚು ಅರಣ್ಯ ಪ್ರದೇಶವಿದೆ. ಈ ಭಾಗದಲ್ಲಿ ತುಂಗಾಭದ್ರಾ ನದಿಯಿಂದಾಗಿ ಪೂರ್ವ ತಾಲೂಕುಗಳಿಗೆ ನೀರಾವರಿ ಸೌಲಭ್ಯ ದೊರೆತಿದೆ. ಜಿಲ್ಲೆಯ ಹಡಗಲಿ ತಾಲೂಕನ್ನು ಪ್ರವೇಶಿಸುವ ತುಂಗಾಭದ್ರಾ ನದಿಯು ಮುಂದೆ ಹಗರಿಬೊಮ್ಮನಹಳ್ಳಿ, ಹೊಸಪೇಟೆ, ಸಿರುಗುಪ್ಪ ತಾಲೂಕುಗಳನ್ನು ಹಾದು ಆಂಧ್ರ ಪ್ರದೇಶದ ಮೂಲಕ ಮುಂದೆ ಹೋಗಿ ಸಮುದ್ರ ಸೇರುತ್ತದೆ. ತುಂಗಾಭದ್ರಾ ನದಿಯು ಒಟ್ಟು ಮೂರು ನೂರು ಇಪ್ಪತ್ತು ಕಿ.ಮಿ. ದೂರ ಹರಿಯುತ್ತದೆ. ತುಂಗಾಭದ್ರಾ ನದಿಯ ಜೊತೆಗೆ ಹಗರಿ (ವೇದಾವತಿ) ಎಂಬ ಚಿಕ್ಕ ನದಿಯೊಂದು ಈ ಜಿಲ್ಲೆಯಲ್ಲಿ

ಹರಿಯುತ್ತದೆ. ಇವುಗಳ ಹೊರತಾಗಿ ನಾರಿಹಳ್ಳದಂತಹ ಚಿಕ್ಕ ಪುಟ್ಟ ಹಳ್ಳಗಳು ಕಂಡು ಬರುತ್ತವೆ. ಇವುಗಳಲ್ಲದೆ ಹಿಂದೆ ಕಂಪಿಲರಾಯ, ವಿಜಯನಗರದ ಅರಸರು, ಮತ್ತು ಸಣ್ಣ ಪುಟ್ಟ ಪಾಳೆಗಾರರು ನಿರ್ಮಿಸಿದ ಕೆರೆ ಕುಂಟೆಗಳು ಜಿಲ್ಲೆಯಲ್ಲಿ ಕಂಡು ಬರುತ್ತದೆ.

ಬಳ್ಳಾರಿ ಜಿಲ್ಲೆಯಲ್ಲಿ ಅತ್ಯುತ್ತಮ ಗುಣಮಟ್ಟದ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜಗಳ ನಿಕ್ಷೇಪಗಳನ್ನು ಕಾಣಬಹುದು. ಅಲ್ಲದೆ ಇವುಗಳಿಗೆ ವಿಶ್ವ ಮಾರುಕಟ್ಟೆಯಲ್ಲಿ ಉತ್ತಮ ಸ್ಥಾನವಿದೆ. ಈ ಜಿಲ್ಲೆಯ ಸಂಡೂರು, ಹೊಸಪೇಟೆ, ಬಳ್ಳಾರಿ ತಾಲೂಕುಗಳು ಕಬ್ಬಿಣ ಮತ್ತು ಮ್ಯಾಂಗನೀಸ್ ಹೊಂದಿದ ಬೆಟ್ಟಗಳನ್ನು ಹೊಂದಿವೆ. ಇದರ ಜೊತೆಗೆ ಇನ್ನೂ ಅನೇಕ ಲೋಹ ಮತ್ತು ಲೋಹೇತರ ಖನಿಜಗಳು ದೊರೆಯುತ್ತವೆ. ಇತ್ತೀಚಿನ ವರದಿಗಳ ಪ್ರಕಾರ ಇಲ್ಲಿನ ಕಬ್ಬಿಣದ ಅದಿರಿನ ನಿಕ್ಷೇಪ ಪ್ರಮಾಣ ೧೮.೮೧ ದಶಲಕ್ಷ ಟನ್‌ಗಳೆಂದು ಅಂದಾಜು ಮಾಡಲಾಗಿದೆ. ಇಲ್ಲಿ ಉತ್ಪಾದನೆಯಾಗುವ ಕಬ್ಬಿಣದ ಅದಿರಿನ ಅರ್ಧಕ್ಕಿಂತ ಹೆಚ್ಚು ಭಾಗವು ವಿದೇಶಗಳಿಗೆ ರಫ್ತಾಗುತ್ತದೆ. ಅತಿ ಹೆಚ್ಚು ಖನಿಜ ಸಂಪತ್ತನ್ನು ಹೊಂದಿರುವ ಪ್ರದೇಶವು, ಹೆಚ್ಚಿನ ಉದ್ಯೋಗವನ್ನು ಸೃಷ್ಟಿಸಿರುವುದರಿಂದ ಬೇರೆ ಬೇರೆ ಪ್ರದೇಶಗಳಿಂದ ಉದ್ಯೋಗವನ್ನರಸಿ ಬರುವವರ ಸಂಖ್ಯೆ ಹೆಚ್ಚಾಗಿದೆ. ಗಣಿಗಾರಿಕೆಯಿಂದ ಇಡಿ ಕೃಷಿ ಹಾಳಾಗಿ ಕೃಷಿ ಕೂಲಿ ಕಾರ್ಮಿಕರೆಲ್ಲಾ ಕೃಷಿ ಪದ್ಧತಿಯಿಂದ ವಂಚಿತರಾಗಿ ಗಣಿಕೂಲಿಗೆ ಪಲ್ಲಟಗೊಂಡಿದ್ದಾರೆ. ಇಲ್ಲಿನ ಮುಖ್ಯ ಬೆಳೆಗಳೆಂದರೆ ಭತ್ತ, ಜೋಳ, ಕಬ್ಬು, ಸಜ್ಜೆ, ನವಣೆ, ಮೆಣಸಿನಕಾಯಿ, ಹತ್ತಿ, ಶೇಂಗಾ, ತೊಗರಿಗಳಾಗಿವೆ.

ಬಳ್ಳಾರಿ ಜಿಲ್ಲೆಯಲ್ಲಿ ಗ್ರಾನೇಟ್ ಕಲ್ಲುಗಳನ್ನು ಹೊಂದಿದ ಬೆಟ್ಟಗಳು ವ್ಯಾಪಕವಾಗಿ ಹರಡಿಕೊಂಡಿದೆ. ೧೯೯೧ ರ ಮಧ್ಯಭಾಗದಲ್ಲಿ ಜಾರಿಗೆ ಬಂದ ಹೊಸ ಆರ್ಥಿಕ ನೀತಿಯ ಪರಿಣಾಮವಾಗಿ ಇಲ್ಲಿ ಬೃಹತ್ ಪ್ರಮಾಣದ ಕಂಪನಿಗಳು ಕಬ್ಬಿಣ ಮತ್ತು ಉಕ್ಕು ಉದ್ದಿಮೆಗಳ ಮೇಲೆ ಬಂಡವಾಳ ತೊಡಗಿಸಿವೆ. ಜೊತೆಗೆ ಚಿಕ್ಕ ಕಾರ್ಖಾನೆಗಳಿಂದ ಹಿಡಿದು ಜಿಂದಾಲ್ ವಿಜಯನಗರ ಉಕ್ಕು ಕಾರ್ಖಾನೆಯಂತಹ ಬೃಹತ್ ಕಾರ್ಖಾನೆಗಳು ಹುಟ್ಟಿಕೊಂಡಿವೆ. ಅಲ್ಲದೇ ಕುಡುತಿನಿ ಮತ್ತು ತೋರಣಗಲ್ಲು ಗಳಲ್ಲಿ ಎರಡು ಉಷ್ಣ ವಿದ್ಯುತ್ ತಯಾರಿಕಾ ಘಟಕಗಳು ಸ್ಥಾಪಿಸಿತವಾಗಿವೆ. ಕುಡುತಿನಿಯ ಉಷ್ಣ ವಿದ್ಯುತ್ ಸ್ಥಾವರವನ್ನು ಕರ್ನಾಟಕ ವಿದ್ಯುತ್ ನಿಗಮ ನಿರ್ವಹಿಸಿದರೆ, ತೋರಣಗಲ್ಲಿನ ಉಷ್ಣ ಸ್ಥಾವರವನ್ನು ಜಿಂದಾಲ್ ಕಂಪನಿಯು ನಿರ್ವಹಿಸುತ್ತಿದೆ.

ಬಳ್ಳಾರಿ ಜಿಲ್ಲೆಯು ಪ್ರಸ್ತುತಒಂಭತ್ತು ತಾಲೂಕಗಳನ್ನು ಒಳಗೊಂಡಿದೆ. ಈಅಧ್ಯಯನಕ್ಕೆ ಹಿಂದಿನ ಏಳು ತಾಲೂಕುಗಳನ್ನು ಒಳಪಡಿಸಲಾಗಿದೆ. ಪ್ರಾದೇಶಿಕವಾಗಿ ಈ ಜಿಲ್ಲೆಯನ್ನು ಎರಡು ಭಾಗಗಳಾಗಿ ವಿಂಗಡಿಸಿದ್ದು ಸಿರುಗುಪ್ಪ, ಬಳ್ಳಾರಿ, ಸಂಡೂರು ಹೊಸಪೇಟೆ ತಾಲೂಕುಗಳನ್ನು ಪೂರ್ವಭಾಗದ ತಾಲ್ಲೂಕುಗಳೆಂದೂ ಹಡಗಲಿ, ಕೂಡ್ಲಿಗಿ ಹಗರಿಬೊಮ್ಮನಹಳ್ಳಿ ತಾಲೂಕುಗಳನ್ನು ಪಶ್ಚಿಮ ಭಾಗದ ತಾಲ್ಲೂಕುಗಳೆಂದು ಗುರುತಿಸಲಾಗಿದೆ. ಈ ಜಿಲ್ಲೆಯಲ್ಲಿ ಜರುಗುತ್ತಿರುವ ಔದ್ಯೋಗಿಕರಣ ಪಶ್ಚಿಮ ಜಿಲ್ಲೆಯ ಕೆಲವೇ ಪ್ರದೇಶಗಳಿಗೆ ಸೀಮಿತಗೊಂಡಿದೆ. ಪಶ್ಚಿಮ ಭಾಗದ ಈ ಮೂರು ತಾಲೂಕುಗಳು

ಔದ್ಯಮಿಕ ಚಟುವಟಿಕೆಗಳಿಂದ ದೂರವೇ ಉಳಿದಿವೆ. ಅಲ್ಲದೆ ನೀರಾವರಿ ಸೌಲಭ್ಯಗಳಿಂದಲೂ ವಂಚಿತಗೊಂಡಿವೆ. ಹಡಗಲಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕುಗಳ ಮೂಲಕ ತುಂಗಾಭದ್ರಾ ನದಿ ಹರಿದರೂ ಅದರ ಲಾಭವನ್ನು ಪಡೆಯಲು ಸಾಧ್ಯವಾಗಿಲ್ಲ. ಹಾಗಾಗಿ ಇಲ್ಲಿ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗೆ ಹೆಚ್ಚು ಅವಕಾಶಗಳು ಇಲ್ಲದಾಗಿವೆ. ಹಾಗೆಯೇ ಈ ಬಳ್ಳಾರಿ ಜಿಲ್ಲೆಯಲ್ಲಿ ಅತ್ಯಂತ ಹಿಂದುಳಿದ ತಾಲೂಕು ಎಂದು ಕೂಡ್ಲಿಗಿಯನ್ನು ಗುರುತಿಸಲಾಗಿದೆ.

**ಭೌಗೋಳಿಕ ವಿಸ್ತೀರ್ಣ**

ಕರ್ನಾಟಕದ ಒಟ್ಟು ವಿಸ್ತೀರ್ಣವು ೧,೯೧,೭೯೧ ಚ.ಕಿ.ಮೀ ಗಳಷ್ಟಿದೆ. ಅದರಲ್ಲಿ ಬಳ್ಳಾರಿ ಜಿಲ್ಲೆಯ ಒಟ್ಟು ವಿಸ್ತೀರ್ಣವು ೮,೪೫೦ ಚ.ಕಿ.ಮೀ.ಗಳಾಗಿದೆ. ಕರ್ನಾಟಕ ರಾಜ್ಯದಲ್ಲಿ ಬಳ್ಳಾರಿಯ ಒಟ್ಟು ವಿಸ್ತೀರ್ಣವು ಶೇ ೪.೪೦ ರಷ್ಟಿದೆ. ಬಳ್ಳಾರಿ ಜಿಲ್ಲೆಯ ಏಳು ತಾಲೂಕುಗಳ ವಿಸ್ತೀರ್ಣವು ಈ ಕೆಳಗಿನಂತಿದೆ.

ಹಗಡಲಿ ತಾಲೂಕಿನ ವಿಸ್ತೀರ್ಣವು ೯೪,೭೮೨ ಚ.ಕಿ.ಮೀ (ಶೇ.೧೧.೨೯)ಗಳಿದೆ. ಹಗರಿಬೊಮ್ಮನಹಳ್ಳಿ ತಾಲ್ಲೂಕು ೯೨,೩೯೫ ಚ.ಕಿ.ಮೀ (ಶೇ.೧೧.೬೦)ರಷ್ಟಿದೆ. ಹೊಸಪೇಟೆ ತಾಲ್ಲೂಕು ೯೦,೪೭೦ ಚ.ಕಿ.ಮೀ (ಶೇ.೧೦.೭೯) ಸಿರುಗುಪ್ಪ ತಾಲ್ಲೂಕು ೧,೦೩,೬೧೭ ಚ.ಕಿ.ಮೀ (ಶೇ.೧೨.೩೩) ಬಳ್ಳಾರಿ ತಾಲ್ಲೂಕು ೧,೬೮,೮೫೯ ಚ.ಕಿ.ಮೀ. (ಶೇ.೧೯.೯೯) ಸಂಡೂರು ತಾಲ್ಲೂಕು ೧,೧೫,೨೪೨ ಚ.ಕಿ.ಮೀ (೧೩.೭೩) ಕೂಡ್ಲೀಗಿ ತಾಲ್ಲೂಕು ೧,೬೧,೮೮೭ ಚ.ಕಿ.ಮೀ (ಶೇ.೨೦.೨೭) ವಿಸ್ತೀರ್ಣವನ್ನು ಒಳಗೊಂಡಿದೆ.

**ಬಳ್ಳಾರಿ ಜಿಲ್ಲೆಯ ಜನಸಂಖ್ಯೆ ಕುಟುಂಬಗಳ ವಿವರ**

೨೦೧೧ರ ಜನಗಣತಿ ಪ್ರಕಾರ ಕರ್ನಾಟಕದ ಒಟ್ಟು ಕುಟುಂಬಗಳು ೧,೩೩,೫೭,೦೨೭ ಎಂದು ಗುರುತಿಸಲಾಗಿದೆ. ಇದರಲ್ಲಿ ಬಳ್ಳಾರಿ ಜಿಲ್ಲೆಯ ಒಟ್ಟು ಕುಟುಂಬಗಳ ಸಂಖ್ಯೆಯು ೪,೮೯,೧೧೮ ರಷ್ಟಿದೆ. ಜಿಲ್ಲೆಯ ತಾಲೂಕುವಾರು ಕುಟುಂಬಗಳ ಸಂಖ್ಯೆಯನ್ನು ನೋಡಿದರೆ ಹಡಗಲಿಯು ೩೮,೬೫೬ ಕುಟುಂಬಗಳನ್ನು, ಹಗರಿಬೊಮ್ಮನ ಹಳ್ಳಿಯು ೩೬,೬೧೬ ಕುಟುಂಬಗಳನ್ನು, ಹೊಸಪೇಟೆ ೯೪,೧೯೦ ಕುಟುಂಬಗಳನ್ನು, ಸಿರುಗುಪ್ಪ ೫೨,೧೮೦ ಕುಟುಂಬಗಳನ್ನು, ಬಳ್ಳಾರಿಯು ೧,೫೬,೦೮೧ ಕುಟುಂಬಗಳನ್ನು, ಸಂಡೂರು ೫೨,೦೬೭ ಕುಟುಂಬಗಳನ್ನು ಹಾಗೂ ಕೂಡ್ಲಿಗಿ ೫೯,೩೨೮ ಕುಟುಂಬಗಳನ್ನು ಹೊಂದಿರುವುದು ಕಂಡು ಬರುತ್ತದೆ.

**ಜನಸಂಖ್ಯಾ ವಿವರ**

೨೦೧೧ ರ ಜನಗಣತಿ ಪ್ರಕಾರ ಕರ್ನಾಟಕ ಒಟ್ಟು ೬,೧೦,೯೫,೨೯೭ ಜನಸಂಖ್ಯೆಯನ್ನು ಹೊಂದಿದ್ದು ಇದರಲ್ಲಿ ಪರಿಶಿಷ್ಟ ಜಾತಿಯ ೧೦೪,೭೪,೯೯೨ ರಷ್ಟಿದ್ದು, ಪುರುಷರು ೫೨,೬೪,೫೪೫ ಹಾಗೂ ಮಹಿಳೆಯರು ೫೨,೧೦,೪೪೭ ರಷ್ಟಿದ್ದಾರೆ. ಪರಿಶಿಷ್ಟ ಪಂಗಡದ ಒಟ್ಟು ೪೨,೪೮,೯೮೭

ಜನಸಂಖ್ಯೆ ಇದ್ದು, ಪುರುಷರು ೨೧,೩೪,೭೫೪ ರಷ್ಟಿದ್ದು, ಮಹಿಳೆಯರು ೨೧,೧೪,೨೩೩ ರಷ್ಟಿದ್ದಾರೆ. ಕರ್ನಾಟಕದ ಒಟ್ಟು ಜನ ಸಂಖ್ಯೆಗೆ ಹೋಲಿಸಿದರೆ ರಾಜ್ಯದ ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆ ಪ್ರಮಾಣವು ಕೇವಲ ಶೇ. ೨೧.೧೦ ರಷ್ಟಿದೆ. ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆ ಪ್ರಮಾಣವು ಕೇವಲ ಶೇ. ೧೮.೪೧ ರಷ್ಟಿದೆ.

**ಕೋಷ್ಟಕ: ೨.೧ ಬಳ್ಳಾರಿ ಜಿಲ್ಲೆಯ ತಾಲೂಕುವಾರು ಜನಸಂಖ್ಯೆಯ ವಿವರ (೨೦೧೧)**

| ಕ್ರ.ಸಂ | ತಾಲೂಕುಗಳು | ಜನಸಂಖ್ಯೆ | | |
|---|---|---|---|---|
| | | ಗಂಡು | ಹೆಣ್ಣು | ಒಟ್ಟು |
| ೧ | ಹೂವಿನ ಹಡಗಲಿ | ೯೮,೮೫೩ | ೯೬,೩೬೬ | ೧೯೫,೨೧೯ |
| ೨ | ಹಗರಿಬೊಮ್ಮನಹಳ್ಳಿ | ೯೫,೩೩೭ | ೯೨,೯೦೧ | ೧೮೮,೨೩೮ |
| ೩ | ಹೊಸಪೇಟೆ | ೨೨೯,೩೩೮ | ೨೩೦,೬೫೩ | ೪೫೯,೯೯೧ |
| ೪ | ಸಿರುಗುಪ್ಪ | ೧೩೪,೨೪೬ | ೧೩೪,೮೫೮ | ೨೬೯,೧೦೪ |
| ೫ | ಬಳ್ಳಾರಿ | ೩೮೭,೭೪೪ | ೩೮೩,೧೮೫ | ೭೭೦,೯೨೯ |
| ೬ | ಸಂಡೂರು | ೧೩೪,೦೩೪ | ೧೨೬,೧೭೯ | ೨೬೦,೨೧೩ |
| ೭ | ಕೂಡ್ಲಿಗಿ | ೧೫೭,೪೦೨ | ೧೫೧,೪೯೯ | ೩೦೮,೯೦೧ |
| ೮ | ಬಳ್ಳಾರಿ ಜಿಲ್ಲೆ | ೧೨೩೬,೯೪೧ | ೧೨೧೫,೬೪೧ | ೨೪೫೨,೫೯೫ |

ಮೇಲಿನ ಕೋಷ್ಟಕವನ್ನು ಗಮನಿಸಿದರೆ ಬಳ್ಳಾರಿ ಜಿಲ್ಲೆಯ ಜನಸಂಖ್ಯೆಯ ಪೂರ್ಣ ಚಿತ್ರಣ ದೊರೆಯುತ್ತದೆ. ೨೦೧೧ರ ಜನಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯ ಒಟ್ಟು ೨.೪೫೨.೫೯೫ ಜನಸಂಖ್ಯೆಯನ್ನು ಹೊಂದಿದ್ದು, ಅದರಲ್ಲಿ ಪುರುಷರು ೧೨೩೬೯೫೪ ಮತ್ತು ೧೨೧೫೬೪೧ ಜನ ಮಹಿಳೆಯರು ಇರುವರು.

ತಾಲೂಕುವಾರು ಜನಸಂಖ್ಯೆಯನ್ನು ಗಮನಿಸಿದರೆ ಹೂವಿನ ಹಡಗಲಿ ತಾಲೂಕು ಒಟ್ಟು ೧,೯೧,೨೧೯ ಜನಸಂಖ್ಯೆಯನ್ನು ಹೊಂದಿದ್ದು, ಅದರಲ್ಲಿ ೯೮,೮೫೨ ರಷ್ಟು ಪುರುಷರು ಮತ್ತು ೯೬,೩೬೬ ಜನ ಮಹಿಳೆಯರು ಇದ್ದಾರೆ. ಹಗರಿಬೊಮ್ಮನಹಳ್ಳಿ ತಾಲೂಕು ಒಟ್ಟು ೧,೮೮,೨೩೮ ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ೯೫,೩೩೭ ಜನ ಪರುರುಷರು ಮತ್ತು ೯೨.೯೦೧ ಜನ ಮಹಿಳೆಯರು ಇದ್ದಾರೆ. ಹೊಸಪೇಟೆ ತಾಲೂಕು ಒಟ್ಟು ೪,೫೯,೯೯೧ ಜನಸಂಖ್ಯೆಯನ್ನು ಹೊಂದಿದ್ದು ಇದರಲ್ಲಿ ಪುರುಷರು ೨,೨೯,೩೩೮ ಮತ್ತು ೨,೩೦,೬೫೩

ಜನ ಮಹಿಳೆಯರು ಕಂಡು ಬರುತ್ತಾರೆ. ಹಾಗೆಯೇ ಸಿರುಗುಪ್ಪ ತಾಲೂಕು ಒಟ್ಟು ೨,೬೯,೧೦೪ ಜನಸಂಖ್ಯೆಯನ್ನು ಹೊಂದಿದ್ದು ಇದರಲ್ಲಿ ೧,೩೪,೨೪೬ ಜನಪುರುಷರು ಮತ್ತು ೧,೩೪,೮೫೮ ಜನ ಮಹಿಳೆಯರು ಕಂಡು ಬರುತ್ತಾರೆ. ಬಳ್ಳಾರಿ ತಾಲೂಕಿನಲ್ಲಿ ಒಟ್ಟು ೭,೭೦,೯೨೯ ಜನಸಂಖ್ಯೆ ಇದ್ದು ಇದರಲ್ಲಿ ೩,೮೭,೭೪೪ ಜನ ಪುರುಷರು ಮತ್ತು ೩,೮೩,೧೮೫ ಜನ ಮಹಿಳೆಯರು ಇದ್ದಾರೆ. ಸಂಡೂರು ತಾಲೂಕಿನಲ್ಲಿ ೨,೬೦,೨೩೧ ಜನಸಂಖ್ಯೆ ಇದ್ದು ಅದರಲ್ಲಿ ೧,೩೪,೦೩೪ ಪುರುಷರು ಮತ್ತು ೧,೨೬,೧೭೯ ಜನ ಮಹಿಳೆಯರು ಕಂಡು ಬರುತ್ತಾರೆ. ಕೊನೆದಾಗಿ ಕೂಡ್ಲಿಗಿ ತಾಲೂಕನ್ನು ಗಮನಿಸಿದರೆ ಈ ತಾಲೂಕಿನ ಒಟ್ಟು ಜನಸಂಖ್ಯೆ ೩೦೮.೯೦೧ ರಷ್ಟಿದ್ದು ಇದರಲ್ಲಿ ೧,೫೭,೪೦೨ ಪುರುಷರು ಮತ್ತು ೧,೫೧,೪೯೯ ಜನ ಮಹಿಳೆಯರು ಇರುವುದು ಕಂಡು ಬರುತ್ತದೆ.

ಜನಸಂಖ್ಯೆಯಲ್ಲಿ ೭,೭೦,೯೨೯ರಷ್ಟು ಜನಸಂಖ್ಯೆಯನ್ನು ಹೊಂದಿರುವ ಬಳ್ಳಾರಿಯು ಪ್ರಥಮ ಸ್ಥಾನದಲ್ಲಿದ್ದು ಉಳಿದ ತಾಲೂಕುಗಳಿಗಿಂತ ಅಧಿಕ ಜನಸಂಖ್ಯೆಯ ಮಹಹಿಳೆಯರನ್ನು ಹೊಂದಿದೆ. ಅಂದರೆ ೩೮೩೧೮೫ ಜನ ಮಹಿಳೆಯರು ಈ ತಾಲೂಕಿನಲ್ಲಿದ್ದು ಈ ಜಿಲ್ಲೆಯಲ್ಲಿ ಅಧಿಕ ಮಹಿಳೆಯರನ್ನು ಹೊಂದಿದ ತಾಲೂಕಾಗಿದೆ. ಜನಸಂಖ್ಯೆಯಲ್ಲಿ ೧,೮೮,೨೩೮ ಜನಸಂಖ್ಯೆಯನ್ನು ಹೊಂದಿದ ಹಗರಿಬೊಮ್ಮನಹಳ್ಳಿ ತಾಲೂಕು ಜಿಲ್ಲೆಯಲ್ಲಿ ಕಡಿಮೆ ಜನಸಂಖ್ಯೆಯನ್ನು ಹೊಂದಿದ ತಾಲೂಕಾಗಿದೆ. ಈ ತಾಲೂಕಿನಲ್ಲಿ ೯೨,೯೦೧ ಜನ ಮಹಿಳೆಯರಿದ್ದು ಜಿಲ್ಲೆಯಲ್ಲಿಯೇ ಕಡಿಮೆ ಸಂಖ್ಯೆಯ ಮಹಿಳೆಯರನ್ನು ಹೊಂದಿದ ತಾಲೂಕಾಗಿದೆ.

ಕೋಷ್ಟಕ ೨.೨ ಬಳ್ಳಾರಿ ಜಿಲ್ಲೆಯ ತಾಲೂಕುವಾರು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೆ ವರ್ಗಗಳ ಜನಸಂಖ್ಯೆ ವಿವರ (೨೦೧೧)

| ಕ್ರ.ಸಂ | ತಾಲೂಕು | ಪರಿಶಿಷ್ಟ ಜಾತಿ | | | ಪರಿಶಿಷ್ಟ ಪಂಗಡ | | | ಇತರೆ ವರ್ಗಗಳು | | |
|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಹೂ.ಹಡಗಲಿ | ೨೭೧೮೭ | ೨೬೭೦೬ | ೫೩೮೯೩ | ೭೩೫೩ | ೭೨೬೭ | ೧೪೬೨೦ | ೬೪೩೧೩ | ೬೨೩೯೩ | ೧೨೬೭೦೬ |
| ೨ | ಎಚ್.ಬಿ. ಹಳ್ಳಿ | ೨೩೧೩೨ | ೨೩೦೭೪ | ೪೬೨೦೬ | ೧೨೭೮೫ | ೧೨೪೪೨ | ೨೫೨೨೭ | ೫೯೪೨೦ | ೫೭೩೮೫ | ೧೧೬೮೦೫ |
| ೩ | ಹೊಸಪೇಟೆ | ೫೧೯೭೭ | ೫೨೯೨೫ | ೧೦೪೯೦೨ | ೩೬೮೫೦ | ೩೮೨೧೪ | ೭೫೦೬೯ | ೧೪೦೫೧೧ | ೧೩೯೫೦೪ | ೨೮೦೦೨೦ |
| ೪ | ಸಿರುಗುಪ್ಪ | ೨೮೫೦೫ | ೨೯೧೩೩ | ೫೭೬೩೮ | ೨೪೮೨೩ | ೨೫೨೩೫ | ೫೦೦೫೮ | ೮೦೯೧೮ | ೮೦೪೯೦ | ೧೬೧೪೦೮ |
| ೫ | ಬಳ್ಳಾರಿ | ೬೯೩೩೪ | ೬೯೬೪೫ | ೧೩೮೯೭೯ | ೬೫೭೬೨ | ೬೬೪೦೪ | ೧೩೨೧೬೬ | ೨೫೨೬೪೮ | ೨೪೭೧೩೬ | ೪೯೯೭೮೪ |
| ೬ | ಸಂಡೂರು | ೨೩೨೬೫ | ೨೩೧೪೬ | ೪೬೪೧೧ | ೩೪೪೪೧ | ೩೩೭೪೮ | ೬೮೧೮೯ | ೭೬೩೨೮ | ೬೯೨೮೫ | ೧೪೫೬೧೩ |
| ೭ | ಕೂಡ್ಲಿಗಿ | ೩೫೧೮೨ | ೩೪೧೯೮ | ೬೯೩೮೦ | ೪೩೪೩೭ | ೪೨೬೪೦ | ೮೬೦೭೭ | ೭೮೭೮೩ | ೭೪೬೬೧ | ೧೫೩೪೪೪ |
| ಬಳ್ಳಾರಿ ಜಿಲ್ಲೆ | | | | ೫೧೭೪೯೦ | | | ೪೫೧೪೦೬ | | | ೧೪೮೩೭೮೦ |

ಬಳ್ಳಾರಿ ಜಿಲ್ಲೆಯ ತಾಲೂಕುವಾರು ಪರಿಶಿಷ್ಟರ ಮತ್ತು ಇತರೆ ವರ್ಗಗಳ ಪುರುಷ ಮತ್ತು ಮಹಿಳೆಯರ ಜನಸಂಖ್ಯೆಯನ್ನು ಕೋಷ್ಟಕದಲ್ಲಿ ಗಮನಿಸಿದಾಗ ೨೦೧೧ ರ ಜನಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯ ಒಟ್ಟು ಜನಸಂಖ್ಯೆಯು ೨೪,೫೨,೫೯೫ ರಷ್ಟಿದ್ದು, ಪರಿಶಿಷ್ಟ ಜಾತಿ ಜನಸಂಖ್ಯೆಯು ಒಟ್ಟು ೫,೧೭,೪೦೯ ರಷ್ಟಿದ್ದು, ಇದರಲ್ಲಿ ಪುರುಷರು ೨,೫೮,೫೮೨ ಹಾಗೂ ಮಹಿಳೆಯರು ೨,೫೮,೮೨೭ ರಷ್ಟಿದ್ದಾರೆ. ಪರಿಶಿಷ್ಟ ಪಂಗಡದ ಜನಸಂಖ್ಯೆ ಜಿಲ್ಲೆಯಲ್ಲಿ ಒಟ್ಟು ೪,೫೧,೪೦೬ ರಷ್ಟಿದ್ದು, ಪುರುಷರು ೨,೨೫,೪೫೧ ಹಾಗೂ ಮಹಿಳೆಯರು ೨,೨೫,೯೫೫ರಷ್ಟಿದ್ದಾರೆ.

ಹಡಗಲಿ ತಾಲೂಕಿನ ಪರಿಶಿಷ್ಟ ಜಾತಿಯಲ್ಲಿ ಒಟ್ಟು ೫೩,೮೯೩ ರಷ್ಟಿದ್ದು, ಇದರಲ್ಲಿ ಗಂಡು ೨೭,೧೮೭ ಇದ್ದು, ಮಹಿಳೆಯರು ೨೬,೭೦೬ ರಷ್ಟಿದ್ದಾರೆ. ಪರಿಶಿಷ್ಟ ಪಂಗಡದಲ್ಲಿ ಒಟ್ಟು ೧೪,೬೨೦ ಜನಸಂಖ್ಯೆ ಇದ್ದು, ೭,೩೫೩ ಪುರುಷರು ಹಾಗೂ ೭,೨೬೭ ಮಹಿಳೆಯರಿದ್ದಾರೆ. ಹಾಗೆಯೇ ಇತರೆ ವರ್ಗಗಳಲ್ಲಿ ಒಟ್ಟು ೧,೨೬,೭೦೬ ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ೬೪,೩೧೩ಪುರುಷರಿದ್ದು, ೬೨,೩೯೩ ಮಹಿಳೆಯರಿದ್ದಾರೆ.

ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿ ಪರಿಶಿಷ್ಟ ಜಾತಿಯಲ್ಲಿ ಒಟ್ಟು ೪೬,೨೦೬ ರಷ್ಟಿದ್ದು ಇದರಲ್ಲಿ ಪುರುಷರು ೨೩,೧೩೨ ರಷ್ಟಿದ್ದು. ಮಹಿಳೆಯರು ೨೩,೦೭೪ ರಷ್ಟಿದ್ದಾರೆ. ಪರಿಶಿಷ್ಟ ಪಂಗಡದಲ್ಲಿ ಒಟ್ಟು ೨೫,೨೨೭ ರಷ್ಟಿದ್ದು ಇದರಲ್ಲಿ ಪುರುಷರು ೧೨,೭೮೫ ರಷ್ಟಿದ್ದು, ಮಹಿಳೆಯರು ೧೨,೪೪೨ ರಷ್ಟಿದ್ದಾರೆ. ಇತರೆ ವರ್ಗಗಳ ಒಟ್ಟು ೧,೧೬,೮೦೫ ರಷ್ಟಿದ್ದು, ಇರದಲ್ಲಿ ಪುರುಷರು ೫೯,೪೨೦ ರಷ್ಟು ಮಹಿಳೆಯರು ೫೭,೩೮೫ ರಷ್ಟಿದ್ದಾರೆ.

ಹೊಸಪೇಟೆ ತಾಲೂಕಿನಲ್ಲಿ ಪರಿಶಿಷ್ಟ ಜಾತಿಯಲ್ಲಿ ಒಟ್ಟು ೧,೦೪,೯೦೨ ರಷ್ಟು ಜನಸಂಖ್ಯೆಯಿದ್ದು ಇದರಲ್ಲಿ ಪುರುಷರು ೫೧,೯೭೭ ರಷ್ಟಿದ್ದು, ಮಹಿಳೆಯರು ೫೨,೯೨೫ ರಷ್ಟಿದ್ದಾರೆ. ಪರಿಶಿಷ್ಟ ಪಂಗಡದಲ್ಲಿ ಒಟ್ಟು ೭೫,೦೬೯ ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ಪುರುಷರು ೩೬,೮೫೦ ರಷ್ಟಿದ್ದು, ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಅಂದರೆ ೩೮,೨೧೯ ರಷ್ಟಿದ್ದಾರೆ. ಅದರಲ್ಲಿ ಪುರುಷರು ೧,೪೦,೫೧೧ ರಷ್ಟಿದ್ದು, ಮಹಿಳೆಯರು ೧,೩೯,೫೧೯ ರಷ್ಟಿದ್ದಾರೆ.

ಸಿರುಗುಪ್ಪ ತಾಲೂಕನ್ನು ನೋಡುವುದಾದರೆ ಪರಿಶಿಷ್ಟ ಜಾತಿಯಲ್ಲಿ ಒಟ್ಟು ೫೭,೬೩೮ ಜನಸಂಖ್ಯೆ ಕಂಡು ಬರುತ್ತದೆ. ಇದರಲ್ಲಿ ಪುರುಷರು ೨೮೫೦೫ ರಷ್ಟಿದ್ದು, ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಅಂದರೆ ೨೯,೧೩೩ ರಷ್ಟಿದ್ದಾರೆ. ಪರಿಶಿಷ್ಟ ಪಂಗಡದಲ್ಲಿ ಒಟ್ಟು ೫೦,೦೫೮ ಜನಸಂಖ್ಯೆ ಇದ್ದು ಇದರಲ್ಲಿ ಪುರುಷರು ೨೪,೮೩೨ ರಷ್ಟಿದ್ದು, ಮಹಿಳೆಯರು ೨೫,೨೩೫ ರಷ್ಟಿದ್ದಾರೆ. ಮತ್ತು ಇತರೆ ವರ್ಗಗಳಲ್ಲಿ ಒಟ್ಟು ೧,೬೧,೪೦೮ ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ಪುರುಷರು ೮೦,೯೧೮ ರಷ್ಟಿದ್ದು, ಮಹಿಳೆಯರು ೮೦,೪೯೦ ರಷ್ಟಿದ್ದಾರೆ.

ಬಳ್ಳಾರಿ ತಾಲೂಕಿನಲ್ಲಿ ಪರಿಶಿಷ್ಟ ಜಾತಿಯಲ್ಲಿ ಒಟ್ಟು ೧,೩೮,೯೭೯ ರಷ್ಟು ಜನಸಂಖ್ಯೆ ಇದ್ದು, ಇದರಲ್ಲಿ ಪುರುಷರು ೬೯,೩೩೪ ರಷ್ಟಿದ್ದು, ಮಹಿಳೆಯರು ೬೯,೬೪೫ ರಷ್ಟಿದ್ದಾರೆ. ಪರಿಶಿಷ್ಟ ಪಂಗಡದಲ್ಲಿ

ಒಟ್ಟು ೧,೩೨,೧೬೬ ಜನಸಂಖ್ಯೆ ಇದ್ದು, ೬೫೭೬೨ ಪುರುಷರಿದ್ದು ಇವರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಅಂದರೆ ಮಹಿಳೆಯರು ೬೬,೪೦೪ ರಷ್ಟು ಕಂಡುಬರುತ್ತಾರೆ. ಇತರೆ ವರ್ಗಗಳಲ್ಲಿ ಒಟ್ಟು ೪,೯೯,೭೮೪ ರಷ್ಟು ಜನಸಂಖ್ಯೆ ಇದ್ದು, ಪುರುಷರು ೨,೫೨,೬೪೮ ರಷ್ಟಿದ್ದು, ಮಹಿಳೆಯರು ೨,೪೭,೧೩೬ ರಷ್ಟಿದ್ದಾರೆ.

ಸಂಡೂರು ತಾಲೂಕಿನಜನಸಂಖ್ಯೆ ಗಮನಿಸುವುದಾದರೆ ಒಟ್ಟು ಪರಿಶಿಷ್ಟ ಜಾತಿಯಲ್ಲಿ ೪೬,೪೧೧ ಜನಸಂಖ್ಯೆಯಲ್ಲಿ, ಪುರುಷರು ೨೩,೨೬೫ ರಷ್ಟಿದ್ದು, ಮಹಿಳೆಯರು ೨೩,೧೪೬ ರಷ್ಟಿದ್ದಾರೆ. ಪರಿಶಿಷ್ಟ ಪಂಗಡದಲ್ಲಿ ೬೮,೧೮೯ ರಷ್ಟು ಜನಸಂಖ್ಯೆ ಇದ್ದು, ಇದರಲ್ಲಿ ಪುರುಷರು ೩೪,೪೪೧ ರಷ್ಟಿದ್ದಾರೆ, ಮಹಿಳೆಯರು ೩೩,೭೪೮ ರಷ್ಟಿದ್ದಾರೆ. ಹಾಗೆಯೇ ಇತರೆ ವರ್ಗಗಳಲ್ಲಿ ಒಟ್ಟು ೧,೪೫,೬೧೩ ರಷ್ಟಿದ್ದು, ಇದರಲ್ಲಿ ಪುರುಷರು ೭೬,೩೨೮ ರಷ್ಟಿದ್ದು, ಮಹಿಳೆಯರು ೬೯,೨೮೫ರಷ್ಟಿದ್ದಾರೆ.

ಕೂಡ್ಲಿಗಿ ತಾಲೂಕಿನ ಜನಸಂಖ್ಯೆಯಲ್ಲಿ ಒಟ್ಟು ಪರಿಶಿಷ್ಟ ಜಾತಿಯಲ್ಲಿ ೬೯,೩೮೦ ರಷ್ಟಿದ್ದು, ಇದರಲ್ಲಿ ಪುರುಷರು ೩೫,೧೮೨ ರಷ್ಟಿದ್ದು, ಮಹಿಳೆಯರು ೩೪,೧೯೮ ರಷ್ಟಿದ್ದಾರೆ. ಪರಿಶಿಷ್ಟ ಪಂಗಡದಲ್ಲಿ ಒಟ್ಟು ೮೬,೦೭೭ ರಷ್ಟಿದ್ದು, ಇದರಲ್ಲಿ ಪುರುಷರು ೪೩,೪೩೭ ರಷ್ಟಿದ್ದು, ಮಹಿಳೆಯರು ೪೨,೬೪೦ ರಷ್ಟಿದ್ದಾರೆ. ಹಾಗೆಯೇ ಇತರೆ ವರ್ಗಗಳಲ್ಲಿ ೧,೫೩,೪೪೪ ರಷ್ಟು ಒಟ್ಟು ಜನಸಂಖ್ಯೆಯಿದ್ದು ಇದರಲ್ಲಿ ೭೮,೭೮೩ ರಷ್ಟು ಪುರುಷರಿದ್ದು ೭೪,೬೬೧ ರಷ್ಟು ಮಹಿಳೆಯರಿರುವುದನ್ನು ಕಾಣಬಹುದು.

ಒಟ್ಟಾರೆ ಜನಸಂಖ್ಯೆಯಲ್ಲಿ ಜಾತಿ, ಪಂಗಡ ಮತ್ತು ವರ್ಗಗಳ ಗಂಡು ಹೆಣ್ಣಿನ ಸಂಖ್ಯೆಯನ್ನು ಗಮನಿಸಿದಾಗ ಪರಿಶಿಷ್ಟ ಜಾತಿ ಮತ್ತು ಪಂಗಡಗಳಲ್ಲಿ ಹೊಸಪೇಟೆ, ಬಳ್ಳಾರಿ ಮತ್ತು ಸಿರುಗುಪ್ಪ ತಾಲೂಕುಗಳಲ್ಲಿ ಪುರುಷರ ಸಂಖ್ಯೆಗಿಂತ ಮಹಿಳೆಯರ ಸಂಖ್ಯೆ ಹೆಚ್ಚಿದೆ ಎಂಬುದನ್ನು ತಿಳಿಯಲಾಗಿದೆ. ಆದರೆ ಇತರೆ ವರ್ಗಗಳಲ್ಲಿ ಪುರುಷರ ಸಂಖ್ಯೆಯೇ ಎಲ್ಲಾ ತಾಲೂಕುಗಳಲ್ಲಿ ಹೆಚ್ಚಿದ್ದು, ಮಹಿಳೆಯರ ಸಂಖ್ಯೆ ಪುರುಷರಿಗಿಂತ ಕಡಿಮೆ ಇರುವುದು ಕಂಡುಬರುತ್ತದೆ.

**ದೇವದಾಸಿಯರ ಜನಸಂಖ್ಯೆ**

ಬಳ್ಳಾರಿ ಜಿಲ್ಲೆಯು ಐತಿಹಾಸಿಕವಾಗಿ ಪ್ರಸಿದ್ಧಿ ಹೊಂದಲು ಕಾರಣವೆಂದರೆ ಇಲ್ಲಿನ ವಿಜಯನಗರ ಸಾಮ್ರಾಜ್ಯ. ಈ ಸಾಮಾಜ್ಯದ ಅರಸರ ಆಳ್ವಿಕೆಯ ಕಾಲದಲ್ಲಿ ದೇವಾಲಯಗಳ ಹಿನ್ನೆಲೆಯಲ್ಲಿ ದೇವದಾಸಿ ಪದ್ಧತಿ ಆಚರಣೆಯು ಚಾಲ್ತಿಯಲ್ಲಿತ್ತು.ಹಾಗಾಗಿ ಈ ಭಾಗದಲ್ಲಿ ದೇವದಾಸಿ ಪದ್ದತಿಯು ಹೆಚ್ಚಾಗಿ ಕಂಡು ಬರಲು ಇದು ಒಂದು ಕಾರಣವಾಗಿದೆ. ಅಲ್ಲದೆ ಇಲ್ಲಿರುವ ಧಾರ್ಮಿಕ ಕೇಂದ್ರಗಳಾದ ಹುಲಿಗಿ, ಉಚ್ಚಂಗಿದುರ್ಗ, ಮೈಲಾರಲಿಂಗ, ಆಂಜನೇಯ, ಈರಣ್ಣ, ಮಲ್ಲಯ್ಯನ ಗುಡ್ಡದ ದೇವಾಲಯಗಳಲ್ಲಿ ಕೂಡ ಧಾರ್ಮಿಕ ಮೂಢನಂಬಿಕೆಗಳ ಪ್ರಭಾವದಿಂದ ಈ ಪದ್ಧತಿಯು (ದೇವದಾಸಿಪದ್ಧತಿಯು) ಕಂಡು ಬರುತ್ತದೆ. ಜಿಲ್ಲೆಯ ಏಳು ತಾಲೂಕುಗಳಲ್ಲಿಯೂ ಈ ಪದ್ಧತಿ ಮನೆ ಮಾಡಿಕೊಂಡಿದೆ. ಇದಕ್ಕೆ ಜನರ ಮನಸ್ಸಿನಲ್ಲಿರುವ ಧಾರ್ಮಿಕ ಭಾವನೆಗಳು ಮತ್ತು ಅವರ ಬಡತನದ ಜೊತೆಗೆ ಮೂಢನಂಬಿಕೆಗಳು ಕಾರಣವಾಗಿವೆ. ಇಲ್ಲಿರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳಲ್ಲಿ ದೇವದಾಸಿಯರು ಇರುವುದು ಕಂಡು ಬರುತ್ತದೆ.

ಸಾಮಾನ್ಯವಾಗಿ ಇದು ಒಂದು ಸೂಕ್ಷ್ಮ ವಿಚಾರವಾದುದ್ದರಿಂದ ಇವರನ್ನು ಗುರುತಿಸುವುದು ಕಷ್ಟಸಾಧ್ಯವಾಗಿದೆ. ಹಾಗಾಗೀ ೨೦೦೭-೦೮ ನೇ ಸಾಲಿನಲ್ಲಿ ಸರ್ಕಾರ ಸಮೀಕ್ಷೆ ನಡೆಸಿರುವ ಮಾಹಿತಿಯ ಮೂಲದಿಂದ ಮುಂದುವರೆದು ಅಧ್ಯಯನ ಕಾರ್ಯವನ್ನು ಕೈಗೊಳ್ಳಲಾಗಿದೆ.

**ಕೋಷ್ಟಕ ೨.೩ ದೇವದಾಸಿಯರ ಜಿಲ್ಲಾವಾರು ಜನಸಂಖ್ಯೆ (೧೯೯೩-೯೪)**

| ಕ್ರಸಂ | ಜಿಲ್ಲೆಗಳು | ದೇವದಾಸಿಯರ ಜನಸಂಖ್ಯೆ |
|---|---|---|
| ೧ | ಬೆಳಗಾವಿ | ೩೬೦೦ |
| ೨ | ಬಾಗಲಕೋಟೆ | ೪೮೦೪ |
| ೩ | ಬಿಜಾಪುರ | ೧೯೬೪ |
| ೪ | ಬಳ್ಳಾರಿ | ೧೬೩೫ |
| ೫ | ಕೊಪ್ಪಳ | ೪೮೮೦ |
| ೬ | ರಾಯಚೂರು | ೨೪೯೪ |
| ೭ | ಗುಲಬರ್ಗಾ | ೯೯೧ |
| ೮ | ಧಾರವಾಡ | ೪೮೧ |
| ೯ | ಹಾವೇರಿ | ೬೧೭ |
| ೧೦ | ಗದಗ | ೧೪೦೭ |
| | **ಒಟ್ಟು** | **೨೨೮೭೩** |

*(ಪ್ರಸನ್ನಕುಮಾರ್:೨೦೧೪:೨೬೪)*

೧೯೯೩-೯೪ ನೇ ಸಾಲಿನಲ್ಲಿ ನಡೆಸಿದ ಸಮೀಕ್ಷೆಯಲ್ಲಿ ರಾಜ್ಯದ ೧೦ ಜಿಲ್ಲೆಗಳಲ್ಲಿ ಒಟ್ಟು ೨೨೮೭೩ ದೇವದಾಸಿಯರು ಇರುವುದನ್ನುದಾಖಲಿಸಿದ್ದಾರೆ. ಇದರಲ್ಲಿ ಬಳ್ಳಾರಿ ಜಿಲ್ಲೆಯು ೧೬೨೪ ಜನ ದೇವದಾಸಿಯರನ್ನು ಹೊಂದಿರುವುದು ದಾಖಲಾಗಿದೆ.

**ಕೋಷ್ಟಕ೨.೪ ಕರ್ನಾಟಕ ದೇವದಾಸಿಯರ ಜಿಲ್ಲಾವಾರು ಜನಸಂಖ್ಯೆ (೨೦೦೭-೦೮)**

| ಕ್ರಸಂ | ಜಿಲ್ಲೆಗಳು | ದೇವದಾಸಿಯರ ಜನಸಂಖ್ಯೆ |
|---|---|---|
| ೧ | ಬೆಳಗಾವಿ | ೧೧೨೪ |
| ೨ | ಬಾಗಲಕೋಟೆ | ೩೦೨೩ |
| ೩ | ಬಿಜಾಪುರ | ೨೧೩೯ |
| ೪ | ಬಳ್ಳಾರಿ | ೮೧೧೯ |

| | | |
|---|---|---|
| ೫ | ಕೊಪ್ಪಳ | ೧೧೫೫ |
| ೬ | ರಾಯಚೂರು | ೧೪೫೫ |
| ೭ | ಗುಲಬರ್ಗಾ | ೮೬೮ |
| ೮ | ಧಾರವಾಡ | ೨೮೨ |
| ೯ | ಹಾವೇರಿ | ૩೭૩ |
| ೧೦ | ಗದಗ | ೧೪೯೩ |
| ೧೧ | ಶಿವಮೊಗ್ಗ | ೨೪ |
| ೧೨ | ಚಿತ್ರದುರ್ಗ | ೪೦೬ |
| ೧೩ | ದಾವಣಗೆರೆ | ೭೫೯ |
| ೧೪ | ಯಾದಗಿರಿ | ೭೫೯ |
| | **ಒಟ್ಟು** | **೨೩೭೮೭** |

*(ಪ್ರಸನ್ನಕುಮಾರ್–೨೦೧೪, ಪು.೨೬೩)*

ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ೨೦೦೭–೦೮ ನೇ ಸಾಲಿನಲ್ಲಿ ನಡೆಸಿದ ಸಮೀಕ್ಷೆಯಿಂದ ರಾಜ್ಯದ ೧೪ ಜಿಲ್ಲೆಗಳಲ್ಲಿನ ಸರ್ವೆ ಪ್ರಕಾರ ೨೩೭೮೭ ಒಟ್ಟು ದೇವದಾಸಿಯರ ಸಂಖ್ಯೆಯಾಗಿರುತ್ತದೆ. ೧೯೯೩–೯೪ ನೇ ಸಾಲಿನಲ್ಲಿ ನಡೆದ ಸಮೀಕ್ಷೆಗೆ ಹೋಲಿಸಿದಾಗ ದೇವದಾಸಿಯರ ಸಂಖ್ಯೆ ಕಡಿಮೆಯಾಗದೆ ಇನ್ನೂ ಹೆಚ್ಚಾಗಿದೆ. ೧೯೮೨–೮೩ ರಲ್ಲಿ ದೇವದಾಸಿ ಸಮರ್ಪಣ ನಿಷೇಧ ಕಾಯ್ದೆಯನ್ನು ಜಾರಿಗೆ ತಂದಾಗ್ಯೂ ಇವರ ಸಂಖ್ಯೆ ಹೆಚ್ಚಾಗಿರುವುದು ಗಮನಿಸಬೇಕಾದ ಅಂಶವಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಇಡೀ ೧೪ ಜಿಲ್ಲೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ದೇವದಾಸಿಯರು ಕಂಡುಬರುತ್ತಾರೆ. ಅಂದರೆ ೨೦೦೭–೦೮ ನೇ ಸಾಲಿನಲ್ಲಿ ೧೪ ಜಿಲ್ಲೆಯ ದೇವದಾಸಿಯರ ಸಮೀಕ್ಷೆಯಲ್ಲಿ ಅತಿ ಕಡಿಮೆ ಸಂಖ್ಯೆಯಲ್ಲಿ ಶಿವಮೊಗ್ಗದಲ್ಲಿ ೨೪ ಜನ ದೇವದಾಸಿಯರಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ೮೧೯೮ ದೇವದಾಸಿಯರನ್ನು ಗುರುತಿಸಿದ್ದಾರೆ. ಇದು ಕೇವಲ ಕಣ್ಣಿಗೆ ಕಾಣುವ ರೀತಿಯಲ್ಲಿದ್ದರೆ ಪಟ್ಟಿಯಿಂದ ಹೊರಗೆ ಉಳಿದ ದೇವದಾಸಿಯರು ಇನ್ನೂ ಇರುವುದನ್ನು ಗಮನಿಸಬಹುದಾಗಿದೆ. ಹೀಗೆ ಬಳ್ಳಾರಿ ಜಿಲ್ಲೆಯ ತಾಲೂಕು ವಾರು ದೇವದಾಸಿಯರ ಜನಸಂಖ್ಯೆಯನ್ನು ಗಮನಿಸುವುದಾದರೆ ಈ ಕೆಳಗಿನಂತಿದೆ.

**ಕೋಷ್ಟಕ ೨.೫ ಬಳ್ಳಾರಿ ಜಿಲ್ಲೆಯ ತಾಲೂಕುವಾರು ದೇವದಾಸಿಯರ ಜನಸಂಖ್ಯೆ**

| ಕ್ರ.ಸಂ | ತಾಲೂಕುಗಳು | ದೇವದಾಸಿಯರ ಜನಸಂಖ್ಯೆ ೨೦೦೭-೦೮ |
|---|---|---|
| ೧ | ಹೂ.ಹಡಗಲಿ | ೯೭೮ |
| ೨ | ಎಚ್.ಬಿ. ಹಳ್ಳಿ | ೧೮೨೧ |
| ೩ | ಹೊಸಪೇಟೆ | ೨೫೯೬ |
| ೪ | ಸಿರುಗುಪ್ಪ | ೧೦೬೯ |
| ೫ | ಬಳ್ಳಾರಿ | ೧೨೬೯ |
| ೬ | ಸಂಡೂರು | ೯೬೮ |
| ೭ | ಕೂಡ್ಲಿಗಿ | ೧೦೨೨ |
| | **ಒಟ್ಟು** | **೯೭೩೩** |

*(ಮೂಲ: ದೇವದಾಸಿಯರ ಪುರ್ನವಸತಿ ಯೋಜನಾ ಕಛೇರಿ, ಬಳ್ಳಾರಿ)*

ಮೇಲಿನ ಕೋಷ್ಟಕವನ್ನು ಗಮನಿಸುವುದಾದರೆ ೧೯೯೩-೯೪ನೇ ಸಾಲಿನಲ್ಲಿ ದೇವದಾಸಿಯರ ಸಮೀಕ್ಷೆಯನ್ನು ಕೈಗೊಂಡಾಗ ಬಳ್ಳಾರಿ ಜಿಲ್ಲೆಯಲ್ಲಿ ಕೇವಲ ಎರಡೇ ತಾಲೂಕುಗಳಲ್ಲಿ ದೇವದಾಸಿಯರು ಇರುವುದು ಕಂಡುಬರುತ್ತದೆ. ಹೊಸಪೇಟೆಯಲ್ಲಿ ೭೭೭ ಸಂಖ್ಯೆಯಲ್ಲಿದ್ದಾರೆ. ಸಂಡೂರು ತಾಲೂಕಿನಲ್ಲಿ ೮೪೭ ರಷ್ಟು ದೇವದಾಸಿಯರಿರುವುದು ಕಂಡು ಬರುತ್ತದೆ. ನಂತರ ೨೦೦೭-೦೮ ಮೇ ಸಾಲಿನಲ್ಲಿ ದೇವದಾಸಿಯರ ಮರು ಸಮೀಕ್ಷೆಯಲ್ಲಿ ಬಳ್ಳಾರಿ ಜಿಲ್ಲೆಯ ಏಳು ತಾಲೂಕುಗಳಲ್ಲಿಯೂ ದೇವದಾಸಿಯರಿರುವುದು ಕಂಡುಬರುತ್ತಿದೆ. ಇಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ದೇವದಾಸಿಯರನ್ನು ಬಳ್ಳಾರಿಯ ಜಿಲ್ಲೆಯ ಹೊಸಪೇಟೆ ತಾಲೂಕಿನಲ್ಲಿ ೨೫೯೬ ಜನರನ್ನು ಕಾಣಲಾಗುತ್ತದೆ. ಹಾಗೆಯೇ ಅತಿ ಕಡಿಮೆ ಸಂಖ್ಯೆಯಲ್ಲಿ ದೇವದಾಸಿಯರು ಇರುವುದು ಸಂಡೂರು ತಾಲ್ಲೂಕಿನಲ್ಲಿ. ಅಂದರೆ ೯೬೮ ಜನ ದೇವದಾಸಿಯರನ್ನು ಹೊಂದಿರುವ ತಾಲೂಕಾಗಿದೆ. ದೇವದಾಸಿ ಜನಸಂಖ್ಯೆಗೆ ಅನುಗುಣವಾಗಿ ತಾಲೂಕುಗಳನ್ನು ನೋಡಿದಾಗ ಮೊದಲನೆ ಸ್ಥಾನದಲ್ಲಿ ಹೊಸಪೇಟೆ ೨೫೯೬ ಜನ ದೇವದಾಸಿಯರಿದ್ದು, ಎರಡನೇಯದ್ದಾಗಿ ಹಗರಿಬೊಮ್ಮನಹಳ್ಳಿ ೧೮೨೧ ಜನ ದೇವದಾಸಿಯರಿದ್ದು, ಮೂರನೆದ್ದಾಗಿ ಬಳ್ಳಾರಿ ೧೨೬೯ ಜನ ದೇವದಾಸಿಯರಿದ್ದು, ನಾಲ್ಕನೇಯದ್ದಾಗಿ ಸಿರುಗುಪ್ಪ ತಾಲ್ಲೂಕು ೧೦೬೯ ಜನ ದೇವದಾಸಿಯರಿದ್ದು, ಐದನೇ ಸ್ಥಾನದಲ್ಲಿ ಕೂಡ್ಲಿಗಿ ತಾಲೂಕು ೧೦೨೨ ಜನ ದೇವದಾಸಿಯರಿದ್ದು, ಆರನೇಯ ಸ್ಥಾನದಲ್ಲಿ ಹಡಗಲಿ ೯೭೮ ಜನ ದೇವದಾಸಿಯರಿದ್ದು, ಕೊನೆಯದಾಗಿ ಸಂಡೂರು ೯೬೮ ಜನ ದೇವದಾಸಿಯರಿರುವುದನ್ನು ಗಮನಿಸಬಹುದಾಗಿದೆ.

**ಆಧಾರ ಗ್ರಂಥಗಳು**

ವಾಸುದೇವ ಬಡಿಗೇರ, *ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ*, ೨೦೧೨

ಶೇಷಗಿರಿರಾವ್ ಎಲ್.ಎಸ್, *ಉಲ್ಲೇಖ:ನೇತ್ರಾವತಿ, ದಲಿತ ಮಹಿಳಾ ಸಂಕಥನ*, ೨೦೧೨

ಸಿದ್ದೇಶ್ವರಿ ಎ.ಎನ್, *ಬಳ್ಳಾರಿ ಜಿಲ್ಲೆಯ ಜನಪದ ಆಚರಣೆಗಳು*, ೨೦೧೪

ಸುಜಾತ ಅಕ್ಕಿ, *ಬಳ್ಳಾರಿ ಜಿಲ್ಲೆಯ ರಂಗ ನಟಿಯರ ಅಧ್ಯಯನ*, ೨೦೦೪

ಹಂದ್ರಾಳು ಮಾರ್ಕಂಡೇಯ, *ಬಳ್ಳಾರಿ ಗಾಣಿಗರು ಒಂದು ಅಧ್ಯಯನ*, ೨೦೦೮

# ಅಧ್ಯಾಯ: ಮೂರು

# ದೇವದಾಸಿ ಪದ್ಧತಿಗಳ: ತೌಲನಿಕ ಅಧ್ಯಯನ

೩.೧.ಪಾತರದವರು

೩.೨.ದೇವದಾಸಿ ಪದ್ಧತಿ

೩.೩.ಬಸವಿ ಪದ್ಧತಿ

೩.೪.ಜೋಗತಿ ಪದ್ಧತಿ

# ಅಧ್ಯಾಯ: ಮೂರು

## ದೇವದಾಸಿ ಪದ್ಧತಿಗಳ: ತೌಲನಿಕ ಅಧ್ಯಯನ

ಮಾನವನ ಜೀವನದ ಸಮಗ್ರ ಸಂಕೀರ್ಣತೆಯ ಕಲ್ಪನೆಯನ್ನು ಸಂಸ್ಕೃತಿಯು ಮೂಡಿಸುತ್ತದೆ. ಅವರ ಆಂತರಿಕ ಮತ್ತು ಬಾಹ್ಯ ಜೀವನವನ್ನು ಅಭಿವ್ಯಕ್ತಗೊಳಿಸುತ್ತದೆ. ಭಾರತದಲ್ಲಿ ನೆಲೆಸಿರುವ ಅನೇಕ ಜನಾಂಗಗಳು ತಮ್ಮದೇ ಆದ ಸಂಪ್ರದಾಯ ಸಂಸ್ಕೃತಿ ಮತ್ತು ಆಚರಣೆಗಳನ್ನು ಹೊಂದಿರುವುದು ಕಂಡು ಬರುತ್ತದೆ.  ಭಾರತೀಯ ಸಂಸ್ಕೃತಿಯಲ್ಲಿ ದೇವಾಲಯಗಳಿಗೆ ಮಹತ್ವವಾದ ಸ್ಥಾನವಿದೆ. ಈ ದೇವಾಲಯಗಳು ಗ್ರಾಮದ ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಮೊದಲಾದ ಚಟುವಟಿಕೆಗಳನ್ನು ನಿಯಂತ್ರಿಸುತ್ತಿದ್ದವು. ದೇವರ ಪೂಜಾ ಕಾರ್ಯದಲ್ಲಿ ಅಂಗಭೋಗ ಮತ್ತು ರಂಗಭೋಗ ಎಂಬ ಎರಡು ವಿಧದ ಸೇವೆಗಳಿದ್ದವು. ಅದರಲ್ಲಿ ದೇವತಾ ಮೂರ್ತಿಯ ಮುಂದೆ ಪ್ರದರ್ಶಿಸಲ್ಪಡುವ ಪವಿತ್ರ ಶ್ರೇಷ್ಠವಾದ ನೃತ್ಯ ಕಲೆ ಮಾನ್ಯತೆ ಪಡೆದಿತ್ತು. ಕಾಲಾಂತರದಲ್ಲಿ ನೃತ್ಯವೇ ಒಂದು ಕಾಯಕವಾದ ಸ್ತ್ರೀಯರನ್ನು ದೇವದಾಸಿಯರೆಂದು ಪ್ರತ್ಯೇಕವಾಗಿ ಗುರುತಿಸತೊಡಗಿದರು. ಕಲೆ ಈ ಮೊದಲು ತುಂಬ ಗೌರವ ಮನ್ನಣೆ ಪಡೆದಿತ್ತು. ಸಾಮಾನ್ಯವಾಗಿ ದೇವರ ಸೇವೆಗೆಂದು ನೇಮಕಗೊಂಡ ಎಲ್ಲಾ ಹೆಣ್ಣುಗಳನ್ನು ದೇವದಾಸಿಯರೆಂದೇ ಕರೆಯುವುದು ವಾಡಿಕೆಯಾಗಿದೆ. ದೇವರ ಸೇವಕರು ಎಂಬ ಸಾಮಾನ್ಯ ಅರ್ಥದಲ್ಲಿ ಎಲ್ಲರನ್ನು ದೇವದಾಸಿ ಎಂಬ ತಲೆ ಬರಹದಡಿಯಲ್ಲಿ ವಿವರಿಸುತ್ತೇವೆ. ಪಾತ್ರದವರು, ದೇವದಾಸಿ, ಬಸವಿ ಮತ್ತು ಜೋಗುತಿ ಈ ಪದಗಳ ಕುರಿತಂತೆ ಜನ ಸಾಮಾನ್ಯರಲ್ಲಿ ಗೊಂದಲಗಳಿವೆ. ಈ ಎಲ್ಲಾ ಪಾರಿಭಾಷಿತ ಪದಗಳು ದೇವದಾಸಿ ವೃತ್ತಿಯ ಸೂಚಕಗಳಾಗಿವೆ. ಈ ಹೆಸರಿನ ವೃತ್ತಿ ಮತ್ತು ವೃತ್ತಿಯನ್ನು ಕೈಗೊಂಡಿರುವ ಮಹಿಳೆಯರಿಗೆ ಪ್ರಾದೇಶಿಕವಾಗಿ ವಿವಿಧ ರೀತಿಯ ಹೆಸರುಗಳಿವೆ. ತಮಿಳು ನಾಡಿನಲ್ಲಿ ಇವರನ್ನು ದೇವರಡಿಯಾರ್ ಅಥವಾ ದೇವದಾಸಿರು ಎಂದು ಕರೆಯಲಾಗುತ್ತಿತ್ತು. ದೇವರ ಗುಲಾಮರು ಮತ್ತು ದೇವರ ದಾಸಿಯರು ಎಂದು ಅರ್ಥವಾಗುರುತ್ತದೆ. ದುಗಾಮ ಮತ್ತು ಸಾನಿಗಳೆಂಬ ಹೆಸರು ಆಂಧ್ರ ಪ್ರದೇಶದಲ್ಲಿದ್ದು ಕರ್ನಾಟಕದಲ್ಲಿ ಬಸವಿ ಮತ್ತು ಜೋಗತಿಯರೆಂಬ ಹೆಸರುಗಳಿವೆ. ಮಹಾರಾಷ್ಟ್ರದಲ್ಲಿ ಕರಾವಳಿ ಪ್ರದೇಶಗಳನ್ನು ಹೊರತು

ಪಡಿಸಿ ನೋಡಿದಾಗ ಇವರನ್ನು ಮುರಳಿ, ಜೋಗತಿಸ್, ಜೋಗತಿನಿಸ್ ಹಾಗೂ ಆರಾಧಿನಿಸ್ ಎಂದು ಕರೆಯುತ್ತಾರೆ ಎಂದು ಎಚ್ ಎಸ್ ಶ್ರೀಮತಿಯವರು ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಪಾತ್ರದವರು, ದೇವದಾಸಿ, ಜೋಗತಿ ಮತ್ತು ಬಸವಿ ಪದಗಳಿಗೆ ವಿವರಣೆ ನೀಡಬೇಕಾಗುತ್ತದೆ. ಈ ಪದಗಳು ದೇವರ ಸೇವೆಯ ದೃಷ್ಟಿಯಿಂದ ಸಮಾನತೆ ಹೊಂದಿದ್ದರು ಮೂಲತಃ ಅವು ಬೇರೆ ಬೇರೆ ಕಾರಣಗಳಿಂದ ಹುಟ್ಟಿಕೊಂಡವುಗಳಾಗಿವೆ. ಹಾಗೆಯೇ ಇವುಗಳ ಆಚರಣೆ ವಿಧಿ-ವಿಧಾನಗಳಲ್ಲಿ ವ್ಯತ್ಯಾಸಗಳು ಕಂಡು ಬರುತ್ತವೆ. ದೇವದಾಸಿಯರು ದೇವಾಲಯಗಳಲ್ಲಿ ದೇವರ ಸೇವೆಗಾಗಿ ನೇಮಕಗೊಂಡವರು. "ದೇವಾಲಯವು ಪ್ರಬಲ ಸಾಮಾಜಿಕ ಸಂಸ್ಥೆಯಾಗಿದಾಗ ರಾಜನಿಗೆ ಸಲ್ಲುತ್ತಿದ್ದ ಮರ್ಯಾದೆಗಳಲ್ಲಿ ದೇವರಿಗೂ ಸಲ್ಲುತ್ತಿದ್ದವು. ಅವುಗಳಲ್ಲಿ ಗಾಯನ, ನರ್ತನ, ಆರತಿ ಸೇವೆ ಮತ್ತು ಚಾಮರ ಸೇವೆಗಳಿಂದ ಕೂಡಿದ್ದ ರಂಗಭೋಗವು ಒಂದು. ಈ ಸೇವಾ ಕಾರ್ಯಗಳನ್ನು ನಡೆಸಿಕೊಂಡು ನೇಮಕಗೊಳ್ಳುತ್ತಿದ್ದ ಸ್ತ್ರೀಯರೇ ದೇವದಾಸಿಯರು. ನಂತರ ಇವರನ್ನು ಪಾತ್ರದವರೆಂದು, ಸೂಳೆಯರೆಂದು ಕರೆಯಲಾಗಿದೆ." *(ಚಂದ್ರಶೇಖರ ಕಂಬಾರ:೧೯೮೫:೧೧೧೬)* ಇವರ ಮಾತಿನಲ್ಲಿ ದೇವರ ಸೇವೆಯ ಉದ್ದೇಶದಿಂದಲೇ ಹೆಣ್ಣುಗಳನ್ನು ದೇವಾಲಯಕ್ಕೆ ಅರ್ಪಿಸುತ್ತಿರುವುದು ತಿಳಿಯಬಹುದು. ಕಾಲಾಂತರದಲ್ಲಿ ಅವರನ್ನು ಜನರು ಬೇರೆ ಬೇರೆ ಹೆಸರುಗಳಿಂದ ಕರೆದಿದ್ದಾರೆ. ಇವರ ಸೇವೆ ನಿರ್ದಿಷ್ಟಪಡಿಸಿದ ದೇವಾಲಯಕ್ಕೆ ಮಾತ್ರ ಇವರ ಸೇವೆ ಸೀಮಿತವಾಗಿತ್ತು. ಇವರು ಸಾವಿಲ್ಲದ ದೇವರೊಂದಿಗೆ ಮದುವೆಯಾಗಿರುವುದರಿಂದ ಇವರನ್ನು ನಿತ್ಯ ಸುಮಂಗಲೇಯರು ಎಂದು ಕರೆಯುತ್ತಿದ್ದರು. ಅಲ್ಲದೆ ಇವರು ಜೀವನ ಪರ್ಯಂತ ಯಾವ ಗಂಡಸನ್ನು ಮದುವೆಯಾಗುವಂತಿರಲಿಲ್ಲ. ದೇವಸ್ಥಾನದ ಎಲ್ಲಾ ಧಾರ್ಮಿಕ ಕ್ರಿಯೆಗಳಲ್ಲಿ ಪ್ರಮುಖ ಪಾತ್ರವಹಿಸುತಿದ್ದ ಇವರಿಗೆ ದೇವಾಲಯದಲ್ಲಿ ಸುಕನಾಸಿನಿಯವರೆಗೆ ಬರಲು ಅಧಿಕಾರ ಇರುತ್ತಿತ್ತು. ಇವರು ದೇವಸ್ಥಾನದ ಆಡಳಿತ ವರ್ಗಕ್ಕೆ ಸಂಬಂಧಿಸಿದವರಾಗಿದ್ದು, ದೇವಾಲಯದಲ್ಲಿ ಸೇವೆ ಸಲ್ಲಿಸುವ ಅಧಿಕಾರವನ್ನು ಪಾರಂಪರಿಕವಾಗಿ ಹೊಂದಿರುತ್ತಿದ್ದರು. ಇವರು ಧರ್ಮ ಪ್ರಸಾರಕರಲ್ಲ ಅಥವಾ ಧಾರ್ಮಿಕ ಭಿಕ್ಷುಗಳೂ ಅಲ್ಲ ತಮ್ಮನ್ನು ಇಟ್ಟುಕೊಂಡವರ' ಜೊತೆಗೆ ವ್ಯವಸ್ಥಿತವಾದ ಬದುಕನ್ನು ರೂಪಿಸಿಕೊಂಡವರು.

ದೇವಾಲಯದಲ್ಲಿ ನೃತ್ಯ ಮತ್ತು ಸಂಗೀತ ಸೇವೆಯನ್ನು ಮಾಡುವವರನ್ನು ನಟುವರು, ಪಾತ್ರದವರು ಎಂದು ಕರೆಯುತ್ತಾರೆ. ದೇವಾಲಯದಲ್ಲಿ ಪೂಜಾ ಕಾರ್ಯ ಮತ್ತು ಇತರೆ ಸಂದರ್ಭಗಳಲ್ಲಿ ಸಂಗೀತ ನೃತ್ಯವನ್ನು ಮಾಡುವವರನ್ನು ಪಾಡುವವರು ಅಥವಾ ಹಾಡುವವರು ಎಂದು ಕರೆಯುತ್ತಾರೆ. ಈ ಹಿನ್ನೆಲೆಯಲ್ಲಿ ಪಾತ್ರದವರು ಹುಟ್ಟಿಕೊಂಡಿದ್ದಾರೆ. "ಉತ್ತರ ಭಾರತದಲ್ಲಿ ಪಾತ್ರದವರು ತೆಲುಗಿನಲ್ಲಿ ಭೋಗಮ್‌ಗಳು ಎಂದು ಈ ಜನಾಂಗವನ್ನು ಗುರುತಿಸುವರು. ಕರ್ನಾಟಕದಲ್ಲಿ ಇವರನ್ನು ಕಲಾವಂತರು, ಸಾನಿಯರು ಎಂದು ಗುರುತಿಸುವರು. ಮೈಸೂರಿನಲ್ಲಿ ನಾಯಕ ಸಾನಿಯರು ಎಂದು ಗುರುತಿಸುವರು" *(ಶೈಲಜಾ ಹಿರೇಮಠ:೧೯೯೯:೧೮).* ಇವರು ಧಾರ್ಮಿಕ ವಲಯದ ಪ್ರಮುಖವಾದ ದೇವಾಲಯದ ದೇವರ ಎದುರಿಗೆ ಸಂಗೀತ ಮತ್ತು ನೃತ್ಯವನ್ನು ಮಾಡುವ ಮೂಲಕ

ಸೇವೆಯಲ್ಲಿ ನಿರತರಾಗಿದ್ದಾರೆ. ಇವರನ್ನು ಸಂಗೀತ ಮತ್ತು ನೃತ್ಯ ಕಲೆಯಲ್ಲಿ ಭಾಗವಹಿಸುವ ಹಿನ್ನೆಲೆಯಲ್ಲಿ ಗುರುತಿಸಿರುವುದು ಕಂಡು ಬರುತ್ತದೆ. ಕನ್ನಡ ನಿಘಂಟಿನ ಪ್ರಕಾರ ಪಾತರದವರು ಎಂದರೆ ಕುಣಿತ, ನರ್ತನ ನಾಟ್ಯವಾಡುವವರು ಎಂದು ತಿಳಿಸುತ್ತದೆ. ಪಾತರದವರು ಎಂದರೆ ನಾಟ್ಯ ಮಾಡುವ ವ್ಯಕ್ತಿಗಳು ಎಂದಾಗುತ್ತದೆ.

ದೇವದಾಸಿಯರು ಮತ್ತು ಪಾತರದವರು ಒಂದೇ ರೂಪವನ್ನು ಹೊಂದಿದ್ದರೂ ಪ್ರಾದೇಶಿಕವಾಗಿ ಇವರನ್ನು ವಿಭಿನ್ನ ರೀತಿಯಲ್ಲಿ ಗುರುತಿಸಿತ್ತಿರುವುದು ಕಂಡು ಬರುತ್ತದೆ. ದೇವರ ಸೇವೆಗಾಗಿ ನೇಮಿಸಲ್ಪಟ್ಟವರು ಒಂದು ವರ್ಗವಾದರೆ ದೇವರಿಗೆ ಅರ್ಪಣೆಗೊಂಡ ದೇವದಾಸಿಯರದು ಇನ್ನೊಂದು ವರ್ಗ. ಇವರನ್ನು ಜೋಗತಿ, ಬಸವಿ, ದಾಸಿ, ಗುಡ್ಡಿ ಎಂಬ ಹೆಸರುಗಳಿಂದ ಕರೆಯುತ್ತಾರೆ. ಇವರಿಗೆ ದೇವರೇ ಗಂಡನಾಗಿರುತ್ತಾನೆ. "ಕರ್ನಾಟಕದ ಹಲವು ಭಾಗಗಳಲ್ಲಿಯೂ ಕಂಡು ಬರುತ್ತಾರೆ. ದುರ್ಗಮ್ಮ, ಮಂಟೆಸ್ವಾಮಿ, ಬಿಳಿಗಿರಿರಂಗ, ನಂಜುಂಡೇಶ್ವರ ಹೀಗೆ ಹತ್ತಾರು ದೇವರಿಗೆ ಬಸವಿ ಬಿಡುವ ಪದ್ಧತಿ ಇದೆ. ಎಲ್ಲಮ್ಮನ ಭಕ್ತರನ್ನು ಜೋಗತಿ ಎಂದರೆ, ವಿಷ್ಣು ಭಕ್ತರಿಗೆ ದಾಸಿ ಎಂದೂ ಶಿವಭಕ್ತರಿಗೆ ಗುಡ್ಡಿ ಎಂದೂ ಕರೆಯುತ್ತಾರೆ. ದೇವದಾಸಿ ಸಂಪ್ರದಾಯಕ್ಕೂ ಎಲ್ಲಮ್ಮನ ಸೇವೆ ಅರ್ಪಿತವಾದ ಜೋಗತಿಯರಿಗೂ ಮೂಲಭೂತವಾದ ವ್ಯತ್ಯಾಸಗಳಿವೆ. ಇವರಿಗೆ ದೇವಲಾಯದಲ್ಲಿ ಯಾವುದೇ ರೀತಿಯ ಪ್ರಾಮುಖ್ಯತೆ ಮತ್ತು ನಿರ್ಭಂದವೂ ಇಲ್ಲ. ಇವರು ಎಲ್ಲಮ್ಮನ ಮಹಿಮೆಗಳನ್ನು ಕೊಂಡಾಡುತ್ತ ಧಾರ್ಮಿಕ, ಭಿಕ್ಷಾಟನೆ ಮಾಡುತ್ತಾರೆ. ಎಲ್ಲಮ್ಮನ ಸೇವಕಿಯರಲ್ಲಿ ಯಾವ ಗುಣಗಳು ಕಂಡು ಬರುವುದಿಲ್ಲ. ಹನುಮಾಕ್ಷಿ ಗೋನಿಯವರು ದೇವದಾಸಿಯರು ಮಾಡುವ ಸಂಗೀತ ನರ್ತನಗಳ ಗಂಧವೂ ಇವರಿಗಿಲ್ಲ. ಅದಕ್ಕಾಗಿ ಕಂಕಣ ಬದ್ಧರಾದವರೂ ಅಲ್ಲ. ಹೀಗಾಗಿ ಅವರನ್ನು ದೇವದಾಸಿಯರು ಎಂದು ಎಲ್ಲೂ ಕರೆದಿಲ್ಲ ಕರೆಯಲೂ ಬಾರದು ಎಂದು ಅಭಿಪ್ರಾಯ ಪಡುತ್ತಾರೆ. ಇವರ ಈ ಹೇಳಿಕೆಯನ್ನು ಗಮನಿಸಿದಾಗ ದೇವದಾಸಿಯರಿಗೂ ಮತ್ತು ಜೋಗತಿಯರಿಗೂ ಇರುವ ವ್ಯತ್ಯಾಸದ ಅರಿವಾಗುತ್ತದೆ" *(ಪುತ್ತಿ ವಂಸಂತಕುಮಾರ್:೨೦೦೨:೨೨-೨೩).* ಈ ಸಂಪ್ರದಾಯಗಳಲ್ಲಿ ಭಕ್ತಿಗೆ ಪ್ರಾಮುಖ್ಯತೆ ಇದ್ದರೂ ಕಾಲಕಳೆದಂತೆ ಇವರು ಹೊಟ್ಟೆ ಪಾಡಿಗಾಗಿ ಕೀಳು ಅಭಿರುಚಿಯನ್ನು ಬೆಳೆಸಿಕೊಂಡು ಬಂದಿರುವುದು ದುರಂತದ ಸಂಗತಿಯಾಗಿದೆ. ಇವರಲ್ಲಿ ಎಲ್ಲಮ್ಮ ಅಥವಾ ಹುಲಿಗೆಮ್ಮನ ಭಕ್ತರು ಮನೆ ಮನೆಗೆ ಹೋಗಿ ದೇವಿಯನ್ನು ಆರಾಧಿಸುತ್ತಾ, ಜೋಗತಿಯರು ದೇವಿಯ ಪ್ರಚಾರ ಮಾಡುತ್ತಾರೆ. ಈ ಜೋಗತಿಯರಲ್ಲಿ ಕೊಡಹೊತ್ತ, ಜಗಹೊತ್ತ ಮತ್ತು ಪಡಲಗಿ ಹೊತ್ತವರು ಎಂಬ ಬೇರೆ ಬೇರೆ ರೀತಿಯಲ್ಲಿ ಕಾಣುತ್ತೇವೆ. ಇವರೆಲ್ಲರ ಮೂಲ ಉದ್ದೇಶವು ದೇವಿಯ ಆರಾಧನೆ ಮತ್ತು ಪ್ರಚಾರದ ಸೇವೆಯ ಮೂಲಕ ಭಿಕ್ಷಾಟನೆ ಮಾಡುವುದಾಗಿದೆ. ಇವರು ಕುಂಕುಮ ಮತ್ತು ಬಂಢಾರವನ್ನು ಜನರ ಹಣೆಗೆ ಹಚ್ಚುತ್ತಾ ಅವರಿಗೆ ಶುಭ ಹಾರೈಸಿ ಹಣ ಅಥವಾ ಇತರೆ ರೂಪದಲ್ಲಿ ಭಿಕ್ಷೆಯನ್ನು ಪಡೆಯುತ್ತಾ ಜೀವಿಸುತ್ತಾರೆ.

ದೇವರ ಹೆಸರಿನಲ್ಲಿ ಬಿಡುವ ಪ್ರಾಣಿ ಎತ್ತು ಬಸವನಾದರೆ ದೇವರ ಹೆಸರಿನಲ್ಲಿ ಬಿಡುವ ಹೆಣ್ಣು ಬಸವಿಯಾಗುತ್ತಾಳೆ. ಆಂಜನೇಯ, ಮಲ್ಲಯ್ಯ, ಕನಕರಾಯ ಮತ್ತು ತಿರುಪತಿ ತಿಮ್ಮಪ್ಪನ ಹೆಸರಿನಲ್ಲಿ

ಶಂಕ ಮತ್ತು ಚಕ್ರದ ಮುದ್ರೆಯನ್ನು ಹಾಕಿಸಿಕೊಂಡು ಬಸವಿಯರಾಗಿದ್ದಾರೆ. ಹೀಗೆ ದೇವರ ಹೆಸರಿನಲ್ಲಿ ಬಿಟ್ಟಿರುವ ಎತ್ತು ದೇವಾಲಯಕ್ಕೆ ಮತ್ತು ದೇವರಿಗೆ ಸೇರಿದ್ದು ಊರಿನಲ್ಲಿ ಅದು ಏನು ಮಾಡಿದರೂ ಯಾರ ಹೊಲವನ್ನು ಮೇದರೂ ಶಿಕ್ಷಿಸುವಂತಿಲ್ಲ. ಸಂಪೂರ್ಣ ಸ್ವತಂತ್ರ್ಯ ಇರುತ್ತದೆ. ಹಾಗೆಯೇ ಬಸವಿಯಾಗಿ ಬಿಟ್ಟಿರುವ ಮಹಿಳೆಯೂ ದೇವರಿಗೆ ಸೇರಿದವಳಾಗಿದ್ದು ಅವಳಿಗೆ ಲೈಂಗಿಕ ವಿಷಯದಲ್ಲಿ ಸಂಪೂರ್ಣ ಸ್ವತಂತ್ರವಿದೆ. ಇದು ಸಮಾಜ ಒಪ್ಪಿತವಾದ ವ್ಯವಸ್ಥೆಯಾಗಿದೆ.

ಒಟ್ಟಾರೆಯಾಗಿ ದೇವರ ಹೆಸರಿನಲ್ಲಿ ಇವರೆಲ್ಲ ವೃತ್ತಿ ಸಂಬಂಧವಾಗಿ ಬೇರೆ ಬೇರೆ ಹೆಸರಿನಿಂದ ಗುರುತಿಸಿಕೊಂಡರೂ ಕೂಡ ಇವರೆಲ್ಲರ ಧಾರ್ಮಿಕ ಆಶಯ ಒಂದೇ ಆಗಿದೆ. ಇವರೆಲ್ಲರ ಕೇಂದ್ರ ಬಿಂದು ದೇವರೆ ಆಗಿದ್ದಾನೆ. ದೇವರನ್ನೇ ಗಂಡನೆನ್ನುವ ಹೆಣ್ಣು ತನ್ನ ದೈಹಿಕ ತೃಪ್ತಿಗಾಗಿ ಅಥವಾ ಸಂತಾನಕ್ಕಾಗಿ ಪರಪುರುಷನ್ನು ತೃಪ್ತಿ ಪಡಿಸುವುದು ಸಹಜವಾದುದಾಗಿದೆ. ಯಾವುದೇ ಒಂದು ಆಚರಣೆ ಹುಟ್ಟಿನ ಆಶಯ ಸದುದ್ದೇಶ ಹೊಂದಿದ್ದರೂ ನಾಗರಿಕೆಯ ಬೆಳವಣಿಗೆಯಲ್ಲಿ ಅದು ಬೇರೆ ರೂಪ ಪಡೆದುಕೊಳ್ಳುತ್ತದೆ. ಪ್ರಸ್ತುತ ಅಧ್ಯಯನ ಕೇಂದ್ರವಾದ ಬಳ್ಳಾರಿ ಜಿಲ್ಲೆಯಲ್ಲಿ ದೇವದಾಸಿಯರು, ಬಸವಿಯರು, ಜೋಗತಿಯರು ಮತ್ತು ಪಾತರದವರನ್ನು ಕಾಣಬಹುದಾಗಿದೆ. ಲೇಸಿ ಎಂದು ಇವರನ್ನು ಕರೆಯಲಾಗುತ್ತಿದೆ. ಇವರುಗಳ ಜೊತೆಗೆ ಪಾತರದ ವಂಶದವರನ್ನು ಕಾಣಬಹುದಾಗಿದೆ. ಹಾಗಾಗಿ ಇವುಗಳಲ್ಲಿರುವ ಸೂಕ್ಷ್ಮ ಭಿನ್ನತೆಗಳನ್ನು ತಿಳಿಯಲು ಪಾತರದವರು, ದೇವದಾಸಿ ಪದ್ಧತಿ, ಬಸವಿ ಪದ್ಧತಿ ಮತ್ತು ಜೋಗತಿ ಪದ್ಧತಿಗಳ ಹಿನ್ನೆಲೆ ಹಾಗೂ ಆಚರಣೆ ಸಂಪ್ರದಾಯಗಳ ಕುರಿತಾಗಿ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**೩.೧. ಪಾತರದವರು**

ಭಾರತ ದೇಶದಲ್ಲಿ ಧರ್ಮ ಮತ್ತು ರಾಜಕೀಯ ಇವರೆಡು ವ್ಯವಸ್ಥೆಗಳು ಒಂದಕ್ಕೊಂದು ಸಂಬಂಧ ಹೊಂದಿದ್ದು, ಅವುಗಳು ಸಮಾಜವನ್ನು ತನ್ನ ನಿಯಂತ್ರಣದಲ್ಲಿಟ್ಟಿಕೊಂಡಿವೆ. ಸಮಾಜದ ಸದಸ್ಯರಾಗಿ ಅನುಸರಿಸಬೇಕಾದ ಸಾಮಾಜಿಕ ನಿಯಮಗಳು ಧರ್ಮದ ಅಧೀನದಲ್ಲಿ ಅಲಿಖಿತವಾಗಿ ರೂಪಗೊಂಡಿವೆ. ವ್ಯಕ್ತಿಯಾಗಿ ಎಲ್ಲರೂ ಸ್ವತಂತ್ರರಾಗಿರುತ್ತಾರೆ. ಆದರೆ ಸಮಾಜದ ಸದಸ್ಯರಾಗಿ ಅವರು ಸ್ವತಂತ್ರರಾಗಿರುವುದಿಲ್ಲ. ಮನುಷ್ಯ ವ್ಯಕ್ತಿಗತವಾಗಿ ವರ್ತಿಸದಂತೆ ಸಮಾಜ ಅವರನ್ನು ನಿಯಂತ್ರಿಸುತ್ತದೆ. ಹಾಗಾಗಿ ಸಮಾಜದಲ್ಲಿ ವ್ಯಕ್ತಿಗತಕ್ಕಿಂತಲೂ ಸದಸ್ಯತ್ವವೇ ಪ್ರಮುಖವಾಗುತ್ತದೆ. ಸಾಮಾಜಿಕ ಅಲಿಖಿತ ನಿಯಮಾವಳಿಗಳೂ ಪುರುಷರಿಗಿಂತಲೂ ಸ್ತ್ರೀಯರ ಮೇಲೆಯೇ ಹೆಚ್ಚಾಗಿ ಹೇರೆಲ್ಪಟ್ಟಿವೆ. ಈ ಒತ್ತಡಗಳ ಹಿನ್ನೆಲೆಯಲ್ಲಿ ರೂಪಪಡೆದ ಮಹಿಳೆಯರ ದೃಷ್ಟಿ ವ್ಯಕ್ತಿಗತವಾಗದೆ ಕುಟುಂಬಗತವಾಗಿರುತ್ತದೆ. ಮಹಿಳೆಯ ಜೀವನದಲ್ಲಿ ಧರ್ಮವು ಮಹತ್ವದ ಪಾತ್ರವನ್ನು ವಹಿಸಿದೆ. ಹಲವಾರು ಧರ್ಮ, ಜಾತಿ ಉಪಜಾತಿಗಳನ್ನು ಹೊಂದಿರುವ ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ ಆಯಾ ಧರ್ಮ, ಜಾತಿ, ಉಪಜಾತಿಗಳ ನೆಲೆಯಲ್ಲಿ ಸ್ತ್ರೀಯರ ಬದುಕಿನ ವಿಧಾನ ಸಾಮಾಜಿಕ ಸ್ಥಾನಮಾನಗಳು ವಿಭಿನ್ನವಾಗಿದ್ದರೂ ಶೋಷಣೆಯ ಮೂಲದಿಂದ ನಡೆದು ಬಂದಿದೆ. ಮಹಿಳೆಯನ್ನು

ಭೋಗದ ವಸ್ತುವಾಗಿ ಪರಿಗಣಿಸಿ ತಮ್ಮ ಅನುಕೂಲಕ್ಕೆ ತಕ್ಕಂತೆ ಪುರುಷ ವ್ಯವಸ್ಥೆ ಮಹಿಳೆಯರನ್ನು ಲೈಂಗಿಕ ದಾಸಿಯರಿಗೆ ಇರುವ ಅರ್ಥದ ಪರಿಕಲ್ಪನೆಯ ಮೌಲ್ಯಗಳಡಿಯಲ್ಲಿ ಬೆಳೆಸಿಕೊಂಡು ಬಂದಿದೆ. ಈ ಹಿನ್ನೆಲೆಯಲ್ಲಿ ದೇವಾಲಯದಲ್ಲಿ ಹಾಡಲು ಮತ್ತು ನಾಟ್ಯ ಮಾಡಲು ಪಾತರದವರನ್ನು ನೇಮಿಸಿದ್ದಾರೆ. ಈ ಮೂಲಕ ದೇವಾಲಯಗಳಲ್ಲಿ ಅಂಗಭೋಗ ಮತ್ತು ರಂಗಭೋಗದ ಸೇವೆಯಲ್ಲಿ ತೊಡಗಿಸುವ ಮೂಲಕ ಅವರನ್ನು ಲೈಂಗಿಕವಾಗಿ ತಮ್ಮ ಸ್ವಾರ್ಥದ ಕಾಮತುಷೆಗೆ ಬಳಕೆ ಮಾಡಿಕೊಳ್ಳುತ್ತಾ ಬಂದಿದ್ದಾರೆ.

ನಟುವರು ಮತ್ತು ಪಾತರದವರು ಬೇರೆಯಲ್ಲಾ ಇಬ್ಬರು ಒಂದೇಯಾಗಿದ್ದಾರೆ. ನಟಿ ಎಂಬ ಪದದ ಅರ್ಥ ಪಾತ್ರದವಳು, ಕುಣಿಯುವವಳು, ನಟಿಸುವವಳು, ನಾಟಕದಲ್ಲಿ ಸೂತ್ರದಾರನ ಹೆಂಡತಿ ಎಂದು ಹೀಗೆ ಕನ್ನಡ ನಿಘಂಟಿನ ಪ್ರಕಾರ ಮುಂತಾದ ಅರ್ಥಗಳಿವೆ. ಪಾತ್ರ ಎಂಬುದೇ ಪಾತರವೆಂದಾಗಿದೆ ಎಂದು ಹೇಳಬಹುದು. ಜನ ಸಮುದಾಯದ ನಿವೇದನೆಯನ್ನು ದೇವರೆದುರಿಗೆ ಆಡುತ್ತಾ ಪಾತ್ರಮಾಡುತ್ತಾ ನೃತ್ಯ ಮತ್ತು ಹಾಡುಗಳ ಮೂಲಕ ತಿಳಿಯ ಪಡಿಸುವವಳು ಪಾತರದವಳಾಗಿದ್ದಾಳೆ. ಹೀಗಾಗಿ ಪಾತರದವರಲ್ಲಿ ಮತ್ತು ನಟುವರಲ್ಲಿ ಅಂತಹ ಮೂಲಭೂತ ವ್ಯತ್ಯಾಸಗಳೇನು ಕಂಡು ಬರುವುದಿಲ್ಲ. ನಟುವರು ಇವರೇ ಕಾಲಾಂತರದಲ್ಲಿ ಪಾತಾರದವರು ಎಂದು ರೂಪಾಂತರಗೊಂಡಿದ್ದಾರೆಂದೇ ಹೇಳಲಾಗುವುದು. ಪಾತರ ಎಂದರೆ ಕುಣಿತ ಮತ್ತು ನರ್ತನ ಎಂದರ್ಥವಾಗುತ್ತದೆ. ಪಾತರದವರು ಅಂದರೆ ನಾಟ್ಯ ಮಾಡುವ ವೃತ್ತಿಯನ್ನು ಮಾಡುವವರು ಎಂದು ಕನ್ನಡ ನಿಘಂಟಿನಲ್ಲಿ ತಿಳಿಸಿದ್ದಾರೆ. ಪಾತರದವರನ್ನು ಉತ್ತರ ಭಾತರದಲ್ಲಿ ಪಾತರದವರು ಎಂದೂ ತೆಲುಗಿನಲ್ಲಿ ಜೋಗಮ್‌ಗಳು ಎಂದು ಇವರನ್ನು ಗುರುತಿಸಿದ್ದಾರೆ. ಆದೇ ರೀತಿಯಲ್ಲಿ ಕರ್ನಾಟಕದಲ್ಲಿ ಇವರನ್ನು ಕಲಾವಂತರು, ಸಾನಿಯರು ಎಂದು ಗುರುತಿಸಿದ್ದಾರೆ. ಮೈಸೂರಿನಲ್ಲಿ ನಾಯಕಸಾನಿ ಎಂದು ಗುರುತಿಸುವರು. ಹಾಗೆಯೇ ವಿಶೇಷವಾಗಿ ಗಾಯನ ಮತ್ತು ನೃತ್ಯದಲ್ಲಿ ಹೆಸರು ವಾಸಿಯಾದವರಿಗೆ ಘನ ನಾಯಕ ಸಾನಿ ಎಂದು ಕರೆಯುತ್ತಾರೆಂದು ಶೈಲಜ ಹಿರೇಮಠ ಅವರು ತಿಳಿಸಿದ್ದಾರೆ.

ಶಾಸನಗಳಲ್ಲಿಯ ಮತ್ತು ಸಾಹಿತ್ಯದಲ್ಲಿನ ಉಲ್ಲೇಖದಂತೆ ಪಾತರದವಳನ್ನು ಸೂಳೆ, ದಾಸಿ ಎಂದು ಕರೆಯುವುದನ್ನು ಗುರುಸಬಹುದು. "ಹೆಬ್ಬಾಳಿನ ಕ್ರಿ.ಶ. ೯೫೫ ರ ಶಾಸನದಲ್ಲಿಯ ಅಂಗಭೋಗದ ಸೂಳೆಯರು ಪಾತರದವರು ಎಂದು ಭಿನ್ನ ಉಲ್ಲೇಖಗಳು ೧೦ ನೇ ಶತಮಾನದಲ್ಲಿ ಅಂಗ ಭೋಗದ ಸೂಳೆಯರು ರಂಗಭೋಗದ ಸೂಳೆಯರು ಎಂದು ಕವಲೊಡೆದದ್ದನ್ನು ಬಹಿರಂಗ ಗೊಳಿಸುತ್ತದೆ." *(ಶೈಲಜ ಹಿರೇಮಠ:೧೯೯೯:೧೮)*. ಈ ಶಾಸನವು ದೇವಾಲಯದಲ್ಲಿ ದೇವರ ಸೇವೆಗೆಂದು ಅಂಗಭೋಗ ಮತ್ತು ರಂಗಭೋಗ ಸೇವೆಯಲ್ಲಿ ತೊಡಗಿರುವ ಮಹಿಳೆಯರನ್ನು ಸೂಳೆಯರು ಎಂದು ಕರೆದಿರುವ ಕುರಿತು ತಿಳಿಸುತ್ತದೆ. ನಟುವ ಜನಾಂಗವನ್ನು ಶೇರಿಂಗ್ ರವರು ಆರು ಬಗೆಗಳಲ್ಲಿ ವಿಭಾಗಿಸಿದ್ದಾರೆ. ೧. ಕೈಕೊಳ, ೨. ಬಸವಿ, ೩. ಕುಂಡಗೋಲಿಕ, ೪.ನಾಯಕಸಾನಿ, ೫.ನಟುವಾಂಗ ೬. ದೇವದಾಸಿ ಹೀಗೆ ವಿಂಗಡಿಸಿದ್ದಾರೆ. ಈ ಬಗೆಗಳಲ್ಲಿ ಲೈಂಗಿಕ ದಾಸಿಯರು ನಟುವರ ಪರಂಪರೆಯಿಂದ ಬಂದವರಲ್ಲ. ಸಾನಿಯನ್ನು ಮತ್ತು ನಟುವಾಂಗರನ್ನು ಹೊರತು ಪಡಿಸಿದರೆ ಉಳಿದವರೆಲ್ಲರ ಪರಂಪರೆ ಮತ್ತು

ಸಂಪ್ರದಾಯಗಳು ಸಂಪೂರ್ಣ ಭಿನ್ನವಾಗಿವೆ. "ಪುರಾತನದ ಹಿಂದೆ ಸಂಪ್ರದಾಯದಲ್ಲಿ ಏಳು ಬಗೆಯ ದಾಸಿಯರಿದ್ದಾರೆ. ೧. ದತ್ತ (ತನ್ನನ್ನು ತಾನೇ ದೇವಸ್ಥಾನಕ್ಕೆ ಅರ್ಪಿಸಿಕೊಳ್ಳುವವಳು. ೨. ವಿಕೃತ (ತನ್ನನ್ನು ತಾನು ಅದೇ ಉದ್ದೇಶಕ್ಕಾಗಿ ಮಾರಿಕೊಳ್ಳುವವಳು) ೩. ಭೃತ (ಕುಟುಂಬದ ಕಲ್ಯಾಣಕ್ಕಾಗಿ ದೇವಾಲಯಕ್ಕೆ ತನ್ನನ್ನು ತಾನು ಸೇವಕಿ ಎಂದು ಸಮರ್ಪಿಸಿಕೊಳ್ಳವವಳು). ೪. ಭಕ್ತೆ (ಭಕ್ತಿಯಿಂದ ಸೇವೆ ಮಾಡುವವಳು) ೫. ಹೃತ (ಆಮಿಷಗಳನ್ನು– ತೋರಿಸಿ ದೇವಾಲಯಗಳಿಗೆ ಅರ್ಪಿಸಿದ ಸೇವಕಿ) ೬. ಅಲಂಕಾರ (ಅಲಂಕಾರದಲ್ಲಿ ನಿಪುಣೆಯಾದವಳು. ರಾಜರು ಇಂಥವರನ್ನು ದೇವಸ್ಥಾನಕ್ಕೆ ದಾನ ಮಾಡುತ್ತಿದ್ದರು) ೭. ರುದ್ರಗಣಿಕಾ ಅಥವಾ ಗೋಪಿಕಾ (ದೇವಾಲಯದಲ್ಲಿಯ ಸಂಗೀತ ನೃತ್ಯ ಸೇವೆಗಾಗಿಯೇ ನೇಮಕಗೊಂಡವಳು. ಅದಕ್ಕಾಗಿ ಅವಳಿಗೆ ಪ್ರತಿ ತಿಂಗಳು ವೇತನ ವಿತ್ತು)" *(ಶೈಲಜ ಹಿರೇಮಠ:೧೯೯೯:೧೮–೧೯).* ಈ ಏಳು ಬಗೆಯ ದಾಸಿಯ ವರ್ಗಗಳಲ್ಲಿ ಏಳನೇಯ ವರ್ಗಕ್ಕೆ ಸೇರಿದವಳು ಪಾತರದವಳಾಗಿದ್ದಾಳೆ.

ಕ್ರಿ.ಶ. ೯೭೫ ಹೆಬ್ಬಾಳಿನ ಶಾಸನದಲ್ಲಿ ಪಾತ್ರದ ಉಲ್ಲೇಖವನ್ನು ಮಾಡಿದ್ದಾರೆ. ಈ ಶಾಸನವೇ ಮೊಟ್ಟ ಮೊದಲ ಉಲ್ಲೇಖವಾಗಿದೆ. ದೇವಾಲಯದಲ್ಲಿ ನೃತ್ಯ ಮಾಡುವವಳನ್ನು ಪಾತರದವಳು ಅಥವಾ ಪಾತ್ರದ ಸೂಳೆ ಎಂದು ಹೆಸರಿಸಿದ್ದಾರೆ. ನಂತರದ ಶಾಸನ ಮತ್ತು ಸಾಹಿತ್ಯದಲ್ಲಿಯೂ ಪಾತ್ರದವರ ಉಲ್ಲೇಖಗಳು ದೊರೆಯುತ್ತವೆ. ನಾಗೇಶ್ವರ, ಕರಿದೇವದಸ್ವಾಮಿ, ಕೇಶವೇಶ್ವರ ಸ್ವಯಂಬೂಕೇತಲೇಶ್ವರ ಮುಂತಾದ ದೇವಾಲಯಗಳಲ್ಲಿ ಪಾತಾರದವರು ಇರುವುದನ್ನು ಕೊಟ್ಟೂರು (ಬಂಕಾಪುರ), ಸೂಂಡಿ (ಕೋಣ) ಹೂವಿನಹಡಗಲಿ, ಶಿರುಗುಪ್ಪ (ಬಳ್ಳಾರಿ) ಮುಂತಾದ ಶಾಸನಗಳು ತಿಳಿಸುತ್ತವೆ.

ದೇವಸ್ಥಾನದಲ್ಲಿ ಸಂಗೀತ ಸೇವೆ ಸಲ್ಲಿಸುತ್ತಿರುವವರನ್ನು "ಪಾಡುವವರು, ಓಲಗದ ಸೂಳೆಯರು" *(ಚೆನಕ್ಕ ಎಲಿಗಾರ : ೧೯೯೦ : ೬೨).* ಎಂದು ನರ್ತಿಸುವವರನ್ನು ಪಾತರ ಅಥವಾ ಪಾತ್ರದವರೆಂದು ಕರೆಯುತ್ತಿದ್ದರು. ನೃತ್ಯಗಾರರು ಮತ್ತು ಸಂಗೀತಗಾರರನ್ನೊಳಗೊಂಡಂತೆ ಪಾತ್ರದವರು ಅಥವಾ ಪಾತರದವರು ಎಂಬ ಏಕ ಪದ ಚಲಾವಣೆಯಾಗಿದೆ. ಪಾತಾರದವಳು ದೇವದಾಸಿ, ಬಸವಿ ಈ ಪದಗಳ ಕುರಿತಂತೆ ಈಗಾಗಲೇ ಪ್ರಕಟಗೊಂಡ ನಿಘಂಟುಗಳಲ್ಲಿ ಅವುಗಳನ್ನು ಹೀಗೆ ಅರ್ಥೈಸಿವೆ.

ಕನ್ನಡ ನಿಘಂಟು: (ಸಂ) ಪ್ರೊ ಜಿ ವೆಂಕಟ ಸುಬ್ಬಯ್ಯ

'ಪಾತಾರ'– ಕುಣಿತ, ನರ್ತನ, ನಾಟ್ಯ

'ಪಾತರದವರು' – ನಾಟ್ಯ ಮಾಡುವ ವೃತ್ತಿಯವರು, ಕೆಲವು ದೇವದಾಸಿಯರು ಈ ವೃತ್ತಿಯನ್ನು ಅನುಸರಿಸುವರು.

'ಪಾತರಗಿತ್ತಿ' – ನರ್ತಕಿ, ನಟಿ, ಚಿಟ್ಟೆ, ವೇಶ್ಯೆ, ಗಣಿಕೆ

'ದೇವದಾಸಿ'– ೧. ದೇವರ ಸೇವೆಗಾಗಿ ತನ್ನ ಜೀವಮಾನವನ್ನು ಮುಡುಪಾಗಿಟ್ಟು ಸೇವೆ ಸಲ್ಲಿಸುವ ಅವಿವಾಹಿತ ಮಹಿಳೆ. ೨. ದೇವಸ್ಥಾನದ ನರ್ತಕಿ. ೩. ನರ್ತನ ಮಾಡುವ ವೃತ್ತಿಯ ವೇಶ್ಯೆ.

'ಬಸವಿ' ದೇವರ ಹೆಸರಿನಲ್ಲಿ ದೇವಾಲಯದ ಸೇವೆಗಾಗಿ ಮೀಸಲು ಬಿಟ್ಟ ಹುಡುಗಿ. ಕೆಲವು ಕಡೆ ಇಂತಹವನ್ನು ದೇವದಾಸಿಯರೆಂದು ಜೋಗುತಿಯರೆಂದು ಕರೆಯುತ್ತಾರೆ.

'ಸೂಳೆ' – ವ್ಯಭಿಚಾರವನ್ನು ಮಾಡುವವಳು, ಹಾದರಗಿತ್ತಿ.

ಸಿರಿಗನ್ನಡ ಅರ್ಥಕೋಶ : ಡಾ. ಶಿವರಾಮ ಕಾರಂತ

'ಪಾತಾರ' – ನಾಟಕದಲ್ಲಿ ನಾಯಕ ಮೊದಲಾದ ವೇಷದಾರಿ

'ಪಾತರಗಿತ್ತಿ' – ಪತಂಗ, ಹಾದರಗಿತ್ತಿ, ಸೂಳೆ

ದೇವದಾಸಿ – ದೇವಾಲಯದ ಪರಿಚಾರಿಕೆ, ಸೂಳೆ, ವೇಶ್ಯ, ಪಾತರದವಳು, ಬಸವಿ

'ಬಸವಿ' – ವೇಶ್ಯೆ, ದೇವರಿಗೆ ಬಿಟ್ಟಾಕೆ, ಬಿಡುದೇವರ ಹೆಸರಿನಲ್ಲಿ ಕನ್ಯೆಯನ್ನು ವಿವಾಹ ಮಾಡದೆ ಇರಿಸು.

'ಸೂಳೆ'– ಪಾತರದವಳು, ಪಾತರಗಿತ್ತಿ, ವೇಶ್ಯೆ

ಕನ್ನಡ– ಇಂಗ್ಲೀಷ್ ಡಿಷನರಿ, ಎಫ್, ಕಿಟೆಲ್

'ಪಾತ್ರ -An Actar, dramatis person (ಪಾತ್ರವಾಡೆ ವಾದಕಂ ಬಾಜಿಸಿದಂ) ೦ ಜಚಿಟಿಭಿಟಿಂ ಡಿಟ:ಪಾತ್ರ ಮಾಡುವವಳು (ನರ್ತಕಿ, ಲಾಸಿಕೆ), ಪಾತ್ರದವಳು, ಪಾತರದವಳು. 'ಪಾತರದವಳು' – ಪಾತ್ರದವಳು. A dancing Girl, a horlet (ಗಣಿಕೆ, ವಾರಸ್ತ್ರೀ, ಬೇಶ್ಯೆ, ಪುಣ್ಯಸ್ತ್ರೀ, ವೇಶ್ಯೆ, ಪುಣ್ಯಸ್ತ್ರೀ) ಸ್ವರ್ಗಲೋಕದ ಪತರದವಳು (ಸ್ವರ್ವೇಶ್ಯ) ಪಾತಾರದವರ ರಮನ್ (ವೇಶ) ಪಾತರದವರ ಸಮುದಾಯ (ಗಾಣಿಕ್ಯ)

'ಪಾತರ ಗಿತ್ತಿ'– ಪಾತರದವಳು, Butterflly

'ದೇವದಾಸಿ'– A courtezan, especially one employed as a dancer etc. in a temple.

'ಬಸವಿ'– ಬಸವಿಂ prostitute (like a she guli) in temples or math.

'ಸೂಳೆ'– ಸೂಳ, ಶೂಲೆ, ಗಣ್ಯಂಗನೆ, A. horlot, a prospitute ರೂಪಾಜೀವೆ, ವೇಶ್ಯೆ, ಗಣಿಕೆ, ಕ್ಷುದ್ರೆ, ಕಾಮುಕಿ, ಭೋಗ, ಜೋಡೆ ಅಜ್ಜಕೆ, ವಾರಸ್ತ್ರೀ, ಚೂಳೆ, ಚೂಳ್ಯ ಎಂಬ ಅರ್ಥಗಳಲ್ಲಿ ವಿವರಣೆ ನೀಡಿದ್ದಾರೆ.

ದೇವಾಲಯಕ್ಕೆ ಅರ್ಪಿಸುವ ಕುರಿತು ನೋಡುವುದಾದರೆ ದಾಂಪತ್ಯ ಜೀವನದ ಮುಖವಾಡದಲ್ಲಿ ಲೈಂಗಿಕ ಶೋಷಣೆಯನ್ನು ವ್ಯವಸ್ಥಿತವಾಗಿ ಪೋಷಿಸಿಕೊಂಡು ಬಂದಿವೆ. ಪತಿಯ ಮುಖವಾಡ ಧರಿಸಿದ ಪುರುಷನ ಕಾಮವನ್ನು ತೃಪ್ತಿಗೊಳಿಸುವುದು 'ಸತಿ ಧರ್ಮ' ವಾದರೆ, ಗಂಡನಲ್ಲದ ವಿವಾಹ ಬಾಹಿರನ ಕಾಮನೆಯನ್ನು ತೃಪ್ತಿಗೊಳಿಸುವುದು ದೇವರಿಗೆ ಬಿಟ್ಟವರ ಕರ್ತವ್ಯ ಮತ್ತು

ಧರ್ಮ ಎಂಬುದನ್ನು ಹೊನ್ನಮ್ಮನ ಹದಿಬದೆಯ ಧರ್ಮವು ತಿಳಿಸುತ್ತದೆ. ಸತಿಯಾದವಳು ಪತಿಯ ಅಧೀನತೆಯಲ್ಲಿ ಮತ್ತು ಪೋಷಣೆಯಲ್ಲಿ ಬದುಕುತ್ತಾಳೆ. ಹಾಗಾಗಿ ಸತಿಯ ಅನಿವಾರ್ಯ ಮತ್ತು ಜೀವನದ ಒಂದು ಭಾಗವಾಗಿರುವುದರಿಂದ ಪತಿಯ ಕಾಮನೆಯನ್ನು ತೃಪ್ತಿಗೊಳಿಸುವುದು ಸಮಂಜಸವಾಗಿದೆ. ಆದರೆ ಸತಿಯಾಗದೆ ದೇವರ ಪತ್ನಿಯಾದವಳು ಮನುಷ್ಯನ ಕಾಮ ತೃಪ್ತಿಗೆ ಬಳಸುವುದು ಎಷ್ಟು ಸರಿ ಎಂಬ ಪ್ರಶ್ನೆ ಕಾಡುತ್ತದೆ.

ಪೌರಾಣಿಕ ಕಥೆಯ ಪ್ರಕಾರ ಶಿವನು ದೀರ್ಘಕಾಲದ ತಪ್ಪಿಸ್ಸಿನಲ್ಲಿದ್ದಾಗ ಲೈಂಗಿಕ ವಿಚಾರದಲ್ಲಿ ಜಡವಾಗಿದ್ದನು. ಆಗ ಪಾರ್ವತಿ ಶಿವನನ್ನು ಜಾಗ್ರತಗೊಳಿಸಿ ಷಣ್ಮುಖನನ್ನು ಪಡೆದಳು. ಅವನಿಂದಲೇ ಇಡೀ ಜಗತ್ತನ್ನು ದೃಷ್ಟ ಶಕ್ತಿಗಳಿಂದ ವಿಮುಕ್ತಗೊಳಿಸಿದಳು. ಇದೇ ಹಿನ್ನೆಲೆಯಲ್ಲಿ ಪುರುಷ ದೇವರನ್ನು ಸದಾ ಜಾಗೃತರನ್ನಾಗಿಸಲು ದೇವಾಲಯದಲ್ಲಿ ಕನ್ಯೆಯರನ್ನು ಅರ್ಪಿಸುವ ಸಂಪ್ರದಾಯ ಪ್ರಾರಂಭವಾಯಿತು ಎಂದೆನ್ನಲಾಗುವುದು. ಆದ್ದರಿಂದಲೇ ಹೆಣ್ಣು ಮಕ್ಕಳನ್ನು ದೇವಾಲಯಕ್ಕೆ ಅರ್ಪಿಸುವುದು ಪುಣ್ಯದ ಕಾರ್ಯ ಎಂಬ ಮೂಢನಂಬಿಕೆಗಳನ್ನು ಪುರಾಣಗಳು ಸೃಷ್ಟಿಸಿ ಬೆಂಬಲಿಸಿದವು. ಇದರಿಂದ ಎಲ್ಲಾ ಸ್ತ್ರೀ ಸಮುದಾಯದ ತುಳಿತ ಧಾರ್ಮಿಕ ಮೂಲದಿಂದಲೇ ನಡೆದುದು ಸ್ಪಷ್ಟವಾಗಿದೆ.

ದೇವಾಲಯಕ್ಕೆ ದೇವರಿಗೆಂದು ಅರ್ಪಿಸುವ ವಸ್ತುಗಳನ್ನು ಮತ್ತು ಹೆಣ್ಣನ್ನು ಪುರೋಹಿತನಿಗೆ ಸಲ್ಲಸಲ್ಪಟ್ಟವು. ಕಾರಣ ಪುರೋಹಿತಶಾಹಿತ್ವ ರಾಜಕೀಯ ನೆಲೆಯಲ್ಲಿ ಭದ್ರವಾಗಿರಬೇಕು.ಇದನ್ನು ಬಿಟ್ಟು ಪುರೋಹಿತನೇ ದೇವ ಸ್ವರೂಪಿಯಾದನು. ಹೆಣ್ಣನ್ನು ಕಾಮಪ್ರೇರಕ ವಸ್ತುವಾಗಿ ಪರಿಗಣಿಸಿ ತನ್ನ ಭೋಗಕ್ಕೆ ಅನುಕೂಲವಾದ ಸ್ತ್ರೀಯನ್ನು ತನ್ನ ಮನೋರಂಜನೆಗೆ ಮತ್ತು ಲೈಂಗಿಕ ಪೂರೈಕೆಯಾಗುವಂತೆ ಧಾರ್ಮಿಕ ಚೌಕಟ್ಟಿನಲ್ಲಿ ಕುಣಿಸಿ ಅವಳನ್ನು ಅನುಭೋಗಿಸ ತೊಡಗಿದನು.

ಮಾನವ ಇತಿಹಾಸದ ಬೆಳೆವಣಿಗೆಯ ಘಟ್ಟಗಳಲ್ಲಿ ನಿಖರವಾಗಿ ಹೇಳಲು ಆಧಾರಗಳು ಇಲ್ಲದ ಕಾರಣ ಹೀಗಿರಬಹುದೆಂದು ಹೇಳಲು ಸಾಧ್ಯವೇ ಹೊರತು ಇದೇ ಅಂತಿಮವಾದ ಸತ್ಯವೆಂದು ಹೇಳುವುದಿಲ್ಲ. ನಟುವ ಜನಾಂಗ ಹೀಗೆ ರೂಪುಗೊಂಡಿರುವ ಸಾಧ್ಯತೆ ಇದೆ ಎಂದು ಶೈಲಜ ಹೀರೆಮಠರವರು ಪಾತರದವರು ಪುಸ್ತಕದಲ್ಲಿ ತಿಳಿಸಿದ್ದಾರೆ. ಗಂಡು ಹೆಣ್ಣುಗಳು ದೇವರೆದುರಿಗೆ ಸಂಗೀತ ಮತ್ತು ನೃತ್ಯಗಳ ಪೂಜಾ ಕ್ರಮವನ್ನು ಅನುಸರಿಸಿ ಭಕ್ತಿಯಿಂದ ಪೂಜಿಸಿ ಹೊರಟು ಹೋಗುತ್ತಿದ್ದರು. ಈ ಘಟ್ಟದಲ್ಲಿ ನಟುವ ಹೆಣ್ಣು ತನ್ನ ಜನಾಂಗದವನೊಂದಿಗೆ ಜೊತೆಗೂಡಿ ಇರುತ್ತಿದ್ದಳು. ಧಾರ್ಮಿಕ ಬೆಳವಣಿಗೆಗಾಗಿ ಹಪ ಹಪಿಸುತ್ತಿದ್ದ ಪುರೋಹಿತನಿಗೆ ರೂಪವುಳ್ಳ ಸಂಗೀತ ಮತ್ತು ನೃತ್ಯಗಳನ್ನು ಬಿಲ್ಲನಟುವ ಜನಾಂಗ ಅತ್ಯಂತ ಸೂಕ್ತವೆನಿಸಿರಬೇಕು. ಹೀಗಾಗಿಯೇ ಅವರಿಗೆ ದೇವದಾಯ (ಹೊಲ) ನೀಡಿ ಅಲೆಮಾರಿಗಳಾದ ಅವರನ್ನು ಒಂದೆಡೆ ಸ್ಥಿರವಾಗಿ ನಿಲ್ಲಿಸಿದನು. ದೇವರಿಗೆ ಸಲ್ಲುವ ವಸ್ತು ಆತನ ಪ್ರತಿನಿಧಿಯಾದ ಪುರೋಹಿತನಿಗೆ ಸಲ್ಲಲ್ಪಡಬೇಕೆಂಬ ರಾಜಕೀಯ ಹುನ್ನಾರದಿಂದ ಧಾರ್ಮಿಕ ಭೀತಿಯನ್ನು ಹುಟ್ಟಿಸಿ ನಮ್ಮ ಹೆಣ್ಣು ಮಕ್ಕಳನ್ನು ಅವರ ಗಂಡಸರ ಹಿಡಿತದಿಂದ ತಪ್ಪಿಸಿ ತಾನೇ ಅನುಭೋಗಿಸತೊಡಗಿದನು. ಇದರಿಂದಾಗಿ ನಟುವ ಗಂಡಸರ ವಿವಾಹ ಕಷ್ಟವಾಗಿ ಅನ್ಯಜಾತಿಯ

ಹುಡುಗಿಯರನ್ನು ಕದ್ದು ಇಲ್ಲವೆ ಕೊಂಡುಕೊಂಡು ಮದುವೆಯಾಗುವ ಪ್ರಸಂಗ ನಿರ್ಮಾಣವಾಯಿತು ಎಂದು ತಿಳಿಸಿದ್ದಾರೆ.

ಚರಿತ್ರೆಯಲ್ಲಿ ಹುಟ್ಟಿಕೊಂಡಿರುವ ಈ ಪಾತರ ಪದ್ಧತಿಯೂ ಕಾಲಕ್ರಮವಾಗಿ ವಿವಿಧ ರೀತಿಯ ಬೇರೆ ಬೇರೆ ತಿರುವುದನ್ನು ಪಡೆದು ಕೊಂಡದ್ದನ್ನು ಜಾಗ್ರತೆಯಿಂದ ನೋಡಬೇಕಿದೆ. ದೇವಾಲಯದಲ್ಲಿ ದೇವಾ ದೇವತೆಗಳ ಎದುರಿನಲ್ಲಿ ಸಂಗೀತ ಮತ್ತು ನೃತ್ಯದಿಂದ ಹಾಡಿ ಕುಣಿದು ತನ್ನ ಅಂಗರಂಗದ ನೀವೇದನೆಯನ್ನು ಮಂಡಿಸುತ್ತಿದ್ದರು. ದೇವರ ಹೆಸರಿನಲ್ಲಿ ಕುಣಿದು ಪುರುಷಕೇಂದ್ರಿತವಾದ ಧಾರ್ಮಿಕ ಬೆಳವಣಿಗೆಗೆ ಪ್ರಮುಖ ಆಕರ್ಷಕ ಕೇಂದ್ರಬಿಂದುವಾಗಿ ಒಂದು ಸ್ತ್ರೀವರ್ಗ ಪಾತರದ ಜನಾಂಗವಾಗಿ ಬೆಳೆದು ಬಂದಿದೆ. ದೇವಾಲಯದಲ್ಲಿ ಗಂಡು ಹೆಣ್ಣುಗಳಿಬ್ಬರೂ ದೇವಸ್ಥಾನದಲ್ಲಿ ನರ್ತನ ಮಾಡುವ ನಟುವ ಜನಾಂಗದ ಇತಿಹಾಸದಲ್ಲಿ ಗಂಡಸರು ಹಿಂದೆ ಸರಿದು ಪರದೆಯ ಎದುರಿಗೆ ಹೆಣ್ಣುಗಳಷ್ಟೇ ಉಳಿದುಕೊಂಡರು.

"ಭಾರತದಲ್ಲಿ ದೊರೆತ ಉಲ್ಲೇಖದ ಹಿನ್ನೆಲೆಯಲ್ಲಿ ಇದರ ಕಾಲವನ್ನು ಕ್ರಿ.ಶ. ಮೂರನೆಯ ಶತಮಾನ ಎಂದು ಗುರುತಿಸಬಹುದು. ಸೂರ್ಯ ತನ್ನ ತಾಯಿ ಗರ್ಭವನ್ನು ಸೇರುವ ಹೊತ್ತಿಗೆ ಉಜ್ಜಯಿನಿಯ ಮಹಾಕಾಲ ದೇವಸ್ಥಾನದಲ್ಲಿ ನರ್ತಕಿಯರಿಂದ ನರ್ತನ ಸೇವೆ ನಡೆಯುತ್ತಿತ್ತು". *(ಶೈಲಜ ಹಿರೇಮಠ :೧೯೯೯:೨೬)*. ರಾಜ ತರಂಗಿಣಿಯ ಉಲ್ಲೇಖದಂತೆ ಕಾಶ್ಮೀರದಲ್ಲಿ ಕ್ರಿ. ಶ. ೭ನೇ ಶತಮಾನದಲ್ಲಿ ಈ ಪದ್ಧತಿ ಪ್ರಬಲವಾಗಿದ್ದಿತು. "ಈ ಸಂಪ್ರದಾಯದ ಉಲ್ಲೇಖ ಜಾತಕ ಸಾಹಿತ್ಯ ಇಲ್ಲ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಗಣಿಕೆಯರನ್ನು ಕುರಿತು ವಿಸ್ತಾರವಾದ ಪ್ರಸ್ತಾಪವಿದ್ದರೂ ನಟುವರನ್ನು ಹೆಸರಿಸಿಲ್ಲ. ದೇವರ ಸೇವಾರ್ಥವಾಗಿ ನರ್ತನ ಹಾಗೂ ಗಾಯನಕ್ಕಾಗಿ ಸ್ತ್ರೀಯರನ್ನು ನೇಮಿಸಿಕೊಳ್ಳಬೇಕೆಂಬುದಕ್ಕೆ ಹಲವಾರು ಪುರಾಣಗಳು ಒತ್ತು ನೀಡುತ್ತದೆ. ನರ್ತಕಿ, ಗಾಯಕಿಯರನ್ನು ಖರೀದಿಸಿ ದೇವಸ್ಥಾನಕ್ಕೆ ಸಲ್ಲಿಸಿದರೆ ಸ್ವರ್ಗ ಪ್ರಾಪ್ತಿಯಾಗುತ್ತದೆಂದು ಪುರಾಣಗಳು ಭ್ರಮೆ ಹುಟ್ಟಿಸಿದ್ದು ವಿಷಾದದ ಸಂಗತಿ. ಭವಿಷ್ಯ ಪುರಾಣಗಳು ಸೂರ್ಯ ದೇವಸ್ಥಾನಕ್ಕೆ ನರ್ತಕಿಯರನ್ನು ನೀಡುವುದು ಪುಣ್ಯದ ಕೆಲಸವೆಂದು ಬಲವಾಗಿ ಪ್ರತಿಪಾದಿಸಿವೆ. ಹುಯನ್‌ತ್ಸಾಂಗನು ಮುಲ್ತಾನ್‌ನ ಸೂರ್ಯ ದೇವಸ್ಥಾನದಲ್ಲಿ ಹಲವಾರು ಗಾಯಕಿಯರನ್ನು ಕಂಡಿದ್ದಾಗಿ ವಿವರಿಸಿದ್ದಾನೆ. ಪ್ರಸಿದ್ಧವಾದ ಗುಜರಾತ್‌ನ ಸೋಮನಾಥ ದೇವಸ್ಥಾನದಲ್ಲಿ ಐದುನೂರು ನರ್ತಕಿಯರು ಇದ್ದರು. ತಂಜಾವೂರಿನ ರಾಜರಾಜನು ದೇವಾಲಯ ನಿರ್ಮಿಸಿ ಅದರ ಸೇವೆಗೆಂದು ಹಲವಾರು ನರ್ತಕಿಯರನ್ನು ಒದಗಿಸಿದನು" (ಶೈಲಜಾ ಹಿರೇಮಠ :೧೯೯೯: ೨೮). ಮಧ್ಯಕಾಲೀನ ದೇವಾಲಯಗಳಲ್ಲಿಯ ಶಿಲ್ಪಾಕೃತಿಗಳಲ್ಲಿ ನಾಟ್ಯಶಾಸ್ತ್ರದ ಪ್ರಭಾವವನ್ನು ಕಾಣಬಹುದು. ದಕ್ಷಿಣ ತಂಜಾವೂರಿನಲ್ಲಿಯ ಬೃಹದೇಶ್ವರ ದೇವಾಲಯ, ಕುಂಬಕೋಣಂನಲ್ಲಿಯ ಸಾರಂಗಪಾಗಿ ದೇವಾಲಯಗಳಲ್ಲಿ ನಾಟ್ಯಶಾಸ್ತ್ರದ ಕೆಲವು ಸೂತ್ರಗಳಿಗನುಗಣವಾಗಿ ಕಣ್ಣಿಗೆ ಕಟ್ಟುವಂತೆ ರಚಿಸಿದ ಶಿಲ್ಪಗಳು ಸಮರ್ಥಸಾಕ್ಷ್ಯಗಳಾಗಿ ನಿಲ್ಲುತ್ತವೆ. ಇದಕ್ಕೆ ಮಾಢೇರಾ ಸೂರ್ಯ ದೇವಾಲಯ ಮತ್ತು ಕೊನಾರ್ಕದಲ್ಲಿ ನವರಂಗ ಮಂಟಪಗಳು ಪಾತರದವರ ಸೇವೆಗೆ ಸಾಕ್ಷ್ಯಿಗಳಾಗಿವೆ. ಆ ದೇವರನ್ನು ಪ್ರಮುಖ ಪ್ರೇಕ್ಷಕನೆಂದು ಗುರುತಿಸಲಾಗುತ್ತಿತ್ತು.

ಉತ್ತರ ಭಾರತವು ಹೆಚ್ಚು ಮುಸ್ಲಿಂಮರ ಆಡಳಿತಕ್ಕೆ ಒಳಪಟ್ಟ ನಂತರ ಹಿಂದೂ ದೇವಾಲಯಗಳು ತಮ್ಮ ಮೊದಲಿನ ಸಾಮಾಜಿಕ ಹಿಡಿತವನ್ನು ಕಳೆದುಕೊಂಡವು. ಪುರೋಹಿತಶಾಹಿ ಹಾಗೂ ರಾಜ ಶಾಹಿಗಳ ಸ್ವಾರ್ಥದಲ್ಲಿ ಹಿಂದೂ ಸಂಸ್ಕೃತಿಯ ಕೇಂದ್ರ ಬಿಂದುವಾಗಿ ಬೆಳೆದು ಬಂದ ದೇವಾಲಯಗಳು ನಾಶ ಹೊಂದಿದ ಮೇಲೆ ಅದರ ಸುತ್ತ ಮುತ್ತ ಹಬ್ಬಿಕೊಂಡಿದ್ದ ಪಾತರದಂತಹ ಅನೇಕ ಸಂಪ್ರದಾಯಗಳು ಕಡಿಮೆಯಾದವು. ಔರಂಗಜೇಬನು ತನ್ನ ಆಡಳಿತ ಅವಧಿಯಲ್ಲಿ ಅನೇಕ ಹಿಂದೂ ದೇವಾಲಯಗಳನ್ನು ನಾಶಪಡಿಸಿದನು. ಇದು ದೇವಾಲಯಗಳನ್ನು ನಂಬಿಕೊಂಡು ಪರಂಪರೆಯಲ್ಲಿ ಬೆಳೆದುಕೊಂಡು ಬಂದಿರುವ ಜನರ ಮೇಲೆ ಅಗಾಧವಾದ ಪರಿಣಾಮ ಬೀರಿತು. ದೇವಾಲಯದಲ್ಲಿ ದೇವರ ಹೆಸರಿನಲ್ಲಿ ಬೆಳೆದುಕೊಂಡು ಬಂದಿರುವ ಪಾತರದ ಸಂಪ್ರದಾಯವನ್ನು ನಾಶಪಡಿಸಿದರು. ಈ ಹಿನ್ನೆಲೆಯಲ್ಲಿ ಹಿಂದೂ ಧಾರ್ಮಿಕ ಸಂಪ್ರದಾಯಗಳನ್ನು ಅಳಿಸಿ ಹಾಕಲು ಪ್ರಯತ್ನಿಸಿದನು. ಜೊತೆಗೆ ದೇವಾಲಯದಲ್ಲಿ ನಡೆಯುವ ನೃತ್ಯ ಮತ್ತು ಸಂಗೀತ ಇತರೆ ಸೇವೆಯನ್ನು ವಿರೋಧಿಸಿ ಕಾಯ್ದೆಯನ್ನು ಜಾರಿಗೆ ತಂದನು. ಹೀಗೆ ಇವರ ಧಾಳಿಯಿಂದ ಭಾರತದ ಸಂಸ್ಕೃತಿಯಲ್ಲಿ ಭದ್ರವಾಗಿ ಬೆಳೆದು ಬಂದಿರುವ ದೇವಾಲಯಗಳ ಮೇಲೆ ಮತ್ತು ಧಾರ್ಮಿಕ ಸಂಪ್ರದಾಯಗಳ ಮೇಲೆ ನಡೆದುಬಂದಿರುವ ಪಾತರದವರು ದೇವಾಲಯದಿಂದ ರಾಜನ ಆಸ್ಥಾನಕ್ಕೆ ಬಂದರು. ಇಲ್ಲಿಂದ ಪಾತಾರದವರ ಪರಿಸ್ಥಿತಿ ಮತ್ತಷ್ಟು ಗಂಭೀರತೆಗೆ ಒಳಪಟ್ಟಿತು. ಇಲ್ಲಿ ರಾಜನ ವಿಲಾಸ ಜೀವನದ ಗೊಂಬೆಗಳಾದರು. ಹೀಗೆ ದೇವಾಲಯದಲ್ಲಿ ಬೆಳೆಯುತಿದ್ದ ಪಾತರದವರನ್ನು ರಾಜನ ಆಸ್ಥಾನಕ್ಕೆ ಇಳಿಸಿದರು. ಆದರೆ ಒಂದು ಕಡೆ ಮುಸ್ಲಿಂ ಅರಸರ ಧಾಳಿಯು ಈ ರೀತಿಯ ಹೆಣ್ಣಿನ ಶೋಷಣೆಯನ್ನು ಧಾರ್ಮಿಕ ಮುಖವಾಡದಲ್ಲಿ ನಡೆಯುವುದನ್ನು ತಡೆಯುವ ಪ್ರಯತ್ನವಾಗಿದ್ದರೂ ಅವರನ್ನು ನೇರವಾಗಿ ಅಲ್ಲದೇ ಪರೋಕ್ಷವಾಗಿ ರಾಜಾಡಳಿತವು ಶೋಷಣೆಗೆ ಒಳಪಡಿಸುತ್ತಿತ್ತು.

ದಕ್ಷಿಣ ಭಾರತದಲ್ಲಿ ಪಾತರದ ಸಂಪ್ರದಾಯವು ಕರ್ನಾಟಕ, ಕೇರಳ ಮದರಾಸ್ ಮುಂತಾದೆಡೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಿತ್ತು. ಪಾತರದ ಸಂಪ್ರದಾಯ ಕುರಿತಂತೆ ಕರ್ನಾಟಕದಲ್ಲಿ ಪ್ರಾಚೀನ ಉಲ್ಲೇಖಗಳು ದೊರೆತಿಲ್ಲ. "ಪಟ್ಟದಕಲ್ಲು ಲಕ್ಕುಂಡಿ (ಗದಗ), ನ್ಯಾಮತಿ (ಹೊನ್ನುರು), ಮೊರೆಗೆರಿ, ಹೂವಿನ ಹಡಗಲಿ, ಅರಸಿಬೀದಿ, ನಂದವಡಗಿ (ಹುನಗುಂಡ), ಬಂತಾಪುರ (ಶಿಗ್ಗಾಂವ), ಲಕ್ಷ್ಮೇಶ್ವರ (ಶಿರಹಟ್ಟಿ), ನಾಲತವಾಡ (ಮುದ್ದೇಬಿಹಾಳ), ಕಾಗಿನಲ್ಲಿ (ಹಿರೇಕೆರೂರ), ಬನವಾಸಿ (ಉತ್ತರ ಕನ್ನಡ) ಮೊದಲಾದ ಊರುಗಳಲ್ಲಿಯ ದೇವಾಲಯಗಳಲ್ಲಿ ಪಾತರದವರಿದ್ದ ಉಲ್ಲೇಖಗಳು ಶಾಸನಗಳಲ್ಲಿ ದೊರೆಯುತ್ತದೆ" *(ಶೈಲಜಾ ಹಿರೇಮಠ:೧೯೯೯:೩೦).* ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿಯಲ್ಲಿ ಮೊರೆಗೆರೆಯಲ್ಲಿ ಪಾತರದ ಶಾಸನವಿದೆ ಎಂಬ ಆಧಾರದ ಮೇಲೆ ಕ್ಷೇತ್ರಕಾರ್ಯಕ್ಕೆ ಮೊರಗೆರಿಗೆ ಹೋದಾಗ ಅಲ್ಲಿ ಯಾವ ಮಾಹಿತಿಯು ಈ ಪಾತಾರದ ಕುರಿತು ಮತ್ತು ಶಾಸನದ ಕುರಿತು ದೊರೆತಿಲ್ಲ. ಒಂದು ಸಂದರ್ಭದಲ್ಲಿ ಕರ್ನಾಟಕದ ತುಂಬೆಲ್ಲಾ ಪಾತರದವರಿದ್ದ ಸತ್ಯವನ್ನು ಈ ಶಾಸನಗಳು ತೆರೆದಿಡುತ್ತವೆ.

## ಪಾತರದ ದೀಕ್ಷೆ

ದೇವರು ನೃತ್ಯ ಮತ್ತು ಸಂಗೀತಕ್ಕೆ ಒಲಿಯುತ್ತಾನೆ ಎನ್ನುವ ನಂಬಿಕೆಯ ಹಿನ್ನೆಲೆಯಲ್ಲಿ ಪಾತರ ಸಂಪ್ರದಾಯ ಪ್ರಾರಂಭವಾಗಿರಬೇಕು. ಹೀಗಾಗಿ ಧಾರ್ಮಿಕ ರಂಗದಲ್ಲಿ ಆರಾಧನೆಯ ಒಂದು ಭಾಗವಾಗಿ

ಪಾತರದವರ ಸೇವೆ ರೂಪ ಪಡೆದುಕೊಂಡಿತು. ದೇವಾಲಯಗಳು ನೃತ್ಯ ಮತ್ತು ಸಂಗೀತ ಅಭಿನಯ ಪ್ರದರ್ಶನದ ಕೇಂದ್ರಗಳಾಗಿದ್ದವು. ನೃತ್ಯ, ನಾಟಕ ಮತ್ತು ಸಂಗೀತಗಳು ಸೇವೆಯ ರೂಪದಲ್ಲಿ ಪ್ರದರ್ಶನಗೊಳುತ್ತಿದ್ದವು. ಈ ಮೂಲಕವಾಗಿ ಭಕ್ತರನ್ನು ದೇವಾಲಯಕ್ಕೆ ಆಕರ್ಷಿಸಲ್ಪಡುತ್ತಿದ್ದರು. ಶಿಷ್ಟಪಂತಕ್ಕೆ ಬೆಳೆದು ಬಂದ ಧರ್ಮ ತನ್ನ ಪ್ರಚಾರಕ್ಕಾಗಿ, ಬೆಳೆವಣಿಗೆಗಾಗಿ ಪಾತರದಂತಹ ಪರಂಪರೆಯನ್ನು ಹುಟ್ಟುಹಾಕಿ ಬೆಳೆಸಿಕೊಂಡು ಬಂದಿತು. ಧಾರ್ಮಿಕತೆಯ ಮುಖವಾಡದಲ್ಲಿ ನೃತ್ಯ, ನಾಟಕ ಮತ್ತು ಸಂಗೀತಗಳನ್ನು ಪೋಷಿಸಿಕೊಂಡು ಬಂದು ತನ್ನ ಪದ್ಧತಿಗೆ ಪ್ರಾಮುಖ್ಯತೆ ನೀಡಿ, ಪಾತರ ಜನಾಂಗದ ಹಿತಾಶಕ್ತಿಗಳನ್ನು ಬಲಿತೆಗೆದುಕೊಂಡಿತು. ದೇವಾಲಯಗಳಿಗೆ ಜನ ಸಮುದಾಯವನ್ನು ಆಕರ್ಷಿಸಲು ಪುರೋಹಿತರು ಧಾರ್ಮಿಕ ಸೋಗಿನಲ್ಲಿ ಹೆಣ್ಣನ್ನು ಕುಣಿತ ಸಂಗೀತಕ್ಕೆ ಬಳಸಿಕೊಂಡರು. ಹೀಗೆ ಸ್ತ್ರೀಯನ್ನು ಮನರಂಜಕ ವಸ್ತುವನ್ನಾಗಿಸಿಕೊಂಡು ತನ್ನ ಅಗತ್ಯಕ್ಕೆ ಅನುಕೂಲವಾಗುವಂತೆ ಸೃಷ್ಟಿಸಿದನು. ಈ ರೀತಿಯ ಪದ್ಧತಿಯನ್ನು ಬೆಳೆಸಿಕೊಂಡು ಬರುವಲ್ಲಿ ಅವುಗಳಿಗೆ ಒಂದು ಆಚರಣೆಗಳನ್ನು ಮಾಡಿಕೊಂಡು ಬಂದರು. ಪಾತರದವರಿಗೆ ಗೆಜ್ಜೆ ಕಟ್ಟುವ ಮತ್ತು ಗಂಡಾ ಕಟ್ಟುವುದು ಎಂಬ ಆಚರಣೆಗಳ ಮೂಲಕವಾಗಿ ಪಾತರದವರಾಗುತ್ತಾರೆ.

**ಗಂಟಾ ಕಟ್ಟುವುದು**

ಗಂಟಾ ಕಟ್ಟುವ ಕಾರ್ಯವು ಪಾತರದವರಲ್ಲಿ ಬಹಳ ಮಹತ್ವವಾಗಿದ್ದು, ಇದು ಅವರಲ್ಲಿನ ಧಾರ್ಮಿಕ ಆಚರಣೆಯೂ ಆಗಿತ್ತು. ಗಂಟಾ ಕಟ್ಟುವುದು ಎಂದರೆ ಸಂಗೀತ ವಾದ್ಯಗಳಾದ ತಬಲ ಹಾರ್ಮೋನಿಯಂ ಜೊತೆಯಲ್ಲಿ ವಿವಾಹ ಮಾಡುವುದು ಎಂದು ಒಂದರ್ಥದಲ್ಲಿ ಪಾತರದವರು ಎಂಬ ಪುಸ್ತಕದಲ್ಲಿ ಶೈಲಜಾ ಹಿರೇಮಠರವರು ಪ್ರಸ್ತಾಪಿಸಿದ್ದಾರೆ. ಒಂದು ಗೊತ್ತಾದ ಮೂಹೂರ್ತದಲ್ಲಿ ಗಂಟಾ ಕಟ್ಟಿಸಿ ಕೊಳ್ಳುವ ಹುಡುಗಿಗೆ ಸ್ನಾನ ಮಾಡಿಸಿ ಸೀರೆ ಉಡಿಸಿ ಮನೆಯಿಂದ ಬ್ಯಾಂಡುಬಾಜಿನಾಗಳೊಂದಿಗೆ ದೇವಸ್ಥಾನದವರೆಗೆ ಮೆರವಣಿಗೆ ಮೂಲಕ ಕರೆದುಕೊಂಡು ಬಂದು ಅಲ್ಲಿ ಪೂಜೆ ಮಾಡಿ ನಂತರ ನಡುಮನೆಯಲ್ಲಿ ತಬಲಾ ಮತ್ತು ಹಾರ್ಮೋನಿಯಂನ್ನು ಇಡುತ್ತಾರೆ. ತಬಲಾಕ್ಕೆ ಗಂಡಿನಂತೆ ರುಮಾಲು ಸುತ್ತಿ ಅಲಂಕಾರ ಮಾಡಿ ಅದರ ಪಕ್ಕದಲ್ಲಿ ಹುಡುಗಿಯನ್ನು ಕುಳ್ಳಿರಿಸುತ್ತಾರೆ. ಅಲ್ಲಿ ಸಂಗೀತ ಕಲಿಸುವ ಗುರುವಿನ ಮುಖಾಂತರ ಪಾತರದ ದೀಕ್ಷೆಯ ಪ್ರತಿಜ್ಞೆ ಮಾಡಿಸುತ್ತಿದ್ದರು. "ನಾನು ನಿನ್ನ ಗುರು, ನಾನು ನಿನಗೆ ಸಂಗೀತ ವಿದ್ಯೆಯನ್ನು ಮನಸಿಟ್ಟು ಕಲಿಸುತ್ತೇನೆ. ನನ್ನ ಮಾರ್ಗದರ್ಶನದಲ್ಲಿ ಎರಡು ವರ್ಷದ ಅವಧಿ ಮುಗಿಯುವವರೆಗೆ ಬ್ಯಾರೆ ಗುರು ಸ್ವೀಕರಿಸುವುದಿಲ್ಲ ಎಂದು ಪ್ರತಿಜ್ಞೆ ಮಾಡಿಸುತ್ತಾರೆ"*(ಶೈಲಜಾ ಹೀರೆಮಠ್:೧೯೯೯:೭೫).* ಅಲ್ಲಿ ಪಂಚರು, ಸುಬೇದಾರರು ಇತರರು ಇರುತ್ತಿದ್ದರು. ನಂತರ ಇವಳು ಎರಡು ವರ್ಷ ಅವರ ಬಳಿಯಲ್ಲೆ ಸಂಗೀತ ವಿದ್ಯೆಯನ್ನು ಕಲಿಯಬೇಕಾಗಿತ್ತು. ಅವರು ಇವಳ ಎಡಕೈಗೆ ಐದು ಏಳೆಯ ಬಂಗಾರದ ಚೈನಾವನ್ನು ಮೂರು ಗಂಟುಹಾಕಿ ಕಟ್ಟುತ್ತಾರೆ. ಗುರುಗಳಿಗೆ ಮತ್ತು ಅಲ್ಲಿ ಕುಳಿತಿರುವ ಎಲ್ಲ ಹಿರಿಯರಿಗೂ ನಮಸ್ಕಾರವನ್ನು ಮಾಡಿ ಒಂದು ತಟ್ಟೆಯಲ್ಲಿ ಹಣ್ಣು ಹಂಪಲದ ಜೊತೆಯಲ್ಲಿ ಗುರುದಕ್ಷಿಣೆಯಾಗಿ ಹಣವನ್ನು ಇಟ್ಟು ಗುರುವಿಗೆ ನೀಡುತ್ತಿದ್ದರು. ಗಂಟಾ ಕಟ್ಟಿಸಿಕೊಂಡಾಗ ಅವಳಿಗೆ ಸಂಗೀತದ ಯಾವ ಜ್ಞಾನವೂ ಗೊತ್ತಿರಲಿಲ್ಲ.

ಆದರೂ ನಿಯಮದ ಪ್ರಕಾರ ಅವಳನ್ನು ದೇವಲಾಯಕ್ಕೆ ಮತ್ತೆ ಮೆರವಣಿಗೆಯಲ್ಲಿ ಕರೆದ್ಯೊಯ್ಯುತ್ತಾರೆ. ಅಲ್ಲಿ ಅವಳು ನೃತ್ಯ ಮತ್ತು ಸಂಗೀತವನ್ನು ಮಾಡಬಹುದಾಗಿತ್ತು. ಈ ಗಂಡಾಕಟ್ಟು ದೀಕ್ಷೆಯ ಕುರಿತಾಗಿ ಪಾತರದವರು ಪುಸ್ತಕದಲ್ಲಿ ಅಲ್ಲಾ ಸಾನಿಯವರು ಹೇಳಿರುವ ಮಾಹಿತಿಯಾಗಿದೆ.

ಗಂಟಾ ಕಟ್ಟಿಸುವ ದೀಕ್ಷೆಯ ನಂತರ ಅವರು ನೃತ್ಯ ಮತ್ತು ಸಂಗೀತ ಸೇವೆಯನ್ನು ದೇವಾಲಯಗಳಲ್ಲಿ ಸಲ್ಲಿಸುತ್ತಿದ್ದರು. ಅಲ್ಲದೆ ಇವರು ಎಂಟು ಅಥವಾ ಒಂಭತ್ತು ವರ್ಷ ವಯಸ್ಸಿನಲ್ಲಿ ಪಾತರದ ಹೆಣ್ಣು ಮಕ್ಕಳಿಗೆ ಗಂಟಾ ಕಟ್ಟಿಸುತ್ತಿದ್ದರಿಂದ ಅವರು ಆ ವ್ಯವಸ್ಥೆಯ ಜೀವನವನ್ನು ಪಾಲಿಸುತ್ತಿದ್ದರು. ಉಳಿದ ಮಕ್ಕಳಂತೆ ಸಹಜ ಜೀವನದ ಅನುಭವಗಳು ದೊರೆಯುತ್ತಿರಲಿಲ್ಲ. ಆನೆಗಳನ್ನು ಪಳಗಿಸಿದಂತೆಯೇ ಏಳೆಯ ವಯಸ್ಸಿನಲ್ಲಿಯೇ ಪಾತರದ ಹೆಣ್ಣು ಮಕ್ಕಳನ್ನು ಸಂಗೀತ ನೃತ್ಯಗಳಲ್ಲಿ ಪಳಗಿಸುತ್ತಿದ್ದರು ಎನ್ನಬಹುದಾಗಿದೆ. ಇವರು ಸಂಗೀತ ಮತ್ತು ನೃತ್ಯಗಳನ್ನು ಕಲಿಯಲು ಯಾವ ಗ್ರಂಥಗಳ ಸಹಾಯ ಇರುತ್ತಿರಲಿಲ್ಲ. ಇದು ಇವರು ವಂಶ ಪಾರಂಪ'ರ್ಯದಿಂದ ಅನುಸರಿಸಿಕೊಂಡು ಬಂದಿರುವ ಒಂದು ಪದ್ಧತಿಯಾಗಿತ್ತು. 'ಪಾತ್ರ' ಎಂಬುವ ಶಬ್ದವೇ ನೃತ್ಯ ಎಂಬ ಅರ್ಥ ನೀಡುವ ಅಭಿನಯ ಪ್ರಧಾನವಾದುದು ಎಂಬುದನ್ನು ಸೂಚಿಸುತ್ತದೆ. ಇಂತಹದ್ದೇ ವಿಧಿ-ಆಚರಣೆಯ ಮೂಲಕ ಕಾಲಿಗೆ ಗೆಜ್ಜೆ ಕಟ್ಟುವ ಆಚರಣೆನ್ನು ಮಾಡುತ್ತಾರೆ. ಅದನ್ನು ಗೆಜ್ಜೆಪೂಜೆ ವಿಧಾನ ಎಂದು ಹೇಳಲಾಗುವುದು.

### ೩.೨ ದೇವದಾಸಿ ಪದ್ಧತಿ

ಪ್ರಾಚೀನ ಕಾಲದಿಂದಲೂ ದೇವದಾಸಿ ಪದ್ಧತಿಯು ಭಾರತ'ದಲ್ಲಿ ಇರುವುದನ್ನು ಗಮನಿಸಿರುವ ಅಂಶವಾಗಿದೆ. ಈ ಪದ್ಧತಿಯ ಬಗ್ಗೆ ಕೆಲವು ಪ್ರಾಚೀನ ಹೊಳವುಗಳನ್ನು ಕಂಡುಕೊಳ್ಳುವುದಕ್ಕಾಗಿ ಭಾರತವನ್ನು ಬಿಟ್ಟು ಬೇರೆ ನಾಗರೀಕತೆಗಳಲ್ಲಿ ಇದರ ಕುರಿತು ಇತಿಹಾಸವನ್ನು ನೋಡುವುದಾದರೆ ಪ್ರಪಂಚದಾದ್ಯಂತ ದೇವದಾಸಿ ಮತ್ತು ಅದೇ ಬಗೆಯ ಇತರ ಪದ್ಧತಿಗಳು ಕಂಡು ಬರುತ್ತದೆ.

ಬ್ಯಾಬಿಲೋನಿಯದಲ್ಲಿ ಧಾರ್ಮಿಕ ವೇಶ್ಯಾಗಾರಿಕೆ ಇತ್ತೆಂದು ಡಾ.ಜೋಗನ್ ಶಂಕರ್ ರವರು ತಿಳಿಸುತ್ತಾರೆ. "ಬ್ಯಾಬಿಲೋನಿಯಾದ ಎಲ್ಲ ಪ್ರದೇಶಗಳಲ್ಲಿ ದೇವಾಲಯಗಳು ಇದ್ದವು. ಲಾರ್ಸಾದಲ್ಲಿದ್ದ ಮಾರ್ಡೋಕ್ ದೇವಾಲಯ, ಎರೆಕ್‌ನಲ್ಲಿದ್ದ ಶಮಷ್, ಇರ್‌ನಲ್ಲಿದ್ದ ಇನ್ನಿತರ ಅಥವಾ ಮಾತೃದೇವತೆಗಳು ಇದ್ದವು. ಇವು ಆ ಪೈಕಿಯವು ತಮ್ಮ ಪಾತ್ರಕ್ಕನುಗುಣವಾಗಿ ಆ ಎಲ್ಲ ದೇವಾಲಯಗಳು ಅನೇಕ ಪವಿತ್ರ ಸೇವಕರನ್ನು ಪಡೆದಿದ್ದವು. ಸೇವಕರಲ್ಲಿ ಪುರುಷರು ಮತ್ತು ಮಹಿಳೆಯರೂ ಇದ್ದರು". (ಜೋಗನ್ ಶಂಕರ್:೧೯೯೩:೩೮). ದೇವಾಲಯಗಳಲ್ಲಿ ಎಂಟು ಮತ್ತು ನಟಿಟು ಎಂದು ಪುಜಾರಿಣಿಗಳಲ್ಲಿ ಎರಡು ವಿಧಗಳಿದ್ದವು. ಇವರಿಗೆ ಆಗ ತುಂಬ ಗೌರವ ಸ್ಥಾನ ಮಾನಗಳು ದೊರೆಯುತ್ತಿದ್ದವು. "ಬ್ಯಾಬಿಲೋನಿಯದಲ್ಲಿ ಕ್ರಿಪೂ. ೨೧೮೦ ರ ಕಾಲದಲ್ಲಿ ಶ್ರೀಮಂತರು ತಮ್ಮ ಪ್ರಧಾನ ಹೆಂಡತಿಯೊಂದಿಗೆ ಅನೇಕ ಕೆಳದರ್ಜೆಯ ಹೆಂಡತಿ, ಉಪಪತ್ನಿ ಮತ್ತು ವೇಶ್ಯಯರನ್ನು ಹೊಂದೊರುತ್ತಿದ್ದರು. ದೇವರು ಬೇಕಾದರೆ ಯಾವುದೇ ವ್ಯಕ್ತಿಯ ಎಂಟು (ಪ್ರದಾನ ಪತ್ನಿ) ಅಥವಾ ನಟಿಟು (ಉಪಪತ್ನಿ, ವೇಶ್ಯಯರು) ರನ್ನು ಪಡೆದು ತನ್ನ

ಸೇವೆಯಲ್ಲಿರಿಸಿಕೊಳ್ಳಬಹುದೆಂಬ ನಂಜಿಕೆಯಿತ್ತು." *(ಜೋಗನ್ ಶಂಕರ್:೧೯೯೩:೩೯)* ಹಾಗೆಯೇ ಸಿರಿಯಾ, ಪೋನೇಷಿಯ ಮತ್ತು ಕನಾನ್‌ಗಳಲ್ಲಿ ಮಾತೃದೇವತೆ ಮತ್ತು ಧಾರ್ಮಿಕ ವೇಶ್ಯಾಗಾರಿಕೆ ಪದ್ಧತಿ ಇರುವುದನ್ನು ಕಾಣಲಾಗುವುದು. "ಸಿರಿಯಾದಲ್ಲಿ ಅಟ್ಟರ್ ಅಥವಾ ಅತ್ತರ್ ಎಂದು ಮುಖ್ಯ ಮಾತೃದೇವತೆಯನ್ನು ಕರೆಯುತ್ತಾರೆ. ಲೆಬನಾನ್‌ನ ಪವಿತ್ರ ನಗರ ಹೈರಾಪೋಲಿಸ್ (ಆಧುನಿಕ ಮಂಬಿಜ)ನಲ್ಲಿ ಅತರಗಟಿಸ್ ಎಂಬ ಹೆಸರಿನಿಂದ ಆಕೆಯನ್ನು ಗುರುತಿಸುತ್ತಾರೆ" (ಜೋಗನ್‌ಶಂಕರ್:೧೯೯೩:೪೩). ಪುರಾತನ ಸಾಕ್ಷ್ಯಾಧಾರವನ್ನು ಉಲ್ಲೇಖಿಸಿ ಟಾವ್ನಿ ಮತ್ತು ಪೆಂಜರ್ ರವರು ವ್ಯಾಖ್ಯಾನಿಸಿರುವ ಕುರಿತಾಗಿ ಜೋಗನ್‌ಶಂಕರ್‌ರವರು ತಿಳಿಸಿದ್ದಾರೆ. ಹೈರಾಪೋಲಿಸ್‌ನಲ್ಲಿ ಪೂಜೆ ಮಾಡುವ ಧಾರ್ಮಿಕ ಪದ್ಧತಿಯಲ್ಲಿ ಹೆಣ್ಣು ಮಕ್ಕಳು ತಮ್ಮನ್ನು ತಾವು ಅಳವಡಿಸಿಕೊಂಡಿರುವ ಕುರಿತು ಬರೆದ ಕೃತಿಗಳಲ್ಲಿ ಒಂದಾದ ಡೇಡಿ ಸಿರಿಯಾದಿಂದ ಕ್ರಿ.ಶ. ಹದಿನಾಲ್ಕನೇಯ ಶತಮಾನದಲ್ಲಿದ್ದ ಹಿಟಿಟ್ ಅಧಿಪತ್ಯವು ತುತ್ತ ತುದಿಯಲ್ಲಿದ್ದಾಗ, ಅಲ್ಲಿನ ಧಾರ್ಮಿಕ ಪದ್ಧತಿ ಲುಸಿಯನ್ ವಿವರಿಸುವ ಹಾಗೆಯೇ ಬಹುಪಾಲು ಇತ್ತು ಎಂದು ಏಷ್ಯ ಮೈನರ್ ಮತ್ತು ಉತ್ತರ ಸಿರಿಯಾದಲ್ಲಿ ನಾಣ್ಯಗಳ ಸಂಶೋಧನೆಯಲ್ಲಿ ಇತ್ತೀಚಿಗೆ ಕಂಡುಕೊಂಡ ಪ್ರಧಾನ ಅಂಶವಾಗಿದೆ. "ಜೋಡಿಯಾದ ಗಂಡು ಹೆಣ್ಣು ಒಂದು ವೃಷಣ ದೇವರು ಮತ್ತು ಒಂದು ಸಿಂಹ ದೇವತೆಯನ್ನು ಹಿಟ್ಟೈಟನ್ನರು ಪೂಜಿಸುತ್ತಿದ್ದರು. ಮುಂದೆ ಅದೇ ಪ್ರಬಲವಾಗಿ ಫಲವತ್ತತೆಯ ಪ್ರತೀಕವಾಗಿ ಮತ್ತು ಪೋನೆಷೀಯಲ್ಲಿ ಮನುಷ್ಯರ ಹುಟ್ಟುವಿಕೆಯ ಅಧಿದೇವತೆಯಾಗಿ ಮಾತೃದೇವತೆಯಾಗಿ ಪ್ರಮುಖವಾಯಿತು. ಬದಲಾವಣೆ ಆಗುತ್ತಿರುವ ಸಂದರ್ಭಗಳಿಗನುಗುಣವಾಗಿ ಮತ್ತು ಸಮುದಾಯದ ತಕ್ಷಣದ ಬೇಡಿಕೆ ಪೂರೈಸಲು ಪೂರ್ವದಲ್ಲಿ ಧರ್ಮವನ್ನು ತಾನೇ ಅಳವಡಿಸಿಕೊಂಡರು" (ಜೋಗನ್ ಶಂಕರ್:೧೯೯೩:೪೪). ಹೀಗೆ ಸಂದರ್ಭಗಳಿಗೆ ಅನುಗುಣವಾಗಿ ಮತ್ತು ಜನ ಸಾಮಾನ್ಯರಿಗೆ ದೇವತೆಯ ಉದ್ರೇಕಗೊಳ್ಳುವ ಮುಖವನಷ್ಟೇ ಅಭಿವೃದ್ಧಿ ಪಡಿಸುವಲ್ಲಿ ಹೆಚ್ಚಿನ ಒಲವು ತೋರಿಸಿತು. "ಅದೋನಿಯನ್ನು ಕಳೆದುಕೊಂಡ ದೇವತೆಗಳ ಶೋಕಾಚರಣೆಯ ನಂತರ ಅಲ್ಲಿಯ ಜನರೆಲ್ಲ ಕೇಶ ಮುಂಡನ ಮಾಡಿಕೊಳ್ಳಬೇಕಿತ್ತು, ಅದಕ್ಕೆ ತಿರಸ್ಕರಿಸಿದ ಹೆಣ್ಣು ಮಕ್ಕಳು ಆ ದೇವಾಲಯದಲ್ಲಿ ಇಡೀ ದಿವಸ ಎಲ್ಲರಿಗೂ ಆಕರ್ಷಿತವಾಗಬೇಕಾಗಿತ್ತು. ಅಪರಿಚಿತರು ಮಾತ್ರ ಹೆಂಗಸರನ್ನು ಬಾಡಿಗೆಗೆ ತೆಗೆದುಕೊಳ್ಳಲು ಅವಕಾಶವಿತ್ತೆಂದು ನಮಗೆ ತಿಳಿದು ಬರುತ್ತದೆ. ಶಾಶ್ವತ ಹಾಗೂ ತಾತ್ಕಲಿಕ ಧಾರ್ಮಿಕ ವೇಶ್ಯಾಗಾರಿಕೆಯ ವ್ಯವಸ್ಥೆಯು ದೇವಸ್ಥಾನಗಳಲ್ಲಿ ಅಸ್ತಿತ್ವದಲ್ಲಿತ್ತು ಎಂಬುದನ್ನು ಈ ಸಾಕ್ಷ್ಯಾಧಾರಗಳು ಸಾಬೀತು ಮಾಡುತ್ತವೆ" (ಜೋಗನ್ ಶಂಕರ್:೧೯೯೩:೪೪). ಹಿನ್ನೆಲೆಯಲ್ಲಿ ಹೆಣ್ಣು ಮಕ್ಕಳನ್ನು ದೇವಾಲಯಗಳಿಗೆ ಅರ್ಪಿಸುವ ಮೂಲಕ ಲೈಂಗಿಕವಾಗಿ ಬಳಸುವರು. ಇದನ್ನು ದೇವರು ಧರ್ಮದ ಹೆಸರನ್ನು ಹಚ್ಚಿ ಧಾರ್ಮಿಕ ವೇಶ್ಯಾಗಾರಿಕೆ ಎಂದು ಕರೆದಿದ್ದರೆ. "ಪೊನೆಷೀಯಾದ ಶಿಲಾಶಾಸನಗಳು ಸಿಸಿಲಿಯ ಎರಿಕ್ಸ್ ಎಂಬಲ್ಲಿ ಆಷ್ಟಾರ್ಟ್ ಎಂಬ ಒಂದು ದೇವಾಲಯದ ಬಗ್ಗೆ ಸಾಕ್ಷ್ಯಾಧಾರವನ್ನು ಒದಗಿಸುತ್ತವೆ. ಅಷ್ಟಾರ್ಟ್, ತನಿತ್ ಈ ಹೆಸರುಗಳಿಂದ ಮಾತೃದೇವತೆಯು ಉತ್ತರ ಆಫ್ರಿಕಾದ

ಕರಾವಳಿ ಉದ್ದಕ್ಕೂ ಬಹಳ ಜನಪ್ರಿಯಳಾಗಿದ್ದಳು ಅರೇಬಿಯಾದಲ್ಲಿ ಆಯ್ ಲಚ್ ಅಥವಾ ಅಯ್ ಉಜ್ಜಾ ಮಾತೃದೇವತೆಯ ಪ್ರಜೆಯೊಂದಿಗೆ ತಾತ್ಕಾಲಿಕ ಧಾರ್ಮಿಕ ವೇಶ್ಯಾಗಾರಿಕೆಯು ರೂಢಿಯಲ್ಲಿತ್ತು" (ಜೋಗನ್ ಶಂಕರ್:೧೯೯೩:೪೫). ಪಶ್ಚಿಮ ಆಫ್ರೀಕದಲ್ಲಿಯೂ ಸಹ ಈ ಪದ್ಧತಿ ಇರುವುದನ್ನು ಕಾಣಲಾಗುತ್ತದೆ. ಇಲ್ಲಿ ಗಂಡು ಅಥವಾ ಹೆಣ್ಣುಗಳನ್ನು ಒಂದು ದೇವರಿಗೆ ಅರ್ಪಿಸಲ್ಪಟ್ಟರೆ ಅವರನ್ನು 'ಕೋಸಿಯಾ' ಎಂದು ಕರೆಯುತ್ತಾರೆ. ಹಾಗೆಯೇ ಅಂತವರು ದೇವರಿಗೆ ಹೆಂಡತಿಯಾಗುತ್ತಾರೆ. ಕೋಸಿಯಗಳ ಪ್ರಮುಖ ಕೆಲಸವೆಂದರೆ ವೇಶ್ಯಾಗಾರಿಕೆಯನ್ನು ನಡೆಸುವಂತದ್ದಾಗಿದೆ. ಇವರನ್ನು ಯಾರು ನಿಂದಿಸುವುದಿಲ್ಲ. ಏಕೆಂದರೆ ಅವರು ದೇವರನ್ನು ವಿವಾಹ ಮಾಡಿಕೊಂಡವರು ಎಂದು ಪರಿಭಾವಿಸುತ್ತಾರೆ. ಅಲ್ಲದೆ ಅವರ ಲೈಂಗಿಕ ಸಂಬಂಧಗಳು ದೇವಸ್ಥಾನದ ಪೂಜಾರಿಗಳಿಗೆ ಮೀಸಲಾಗಿದ್ದರೆ, ಇದರಿಂದ ಅವರಿಗೆ ಹುಟ್ಟಿರುವ ಮಕ್ಕಳನ್ನು ಮತ್ತೆ ದೇವರಿಗೆ ಸೇರುವವರಾಗಿರುತ್ತಾರೆ ಎಂದು ದೇವದಾಸಿ ಸಂಪ್ರದಾಯ ಪುಸ್ತಕದಲ್ಲಿ ಜೋಗನ್‌ಶಂಕರ್‌ರವರು ತಿಳಿಸಿದ್ದಾರೆ. ಹೀಗೆ ಪ್ರಪಂಚದಾದ್ಯಂತ ದೇವತೆಗಳ ಹೆಸರಿನಲ್ಲಿ ಹೆಣ್ಣು ಮಕ್ಕಳನ್ನು ಲೈಂಗಿಕವಾಗಿ ಬಳಸಿರುವುದನ್ನು ಕಾಣಲಾಗುತ್ತದೆ. ಅಲ್ಲದೆ ಅದಕ್ಕೆ ಧಾರ್ಮಿಕ ವೇಶ್ಯಾವಾಟಿಕೆ ಎಂದು ಕರೆದಿದ್ದಾರೆ. ಅಂದರೆ ಧರ್ಮದ ಹೆಸರಿಟ್ಟ ಕಾರಣಕ್ಕೆ ಹೆಂಗಸರನ್ನು ಈ ರೀತಿಯಲ್ಲಿ ಲೈಂಗಿಕವಾಗಿ ಬಳಸುವುದು ಸರಿಯೋ ತಪ್ಪೋ? ಎಂಬ ಪ್ರಶ್ನೆ ಕಾಡುತ್ತದೆ. ಆದರೂ ಸಹ ಪ್ರಾಚೀನ ಕಾಲದಿಂದ ಇಂದಿನವರೆಗೂ ಈ ಪದ್ಧತಿಗಳು ಸಾಗುತ್ತಲೇ ಬಂದಿವೆ.

**ಭಾರತದಲ್ಲಿ ದೇವದಾಸಿ ಪದ್ಧತಿ**

ಪ್ರಪಂಚದಲ್ಲಿ ಬೇರೆ ಬೇರೆ ನಾಗರಿಕತೆಗಳಲ್ಲಿ ದೇವದಾಸಿ ಪದ್ಧತಿ ಇರುವಂತೆ ಭಾರತದಲ್ಲೂ ದ್ರಾವಿಡರ ಮಾತೃಪ್ರಧಾನ ಕುಟುಂಬದಿಂದ ಬಂದಿದೆ. ಈ ಪದ್ಧತಿಯು ಅಂದು ಜನರ ಸಾಮಾಜಿಕ ಹಾಗೂ ಧಾರ್ಮಿಕ ಜೀವನದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿತ್ತು. ಈ ದೇವದಾಸಿ ಪದ್ದತಿಯಾ ಗೌರವ ಆದರಗಳು ಪೂಜ್ಯನಿಯಾ ಭಾವನೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿವೆ. ನಂತರದಲ್ಲಿ ಆರ್ಯರಿಂದ ಅದು ರೂಪಾಂತರ ಹೊಂದಿದ್ದನ್ನು ಗಮನಿಸಬಹುದಾಗಿದೆ. ಮಹೆಂಜೋದಾರೋದಲ್ಲಿ ಸಿಕ್ಕಿರುವ ಸ್ತ್ರೀಯ ಪ್ರತಿಮೆಯಲ್ಲಿ ನರ್ತಕಿಯ ಲಕ್ಷಣವನ್ನು ಗುರುತಿಸಲಾಗಿದೆ. ಈ ನರ್ತಕಿಯು ನಗ್ನಳಾಗಿದ್ದು ಕೈ ತುಂಬ ಬಳೆಗಳನ್ನು ಧರಿಸಿ ಕುತ್ತಿಗೆಯಲ್ಲಿ ಮಣಿಯ ಸರವನ್ನು ಧರಿಸಿದ್ದಾಳೆ. ತಲೆಯ ಕೂದಲು ಸಡಿಲವಾಗಿ ಇಳಿಬಿಟ್ಟಿದ್ದು ಕಣ್ಣು ಮುಚ್ಚಿಕೊಂಡು ನಾಟ್ಯವಾಡುತ್ತಿರುವ ನರ್ತಕಿಯಲ್ಲಿ ಭಕ್ತಿಭಾವ ಕಂಡು ಬರುತ್ತದೆ. ಈ ನಗ್ನ ನರ್ತಕಿಯು ದೇವದಾಸಿಯೇ ಹೌದೆಂದು ಇತಿಹಾಸ ಸಂಶೋಧಕರು ನಿರ್ಧರಿಸಿದ್ದಾರೆ.

"ಹರಪ್ಪ ಮತ್ತು ಮಹೆಂಜೋದಾರೋ ನಿವೇಶನಗಳ ಆಳವಾದ ಅಧ್ಯಯನಗಳಲ್ಲಿ ನಿರತರಾಗಿರುವ ಪ್ರಾಕ್ತಾನ ಶಾಸ್ತ್ರಜ್ಞರು ಮತ್ತು ಇತಿಹಾಸಕಾರರು ಮೆಡಿಟರೇನಿಯನ್ ಪ್ರದೇಶದ ಮತ್ತು ಮಧ್ಯ ಪ್ರಾಚ್ಯ ಪ್ರದೇಶಗಳ ಬೇಸಾಯ ಪ್ರಧಾನ ನಾಗರಿಕತೆಗಳು ಆಚರಿಸುತ್ತಿದ್ದ ಧರ್ಮಗಳು ಫಲವತ್ತತೆಯ ಆಚರಣೆಗಳು

ಮತ್ತು ಮಾತೃ ದೇವತೆಯ ಉಪಾಸನೆಯ ಮೇಲೆ ಒತ್ತನ್ನು ನೀಡಿವೆ. ಸಿಂಧೂ ನಾಗರಿಕತೆಯ ಹರಪ್ಪ ಮತ್ತು ಮಹೆಂಜೋದಾರೋ ಸುತ್ತ ಮುತ್ತಲಿನ ಅನೇಕ ಪ್ರತಿಮೆಗಳು ಮತ್ತು ಚಿತ್ರಗಳನ್ನ ಸಂಗ್ರಹಿಸಲಾಗಿದೆ. ಆ ಪೈಕಿ ಉತ್ತರದ ಯೋಜ್‌ದಲ್ಲಿ ಲಿಂಗ ಮುದ್ರೆಗಳೂ ದೊರೆಕಿವೆ. ಮಾತೃ ದೇವತೆ ಉಪಾಸನೆಯು ಪ್ರಾಚೀನ ಸಂಸ್ಕೃತಿಯಲ್ಲಿ ಅಸ್ತಿತ್ವದಲ್ಲಿತ್ತು. ಆದರೆ ಸಿಂಧೂ ಬಯಲಿನ ನಾಗರಿಕತೆಯಲ್ಲಿ ಮಾತೃದೇವತೆಗಳ ಉಪಾಸನೆಯು ವೃಷಭರೂಪಗಳೊಂದಿಗೆ ಸಂಬಂಧ ಹೊಂದಿದೆ. ಅಲ್ಲಿ ವೃಷಭ ಚಿತ್ರಗಳು ದೊರಕುತ್ತವೆ. ಹರಪ್ಪ ಮೆಹಂಜೋದಾರೋ ನಿವೇಶನಗಳ ಬಳಿಯ ಯೋಜ್ ಪ್ರದೇಶದ ರಣ ಗಾಂಧಾರಿ ಮತ್ತು ಕುಳ್ಳಿಯ ಮಡಿಕೆಯಲ್ಲಿ ಮುಖ್ಯ ಆಶಯವಾಗಿ ವೃಷಭ' ಸ್ವರೂಪ ಚಿತ್ರಿಸಿರುವುದನ್ನು ಕಾಣಬಹುದು" *(ಕೊತ್ತಮ್ಮ:೨೦೦೮:೬೪-೬೫).* ಹೀಗೆ ಸಿಂಧೂ ನಾಗರಿಕತೆಯಲ್ಲಿ ಮಾತೃದೇವತೆಯ ಆರಾಧನೆಯ ಹಿನ್ನೆಲೆಯು ಇರುವುದು ಕಂಡು ಬರುತ್ತದೆ.

'ಸುಮೇರಿಯಾ ಬ್ಯಾಬಿಲೋನಿಯಾ, ಸಿರಿಯಾ ನಾಗರಿಕತೆಗಳಲ್ಲಿ ಹೇಗೋ ಹಾಗೆ ಹರಪ್ಪ ನಾಗರಿಕತೆಗಳಲ್ಲಿಯೂ ದೇವತೆಗಳ ಸೇವೆಗೆಂದು ದೇವದಾಸಿಯನ್ನು ನೇಮಿಸುತ್ತಿದ್ದರಂತೆ. ಆಗ ಅವರನ್ನು ಅಪ್ಸರೆಯರು ಎನ್ನುತ್ತಿದ್ದರಂತೆ. ತಂದೆಯಾರೆಂದು ಖಚಿತವಾಗಿ ತಿಳಿಯದಾದಾಗ ಆ ಅಪ್ಸರೆಯರ ಸಂತಾನವನ್ನು 'ಕುಂಭ ಸಂಭವ'ರೆನ್ನುತ್ತಿದ್ದರಂತೆ ಕೊಸಂಬಿಯವರ ಈ ವಿವರಣೆಯ ಪ್ರಕಾರ ಮಹೆಂಜೋದಾರೋ ಅಗೆತದಲ್ಲಿ ಹೊರ ಬಿದ್ದಿದ್ದು ಕೇವಲ ಸ್ನಾನ ಪಾನಾದಿಗಳಿಗಾಗಿ ಉದ್ದೇಶಿಸಿದ್ದ ತಟಾಕವಲ್ಲ. ಅದು ಧಾರ್ಮಿಕವಾದ ಪುಷ್ಕರಣಿ. ಅದರ ಅಂಚಿನಲ್ಲಿರುವ ಕೋಣೆಗಳು ಅಪ್ಸರೆಯರ ಶಯ್ಯ ಮಂದಿರಗಳು ಅಗಸ್ತ್ಯ ಮತ್ತು ವಸಿಷ್ಟರ ಜನ್ಮಸ್ಥಾನಗಳು ಎಂದು ಕೋಸಾಂಬಿಯವರು ಇವುಗಳನ್ನು ಸೂಚಿಸಿದ್ದಾರೆ" (ವೆಂಕಟೇಶ್ವರ ರಾವ್:೧೯೮೬:೧೯). ಇವರ ವಿಚಾರವನ್ನು ಕುರಿತು ಗಮನಿಸಿದಾಗ ಬಹಳ ಹಿಂದಿನಿಂದಲೂ ದೇವದಾಸಿ ಪದ್ಧತಿ ಹುಟ್ಟಿಕೊಂಡಿತ್ತು. ಆದರೆ ಅವರನ್ನು ಬೇರೆ ಬೇರೆ ಹೆಸರುಗಳಿಂದು ಕರೆಯುತ್ತಿದ್ದರು. ನಂತರ ದಿನಗಳಲ್ಲಿ ಬದಲಾದ ರೂಪಗಳಲ್ಲಿ ಇದನ್ನು ಕಾಣಬಹುದು. ನಾಗರಿಕತೆಗಳ ಕಾಲದಲ್ಲಿ ಅವರನ್ನು ಅಪ್ಸರೆಯರು ಎಂದು ಕರೆದರೆ ನಂತರ ಕಾಲದಲ್ಲಿ ಅವರನ್ನು ನರ್ತಕಿ, ದೇವಾಲಯದ ಕನ್ಯೆ, ಗಣಿಕಾ ಸ್ತ್ರೀ, ದೇವಾಲಯದ ಸೂಳೆ ಎಂಬೆಲ್ಲ ಹೆಸರುಗಳಿಂದ ಕರೆದಿರುವುದನ್ನು ಗಮನಿಸಬಹುದು. ಒಟ್ಟಾರೆಯಾಗಿ ಹರಪ್ಪ ಮೆಹೆಂಜೋದಾರೋ ನಾಗರಿಕತೆಗಳ ಅವಶೇಷಗಳಿಂದ ಅಪ್ಸರೆಯರು ಬೆಳಕಿಗೆ ಬಂದರು ಎಂದು ಹೇಳಲಾಗುವುದು.

ಸಿಂಧೂ ಬಯಲಿನ ನಾಗರಿಕತೆಯ ಅನೇಕ ಸ್ಥಳಗಳಲ್ಲಿ ಮಣ್ಣಿನಿಂದ ಮಾಡಿದ ಮಹಿಳೆಯರ ಫಲಕಗಳು ಅತಿ ಹೆಚ್ಚಿನ ಪ್ರಮಾಣದಲ್ಲಿ ಸಿಕ್ಕಿರುವುದು ಕಂಡು ಬರುತ್ತದೆ. ಈ ಬಗೆಯ ಮಾತೃದೇವತೆಯ ಮೂರ್ತಿ ಪ್ರತಿಯೊಂದು ಕುಟುಂಬದಲ್ಲೂ ಇತ್ತು ಎಂದು ಭಾವಿಸಲಾಗಿದೆ. ಈ ಪ್ರದೇಶದಲ್ಲಿ ಇದನ್ನು ಪರಿಷ್ಕರಿಸಿದಾಗ ಇತರ ವಿಶೇಷಗಳನ್ನು ಗಮನಿಸಿದಾಗ ಈ ನಾಗರಿಕತೆಯನ್ನು ಕಟ್ಟಿದ ಜನರು ದ್ರಾವಿಡರೆಂದು ತಿಳಿದು ಬರುತ್ತದೆ.

ದೇಶದಾದ್ಯಂತ ವ್ಯಾಪಕವಾಗಿ ಹರಡಿದ್ದ ದ್ರಾವಿಡ ಸಮುದಾಯವು ಸಿಂಧೂ ನಾಗರೀಕತೆ ಮತ್ತು ಸಂಸ್ಕೃತಿಯ ನಿರ್ಮಾಪಕರು. ಹಾಗೂ ಇನ್ನೂ ಬೇರೆ ಬೇರೆ ಜನ ಸಮುದಾಯಗಳಿದ್ದರೂ ಅದರಲ್ಲಿ ದ್ರಾವಿಡರದೇ ಪ್ರಧಾನ ಗುಂಪಾಗಿತ್ತು. ಅನಂತರ ಆರ್ಯರು ದನಕರುಗಳನ್ನು ಮೇಯಿಸುತ್ತಾ ರಥ ಮತ್ತು ಕಬ್ಬಿಣದ ಅಸ್ತ್ರಗಳಿಂದ ಕುದುರೆಗಳಿಂದ ಸುಸ್ಸಿಜ್ಜಿತರಾಗಿ ಕ್ರಿ.ಶ. ೧೫೦೦ ರ ವೇಳೆಗೆ ಭಾರತಕ್ಕೆ ಬಂದರು. ಇವರು ಯುರೋಪ್ ಮತ್ತು ಏಷ್ಯಾದಲ್ಲಿರುವ ಆರ್ಯರ ಭಾಷೆ ಮತ್ತು ಪುರಾಣಗಳಲ್ಲಿ ಕಂಡು ಬರುವ ಅನೇಕ ಸಾಮ್ಯಗಳಿಂದಾಗಿ ಇವರು ಇದೇ ಮೂಲದವರೆನ್ನಬಹುದು. ಇಲ್ಲಿನ ಆರ್ಯರು ಗುಂಪು ಗುಂಪುಗಳಾಗಿ ಚದುರಿ ವಲಸೆ ಬರಲು ಕಾರಣವೆಂದರೆ ಬಹುತೇಕ ಪ್ರಕೃತಿ ವಿಕೋಪವೇ ಇರಬೇಕೆಂದು ಎಲ್ಲಾ ಧರ್ಮಗ್ರಂಥಗಳು ಸಾಕಷ್ಟು ಪುರಾವೆಗಳನ್ನು ಒದಗಿಸುತ್ತದೆ. ಹೀಗಾಗಿ ಇವರು ಪ್ರಧಾನವಾಗಿ ಅಲೆಮಾರಿಗಳು. ತಮಗೂ ತಮ್ಮ ಪರಿವಾರದವರಿಗೂ ಹಾಗೂ ತಮ್ಮ ದನಕರಗಳಿಗೂ ಆಹಾರ ನೀರನ್ನು ಅರಸುತ್ತಾ ಗುಂಪಾಗಿ ಅಥವಾ ಪಂಗಡದ ರೂಪದಲ್ಲಿ ಭಾರತಕ್ಕೆ ಬಂದರು.

ಇತಿಹಾಸಕಾರರ ಪ್ರಕಾರ ಆರ್ಯರು ಭಾರತಕ್ಕೆ ಬರುವ ಮೊದಲೇ ಇಲ್ಲಿನ ಆದಿವಾಸಿಗಳು ಉತ್ಪಾದನಾ ವಿಧಾನದಲ್ಲಿ ಅವರಿಗಿಂತಲೂ ಮುಂದುವರೆದ ಅವರಿಗೆ ಸಾಕಷ್ಟು ಕಠಿಣ ಹೋರಾಟವನ್ನು ಕೊಟ್ಟಿರಬಹುದಾದ ಕೊನೆಗೆ ಅವರಲ್ಲಿ ಸೋತರು ದ್ರಾವಿಡರು. ಇತಿಹಾಸಕಾರರಿಂದ ತಿಳಿದು ಬರುವಂತೆ ಹಳ್ಳಿಯ ಜೀವನಕ್ಕೆ ಹೊಂದಿಕೊಂಡಿರುವ ಇವರು ದನಕರುಗಳು, ಕಬ್ಬಿಣದ ಬಳಕೆ ಹಾಗೂ ಕುದುರೆಗಳನ್ನು ಪಳಗಿಸುವುದರಲ್ಲಿ ದ್ರಾವಿಡರಿಗಿಂತ ಆರ್ಯರು ಸುಧಾರಿತರಾಗಿದ್ದರು. ದ್ರಾವಿಡರಿಗಿಂತ ಸಾಮರ್ಥ್ಯ ಹಾಗೂ ಕೌಶಲ್ಯಗಳಲ್ಲಿ ನೈಪುಣ್ಯತೆಯನ್ನು ಹೊಂದಿದ್ದರಿಂದ ಭಾರತವನ್ನು ಜಯಿಸಲು ಇವರಿಗೆ ಕಾರಣವಾಯಿತೆಂದು ತೋರುತ್ತದೆ. ಇವರಲ್ಲಿ ಕೆಲವರು ನಿರ್ನಾಮವಾದರು ಇನ್ನು ಕೆಲವರು ಕಾಡು ಮೇಡುಗಳನ್ನು ಸೇರಿದರು. ಅಳಿದುಳಿದವರು ಅವರ ಸೆರೆಯಾಳುಗಳಾಗಿದ್ದರು. ಈ ಸೆರೆಯಾಳುಗಳನ್ನು ಸ್ವತಂತ್ರರಾಗಿ ಕ್ಷಮಾಧಾನ ಮಾಡಿ ಜೀವಿಸಲು ಬಿಡುವಷ್ಟು ಕರುಣಾಳುಗಳು ಆರ್ಯರು ಆಗಿರಲಿಲ್ಲ. ಆ ಕಾಲಕ್ಕಾಗಲೇ 'ಗುಲಾಮಗಿರಿ' ಪದ್ಧತಿಯ ಲಾಭವನ್ನು ತಿಳಿದುಕೊಂಡಿದ್ದರಿಂದ ಯುದ್ಧ ಸಂಬಂಧಿಗಳನ್ನು ಕೊಲ್ಲುವುದರ ಬದಲು ಅವರನ್ನು ಗುಲಾಮರಾಗಿ ಪರಿವರ್ತಿಸುವುದು ಹೆಚ್ಚು ಪ್ರಯೋಜನಕರ ಎಂದು ಭಾವಿಸಿ ಸೋತ ದ್ರಾವಿಡರನ್ನು ದೇವದಾಸಿಯರನ್ನಾಗಿ ಮಾಡಿಕೊಂಡು ತಮ್ಮಗಳ ಸೇವೆಗೆ ಇಟ್ಟುಕೊಂಡರು.

ಆರ್ಯರು ವ್ಯಕ್ತಿಗಳ ವೈಯಕ್ತಿಕ ಜೀವನಕ್ಕೆ ಆಶ್ರಮದ ಹಂತಗಳು, ಸಾಮಾಜಿಕ ಜೀವನಕ್ಕೆ ವೃತ್ತಿ ಆಧಾರಿತ ವರ್ಣಗಳ ವಿಂಗಡನೆ ಮತ್ತು ಸಾಮಾಜಿಕ ಸಂಘಟನೆಗಳ ಪ್ರಭಾವ ಮೊದಲಾದವುಗಳಿಂದ ಕೀಳು ಸ್ಥಾನಕೊಟ್ಟು ಅವರನ್ನು ವರ್ಗ ವ್ಯವಸ್ಥೆಯ ತಳಹದಿ ಹಂತಕ್ಕೆ ಸೇರಿಸಿ ಅಂಧಕಾರದ ಸಂಪ್ರದಾಯಗಳಿಂದ ಕೂಡಿದ ಜಾತಿಪದ್ಧತಿ ಎಂಬ ವಿಷ ಬೀಜ ಬಿತ್ತಲು ಪ್ರಾರಂಭಿಸಿದರು. ಜೊತೆಗೆ ಆರ್ಯರು ತಾವು ಶ್ರೇಷ್ಠರು ಎಂದು ತಾವೇ ಘೋಷಣೆ ಮಾಡಿಕೊಳ್ಳುತ್ತ ಸೆರೆಯಾದ ದ್ರಾವಿಡರನ್ನು ತಮ್ಮ ಸೇವೆಗೆ ಇರಿಸಿಕೊಳ್ಳುವ ಮತ್ತು ತಮ್ಮ ವಿಕೃತ ಬೇಡಿಕೆಗಳನ್ನು ಅವರಿಂದ ಪೂರೈಸಿಕೊಳ್ಳುವ

ನೆಪದಲ್ಲಿ ಧರ್ಮ ದೇವರನ್ನು ಬಳಸಿ ಇವರು ಹುಟ್ಟಿರುವುದು ಆರ್ಯರ ಸೇವೆಗೋಸ್ಕರ ಎಂಬ ಭಾವನೆ ಬೆಳೆಸಿದರು. ತಮ್ಮ ಅದಿಪತ್ಯವನ್ನು ಪ್ರಬಲವಾಗಿ ಸ್ಥಾಪನೆ ಮಾಡುವ ಕುತಂತ್ರ ನಯವಂಚಕತನದಿಂದ ಮಾತೃಪ್ರಧಾನದಂತಹ ಮೌಲ್ಯಗಳ ಹಾಗೂ ಆಚರಣೆಗಳ ವಿನಾಶಕ್ಕೆ ಕಾರಣವಾಗಿ ಲಿಂಗವ್ಯವಸ್ಥೆಯಲ್ಲಿ ಅಗಾಧ ಅಂತರವನ್ನು ಸೃಷ್ಟಿಸಿ ಸಮಾಜದಲ್ಲಿ ಅಸಮಾನತೆ, ಅನ್ಯಾಯ ಅಧರ್ಮ, ತಾಂಡವವಾಡಲು ಅವಕಾಶ ಮಾಡಿಕೊಟ್ಟರು. ಈ ನಿಟ್ಟಿನಲ್ಲಿ ದ್ರಾವಿಡರ ಮಾತೃದೇವತೆಗಳ ಸ್ಥಾನದಲ್ಲಿ ಆರ್ಯರು ತಮ್ಮ ಪಿತೃಪ್ರಧಾನ ತತ್ವ ಆಧರಿತ ಪುರುಷ ದೇವತೆಗಳು ತಂದು ನೆಲೆಸಿದರು. ಈ ನೆಲೆಯಲ್ಲಿ ತಮ್ಮ ಪುರುಷ ದೇವರುಗಳ ಹೆಂಡತಿಯರಾಗಿ ಸ್ತ್ರೀ ದೇವತೆಗಳನ್ನು ಸ್ವೀಕರಿಸಿ ಗ್ರಾಮಗಳಲ್ಲಿದ್ದ ಸ್ತ್ರೀ ದೇವತೆಗಳ ಬದಲಾಗಿ ಆರ್ಯರ ಪ್ರಾಭಲ್ಯದಿಂದಾಗಿ ಸ್ತ್ರೀ ಗ್ರಾಮದೇವತೆಗಳ ಸ್ಥಾನಮಾನದಲ್ಲಿ ಹಲವು ವ್ಯತ್ಯಾಸಗಳಾಗಿ ಆರ್ಯರ ಶಿಷ್ಟಗೊಂಡ ಪುರುಷದೇವತೆಗಳು ಆಚರಣೆಗೆ ಬಂದು ಅವರ ಹೆಂಡತಿಯರಾಗಿಯೇ ಸ್ತ್ರೀದೇವತೆಗಳು ಮಾರ್ಪಟ್ಟವು. ಹೀಗೆ ಮಾತೃ ಪ್ರಧಾನ ವ್ಯವಸ್ಥೆಯಲ್ಲಿನ ಸಮಾಜವನ್ನು ಪಿತೃಪ್ರಾಧಾನ ವ್ಯವಸ್ಥೆಯಾಗಿ ಆರ್ಯರು ಮಾರ್ಪಡಿಸಿದರು.

"ದ್ರಾವಿಡರ ಕಾಲದಲ್ಲಿದ್ದ ಸ್ತ್ರೀ ಪೂಜಾರಿಣಿಯರು ಪುರುಷ ವ್ಯವಸ್ಥೆಯ ಮಧ್ಯವರ್ತಿಗಳಾಗಿ ಕೆಲಸ ನಿರ್ವಸುವಂತಾಗಿ ಧಾರ್ಮಿಕ ಸಂಸ್ಥೆಗಳು ಪುರುಷರಿಂದಲೇ ರೂಪುಗೊಂಡು ಪುರುಷ ಪರವಾಗಿಯೇ ಇರುವ ಸಂಸ್ಥೆಗಳಾಗಿ ಈ ವ್ಯವಸ್ಥೆಯಲ್ಲಿ ಪುರೋಹಿತನು ಪ್ರಬಲನಾಗುತ್ತಾನೆ. 'ದ್ರಾವಿಡ' ಅಂದರೆ ತಳ ಸಮುದಾಯದ ಪೂಜಾರಿಣಿಯರು ಪುರುಷ ಪ್ರಧಾನ ವ್ಯವಸ್ಥೆಗೆ ಲೈಂಗಿಕ ಭೋಗವನ್ನು ಕಲ್ಪಿಸುವ ಮಧ್ಯವರ್ತಿಯಾಗುತ್ತಾಳೆ. ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಪುರುಷ ನಿಷ್ಠ ಮೌಲ್ಯಗಳನ್ನು ಪೋಷಿಸುವವಳಾಗುತ್ತಾರೆ. ಹೀಗೆ ಮಹಿಳಾ ಪೂಜಾರಿಗಳು ತಮ್ಮ ವೃತ್ತಿಯಿಂದ ಕುಟುಂಬದಲ್ಲಿ ಸಮಾಜದಲ್ಲಿ ಉಪಭೋಗದ ನೆಲೆಯಲ್ಲಿ ಬಳಸಲ್ಪಡುತ್ತಾಳೆ. ದ್ರಾವಿಡ ಸಂಸ್ಕೃತಿಯನ್ನು ಅನಾಗರಿಕತೆ ನೆಲೆಗಟ್ಟಿನಲ್ಲಿ ನಿರ್ವಚಿಸಲಾಗಿದೆ. ಇವರ ಮೂಲ ಮಾತೃ ಪ್ರಧಾನ ಸಮಾಜವನ್ನು ಅಸಂಸ್ಕೃತವಾಗಿ ಪರಿಗಣಿಸಲ್ಪಟ್ಟು ಮಾತೃ ಮೂಲದಿಂದ ಬಂದಿದ್ದ ಬಸವಿ, ಜೋಗತಿ, ಪಾತ್ರದವರನ್ನು ಗೌರವ, ಶುದ್ಧತೆ, ಸ್ವತಂತ್ರ್ಯತೆಯಿಂದ ಇದ್ದವರನ್ನು ಈಗ ನಿಕೃಷ್ಟವಾಗಿ ಕಾಣಲಾಯಿತು. ಇವರನ್ನು ಅನಾಗರಿಕರು ಅಸಂಸ್ಕೃತರೆಂದು ಗುರುತಿಸಿ ಪಿತೃ ಮೂಲ ಕುಟುಂಬದವರನ್ನು ಸುಸಂಸ್ಕೃತ ನಾಗರಿಕರಾಗಿ ಪರಿಗಣಿಸುವ ವ್ಯವಸ್ಥೆ ಜಾರಿಗೊಳಿಸಿದರು" *(ಕೊತ್ತಮ್ಮ:೨೦೦೮:೬೯).* ಹೀಗೆ ಮೇಲ್ನೋಟದಲ್ಲಿ ಸ್ತ್ರೀ ಪ್ರಾಮುಖ್ಯತೆಯನ್ನು ಅಧಿಕಾರವನ್ನು ಹೇಳುವ ಅನೇಕ ಆಚರಣೆಗಳು ನಂಬಿಕೆಗಳು ಆಳದಲ್ಲಿ ಪುರುಷಶಾಹಿ ಧೋರಣೆಯನ್ನು ಪೋಷಿಸುತ್ತವೆ. ದ್ರಾವಿಡ ಸಂಸ್ಕೃತಿಯಲ್ಲಿ ಕಂಡು ಬರುತಿದ್ದ ಸ್ತ್ರೀ ಪುರುಷ ಸಮಾನತೆಯನ್ನು ಗೌರವಿಸುತ್ತಿದ್ದ ಅನೇಕ ಮೌಲ್ಯಗಳು ಕಾಣದಾದವು. ಇದೇ ಸಂದರ್ಭದಲ್ಲಿ ವೇದ ಧರ್ಮವು ಬೆಳೆದು ತನ್ನ ಪ್ರಾಬಲ್ಯವನ್ನು ಪಡೆದು ಇಡೀ ಭಾರತದಲ್ಲಿ ಈ ಧರ್ಮದ ಪ್ರಭಾವ ಹರಡಲಾರಂಭಿಸಿತು. ಈ ಕಾಲದಲ್ಲಿ ಆಚರಣೆಗಳು ಪರಸ್ಪರ ನಡೆದು ತಾರತಮ್ಯ ಭಾವನೆ ಬಿಗಿಗೊಳ್ಳುತ್ತದೆ. ಸ್ತ್ರೀಯರನ್ನು ಕುರಿತು ಇಲ್ಲಿಯವರೆಗೂ ವ್ಯಕ್ತವಾಗಿದ್ದ ಶುದ್ಧ ಅಶುದ್ಧ ಎಂಬ ಭಾವನೆಗಳು ಮೂಡಿ ಬಂದು ಸ್ತ್ರೀಯರು ತಮ್ಮ ಜೀವನದ ಹಲವು ಹಂತಗಳಲ್ಲಿ ಅಶುದ್ಧ ಎಂದು ಗುರುತಿಸಲಾಯಿತು. ಇದರ ಪರಿಣಾಮವಾಗಿ ಧಾರ್ಮಿಕ

ಕ್ಷೇತ್ರದಲ್ಲಿ ಸ್ತ್ರೀಯರ ಭಾಗವಹಿಸುವಿಕೆ ಕ್ರಮೇಣ ಕಡಿಮೆಯಾಗತೊಡಗಿತು. ಜೊತೆಗೆ ಧರ್ಮದ ಹೆಸರಿನಲ್ಲಿ ಸ್ತ್ರೀಯನ್ನು ಬೆತ್ತಲೆಗೊಳಿಸುವ ಅಮಾನವೀಯ ವ್ಯವಸ್ಥೆ ರೂಪುಗೊಳ್ಳ ತೊಡಗಿತು. ದೇವದಾಸಿಯರ ಪಾಡು ಹೀನವಾಗುತ್ತಾ ಹೋಗುವ ಕ್ರಮವಿದಾಯಿತು. ಹೀಗಾಗಿ ಮಾನವ ಮತ್ತು ಅವರ ದೇವತೆಗಳ ನಡುವಣ ಸಂಬಂಧಗಳಲ್ಲಿ ಮಾತ್ರವೇ ದೇವದಾಸಿಯರ ಹುಟ್ಟನ್ನು ಹುಡುಕುವುದು ಸಾರ್ಥಕವಾದ ಮಾರ್ಗವಲ್ಲ ಎಂಬುದನ್ನು ಇದು ಸ್ಪಷ್ಟಪಡಿಸುತ್ತದೆ. ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿದವರಲ್ಲಿಯೆ ಹೆಚ್ಚಾಗಿ ಇವು ಪ್ರಕಟಗೊಂಡವು ಉನ್ನತ ವರ್ಣದವರು ಏಕೆ ತಮ್ಮ ತಮ್ಮ ದೇವತೆಗಳ ಜೊತೆಗೆ ದೇವದಾಸಿಯರ ರೂಪದಲ್ಲಿ ಸಂಬಂಧಗಳನ್ನು ಸೃಷ್ಟಿಸಿಕೊಳ್ಳಲಿಲ್ಲ? ಮತ್ತು ಹಿಂದುಳಿದವರು ನಡೆಸುತ್ತಿದ್ದ ಸಾಂಸ್ಕೃತಿಕ ಆಚರಣೆಗಳನ್ನು ಅವರು ಏಕೆ ರೂಪಿಸಿಕೊಳ್ಳಲಿಲ್ಲ? ಎಂಬ ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ. ಇವುಗಳಿಗೆ ಉತ್ತರ ಹುಡುಕಿದಾಗ ಯಾವ ದೇವದಾಸಿಯರು ಕೂಡ ಸಾಂಸ್ಕೃತಿಕ ಪ್ರೇರಣೆ ಹೊಂದಿ ತಮ್ಮ ಸ್ವಂತ ಇಚ್ಛೆಯಿಂದ ಆ ದಾರಿ ಹಿಡಿದವರಲ್ಲ. ಅಂದರೆ ಆ ಹಾದಿಗೆ ನೂಕಲ್ಪಟ್ಟವರು ಆಗಿದ್ದಾರೆ. ಇತರರನ್ನು ದೇವರ ಸೇವಕಿಯನ್ನಾಗಿ ಬಲವಂತವಾಗಿ ಪ್ರತಿಬಿಂಬಿಸುವುದು ಆ ಮೂಲಕ ಅವರನ್ನು ತಮಗೆ ಸೇವಕಿಯನ್ನಾಗಿ ಮಾರ್ಪಡಿಸಿಕೊಂಡರು.

"ಆರ್ಯ ನಾಗರಿಕತೆಯಲ್ಲಿ ದೇವಾಲಯ ನರ್ತಕಿಯರು ಇದ್ದದಕ್ಕೆ ನಮಗೆ ತೀರ ಕಡಿಮೆ ಆಧಾರಗಳು ದೊರೆಯುತ್ತವೆ. ಆದರೂ ಋಗ್ ವೇದದಲ್ಲಿ ಸಾಮಾನ್ಯ ವೇಶ್ಯಾಗಾರಿಕೆಯ ಬಗ್ಗೆ ಕೆಲವು ಸೂಚನೆಗಳಿವೆ. 'ವಾರಾಂಗನೆ' ಸೇವಕಿಯ ಮಗ, ಮದುವೆಯಾಗದ ಹುಡುಗಿಯ ಮಗ ಎಂಬ ಅರ್ಥದ ಪದಗಳನ್ನು ಕಾಣುತ್ತೇವೆ" *(ಜೋಗನ್ ಶಂಕರ್:೧೯೯೩:೫೨).* ಪ್ರಾರಂಭದ ಸಾಹಿತ್ಯಗಳಲ್ಲಿ ಸಾಮಾನ್ಯ ವೇಶ್ಯಾಗಾರಿಕೆ ನರ್ತಕಿಯರು ಮತ್ತು ವಾರಾಂಗನೆಯ ಬಗ್ಗೆ ಹೆಚ್ಚಾಗಿ ಉಲ್ಲೇಖಗಳು ದೊರೆಯುತ್ತವೆ. ಆದರೆ ದೇವಾಲಯದ ನರ್ತಕಿಯರು ಮತ್ತು ಪವಿತ್ರ ವೇಶ್ಯಗಾರಿಕೆ ಬಗ್ಗೆ ಉಲ್ಲೇಖಗಳು ದೊರೆಯುವುದಿಲ್ಲ. "ಬಹುಶಃ ಕ್ರಿ.ಶ. ಆರನೇಯ ಶತಮಾನದಲ್ಲಿ ದೇವಾಲಯಗಳಿಗೆ ಹುಡುಗಿಯರನ್ನು ಅರ್ಪಿಸುವ ರೂಢಿ ಮತ್ತು ಧಾರ್ಮಿಕ ವೇಶ್ಯಾಗಾರಿಕೆ ಸಾಮಾನ್ಯವಾಗಿತ್ತು. ಆ ಕಾಲದಲ್ಲಿ ರಚಿತವಾದ ಅನೇಕ ಪುರಾಣಗಳು ಈ ವಿಷಯವನ್ನು ಕುರಿತು ಅನೇಕ ಮಾಹಿತಿಗಳನ್ನು ನೀಡುತ್ತವೆ. ದೇವಾಲಯಗಳಲ್ಲಿ ಪೂಜೆ ಮಾಡುವ ಸಮಯದಲ್ಲಿ ಹಾಡುವ ಹುಡುಗಿಯರ ಸೇವೆ ಪಡೆಯಲು ಮಾಡಬೇಕಾದ ಅನೇಕ ಸಿದ್ಧತೆಗಳನ್ನು ಪುರಾಣಗಳು ಶಿಫಾರಸ್ಸು ಮಾಡುತ್ತವೆ. ಸುಂದರ ಹುಡುಗಿಯರನ್ನು ಕೊಂಡು ಕೊಂಡು ಅವರನ್ನು ದೇವಾಲಯಗಳಿಗೆ ಅರ್ಪಿಸಬೇಕೆಂತಲೂ ಅವು ಶಿಫಾರಸ್ಸು ಮಾಡುತ್ತವೆ" (ಜೋಗನ್ ಶಂಕರ್:೧೯೯೩:೫೫-೫೬). ಹೀಗೆ ಆರನೇ ಶತಮಾನಗಳಲ್ಲಿ ಸಿಕ್ಕಿರುವ ಉಲ್ಲೇಖಗಳಾದರೆ ಇದರ ಕುರಿತಾಗಿ ಹನ್ನೆರಡನೆಯ ಶತಮಾನದ ನಂತರ ಅನೇಕ ಐತಿಹಾಸಿಕ ಆಧಾರಗಳು ದೊರೆಯುವುದನ್ನು ಗಮನಿಸಬಹುದು.



## ಉತ್ತರ ಭಾರತದಲ್ಲಿ ದೇವದಾಸಿ ಪದ್ಧತಿ

ಶಾಸನಗಳು, ಪುರಾಣಗಳು ಮತ್ತು ಮಹಾಕಾವ್ಯಗಳ ಪ್ರಾಚೀನ ಗ್ರಂಥಗಳ ಮೂಲಗಳು ಉತ್ತರ ಭಾರತದಲ್ಲಿ ದೇವದಾಸಿ ಸಂಪ್ರದಾಯ ಆಚರಣೆಯಲ್ಲಿದ್ದುದ್ದನ್ನು ತಿಳಿಸುತ್ತವೆ. ದೇವದಾಸಿ ಪದ್ಧತಿಯ

ಪ್ರಾಚೀನತೆಯನ್ನು ಕುರಿತು ನೋಡುವುದಾದರೆ ಕೌಟಿಲ್ಯನ 'ಅರ್ಥಶಾಸ್ತ್ರ' ದಲ್ಲಿ ಗಣಿಕೆಯರ ಹೆಸರು ವಿಸ್ತಾರವಾಗಿ ಕಂಡು ಬರುತ್ತದೆ. ಆದರೆ ದೇವದಾಸಿ ಎಂಬ ಪದವೂ ಬಳಕೆಯಾಗಿಲ್ಲ. ಆರನೇ ಶತಮಾನದ ನಂತರ ಶಾಸನಗಳಲ್ಲಿ ಮತ್ತು ಸಾಹಿತ್ಯದಲ್ಲಿ ಇದರ ಅಸ್ತಿತ್ವವನ್ನು ಕಾಣಬಹುದಾಗಿದೆ. ಉತ್ತರ ಭಾರತದಲ್ಲಿ ವ್ಯಾಪಾರದ ಹೆದ್ದಾರಿಗಳು ಪಟ್ಟಣ ನಗರಗಳು ಅಸ್ತಿತ್ವಕ್ಕೆ ಬಂದು, ಸ್ತ್ರೀಯರು ಪ್ರವಾಸಿಗರನ್ನು ಆಕರ್ಷಿಸಲು  ವೇಶ್ಯಾವಾಟಿಕೆಯಲ್ಲಿ ತೊಡಗುತ್ತಿದ್ದರು. ಗಣಿಕೆಯರು ರಾಜರಿಗೆ ತಮ್ಮ ವೃತ್ತಿಗೆ ಅನುಗುಣವಾಗಿ ತೆರಿಗೆಗಳನ್ನು ಕೊಡುತ್ತಿದ್ದರು. ಆರನೇ ಶತಮಾನದಲ್ಲಿ ಮುಲ್ತಾನ ಎಂಬಲ್ಲಿ ಸೂರ್ಯ ದೇವಾಲಯದದಲ್ಲಿ ಗಾಯಕಿಯರನ್ನು ಕಂಡಿರುವುದಾಗಿ ಹುಯ್ಯನ್‌ತ್ಸಾಂಗ್ ಹೇಳುತ್ತಾನೆ. ರಾಜತರಂಗಿಣಿಯಲ್ಲಿ ಕಾಶ್ಮೀರದಲ್ಲಿ ಕ್ರಿ.ಶ. ೭ನೇ ಶತಮಾನದಲ್ಲಿ ಈ ಸಂಪ್ರದಾಯವಿದ್ದುದಾಗಿ ತಿಳಿದು ಬರುತ್ತದೆ. ಗುಜರಾತಿನ ಬಹುಪ್ರಸಿದ್ಧವಾಗಿದ್ದ ಸೋಮನಾಥ ದೇವಾಲಯಲ್ಲಿ ೫೦೦ ನರ್ತಕಿಯರಿದ್ದರೆಂದು ತಿಳಿದು ಬರುತ್ತದೆ.

ಅಕ್ಬರನ ಆಡಳಿತ ಕಾಲದಲ್ಲಿ (೧೫೫೬–೧೬೦೫) ಪವಿತ್ರ ವೇಶ್ಯೆಯರ ಮತ್ತು ಸಾಮಾನ್ಯ ವೇಶ್ಯೆಯರ ಪರಿಸ್ಥಿತಿ ಹೇಗಿತ್ತು ಎಂಬುದನ್ನು ಅಬ್ದುಲ್–ಫಜಲ್ ತನ್ನ ಪ್ರಸಿದ್ಧ ಕೃತಿಯಾದ ಐನ್_ಐ–ಅಕ್ಬರಿಯಲ್ಲಿ ಹೀಗೆ ಹೇಳಿದ್ದಾರೆ. "ರಾಜ್ಯದಲ್ಲಿ ವೇಶ್ಯೆಯರು ಸೈತಾನ್‌ಪುರದಲ್ಲಿ (ದೆವ್ವದ ವಾಸಸ್ಥಳ) ಅವರಿಗೆ ಗೊತ್ತುಪಡಿಸಿದ ಪ್ರದೇಶದಲ್ಲಿ ಬೇರೆಯೆ ಆದ ಮನೆಗಳನ್ನು ಹೊಂದಿದ್ದರೂ (ಎಣಿಕೆಗೂ ಸಿಗದಷ್ಟು ಬಹುದೊಡ್ಡ ಪ್ರಮಾಣದಲ್ಲಿ ಅವರನ್ನು ಸಂಗ್ರಹಿಸಲಾಗಿತ್ತು). ಒಬ್ಬ ದರೋಷಾ ಎಂಬ ಮೇಲ್ವಿಚಾರಕ (ಪೋಲಿಸ್ ಅಧಿಕಾರಿ) ಮತ್ತು ಒಬ್ಬ ಗುಮಾಸ್ತೆಯನ್ನು ಅವರಿಗಾಗಿ ನೇಮಿಸಲಾಗಿತ್ತು. ಅವರು ವೇಶ್ಯೆಯರಿಗಾಗಿ ಬಂದವರ ಹೆಸರುಗಳನ್ನೂ ಮತ್ತು ಮನೆಗಳಿಗೆ ಕರೆದುಕೊಂಡು ಹೋಗುತ್ತಿದ್ದವರ ಹೆಸರುಗಳನ್ನು ನೋಂದಾಹಿಸಿಕೊಳ್ಳುತ್ತಿದ್ದರು. ಸುಂಕದ ಅಧಿಕಾರಿಗಳಿಗೆ ತಿಳಿಸಿ ಜನರು ಈ ಸಂಬಂಧದಲ್ಲಿ ತೊಡಗಬಹುದಿತ್ತು. ಆದರೆ ಅನುಮತಿಯಿಲ್ಲದೆ ನೃತ್ಯದ ಹುಡುಗಿಯರನ್ನು ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಲು ಅವಕಾಶವಿರಲಿಲ್ಲ" *(ಜೋಗನ್ ಶಂಕರ್:೧೯೯೩:೫೬–೫೭).* ಎಂದು ಹೇಳಿದ್ದಾರೆ. ಮತ್ತು ಅಕ್ಬರನ ಆಸ್ಥಾನದಲ್ಲಿದ್ದ ಪ್ರಸಿದ್ಧ ಸಂಗೀತಗಾರ ತಾನ್‌ಸೇನ್ ಅವರು ನೃತ್ಯ ಮಾಡುವ ಹುಡುಗಿಯರ ಪೋಷಕನಾಗಿದ್ದರ ಕುರಿತಾಗಿ ತಿಳಿಸುತ್ತಾನೆ. ಅಕ್ಬರನ ಕಾಲದಲ್ಲಿ "ಕ್ರೊಶ್ ಎಂಬುವವನು ಉತ್ತರ ಭಾರತದ ಬುಡಕಟ್ಟು ಸಮುದಾಯವನ್ನು ಪಟ್ಟಿಮಾಡುವಾಗ ನೃತ್ಯ, ಗಾಯಿನ ಹಾಗೂ ವೇಶ್ಯಾ ವೃತ್ತಿಗಳಲ್ಲಿ ಮಗ್ನರಾಗಿದ್ದ 'ತವೈಫ್' ಹಾಗೂ ಪಾತರದವರನ್ನು ಗುರುತಿಸಿದ್ದಾನೆ"(ಪ್ರಸನ್ನ ಕುಮಾರ್:೨೦೧೪:೭೨). ಹೀಗೆ ಅಕ್ಬರನ ಆಡಳಿತ ಕಾಲದಲ್ಲಿ ಪವಿತ್ರ ಮತ್ತು ಸಾಮಾನ್ಯ ವೇಶ್ಯಗಾರಿಕೆಯು ನಡೆಯುತ್ತಿರುವ ಮತ್ತು ಅದನ್ನು ಪೋಷಿಸುವ ರೀತಿಯು ಆ ಕಾಲದಲ್ಲಿದ್ದ ದೇವದಾಸಿಯರ ಪೋಷಣೆ ಮತ್ತು ಪದ್ಧತಿಯ ಕುರಿತಾಗಿ ಈ ಗ್ರಂಥವು ತಿಳಿಸುತ್ತದೆ.

ಜಹಂಗೀರ್ ಚಕ್ರವರ್ತಿ (ಕ್ರಿ.ಶ ೧೬೦೫–೧೬೨೭) ಮತ್ತು ಷಹಜಹಾನ್ (ಕ್ರಿ.ಶ ೧೬೨೮–೧೬೫೮) ಕಾಲದಲ್ಲಿ ವೈಭದ, ಆಡಂಬರ ದುಂದುವೆಚ್ಚ ಮತ್ತು ಭ್ರಷ್ಟತೆಗಳು ಹೆಚ್ಚಿದ್ದವು. ಔರಂಗಜೇಬ್‌ನು ದೇಶದ ಸಂಪನ್ಮೂಲಗಳನ್ನು ನಿಧಾನವಾಗಿ ಕರಗಿಸುತ್ತಿದ್ದ ಅನೇಕ ದುಂದು ವೆಚ್ಚವನ್ನು ತಡೆಹಿಡಿಯಲು

ಪ್ರಯತ್ನಗಳನ್ನು ಮಾಡುತ್ತಾನೆ. ಔರಂಗಜೇಬನ "ಆಡಳಿತ ಕಾಲದಲ್ಲಿ ಸಾವಿರಾರು ಹಿಂದೂ ದೇವಾಲಯಗಳನ್ನು ನಾಶಪಡಿಸಲಾಯಿತಲ್ಲದೆ. ಅವುಗಳೊಂದಿಗೆ ಸಂಬಂಧ ಹೊಂದಿದ್ದ ವೇಶ್ಯೆಯರನ್ನೂ ಮತ್ತು ಅವರಿಗೆ ಸಂಬಂಧಿಸಿದ ಎಲ್ಲವನ್ನು ನಾಶ ಮಾಡಲು ಪ್ರಯತ್ನ ಮಾಡಿದನು. ಹಾಡುವುದು ಮತ್ತು ನೃತ್ಯ ಮಾಡುವುದರ ವಿರುದ್ಧ ಅವನು ಆಜ್ಞೆಗಳನ್ನು ಜಾರಿ ಮಾಡಿದ. ಅದೇ ಹೊತ್ತಿನಲ್ಲಿ ಎಲ್ಲಾ ನೃತ್ಯದ ಹುಡುಗಿಯರಿಗೆ ಮದುವೆ ಮಾಡಿಕೊಳ್ಳಲು ಆಜ್ಞೆ ಮಾಡಿದ. ಒಪ್ಪದಿದ್ದವರನ್ನು ತನ್ನ ರಾಜ್ಯದಿಂದ ಹೊರಗೆ ಹಾಕಿದ" *(ಜೋಗನ್ ಶಂಕರ್:೧೯೯೩:೫೭).* ಆ ಕಾಲಕ್ಕಾಗಲೆ ಈ ಪದ್ಧತಿಯನ್ನು ವಿರೋಧಿಸಿ ಔರಂಗಜೇಬನು ಧ್ವನಿ ಎತ್ತಿ, ಈ ನಿಟ್ಟಿನಲ್ಲಿ ಅದರ ನಿರ್ಮೂಲನೆಯ ಕಾರ್ಯಗಳನ್ನು ಮಾಡತೊಡಗಿದ್ದ. ಆದರೆ ಅದು ಅಲ್ಲಿಗೆ ನಾಶವಾಗದೆಯೇ ಮತ್ತೆ ಚಿಗುರೊಡೆದಿದೆ ಎಂದು ಹೇಳಲಾಗುವುದು.

"ಔರಂಗಜೇಬನ ಸಾವಿನ ನಂತರ ಬ್ರಿಟಿಷರ ಕಾಲದವರೆಗೂ ಅರಾಜಕತೆಯ ಕಾಲ ಮುಂದುವರೆಯಿತು. ರಾಜಕುಮಾರ ಮತ್ತು ಸಾರ್ವಜನಿಕ ವ್ಯಕ್ತಿಗಳ ನೈತಿಕ ಮಟ್ಟ ಅತ್ಯಂತ ಕೆಳ'ಹಂತವನ್ನು ತಲುಪಿ ಆಕಾಲವು ಹೃದಯಹೀನವಾಗಿತ್ತು. ಅವರ ಭಾವ ಸಂಬಂಧಗಳು ಅವರ ಆಡಳಿತವನ್ನು ಪ್ರವೇಶಿಸಿ ಅನಂತರ ಸಾಮಾನ್ಯ ಜನರನ್ನು ತಲುಪಿದವು. ಇದರ ಪರಿಣಾಮ ವೇಶ್ಯಾಗಾರಿಕೆ ದೊಡ್ಡ ಪ್ರಮಾಣಗಳಲ್ಲಿ ವ್ಯಾಪಿಸಿತು" *(ಜೋಗನ್ ಶಂಕರ್:೧೯೯೩:೫೭).* ಇದರಿಂದಾಗಿ ಪಾಶ್ಚ್ಯಾತರ ಆಕ್ರಮಣವಾಗಿ ನೃತ್ಯ ಮಾಡುವ ಸಾಮಾನ್ಯ ವೇಶ್ಯೆಯರಾದರು. ಅವರನ್ನು ಮದುವೆ ಸಂದರ್ಭದಲ್ಲಿ ಇಲ್ಲವೆ ಖಾಸಗಿ ಮನರಂಜನೆಗಾಗಿ ನೃತ್ಯ ಮಾಡಲು ಕರೆಸುತ್ತಿದ್ದರು. ಇದು ಭಾರತದ ಬಹು ಹಿಂದಿನಿಂದಲೂ ಇದ್ದ ನೃತ್ಯ ಮಾಡುವುದು ಮತ್ತು ವೇಶ್ಯ ವೃತ್ತಿ ಮಾಡುವುದರ ಮುಂದುವರೆಯುವಿಕೆಗೆ ಕಾರಣವಾಯಿತ್ತೆಂದು ಹೇಳಲಾಗಿದೆ.

"ಬಂಗಾಳದಲ್ಲಿ ಬೇಡಿಯರು ಮತ್ತು ನಟರು ಹೆಸರಿನ ಕೆಲವು ಅಲೆಮಾರಿ ಜನಾಂಗದವರಿದ್ದಾರೆ. ಅವರು ನೃತ್ಯಗಾರರು, ದೊಂಬರಾಟ ಮಾಡುವವರು ಮತ್ತು ವೇಶ್ಯೆಯರೂ ಆಗಿದ್ದಾರೆ. ಆದರೆ ಇವರು ದೇವಾಲಯದ ಪೂಜೆಯೊಂದಿಗೆ ಯಾವುದೇ ಸಂಬಂಧವನ್ನು ಹೊಂದಿಲ್ಲ" *(ಜೋಗನ್ ಶಂಕರ್:೧೯೯೩:೬೦).* ಹೀಗಾಗಿ ಉತ್ತರ ಭಾರತದಲ್ಲಿ ನೃತ್ಯದ ಸಮರ್ಪಣಾ ಸಂಸ್ಥೆಗಳು ತೀರ ಅಪರೂಪದಲ್ಲಿ ಕಾಣಬರುತ್ತವೆ. ಮಹಮದ್ದೀನ್ ಆಡಳಿತ ದೇವಸ್ಥಾನದ ಆಡಳಿತ ಮತ್ತು ಪವಿತ್ರ ಸಂಕೀರ್ಣಗಳನ್ನು ಆಗಿಂದಾಗ್ಗೆ ಲೂಟಿ ಮಾಡಿ ಈ ವ್ಯವಸ್ಥೆಯನ್ನು ಅಲುಗಾಡಿಸಿದೇ ಇದಕ್ಕೆ ಕಾರಣವಾಗಿದೆ. ಹಿಂದೂ ಪದ್ಧತಿಗಳನ್ನು ಮತ್ತು ಇತರೆ ಸಂಪ್ರದಾಯದ ಆಚರಣೆಗಳನ್ನು ಔರಂಗಜೇಬನು ತಿರಸ್ಕಾರದಿಂದ ನೋಡಿದನು. ಹಾಗೆಯೇ ಅವುಗಳನ್ನು ನಿರ್ಮೂಲನೆಯ ನಿಟ್ಟಿನಲ್ಲಿ ಮಾಡಿರುವ ಪ್ರಯತ್ನವು ಸ್ವಲ್ಪಮಟ್ಟಿಗೆ ಯಶಸ್ಸು ಪಡೆದಿದೆ ಎಂದು ಹೇಳಲಾಗುವುದು.

**ಮಧ್ಯ ಭಾರತದಲ್ಲಿ ದೇವದಾಸಿ ಪದ್ಧತಿ**

ಮಧ್ಯ ಭಾರತದಲ್ಲಿ ದೇವಾಲಯದ ನರ್ತಕಿಯರ ಬಗ್ಗೆ ಚೀನಿ ಯಾತ್ರಿಕ 'ಚನ್-ಚು-ಕ್ವ' ಬರೆದಿರುವ ಕೃತಿ 'ಚು-ಫಾನ್ ಚಿ' ನಲ್ಲಿ ಸಿಗುವ ಉಲ್ಲೇಖಗಳೇ ಮೊದಲ ವರದಿಯಾಗಿವೆ. ಈ

ಕೃತಿಯ ೧೨ ನೇ ಮತ್ತು ೧೩ ನೇ ಶತಮಾನಗಳಲ್ಲಿ ಚೀನಾ ಮತ್ತು ಅರಬ್ ದೇಶಗಳೊಂದಿಗೆ ಭಾರತದ ವಾಣಿಜ್ಯ ವ್ಯವಹಾರವನ್ನು ಕುರಿತು ಹೇಳುತ್ತದೆ. "ಗುಜರಾತಿನ ನಾಲ್ಕು ಸಾವಿರ ಬೌದ್ಧ ದೇವಾಲಯಗಳ ಕಟ್ಟಡಗಳಲ್ಲಿ ೨೦೦೦೦ ಕ್ಕಿಂತಲೂ ಹೆಚ್ಚು ನರ್ತಕಿಯರು ವಾಸವಾಗಿದ್ದರು. ಅವರು ಹೂವನ್ನು ಅರ್ಪಿಸುವಾಗ ದಿನಕ್ಕೆ ಎರಡು ಬಾರಿ ಹಾಡುತ್ತಿದ್ದರು ಎಂದು ಕಾಂಬೋಡಿಯದಿಲ್ಲ ಈ ಬಗೆಯ ಪದ್ಧತಿ ಇರುವುದೆಂದು ತಿಳಿಸುತ್ತಾನೆ. ಅವರನ್ನು ಅನಾನ್ ಎನ್ನುತ್ತಾರೆ" *(ಪ್ರಸನ್ನಕುಮಾರ:೨೦೧೪:೭೩)* ಎಂದು ತಿಳಿಸಿದ್ದಾರೆ.

'ಭಾವನಿಗಳು' ಮತ್ತು 'ದೇವಲಿಯರ' ಎಂಬ ತಲೆ ಬರಹದ ಏಕೋಧ್ಯಾಯದ ಗ್ರಂಥವನ್ನು ಬೊಂಬಾಯಿಯ ಮಾನವ ಕುಲ ಸಂಬಂಧ ಶಾಸ್ತ್ರದ ಪರಿವೀಕ್ಷಣೆ ೧೯೦೯ ರ ಹೊತ್ತಿನಲ್ಲಿ ಸಿದ್ಧ ಪಡಿಸಿತು. "ಕೆಲವು ಪ್ರದೇಶಗಳ ಕೆಲವು ದೇವದಾಸಿಯರ ಸಮಾರಂಭಗಳ ಮತ್ತು ಜೀವನ ವಿಧಾನಗಳನ್ನು ಕುರಿತು ಈ ಗ್ರಂಥ ತಿಳೀಸುತ್ತದೆ. ಪುರುಷರನ್ನು 'ದೇವಲಿಗಳು' ಅಥವಾ ನಾಯಕಿರು' ಎಂದೂ ಮಹಿಳೆಯರನ್ನು ಭವಾನಿಗಳು ಅಥವಾ ನಾಯಕಿನ್‌ರು ಎಂದು ಕರೆದುಕೊಳ್ಳುವ ಒಂದು ಶೂದ್ರ ಜಾತಿ ಇದೆ" (ಜೋಗನ್ ಶಂಕರ್:೧೯೯೩:೬೧). ಸಾವಂತವಾಡಿ ಅಥವಾ ಮಾಳ ಪ್ರಮುಖರ ಹೆಣ್ಣು ಸೇವಕಿಯರ ಮೂಲದವರೆಂದು ಬಹಳಷ್ಟು ಜನ ಹೇಳಿಕೊಳ್ಳುತ್ತಾರೆ. ಅವರು ಸ್ಥಳೀಯ ದೇವರುಗಳಿಗೆ ಅರ್ಪಿಸಲ್ಪಟ್ಟವರು. ದೇವಾಲಯದ ದೇವರ ದೀಪದ ಎಣ್ಣೆಯನ್ನು ತಮ್ಮ ತಲೆಗಳ ಮೇಲೆ ಸುರಿದುಕೊಳ್ಳುವ ಮೂಲಕ ಮಾತ್ರವೇ ಶೂದ್ರ ಜಾತಿಯ ಹೆಣ್ಣು ಮಕ್ಕಳು ಭಾವಿನ್‌ಗಳಾಗುತ್ತಿದ್ದರು. ಭಾವಿನ್ ಆಗಿರುವ ಹೆಣ್ಣು ಮಕ್ಕಳು ಋತುಮತಿಯಾಗುತ್ತಿದ್ದ ಹಾಗೆ ಆಕೆ ಶೇಷ ಎಂಬ ಹೆಸರಿನಿಂದ ಮದುವೆಯಾಗುತ್ತಾಳೆ. ಮುಂದೆ ಅವಳು ದೇವಾಲಯಗಳ ಕರ್ತವ್ಯಗಳಲ್ಲಿ ಭಾಗಿಯಾಗಿ ಅವಳು ದೇವದಾಸಿಯಾಗಿರುವುದರಿಂದ ಮಾಮೂಲಿ ವೇಶ್ಯಾವೃತ್ತಿಗಿಂತ ಭಿನ್ನವಾದ ಬೆರಕೆಯ ವೇಶ್ಯ ವೃತ್ತಿಯನ್ನು ಆಚರಿಸುತ್ತಾಳೆ'.

"ಮಧ್ಯಭಾರತದ ಜಗನ್ನಾಥ ಪುರಿಯು ಪವಿತ್ರ ಯಾತ್ರಾಸ್ಥಳವಾಗಿದೆ. ಇಂದಿಗೂ ಈ ದೇವಸ್ಥಾನದಲ್ಲಿ ಬಹಳಷ್ಟು ದೇವದಾಸಿಯರು ಜೀವನ ಸಾಗಿಸುತ್ತಿದ್ದಾರೆ" *(ಚೆನ್ನಣ್ಣ ವಾಲಿಕಾರು:೨೦೦೦:೧೬೧).* ಇದು ದಕ್ಷಿಣಭಾರತ ಪೂರ್ವದಲ್ಲಿ ಪ್ರಸಿದ್ಧವಾದ ಸ್ಥಳವಾಗಿದೆ. ಬ್ರಿಟಿಷ್ ಕೊಲಂಬಿಯಾ ವಿಶ್ವವಿದ್ಯಾಲಯದ ಹಿರಿಯ ಪ್ರಾಧ್ಯಪಕರು ಇದನ್ನು ಕುರಿತು ವಿಶೇಷವಾದ ಅಧ್ಯಯನವನ್ನು ನಡೆಸಿದ್ದಾರೆ. ಆದರೆ ಈ ವ್ಯವಸ್ಥೆಯ ವಂಶವಾಹಿನಿಯ ಬಗ್ಗೆ ಅಧ್ಯಯನ ನಡೆಸಿಲ್ಲ. ಕೇವಲ ಅಲ್ಲಿನ ವ್ಯವಸ್ಥೆಯ ಬಗ್ಗೆ ಮಾತ್ರ ಮಾಡಿದ್ದಾರೆಂದು ಡಾ. ಜೋಗನ್ ಶಂಕರರವರು ತಮ್ಮ ದೇವದಾಸಿ ಸಂಪ್ರದಾಯ ಕೃತಿಯಲ್ಲಿ ತಿಳಿಸಿದ್ದಾರೆ. ಜಗನ್ನಾಥಪುರಿ "ಈ ಸ್ಥಳದಲ್ಲಿ ಕೀಳು ನಡತೆಯುಳ್ಳ ಅನೇಕ ಹೆಂಗಸರನ್ನು ದೇವರ ಮುಂದೆ ನರ್ತಿಸಲು ಮತ್ತು ಹಾಡಲು ನೇಮಿಸಿಕೊಂಡಿರುವುದು ಬಹಳ ದೃಢವಾದ ಸಂಗತಿ ಅವರು ದೇವಾಲಯದಲ್ಲಿ ವಾಸಿಸದೆ ಬೇರೆ ಕಡೆ ಮನೆಗಳಲ್ಲಿ ವಾಸಿಸುತ್ತಾರೆ. ಜಗನ್ನಾಥನನ್ನು ನೋಡಲು ಹೋಗುವ ವ್ಯಕ್ತಿಗಳು ಈ ಹೆಂಗಸರೊಂದಿಗೆ ಅನೈತಿಕವಾಗಿ ನಡೆದುಕೊಂಡಿದ್ದರೆ ಬಗ್ಗೆ ಸಂಶಯ ಹೊಂದಿರುತ್ತಾರೆ". *(ಜೋಗನ್ ಶಂಕರ್:೧೯೯೩:೬೩)* ಇಲ್ಲಿರುವ

ದೇವದಾಸಿಯರೊಂದಿಗೆ ಅಲ್ಲಿರುವ ಬ್ರಾಹ್ಮಣ ವರ್ಗವು ಅನೈತಿಕ ಸಂಬಂಧವನ್ನು ಹೊಂದಿದ್ದಾರೆ ಎಂದು ಕೂಡ ತಿಳಿಸಿದ್ದಾರೆ.

ಭಾರತದ ಮಧ್ಯ ಪ್ರದೇಶಗಳ ದೇವದಾಸಿ ಪದ್ಧತಿಯ ಸಾಹಿತ್ಯಕ್ಕೆ ಬ್ರಿಟಿಷ್ ಪಾದ್ರಿ ವಾರ್ಡ್ ನಂತರ ಬಹಳ ಕಡಿಮೆ ಸೇರ್ಪಡೆಯಾಗಿದೆ. ಅನಂತರ ಸುಮಾರು ಒಂದು ಶತಮಾನದ ನಂತರ ಮಧ್ಯ ಭಾರತದಲ್ಲಿ ಕಸ್ಬಿಗಳು ಎಂದು ಕರೆಯಲ್ಪಡಯತಿದ್ದ ದೇವದಾಸಿಯರ ಆಚರಣೆಗಳ ಕುರಿತಾಗಿ ಆರ್.ವಿ. ರಸಲ್ ವಿವರವಾದ ಮಾಹಿತಿ ನೀಡುತ್ತಾರೆ. ಕಸ್ಬ ಎಂಬ ಪದವು ಅರಾಬಿಕ್ ಮೂಲದ ಕಸಬ ಎಂಬುದರಿಂದ ಉತ್ಪತ್ತಿಯಾಗಿದ್ದು 'ವೃತ್ತಿ' ಎಂಬ ಅರ್ಥವನ್ನು ಹೊಂದಿದೆ. ಈ ಪದವು ವೃತ್ತಿಯನ್ನು ಹೇಳುತ್ತದೆಯೇ ಹೊರತು ಜಾತಿಯನ್ನು ಹೇಳುವುದಿಲ್ಲ. ಆದರೂ ಕೂಡ ಬಂಗಾಳ ಮತ್ತು ಒರಿಸ್ಸಾಗಳಲ್ಲಿ ಕಂಡುಬರುವ ರಸೆಲ್ ಕಸ್ಬಿ ಮಹಿಳೆಯರ ಆಚರಣೆಗಳು ಉಡುಗೆ ತೊಡುಗೆಗಳು ಮತ್ತು ನೃತ್ಯ ಇವುಗಳ ಕುರಿತಾಗಿ ವಿವರಣೆ ನೀಡುತ್ತಾನೆ.

**ದಕ್ಷಿಣಭಾರತದಲ್ಲಿ ದೇವದಾಸಿ ಪದ್ಧತಿ**

ದಕ್ಷಿಣಭಾರತದದಲ್ಲಿ ಧ್ವಂಸಗೊಳಿಸುವ ಹೊರಗಿನ ಆಕ್ರಮಣಕಾರದಿಂದ ತೊಂದರೆಗಳು ಅಗಿರುವುದು ತೀರ ವಿರಳವಾಗಿದೆ. ಹಾಗಾಗಿ ದಕ್ಷಿಣ ಭಾರತವಂತೂ ದೇವದಾಸಿಯರ ಕೇಂದ್ರವಾಗಿದೆ. ದಕ್ಷಿಣ ಭಾರತದಲ್ಲಿ ರಾಜರ ಆಸಕ್ತಿಯಿಂದ ದೇವಾಲಯದ ನಿರ್ಮಾಣದ ಚಟುವಟಿಕೆ ತೀವ್ರಗೊಂಡವು. ಹೀಗಾಗಿ ಈ ಪದ್ಧತಿಯು ಮತ್ತಷ್ಟು ಬೇರು ಬಿಡಲು ಕಾರಣವಾಯಿತು. ಕ್ರಿ.ಶ. ೭ನೇ ಶತಮಾನದ ವೇಳೆಗೆ ಸೂರ್ಯ ದೇವಾಲಯದಲ್ಲಿ ದೇವದಾಸಿಯರ ತಂಡೋಪ ತಂಡಗಳನ್ನು ಕಾಣಬಹುದಾಗಿತ್ತು. ಆ ಕಾಲಕ್ಕೆ ಈ ದೇವಾಲಯವು ಶೃಂಗಾರಕ್ಕೆ ಪ್ರಸಿದ್ಧಿಯಾಗಿತ್ತು. ಕೆಲ ಕಾಲದ ನಂತರ ಈ ತರಹದ ದೇವಾಲಯಗಳು ಹಾಡುವ ನೃತ್ಯ ಮಾಡುವ ಹೆಣ್ಣುಗಳಿಂದ ತುಂಬಿಹೋದವು. ಹೀಗೆ ೧೦ ನೇ ಶತಮಾನದ ಅಂತ್ಯದ ವೇಳೆಗೆ ದೇವಾಲಯಗಳು ಪ್ರತಿಷ್ಠೆಗಳಿಗನುಗುಣವಾಗಿ ದೇವಾಲಯಗಳಲ್ಲಿ ದೇವದಾಸಿಯರ ಸಂಖ್ಯೆಯು ಹೆಚ್ಚುತ್ತಾ ಹೋಯಿತು. 'ಶಿಲಪದ್ದಿಗಾರಂ' ಎಂಬ ತಮಿಳು ಭಾಷೆಯ ಮಹಾಕಾವ್ಯವು ದೇವದಾಸಿಯರ ಸಂಗೀತ ನೃತ್ಯಗಳ ಬಗ್ಗೆ ವಿವರಣೆ ನೀಡಿದೆ.

ಚೋಳರ ಕಾಲದ ಶಾಸನಗಳಲ್ಲಿಯೂ ದೇವದಾಸಿಯಾಗಿದ್ದದರ ಕುರಿತಾಗಿ ಉಲ್ಲೇಖಗಳು ದೊರೆಯುತ್ತವೆ. ಶಿವನ ಅವತಾರವೆಂದೇ ಜನಪ್ರಿಯವಾಗಿರುವ 'ಖಂಡೋಬ' ಮಹಾರಾಷ್ಟ್ರದ ಒಂದು ದೇವತೆ. ಪೂನಾ ಜಿಲ್ಲೆಯ 'ಜೆಜುರಿ' ಖಂಡೋಬನ ಪ್ರಧಾನ ಸ್ಥಳ. ಸತಾರ ಜಿಲ್ಲೆಯಲ್ಲಿ ಪಾಳಿ ಎಂಬಲ್ಲೂ ಒಂದು ಪೂಜಾ ಸ್ಥಳವಿದೆ. ಬಾಲ್ಯದ ದಿನಗಳಲ್ಲಿಯೇ ತಮ್ಮ ತಂದೆ ತಾಯಿಗಳಿಂದ ಖಂಡೋಬ ದೇವತೆಗೆ ಸಮರ್ಪಿಸಲ್ಪಟ್ಟ ಹುಡುಗಿಯರಿಗೆ 'ಮುರುಳಿಯರು' ಎಂದು ಕರೆಯುತ್ತಿದ್ದರು. "ಮೋಸ ಹೋದ ಒಡ ಹೆಂಗಸರು ಖಂಡೋಬನು ತಮಗೆ ಹೆಚ್ಚು ಮಕ್ಕಳನ್ನು ಕರುಣಿಸುವುದಾದರೆ ಮೊದಲು ಹುಟ್ಟಿದ ಮಗಳನ್ನು ಅವನಿಗೆ ಅರ್ಪಿಸುವುದಾಗಿ ಪ್ರಮಾಣ ಮಾಡುತ್ತಿದ್ದರು. ಅದರಂತೆ ಮೊದಲು ಹುಟ್ಟಿದ ಮಗಳನ್ನು ಖಂಡೋಬನಿಗೆ ಅರ್ಪಿಸುತ್ತಿದ್ದರು. ಅವಳ ಕೊರಳಿಗೆ ಏಳು ಕವಡೆಗಳ

ಒಂದು ಸರವನ್ನು ಹಾಕಿ ಸಣ್ಣ ಹೆಣ್ಣು ಮಗಳನ್ನು ಖಂಡೋಬನಿಗೆ ಅಥವಾ ಒಂದು ಕಠಾರಿಗೆ ಅವಳನ್ನು ಮದುವೆ ಮಾಡುತ್ತಿದ್ದರು. ಹಾಗಾಗಿ ಅವಳು ಅವನ ಹೆಂಡತಿಯಾಗುತ್ತಿದ್ದಳು. ಅವಳು ಬದುಕಿರುವವರೆಗೂ ಯಾವ ಪುರುಷನನ್ನೂ ಮದುವೆ ಆಗುವ ಹಾಗಿಲ್ಲ. ಮತ್ತು ತನ್ನ ಜೀವನೋಪಾಯಕ್ಕಾಗಿ ಅವಳು ಕೀಳು ಬದುಕನ್ನು ಪಾಪ ಮಾಡುತ್ತ ಸವೆಸಬೇಕಾಗಿತ್ತು" *(ಜೋಗನ್ ಶಂಕರ್:೧೯೯೩:೭೧).* ಆದರೆ ಅವರುಗಳಲ್ಲಿ ಯಾರು ಕೂಡ ಇದು ಪಾಪದ ಕೆಲಸವೆಂದು ಭಾವಿಸುತ್ತಿರಲಿಲ್ಲ. ಏಕೆಂದರೆ ಈ ಮೂಲಕ ದೇವರ ಸೇವೆಯಲ್ಲಿ ತೊಡಗಿದ್ದೆವೆ ಎಂದು ಭಾವಿಸುತ್ತಿದ್ದರು. ಇವರು ಕೆಳ ಜಾತಿಗೆ ಸೇರಿದವರಾಗಿದು ಅವರನ್ನು ಮರುಳಿಯರು ಎಂದು ಕರೆಯಲಾಗುತ್ತಿತ್ತು. ಈ ಪ್ರದೇಶದ ಮೇಲ್ಜಾತಿಯ ಜನರೂ ಖಂಡೋಬನನ್ನು ಪೂಜಿಸುತ್ತಾರೆ. ಅವರು ಪೂಜಿಸುವ ವಿಧಾನ ಬೇರೆಯೇ ಇರುತ್ತದೆ. "ತಮ್ಮ ಹರಕೆಗಳನ್ನು ತೀರಿಸಲು ಒಬ್ಬ ಮೇಲ್ಜಾತಿಯವನೂ ಜೆಜುರಿಗೆ ಹೋಗುವುದಿಲ್ಲ. ಆದರು ಅವರು ಖಂಡೋಬನಿಗೆ ಎಂದೂ ತಮ್ಮ ಹೆಣ್ಣು ಮಕ್ಕಳನ್ನು ಕೊಡುವುದಿಲ್ಲ. ಹೆಚ್ಚು ಕಷ್ಟವಿಲ್ಲದೆ ಕೆಳಜಾತಿಯ ತಂದೆ ತಾಯಿಗಳಿಂದಮಕ್ಕಳನ್ನು ಹಣಕ್ಕೆ ಕೊಂಡುಕೊಂಡು ತಮ್ಮ ಮಕ್ಕಳಿಗೆ ಬದಲಾಗಿ ಅವರನ್ನು ಅರ್ಪಿಸುತ್ತಾರೆ" *(ಜೋಗನ್ ಶಂಕರ್:೧೯೯೩:೭೧).* ಕೆಳಜಾತಿಯಲ್ಲಿ ಹೆಚ್ಚಾಗಿ ಬಡತನ ಇದ್ದು ತಮ್ಮ ಮಕ್ಕಳನ್ನು ದೇವರ ಹೆಸರಿನಲ್ಲಿ ಬಲಿಯಾಗಿಸಿ ತಮ್ಮ ಜೀವನದ ನಿರ್ವಹಣೆಗಳಿಗೆ ಹಣ ಪಡೆದುಕೊಳ್ಳುತ್ತಿದ್ದರು. ಇದು ನಿಜವಾಗಿಯೂ ಉನ್ನತ ವರ್ಗಗಳ ಹುನ್ನಾರವಾಗಿರುವುದು ಎದ್ದು ಕಾಣುತ್ತದೆ.

ಡುಬಾಯ್ಸ್ ಒಬ್ಬ ಕ್ರೈಸ್ತ ಧರ್ಮ ಪ್ರಚಾರಕನಾಗಿ ೧೭೭೨ ರ ಕಾಲದಲ್ಲಿ ಮದ್ರಾಸ್ ಪ್ರಾಂತದಲ್ಲೂ ೧೭೯೯ ರಲ್ಲಿ ಮೈಸೂರಿನಲ್ಲೂ ಕ್ರೈಸ್ತ ಸಮುದಾಯವನ್ನು ಪುನರ್ ಸಂಘಟಿಸುವ ಸಲುವಾಗಿ ಕೆಲಸ ಮಾಡಿದನು. ಇವನು ಹಿಂದೂ ನಡತೆಗಳು ಪದ್ಧತಿ ಮತ್ತು ಸಮಾರಂಭಗಳು ಎಂಬ ಪ್ರಸಿದ್ಧ ಗ್ರಂಥದಲ್ಲಿ ಹಿಂದೂಗಳ ಪದ್ಧತಿಗಳು ಮತ್ತು ಸಮಾರಂಭಗಳನ್ನು ವಿವರಿಸಿದ್ದಾನೆ. ಅವನು ನರ್ತಿಸುವ ಹುಡುಗಿಯರ ಕುರಿತಾಗಿ ಕೂತುಹಲಕಾರಿಯಾದ ಅಂಶಗಳನ್ನು ವಿವರಿಸಿದ್ದಾನೆ ಹೀಗೆ ನರ್ತಿಸುವ ಹುಡುಗಿಯರು ಮೊದಲು ಬ್ರಾಹ್ಮಣರಿಗೆ ಮೀಸಲಾಗಿ ಅನಂತರ ತಮ್ಮ ವೃತ್ತಿಯಲ್ಲಿ ತೊಡಗುತ್ತಾರೆ. "ದೇವಾಲಯಗಳಲ್ಲಿ ಬೆಳಿಗ್ಗೆ ಮತ್ತು ಸಂಜೆ ದಿನಕ್ಕೆರಡು ಬಾರಿ ನರ್ತಿಸುವುದು ಮತ್ತು ಹಾಡುವುದು ಅವರ ಅಧಿಕೃತ ಕರ್ತವ್ಯಗಳು. ಅವರು ಸಾರ್ವಜನಿಕ ಸಮಾರಂಭಗಳಲ್ಲೂ ಈ ಕರ್ತವ್ಯ ನಿರ್ವಹಿಸಬೇಕಾಗಿತ್ತು. ಅವರು ದೇವರ ಆಶೀರ್ವಾದಕ್ಕಾಗಿ ಮೊದಲು ಈ ಕೆಲಸಗಳನ್ನು ಮಾಡುವರಾದರು ಅವರ ಸ್ವಭಾವಗಳು ಕಾಮೋತ್ತೇಜಕವಾಗಿರುತ್ತಿದ್ದವು. ಮತ್ತು ಭಂಗಿಗಳು ಅಶ್ಲೀಲವಾಗಿರುತ್ತಿದ್ದವು. ಅವರ ದೇವರುಗಳ ಚರಿತ್ರೆಯ ಕೆಲವು ಕಾಮಕ್ರೀಡೆಗಳನ್ನು ವರ್ಣಿಸುವ ಅಶ್ಲೀಲ ಹಾಡುಗಳನ್ನು ಹಾಡುವುದಕ್ಕಷ್ಟೆ ಅವು ಸೀಮಿತವಾಗಿದ್ದವು" *(ಜೋಗನ್ ಶಂಕರ್:೧೯೯೩:೭೫).* ಹೀಗೆ ನರ್ತಕಿಯಾಗಿ ದೇವಾಲಯಕ್ಕೆ ಸೇರಿದ ಹೆಣ್ಣು ಕೇವಲ ಲೈಂಗಿಕತೆಗೆ ಮಾತ್ರ ಬಳಸಿಕೊಳ್ಳುವುದಿಲ್ಲ. ಅವಳು ಇಡೀ ದೇವಾಲಯ ದೇವರ ಸೇವೆಯಲ್ಲಿ ತೊಡಗಬೇಕಿತ್ತು. ದೇವಾಲಯದ ಸ್ವಚ್ಛತೆ ಜೊತೆಗೆ ದೇವರ ಪ್ರಚಾರ ಮತ್ತು ಸ್ತುತಿಸುವುದು ಅವಳ ಕರ್ತವ್ಯವಾಗಿತ್ತು.

ದಕ್ಷಿಣ ಭಾರತದಲ್ಲಿ ಪ್ರವಾಸ ಮಾಡಿದ ಫ್ರಾನ್ಸಿಸ್ ಹ್ಯಾಮಿಲ್ಟನ್ ಎಂಬ ಪ್ರವಾಸಿ ಈ ವ್ಯವಸ್ಥೆಯ ಕುರಿತು ಕೆಲವು ಅನಿಸಿಕೆಗಳನ್ನು ಬರೆದಿದ್ದಾನೆ. ತುಳುವ ದೇವಾಲಯಗಳ ಬಗ್ಗೆ ಮಾತಾನಾಡುತ್ತಾ ಅವನು ಹೇಳುತ್ತಾನೆ. "ಮೊಯ್ಲಾರ್ ಎಂಬ ಹೆಸರಿನ ಜಾತಿಯಲ್ಲಿ ಒಂದು ಪದ್ಧತಿ ಇದೆ. ತನ್ನ ಗಂಡನಿಂದ ಬೇಸತ್ತ ಮಹಿಳೆ ಅಥವಾ ಕನ್ಯತ್ವದಿಂದ ಬೇಸತ್ತವಳು, ವಿಧವೆ ಮತ್ತು ಮದುವೆಯಾಗಲು ಅಸಮರ್ಥಳಾದವಳೇ ದೇವಲಯಕ್ಕೆ ಹೋಗಿ ಪ್ರತಿಮೆಗೆ ಅರ್ಪಿಸಿದ ಅನ್ನದಲ್ಲಿ ಸ್ವಲ್ಪವನ್ನು ತಿನ್ನುವಳು ಅನಂತರ ಅವಳನ್ನು ಸರ್ಕಾರಿ ಅಧಿಕಾರಿಗಳು ಮುಂದೆ ಕರೆದುಕೊಂಡು ಹೋಗುವರು. ಅವರು ಅವರ ಜಾತಿಯ ಜನರನ್ನು ಸೇರಿಸಿ ಅವಳ ಈ ನಿರ್ಣಮಕ್ಕೆ ಕಾರಣವನ್ನು ಪ್ರಶ್ನಿಸುವರು. ಅವಳು ಬ್ರಹ್ಮಣಳಾಗಿದ್ದರೆ ದೇವಾಲಯದಲ್ಲಿ ವಾಸಿಸಲು ಅಥವಾ ಹೊರಗೆ ವಾಸಿಸುವ ಅವಕಾಶ ಕಲ್ಪಿಸಿಕೊಡುವರು. ಅವರು ಯಾವುದಾನ್ನಾದರೂ ಆಯ್ಕೆ ಮಾಡಬಹುದಾಗಿತ್ತು. ಅವಳು ಒಂದು ವೇಳೆ ದೇವಾಲಯದಲ್ಲಿ ವಾಸಿಸಲು ಇಚ್ಛಿಸಿದಲ್ಲಿ ಪ್ರತಿದಿನವೂ ಅವಳಿಗೆ ಅಕ್ಕಿ ಮತ್ತು ಉಡಲು ಒಂದಿಷ್ಟು ಬಟ್ಟೆ ಕೊಡುವರು. ಆಕೆಯು ದಿನಾಲು ದೇವಾಲಯದ ಕಸ ತೆಗೆಯಬೇಕು, ಬೀಸಣಿಗೆಯಿಂದ ಪ್ರತಿಮೆಗೆ ಗಾಳಿ ಬೀಸಬೇಕು. ಅವಳ ಪ್ರಣಯವೆಲ್ಲವೂ ಬ್ರಹ್ಮಣರಿಗೆ ಸೀಮಿತವಾಗಿರಬೇಕು. ದೇವಾಲಯದಲ್ಲಿ ಉಳಿಯಲು ಬಯಸುವ ಮಹಿಳೆ ಮತ್ತು ಮೂರು ಕೆಳಜಾತಿಗೆ ಸೇರಿವ ಮಹಿಳೆಯರು ತಾವು ಇಷ್ಟಪಡುವ ಉತ್ತಮ ಮನೆತನದ ಯಾವನೇ ಒಬ್ಬ ವ್ಯಕ್ತಿಯೊಂದಿಗೆ ಅವರು ಇಷ್ಟಪಟ್ಟರೆ ಸೇರಬಹುದು. ಆದರೆ ಅವರು ಪ್ರತಿವರ್ಷವೂ ತಮ್ಮ ಆದಾಯದ ಹದಿನಾರನೇಯ ಒಂದು ಭಾಗದಿಂದ ಅರ್ಥವನ್ನು ದೇವಾಲಯಕ್ಕೆ ನೀಡಬೇಕು" *(ಜೋಗನ್ ಶಂಕರ್:೧೯೯೩:೭೬-೭೭).* ಇಲ್ಲಿ ಗಮನಿಸಬಹುದಾದ ಅಂಶವೆಂದರೆ ಇಲ್ಲಿ ಬ್ರಹ್ಮಣ ಮಹಿಳೆಯರು ಕೂಡ ದೇವದಾಸಿಯರಾಗುತ್ತಿದ್ದದ್ದು ಕಂಡು ಬರುತ್ತದೆ. ಅಲ್ಲದೇ ಇಲ್ಲಿ ದೇವಾಲಯಕ್ಕೆ ದೇವರ ಹೆಸರಿನಲ್ಲಿ ಅರ್ಪಿಸಲಾದ ಹೆಣ್ಣು ಮಕ್ಕಳಿಗೆ ಜಾತಿ ಬೇಧಗಳು ಕಂಡು ಬರುತ್ತವೆ. ಕೆಲವು ನಿರ್ಬಂಧ ಮತ್ತು ಹೊಂದಾಣಿಕೆಯೊಂದಿಗೆ ಬ್ರಹ್ಮಣ ದೇವದಾಸಿಯರು ವಿಶೇಷ ಸವಲತ್ತುಗಳನ್ನು ಹೊಂದಿರುವುದಕ್ಕೆ ಇದು ದಾಖಲೆ ತಿಳಿಸುತ್ತದೆ.

ಆಂಧ್ರ ಮತ್ತು ತಮಿಳುನಾಡು ಪ್ರದೇಶಗಳಲ್ಲಿ ಮತ್ತು ಕರ್ನಾಟಕದಲ್ಲಿ ಈಗಲೂ ಈ ದೇವದಾಸಿ ಪದ್ಧತಿ ಇರುವುದು ಕಂಡು ಬರುತ್ತದೆ. ತಮಿಳುನಾಡಿನ ರಾಮೇಶ್ವರ ದೇವಸ್ಥಾನದಲ್ಲಿ ಅರ್ಚಕರೊಂದಿಗೆ ಒಬ್ಬ ದೇವದಾಸಿಯು ಬ್ರಹ್ಮಣಿಯಂತೆ ವಸ್ತ್ರಗಳನ್ನು ತೊಟ್ಟು ರುದ್ರಾಕ್ಷಿಗಳನ್ನು ಧರಿಸಿ ದೇವಾಲಯಕ್ಕೆ ಬರುತ್ತಾಳೆ. ಅವಳನ್ನು ತಮಿಳಿನಲ್ಲಿ 'ಮೂರೈಕಾರಿ' ಎಂದು ಕರೆಯುತ್ತಾರೆ. ಉತ್ತರ ಕರ್ನಾಟಕದ ಅಂಚಿನಲ್ಲಿರುವ ಗೋವಾದಲ್ಲಿನ ಮಂಗೇಶ ದೇವಸ್ಥಾನದಲ್ಲಿ ಆರು ಜನ ದೇವದಾಸಿಯರಿದ್ದಾರೆ. ಅವರು ದೇವಸ್ಥಾನಗಳಲ್ಲಿ ನರ್ತನ ಮಾಡುತ್ತಾರೆ. ಗೋವಾದಲ್ಲಿ ಮಾಲ್ಯದ ವಿಷ್ಣು ದೇವಸ್ಥಾನದಲ್ಲಿಯೂ ದೇವದಾಸಿಯರಿದ್ದಾರೆ. ಇವರನ್ನು 'ಭಾವಿನ್' ಎಂದು ಕರೆಯುತ್ತಾರೆ.

ವಿಜಯನಗರ ಚಕ್ರವರ್ತಿಗಳ ಕಾಲದಲ್ಲಿ ನರ್ತಕಿಯರು ಈ ಸಾಮ್ರಾಜ್ಯದ ಆದಾಯದ ಮುಖ್ಯ ಆಕಾರವಾಗಿದ್ದಾರೆಂದು ಪರ್ಶಿಯಾದ ರಾಯಬಾರಿ ಅಬ್ದುಲ್ ರಜಾಕ್‌ನ ವರದಿಯು ತಿಳಿಸುತ್ತದೆ. "ನಿಜ ಸಂಗತಿಯೆಂದರೆ ೧೨೦೦೦ ಪೋಲಿಸ್ ವರ್ಗದ ಸಮಗ್ರ ನಿರ್ವಹಣೆ ಸೂಳೆಯರ

ಆದಾಯದಿಂದ ಬಂದ ಹಣದಿಂದಲೇ ನಡೆಯುತ್ತಿತ್ತು" *(ಚನ್ನಣವಾಲಿಕಾರ:೨೦೦೦:೧೬೧).* ದೇವಾಲಯದಲ್ಲಿ ದೇವದಾಸಿಯರ ಕರ್ತವ್ಯಗಳೆಂದರೆ ದೇವರಿಗೆ ನೈವೇದ್ಯ ಅರ್ಪಿಸುವ ಸಮಯದಲ್ಲಿ ಅವರು ವಿಗ್ರಹದ ಎದುರು ನರ್ತಿಸುತ್ತಿದ್ದರು ಎಂದು ಪೋರ್ಚುಗೀಸಿನ ಪ್ರವಾಸಿಗ ಡೊಮಿಂಗೋ ಪಯಾಸ್ ಅವರು ವಿವರಿಸಿದ್ದಾರೆ. ಆಂಧ್ರ ಪ್ರದೇಶದ ತಿರುಪತಿಯ ವೆಂಕಟೇಶ್ವರ ದೇವತೆಯ ಅರ್ಚನೆ ನಡೆಯುವಾಗ ದೇವಾಲಯದ ಅನೇಕ ದೇವದಾಸಿಯರು ಗೀತೆಗಳನ್ನು ನೃತ್ಯವನ್ನು ಮಾಡಲು ನೇಮಿಸಿಕೊಂಡಿರುವ ಕುರಿತು ಡುಬಾಯ್ಸ್‌ಯವರು ವಿವರಿಸುತ್ತಾರೆ. ದಕ್ಷಿಣ ಭಾರತದಲ್ಲಿ ದೇವದಾಸಿ ಪದ್ಧತಿ ಆಚರಣೆ ಮತ್ತು ಪದ್ಧತಿಯ ಮೂಲ ಸ್ವರೂಪವನ್ನು ಹಾಗೂ ಅದಕ್ಕನುಗುಣವಾಗಿ ಸಾಕಷ್ಟು ಪ್ರಮಾಣದಲ್ಲಿ ಪವಿತ್ರ ವೇಶ್ಯಾವೃತ್ತಿ ಇದ್ದುದ್ದನ್ನು ಪುಲ್ಲರ್ ದಾಖಲಿಸಿದ್ದಾರೆ. ಮದ್ರಾಸ್, ಕೇರಳ ಮತ್ತು ಕರ್ನಾಟಕಗಳಲ್ಲಿ ಪವಿತ್ರ ವೇಶ್ಯಾ ವೃತ್ತಿಯ ಪದ್ಧತಿಗಳು ಇದ್ದವೆಂಬುದನ್ನು ಈ ಪ್ರದೇಶಗಳಲ್ಲಿ ಬಂದ ಎಲ್ಲಾ ಪ್ರವಾಸಿಗಳ ಧರ್ಮ ಪ್ರಚಾರದ ಬರಹಗಳಿಂದ ನಾವು ತಿಳಿದುಕೊಳ್ಳಬಹುದಾಗಿದೆ. ಭಾರತವು ಮಧ್ಯಯುಗದಲ್ಲಿ ಮುಸ್ಲಿಂಮರ ಆಕ್ರಮಣಕ್ಕೆ ತುತ್ತಾಗಿ ಅನಂತರ ದೇವದಾಸಿ ಪದ್ಧತಿಯು ಉತ್ತರ ಭಾರತದಲ್ಲಿ ಇಳಿಮುಖವಾಯ್ತು. ಉದಾಹರಣೆಗೆ ಸೋಮನಾಥ ದೇವಾಲಯಗಳಂತಹ ಅನೇಕ ದೇವಾಲಯಗಳನ್ನು ವಿಗ್ರಹ ಭಂಜಕರು ನಾಶಗೊಳಿಸಿ ಗುಂಪು ಗುಂಪಾಗಿ ಹಿಂದುಗಳನ್ನು ಇಸ್ಲಾಂ ಧರ್ಮಕ್ಕೆ ಮತಾಂತರಿಸಿ ದೇವಾಲಯಗಳ ಸ್ಥಾನದಲ್ಲಿ ಮಸೀದಿಗಳನ್ನು ನಿರ್ಮಿಸಿದ್ದರಿಂದ ಈ ಪದ್ಧತಿ ಕೊನೆಗೊಳ್ಳದೆ ಸ್ವಲ್ಪ ಮಟ್ಟಿನಲ್ಲಿ ಸುಧಾರಿಸಿದೆ ಎಂದು ಹೇಳಲಾಗುವುದು. ಆದರೆ ದಕ್ಷಿಣ ಭಾರತದಲ್ಲಿ ಮಾತ್ರ ಹಿಂದೂ ರಾಜರ ಆಳ್ವಿಕೆಯೇ ಉಳಿದಿತ್ತು. ಈ ಪದ್ಧತಿ ಸಮೃದ್ಧವಾಗಿ ಶಕ್ತಿಯುತವಾಗಿ ಬೆಳೆದು ಹರಡಲು ಕಾರಣವಾಗಿ ಇಂದು ೨೦ ನೇ ಶತಮಾನದ ವೇಳೆಗೆ ವೇಶ್ಯಾ ಪದ್ಧತಿಯಾಗಿ ರೂಪಾಂತರಗೊಂಡು ನೆಲೆಯೂರಿತು. ಕೈಗಾರೀಕರಣ ನಗರೀಕರಣ ವ್ಯಾಪಿಸಿದಂತೆ ಬ್ರಿಟೀಷರ ಆಳ್ವಿಕೆ ಕಾಲಕ್ಕೆ ಸಂಬಂಧಿಸಿದಂತೆ ತನ್ನ ಮೊದಲಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಲಕ್ಷಣಗಳನ್ನೆಲ್ಲಾ ಸಂಪೂರ್ಣವಾಗಿ ಬದಲಾಯಿಸಿತು. ಇಲ್ಲಿ ಅಬ್ದುಲ್ ರಜಾಕ್‌ನ ಅಧ್ಯಯದಿಂದ ವಿಜಯನಗರ ಸಾಮ್ರಾಜ್ಯ ತನ್ನ ವೈಭವ ಕಾಲದಲ್ಲಿ ಗೌರವ ಮತ್ತು ಉತ್ತಮ ಸ್ಥಿತಿಯಲ್ಲಿದ್ದ ದೇವದಾಸಿಯರ ಸ್ಥಾನಮಾನ ಸಾಕಷ್ಟು ಸಾಮಾಜಿಕ ಮನ್ನಣೆ ಪಡೆದಿದ್ದವು ಎಂಬುದು ತಿಳಿಯುತ್ತದೆ. ಆದರೆ ನಂತರದ ಕಾಲದಲ್ಲಿ ಅದು ರಾಜಕೀಯ, ಸಾಮಾಜಿಕ, ಆರ್ಥಿಕ ಕಾರಣಗಳಿಂದಾಗಿ ರೂಪಾಂತರ ಹೊಂದಿ ಹಲವಾರು ಬದಲಾವಣೆಗಳಿಂದ ವಾಣಿಜ್ಯ ವ್ಯಾವಹರಿಕ ಸ್ವರೂಪವನ್ನು ಪಡೆದಿರುವುದನ್ನು, ಕೀಳು ಸ್ಥಾನ ಅಲಂಕರಿಸಿವುದನ್ನು ಜೊತೆಗೆ ದೇವದಾಸಿ ಮಹಿಳೆಯರು ಸಾಕಷ್ಟು ಆಯಮಗಳಿಂದ ಶೋಷಣೆಗೆ ಒಳಗಾಗಿರುವುದನ್ನು ನೋಡಬಹುದಾಗಿದೆ.

**ಕರ್ನಾಟಕದಲ್ಲಿ ದೇವದಾಸಿ ಪದ್ಧತಿ**

ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ದೇವದಾಸಿ ಪದ್ಧತಿ ಪ್ರಚಲಿತದಲ್ಲಿದ್ದುದ್ದು ಶಾಸನಗಳಿಂದ ತಿಳಿದು ಬರುತ್ತದೆ. ಕನ್ನಡ ಶಾಸನಗಳಲ್ಲಿ ಎಲ್ಲಿಯೂ ಕೂಡ ದೇವದಾಸಿ ಎಂಬ ಪದ ಬಳಕೆಯಾಗಿಲ್ಲ. ಇದರ ಬದಲಾಗಿ ಸೂಳೆ ಎಂಬ ಪದ ಹೆಚ್ಚಾಗಿ ಬಳಕೆಯಲ್ಲಿ ಕಂಡು ಬರುತ್ತದೆ. "ಕ್ರಿ.ಶ ೭೭೮-೭೯

ರ ಪಟ್ಟದ ಕಲ್ಲಿನ ವಿರೂಪಾಕ್ಷ ದೇವಾಲಯದ ಶಾಸನವು ದೇಗುಲದ ಸೂಳೆಯೊಬ್ಬಳು ದಾನ ಕೊಟ್ಟ ವಿಷಯವನ್ನು ಸೂಚಿಸುತ್ತದೆ. ಲೋಕ ಮಹಾದೇವಿಯರ ದೇಗುಲದ ಸೂಳೆ ಗೋವಿಂದ ರೆಡ್ಡಿಯ ಮಗಳು ಬಾರಿ ೪ ಪೊಟ್ಟೆಯಂ ಬೋಳ್ ಉತ್ತಮ ಗೋಸಾಸವಿ ಮ್ದಿಳೆ. ಇಲ್ಲಿ ಪೊಡ್ಡಿ ಎಂಬುದು ಹೊಸ ಗನ್ನಡದ ಬೊಡ್ಡಿ ಅಂದರೆ ವೇಶ್ಯೆಯರಾಗಿರಬಹುದೆಂದು ಊಹಿಸಲಾಗಿದೆ. ಕ್ರಿ.ಶ. ೮೦೨ ರ ತಾಮ್ರ ಪಟವೊಂದರಲ್ಲಿ ಜನ ಭವನದಲ್ಲಿ ನಡೆಯುವ ವೀರ ವಿಲಾಸೊನೇ ವಿರಚಿರ್ ಗೀತ ವಾದ್ಯ ಇತ್ಯಾದಿಗಳಿಗಾಗಿ ಧಾನವನ್ನು ಕೊಡಲಾಗಿದೆ." *(ಪ್ರಸನ್ನ ಕುಮಾರ್:೨೦೧೪:೮೦)* ದೇವಾಲಯದ ವಿವರಣೆಯ ಸಂದರ್ಭದಲ್ಲಿ ಶಾಸನಗಳಲ್ಲಿ ನರ್ತಕಿಯ ಕುರಿತು ಅಥವಾ ಇತರೆ ದೇವರ ಸೇವೆಯಲ್ಲಿ ತೊಡಗಿರುವ ಕುರಿತಾಗಿ ವಿವರಣೆ ನೀಡಿಲ್ಲ. ಇಲ್ಲಿ 'ಸೂಳೆ' ಎಂಬ ಪದ ಬಳಕೆಯು ವೇಶ್ಯೆಯರನ್ನು ಸೂಚಿಸುವ ಪದದಂತೆ ಕಂಡುಬರುತ್ತದೆ.

"ಕ್ರಿ.ಶ. ೪೫೦ ರ ಶಿಕಾರಪುರದ ತಾಳಗುಂದ ಶಾಸನದಲ್ಲಿ ಮಹಾದೇವನ ಗುಡಿಯಲ್ಲಿ ಮಂತ್ರ ಘೋಷ ಗಾಯನಗಳು ಕೇಳಿಬರುತ್ತಿದ್ದವೆಂದು ಹೇಳಲಾಗಿದೆ. ಹಾಗೆಯೇ ಕ್ರಿ.ಶ. ೧೧೧೩ ರ ಆಲನಹಳ್ಳಿಯಲ್ಲಿ ದೊರೆತ ಶಾಸನದಲ್ಲಿ ದೇವದಾಸಿ ಎಂಬ ಪದದ ಉಲ್ಲೇಖವಿರುವುದು"(ಜೋಗನ್ ಶಂಕರ್:೧೯೯೩:೮೨).ಇದು ಅತ್ಯಂತ ಪ್ರಾಚೀನ ಶಾಸನ ಎನ್ನಲಾಗಿದ್ದು, ಇದಕ್ಕಿಂತ ಹಿಂದಿದ ಶಾಸನಗಳಲ್ಲಿ 'ಸೂಳೆ' ಎಂದು ಹೆಸರಿಸಲಾಗಿದೆ. ಶಾಸನ ಮತ್ತು ಕಾವ್ಯಗಳಲ್ಲಿ ರಾಣಿವಾಸ, ಪೆಂಡವಾಸ, ಪೆಂಡವಾಸದ ಸೂಳೆಯರು, ಗಣಿಕೆ ಎಂಬ ಈ ಬಗೆ ಗುಣವಾಚಕಗಳು ಸೂಳೆ ಪದಕ್ಕೆ ಇರುವುದನ್ನು ಗಮನಿಸಬಹುದು. ಅರಮನೆಗಳಲ್ಲಿ ವಾಸವಾಗಿರುವ ಅಥವಾ ಸಂಬಂಧ ಹೊಂದಿರುವ ವೇಶ್ಯೆಯರನ್ನು ಕುರಿತು ಈ ಮೇಲಿನ ಪದಗಳು ಬಳಕೆಯಲ್ಲಿದ್ದವು. ಇವರನ್ನು ರಾಜ ವೇಶ್ಯೆಯರು ಎಂದು ಕರೆಯುತ್ತಿದ್ದರು. ಈ ಶಾಸನಗಳ ಪ್ರಕಾರ ತಿಳಿಯುವುದೇನೆಂದರೆ ಆ ಕಾಲದಲ್ಲಿ ದೇವಾಲಯದ ಸೂಳೆಯರಿಗೂ ಮತ್ತು ರಾಜ ವೇಶ್ಯೆಯರಿಗೆ ಉನ್ನತವಾದ ಸ್ಥಾನ ಮಾನಗಳು ತೊರೆಯುತ್ತಿದ್ದವು ಎಂಬುವುದು.

"ಮೈಸೂರು ಅರಸರ ಕಾಲಕ್ಕೆ ಸುಮಾರು ಇನ್ನೂರು ಮಂದಿ ನರ್ತಕಿಯರು ಇರುವುದು ತಿಳಿದು ಬರುತ್ತದೆ. ಅದರಲ್ಲಿ ಜಟ್ಟಿತಾಯಮ್ಮ ಪ್ರಮುಖರು. ಜಟ್ಟಿ ತಾಯಮ್ಮ ಇಪ್ಪತ್ತೆಂಟನೆಯ ವಯಸ್ಸಿನಲ್ಲಿಯೇ ನಾಟ್ಯ ಸರಸ್ವತಿ ಬಿರುದನ್ನು ಪಡೆದರು. ಜಗದ್ವಿಖ್ಯಾತ ಸಂಗೀತಗಾರ್ತಿ ಎಂ.ಎಸ್ ಸುಬ್ಬಲಕ್ಷ್ಮಿ ಕೂಡಾ ಈ ಪರಂಪರೆಯಲ್ಲಿಯೇ ಬಂದು ಅದ್ವಿತೀಯ ಸಾಧನೆ ಮಾಡಿದ್ದಾರೆ. ಕ್ರಮೇಣ ರಂಗ ಕಲೆಯಲ್ಲಿ ಪಾಳೇಗಾರಿಕೆ ಶಕ್ತಿಗಳ ಕುತಂತ್ರದಿಂದ ಶ್ರೇಣಿಕೃತಿ ಸಮಾಜ ವ್ಯವಸ್ಥೆಯನ್ನು ಉಳಿಸಿಕೊಳ್ಳುವ ವ್ಯವಸ್ಥಿತ ಸಂಚು ನಡೆದು ಈ ಕಲೆಗಳು ಮೇಲ್ವರ್ಗದ ಜನರಿಗೆ ಮಾತ್ರ ರವಾನೆಯಾಗಿ ರಾಜ ನರ್ತಕಿಯರು ಉಚ್ಚ ಕುಲದವರು, ದೇವದಾಸಿಯರು ಕೆಳವರ್ಗದವರು ಎಂಬ ಭೇದವನ್ನು ಅದರಲ್ಲಿ ಹುಟ್ಟು ಹಾಕಿದರು" (ಶಾಂತಮಠ:೨೦೧೨:೭೯). ಇದರ ಪರಿಣಾಮವಾಗಿಯೇ ಸಮಾಜದಲ್ಲಿ ಜನರು ಪರಿಶಿಷ್ಟರ ಮತ್ತು ಹಿಂದುಳಿದ ವರ್ಗದ ದೇವದಾಸಿಯರನ್ನು ನೋಡುವ ದೃಷ್ಟಿಕೋನ ಬದಲಾಯಿತು. ಕ್ರಿ.ಶ. ೧೩೩೬ ರಲ್ಲಿ ಉದಯವಾದ ವಿಜಯನಗರ ಸಾಮ್ರಾಜ್ಯವು ಹಿಂದೂ ಸಂಸ್ಕೃತಿ ಮತ್ತು ದೇವಾಲಯಗಳ ರಚನೆಗೆ ಹೆಚ್ಚಿನ ಪ್ರೋತ್ಸಾಹ ನೀಡಿತು. ಈ ಕಾಲದಲ್ಲಿ ದೇವದಾಸಿಯರ ಸ್ಥಾನವನ್ನು ಅಂದಿನ ಕಾಲದ ಸಾಹಿತ್ಯ ಕೃತಿಗಳಿಂದ ತಿಳಿದು ಬರುತ್ತದೆ.

ವಿಜಯನಗರದಲ್ಲಿ ಸೂಳೆಯರ ಸಂಖ್ಯೆ ಅಪಾರವಾಗಿತ್ತೆಂದು ಕೃಷ್ಣದೇವರಾಯನಿಗೆ ಆ ಸೂಳೆಗೇರಿ ಚೆನ್ನಾಗಿ ಪರಿಚಯವಿತ್ತೆಂದು ಅಮುಕ್ತ ಮೌಲ್ಯದಲ್ಲಿ ಮೇಲಿಂದ ಮೇಲೆ ಬರುವ ಸೂಳೆಗೇರಿಯಾ ವರ್ಣನೆಯಿಂದ ತಿಳಿದು ಬರುತ್ತದೆ. ಈ ಕಾಲದಲ್ಲಿ ವೇಶ್ಯೆಯರು ಸಂಗೀತ ವಿದ್ಯೆಯಲ್ಲಿ ವಿಶೇಷ ಸಾಧನೆ ಮಾಡುತ್ತಿದ್ದರು. ಅವರು ತಮ್ಮ ಹೆಣ್ಣು ಮಕ್ಕಳಿಗೆ ನೃತ್ಯ ವಿದ್ಯೆಕಲಿಸಿ ದೇವದಾಸಿಯನ್ನಾಗಿ ಬಿಡುತ್ತಿದ್ದರು. ವೇಶ್ಯೆಯರೆಂದರೆ ಸಮಾಜದಲ್ಲಿ ಅವರ ಗೌರವಗಳು ಕಡಿಮೆಯಾಗುತ್ತಿರಲಿಲ್ಲ. ಧನಿಕರು ಅವರನ್ನು ಪೋಷಿಸುತ್ತಿದ್ದರು. ನವರಾತ್ರಿಯಲ್ಲಿ ವೇಶ್ಯೆಯರ ಕುಸ್ತಿ ಸಹ ನಡೆಯುತ್ತಿದ್ದವು.

ವಿಜಯನಗರಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗ ಅಬ್ದುಲ್ ರಜಾಕ್‌ನು ವೇಶ್ಯೆಯರ ಬಗೆಗೆ ಪ್ರಸ್ತಾಪಿಸುತ್ತಾ "ದರಾಜ್ ಖಾನೆಗೆ ಎದುರಾಗಿ ರಾಜ್ಯಪಾಲನ ಮನೆಯಿದೆ. ಇಲ್ಲಿ ಕಾವಲು ಕಾಯುವ ಹನ್ನೆರಡು ಸಾವಿರ ಜನ ಸೈನಿಕರಿಗೆ ಪ್ರತಿಯೊಬ್ಬರಿಗೂ ದಿನಕ್ಕೆ ಒಂದು ಫನಂ ಸಂಬಳ ಈ ಸಂಬಳಕ್ಕೆ ಬೇಕಾದ ಹಣ ವೇಶ್ಯಾಗೃಹಗಳ ಮೇಲೆ ಹಾಕಿದ ತೆರಿಗೆಗಳಿಂದ ಬರುತ್ತದೆ ಎಂದು ಹೇಳಿದ್ದಾರೆ"" *(ವಸಂತಕುಮಾರ:೨೦೦೨:೨೮).* ಅಲ್ಲದೆ ಸೈನಿಕರು ವೇಶ್ಯೆಯರನ್ನು ಲೈಂಗಿಕವಾಗಿ ಬಳಸಿಕೊಳ್ಳುತ್ತಿದ್ದರು. ಸೈನ್ಯದ ಶಿಬಿರದ ಕಾರ್ಯದಲ್ಲಿ ಸುಂದರವಾದ ವೇಶ್ಯೆಯರು ನರ್ತನ ಮಾಡುತ್ತಿದ್ದರು. ಸೈನಿಕರು ಅವರನ್ನು ನೋಡಿ ಮೋಹಿಸಿಕೊಂಡು ಉತ್ಸಾಹದಿಂದ ವಸ್ತ್ರಭೂಷಣಗಳನ್ನು ಕೊಂಡು ಅವರಿಗೆ ಅರ್ಪಿಸುತ್ತಿದ್ದರು. ವೇಶ್ಯೆಯರು ತಮಗೆ ಬಂದಿರುವ ಆದಾಯದಲ್ಲಿ ಅನೇಕ ದಾನ ದತ್ತಿಗಳನ್ನು ನೀಡುತ್ತಿದ್ದರು. ಕೆರೆ ಕಾಲುವೆಗಳನ್ನು ಕಟ್ಟಿಸುವುದು, ದೇವಾಲಯದ ಸೇವೆಯಲ್ಲಿ ತೊಡಗಿಕೊಳ್ಳುತ್ತಿದ್ದರು. ಹೀಗಾಗಿ ಆ ಕಾಲದಲ್ಲಿ ದೇವದಾಸಿಯರೆಂದರೆ ಜನರಲ್ಲಿ ಅಪಾರವಾದ ಗೌರವಯುತವಾದ ಮನೋಭಾವನೆ ಬೆಳೆದಿತ್ತು. ಅಲ್ಲದೆ ಯಾರು ಬೇಕಾದರು ಈ ದೇವದಾಸಿ ಪದ್ಧತಿಗೆ ಮನಸ್ಸಿನಿಂದ ಒಪ್ಪಿ ಒಳಗಾಗುತ್ತಿದ್ದರು. ಹೀಗಾಗಿ ರಾಜರು ಅವರನ್ನು ಪೋಷಿಸುತ್ತಿದ್ದರು. ದೇವಾಲಯಗಳಲ್ಲಿ ಮುಕ್ತ ಪ್ರವೇಶವಿತ್ತು. ದೇವಾಲಯಕ್ಕೆ ಮೀಸಲಿಟ್ಟ ದೇವದಾಸಿಯರು ಸಂಗೀತ ಮತ್ತು ನೃತ್ಯಗಳಲ್ಲಿ ಪರಿಣಿತಿಯನ್ನು ಹೊಂದಿದವರಾಗಿದ್ದರು. ಮೈಸೂರು ಒಡೆಯರ ಕಾಲದಲ್ಲಿ ಸಂಗೀತ ಮತ್ತು ನೃತ್ಯ ಮುಂತಾದವುಗಳಿಗೆ ಪ್ರೋತ್ಸಾಹವಿತ್ತು. ಗಣಿಕೆಯರು ಜೀವನ ನಡೆಸುವುದಕ್ಕೆ ಯಾವುದೇ ತಿರಸ್ಕಾರಗಳು ಇರಲಿಲ್ಲ. ಇದು ಸಮಾಜದಲ್ಲಿ ಅಗತ್ಯವಾದ ಅಂಶ ಎಂಬ ಪುರಾತನ ಕಾಲದ ಕಲ್ಪನೆಯೇ ಆ ಕಾಲದಲ್ಲಿ ಪ್ರಚಲಿತವಾಗಿತ್ತು "ಅಂದು ವೇಶ್ಯಾವಾಟಿಕೆಗಳಲ್ಲಿ ಉಚ್ಚವರ್ಗದ ಗಣಿಕೆಯರು ಮತ್ತು ಸಾಮಾನ್ಯ ಸೂಳೆಯರು ಇರುತ್ತಿದ್ದರು" *(ಪ್ರಸನ್ನ ಕುಮಾರ:೨೦೧೪:೮೬).* ಇದರ ಮೂಲಕ ತಿಳಿಯುವುದೇನೆಂದರೆ ಈ ಪದ್ಧತಿಯು ರಾಜರ ಆಳ್ವಿಕೆಯ ಕಾಲದಲ್ಲಿ ನಡೆಯುತ್ತಿದ್ದದ್ದು. ಹೀಗಾಗಿ ಉನ್ನತ ಜಾತಿಯ ಜನರ ಮಹಿಳೆಯರು ಕೂಡ ದೇವಾಲಯಕ್ಕೆ ಮೀಸಲಿರಿಸಲ್ಪಡುದಿದ್ದರು ಎಂದು ತಿಳಿಯಲಾಗುತ್ತದೆ. ಗಣಿಕೆಯರು ವಿದ್ಯಾವಿಶಾರದೆಯರಾಗಿದ್ದರು. ದೇವದಾಸಿಯರ ಗುರುಗಳಿಗೆ ನಟುವರ್‌ಗಳು ಎಂದು ಕರೆಯುತ್ತಿದ್ದರು. ಮಹಿಳೆಯರು ನೃತ್ಯ ಮತ್ತು ಸಂಗೀತದಲ್ಲಿ ಪರಿಣಿತಿ ಹೊಂದಿದ್ದರೆ ಮಾತ್ರ ದೇವದಾಸಿಯಾಗಲು ಅರ್ಹರಾಗುತ್ತಿದ್ದರೆಂದು ಈ ಮೂಲಕ ತಿಳಿಯುತ್ತದೆ.

ದೇವಾಲಯದಲ್ಲಿನ ದೇವರಿಗೆ ಸಂಗೀತ ಸೇವೆಯ ಮೂಲಕ ನೃತ್ಯವನ್ನು ಪ್ರದರ್ಶನ ಮಾಡುತ್ತ ತಮ್ಮ ಜೀವನವನ್ನು ಸಾಗಿಸುತ್ತಿದ್ದರು.

ಕರ್ನಾಟಕದ ಶಾಸನಗಳಲ್ಲಿ ದೊರೆಯುವ ಅನೇಕ ದಾಖಲೆಗಳಲ್ಲಿ ದೇವರ ಸೇವೆ ಸಮರ್ಪಿಸಲು ಎರಡು ಬಗೆಗಳಿವೆ. ಅವುಗಳೆಂದರೆ, ಅಂಗಭೋಗ ಮತ್ತು ರಂಗಭೋಗ ಸೇವೆಗಳಾಗಿವೆ. ಅಂಗಭೋಗದ ಸೇವೆ ಎಂದರೆ ದೇವರ ಗರ್ಭಗೃಹಕ್ಕೆ ಸಂಬಂಧ ಪಟ್ಟ ಕೆಲಸಗಳನ್ನು ಮಾಡುವುದಾಗಿದೆ. ದೇವರಿಗೆ ಸ್ನಾನ ಅಭಿಷೇಕ ಗಂಧಲೇಪನ, ದೂಪ, ಪುಷ್ಪಪೂಜೆ, ನೈವೇದ್ಯ ಮತ್ತು ತಾಂಬೂಲಗಳನ್ನು ಸರ್ಮಪಿಸುವ ಕಾರ್ಯವನ್ನು ಅಂಗಭೋಗದ ಸೇವೆ ಎನ್ನುವರು. ಇವರನ್ನು ಶಾಸನಗಳಲ್ಲಿ ದೇವರಾರತಿ ಸೂಳೆ, ದೀಪದ ಸೂಳೆ, ಗಂಧದ ಸೂಳೆ, ಹೂವಿನ ಸೂಳೆಯರೆನ್ನುತ್ತಿದ್ದರು. ಇವರನ್ನು ಪೆರಿಯರವಾಳ, ಪೆರ್ಗಡೆವಾಳ, ತೆರೆಯಸೂಳೆ, ತೆರೆಮರೆಯ ಸೂಳೆ ಮತ್ತು ತೆರೆಯೊಳಗೆ ಬಿಟ್ಟ ಸೂಳೆ ಎನ್ನುತ್ತಿದ್ದರು. ಇವುಗಳು ರಂಗ ಭೋಗದ ಸೂಳೆಯರೆಂಬ ಪ್ರಾಚೀನ ನಾಮಗಳನ್ನು ಶಾಸನಗಳಲ್ಲಿ ಬಳಸಿದ್ದರೆಂದು ಸಂಶೋಧಕರಾದ ಪ್ರಸನ್ನ ಕುಮಾರ್‌ರವರು ತಿಳಿಸಿದ್ದಾರೆ. ರಂಗ ಭೋಗದ ಸೇವೆಗಳೆಂದರೆ ಗರ್ಭಗುಡಿಯ ಮುಂದೆ ಇರುವ ನವರಂಗದಲ್ಲಿ ಸುಂದರಿಯರಿಂದ ನಡೆಯುವ ದೇವರ ಸೇವೆಗೆಂದು ಇರುವ ನೃತ್ಯಗಳನ್ನು ಮಾಡುವುದು. ಸಂಗೀತ ಸೇವೆ ಮತ್ತು ರಂಗೋಲಿ ಹಾಕುವ ಸೇವೆ ಇತರೆ ಗರ್ಭ ಗುಡಿಯಿಂದ ಹೊರಗೆ ಇರುವ ಕೆಲಸ ಕಾರ್ಯಗಳನ್ನು ಮಾಡುವುದೇ ರಂಗಭೋಗದ ಸೇವೆ ಎನ್ನುವರು. ಮಾಡುವವರಿಗೆ ಮಾಡದ, ಒಲಗದ, ಚಾಮರದ ಮತ್ತು ಕಂಬಂದ ಸೂಳೆಯರೆಂಬ ಹೆಸರಿನಿಂದ ಸೂಚಿಸುತ್ತಿದ್ದರು. ದೇವದಾಸಿಯರಾಗಿ ನಂತರದಲ್ಲಿ ವೇಶ್ಯಾವಾಟಿಕೆಯಲ್ಲಿ ತೊಡಗಿಕೊಂಡು ವೇಶ್ಯೆಯರೆಂದು ಗುರುತಿಸಿಕೊಂಡವರನ್ನು ಮಾತ್ರ ಶಾಸನಗಳು ಪರಿಗಣಿಸಿವೆ. ಪ್ರತಿಯೊಂದು ದೇವಾಲಯಗಳು ಹರಿನಾರು ದೇವದಾಸಿಯರನ್ನು ಹೊಂದಿರುತ್ತಿದ್ದವು. ದೇವಾಲಯಗಳಲ್ಲಿ ಸೇವೆ ಮಾಡಿದ ಅನೇಕ ಪ್ರಸಿದ್ಧ ಮಹಿಳೆಯರ ಹೆಸರುಗಳನ್ನು ಹೊಂದಿರುವ ಕೆಲವು ಶಾಸನಗಳು ನಮಗೆ ಸಿಗುತ್ತವೆ. "ಸೂಡಿ ಕಾಳಿದೇವ ದೇವಾಲಯದ ಪದ್ಮಾವತಿ, ಹುಣಿಗಾರ್ ಮಾದವ್ವೆ ಆನೆಯ ಮೊಳವ್ವೆ, ಹಾಡುವ ಕಾಮವ್ವ (ಕ್ರಿ.ಶ. ೧೦೨೨) ಆ ಪೈಕಿ ಕೆಲವರು ಇವರನ್ನು ಕರ್ನಾಟಕದ ಪುರಾತನ ದೇವದಾಸಿಯರೆಂದು ಪರಿಗಣಿಸಿದಾರೆ. ವಿರೂಪಾಕ್ಷ ದೇವಾಲಯಕ್ಕೆ (ವಿಜಾಪುರ ಜಿಲ್ಲೆಯ ಪಟ್ಟದಕಲ್ಲು) ದೇವಗುಲದ ಸೂಳೆ ಒಂದು ಕುದುರೆ ರಥ ಮತ್ತು ಒಂದು ಬಿಂದು ಆನೆಯ ರಥವನ್ನು ನೀಡಿದಳು ಎಂದು ಈ ವಿಷಯದ ಬಗ್ಗೆ ಕರ್ನಾಟಕದಲ್ಲಿ ದೊರೆಯುವ ಅತ್ಯಂತ ಪ್ರಾಚೀನ ಶಾಸನವು ಹೇಳುತ್ತದೆ" *(ಜೋಗನ್ ಶಂಕರ್:೧೯೯೩:೮೪)*. ಹೀಗೆ ಕೆಲವು ದೇವಾಲಯಕ್ಕೆ ಸಂಗೀತ ಮತ್ತು ನೃತ್ಯಕ್ಕೆ ಸಂಬಂಧಿಸಿದ ಅಂಗ ಮತ್ತು ರಂಗ ಭೋಗದ ಸೇವೆಯ ಜೊತೆಗೆ ಅವರು ಅನೇಕ ದಾನದತ್ತಿಗಳನ್ನು ನೀಡುವುದ ಮೂಲಕ ಶಾಸನದಲ್ಲಿ ಗುರುತಿಸಿಕೊಂಡಿದ್ದಾರೆ. ಹೀಗಾಗಿ ಶಾಸನಗಳಲ್ಲಿ ಗುರುತಿಸಿಕೊಳ್ಳದ ಅನೇಕ ದೇವದಾಸಿಯರು ಇದ್ದರೆಂದು ಹೇಳಲಾಗುವುದು.

ಹನ್ನೆರಡನೇ ಶತಮಾನವು ಕರ್ನಾಟಕದಲ್ಲಿ ಒಂದು ಇತಿಹಾಸವನ್ನು ಸೃಷ್ಟಿಸಿದ ಕಾಲವಾಗಿದೆ. ಸಮಾಜದಲ್ಲಿ ಹೆಣ್ಣು ಗಂಡು ಸಮಾನರು ಎಂದು ಸಾರುವುದರ ಜೊತೆಗೆ ಸಮಾಜದಲ್ಲಿರುವ ವರ್ಣ

ಭೇದ, ಅಸ್ಪೃಶ್ಯತೆ, ಗುಡಿಗಳಲ್ಲಿ ನಡೆಯುತ್ತಿರುವ ಶೋಷಣೆಯ ದೇವದಾಸಿ ಪದ್ಧತಿ ಮತ್ತು ಮೂಢನಂಬಿಕೆಗಳ ಸಂಪ್ರದಾಯ ಇನ್ನೂ ಅನೇಕ ರೀತಿಯಲ್ಲಿ ಕಂಡು ಬರುವ ಸಮಾಜದ ಅನಿಷ್ಟ ಪದ್ಧತಿಗಳ ವಿರುದ್ಧವಾಗಿ ಧ್ವನಿ ಎತ್ತಿ ಹೋರಾಟ ಪ್ರಾರಂಭಿಸಿದವರಾಗಿದ್ದಾರೆ. ಶೂದ್ರ, ಅಂತ್ಯಜರು, ಮಹಿಳೆಯರು ಧರ್ಮ ಸಂಸ್ಕಾರಣಗಳಿಂದ ವಂಚಿತರಾದುದನ್ನು ಮನಗಂಡು ಎಲ್ಲರಿಗೂ ಸಮಾನವಾದ ಆಧ್ಯಾತ್ಮಿಕ, ಸಾಮಾಜಿಕ, ಆರ್ಥಿಕ, ನೈತಿಕ ಮತ್ತು ಶೈಕ್ಷಣಿಕ ಸಮಾನತೆಯ ಹೊಸ ಹಾದಿಯನ್ನು ಹಾಕಿ ಕೊಟ್ಟಿದ್ದಾರೆ. ಸಾವಿರಾರು ವರ್ಷಗಳಿಂದ ಉನ್ನತ ವರ್ಗಗಳಿಂದ ಪುರೋಹಿತ ಶಾಹಿಗಳಿಂದ ದಬ್ಬಾಳಿಕೆಗೆ ಒಳಗಾಗಿರುವ ಕೆಳ ವರ್ಗದ ಮಾದಾರ ಚೆನ್ನಯ್ಯ, ಹೊಲೆಯರ ಶಿವನಾಗಮಯ್ಯ, ಸಮಗಾರ ಹರಳಯ್ಯ, ಡೋಹರ ಕಕ್ಕಯ್ಯ, ಕಾಳವ್ವೆ, ಸತ್ಯಕ್ಕ, ಒಕ್ಕಲಿಗ ಮುದ್ದಣ್ಣ ಮತ್ತು ಹಡಪದ ಅಪ್ಪಣ ಅವರಿಗೆ ತಮ್ಮ ಹುಟ್ಟಿನ ಕೀಳರಿಮೆಯನ್ನು ತೊರೆಯುವಂತೆ ಮಾಡಿದರು. ಅಲ್ಲದೆ ಇವರು ದೇವದಾಸಿ ವೇಶ್ಯೆಯರನ್ನು ಗೌರವಿಸುತ್ತಿದ್ದರು.

ದಾಸಿ ಪುತ್ರನಾಗಲಿ, ವೇಶ್ಯಾ ಪುತ್ರನಾಗಲಿ ಶಿವ ದೀಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು ಭಾವಿಸಬೇಕೆಂದು ಕೂಡಲ ಸಂಗಮದೇವಾ ಎಂಬ ವಚನವು ದೇವರು ಧರ್ಮದ ಹೆಸರಿನಲ್ಲಿ ವಂಚಿತರಾದ ಇವರು ಧರ್ಮ ಸಂಸ್ಕಾರಕ್ಕೆ ಅರ್ಹರೆಂದು ಸಾರಿದ್ದಲ್ಲದೇ ಅವರನ್ನು ದೇವರ ಸ್ವರೂಪ ಶಿವರೂಪ ಜಂಗಮರೆಂದು ಪರಿಗಣಿಸಿರೆಂದು ಸಾರುತ್ತಾ ಅವರನ್ನು ಗೌರವಿಸಿದ್ದಾರೆ.

ಬಸವಿಯರನ್ನು ಅರ್ಪಿಸುವ ಪದ್ಧತಿ ಸಾಮಾನ್ಯವಾಗಿ "ಕಿಳ್ಳೇಕ್ಯಾತರು, ಮಾದಿಗರು, ವಡ್ಡರು, ಬೇಡರು, ಕುರುಬರು ಮತ್ತು ಗೊಲ್ಲರಿಗೆ ಸೇರಿತ್ತು. ಮೈಸೂರಿನ ಮನುಕುಲ ಸಂಬಂಧ ಶಾಸ್ತ್ರದ ಪರಿವೀಕ್ಷಣೆಯ ಒಂದು ಕರಪತ್ರದಲ್ಲಿ ಜಾತಿ ಆಧಾರಿತ ಅರ್ಪಣೆಗಳನ್ನು ಕುರಿತು" *(ಜೋಗನ್ ಶಂಕರ್:೧೯೯೩:೮೯).* ವಿವರವಾಗಿ ಅಂಕಿ ಅಂಶಗಳ ಮೂಲಕ ತಿಳಿಸಿದ್ದಾರೆ. ಆದರೆ ಪ್ರಸ್ತುತ ಅಧ್ಯಯನದ ಅವಧಿಯಲ್ಲಿ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರು ಮಾತ್ರ ಮುದ್ರೆ ಹಾಕಿಕೊಳ್ಳುವ ಮೂಲಕ ಬಸವಿಯರಾಗಿರುವುದು ಕಂಡುಬರುತ್ತದೆ.

ಕರ್ನಾಟಕದಲ್ಲಿ ದೇವಾಲಯಗಳಿಗೆ ಸೂಳೆಯನ್ನಾಗಿ ಬಿಡಲು ಪ್ರಾರಂಬಿಸಿದ ಕಾಲ ನಿರ್ದಿಷ್ಟವಾಗಿ ತಿಳಿದಿಲ್ಲ. ಬಾದಾಮಿ ಚಾಲುಕ್ಯ ವಂಶದ ವಿಜಯಾದಿತ್ಯ (ಕ್ರಿ.ಶ. ೬೨೨-೩೪) ಗಂಧರ್ವರಿಗೆ ನೀಡಿದ ಪೂವ ಮರ್ಯಾದೆಯನ್ನು ಪಟ್ಟದ ಕಲ್ಲಿನ ಶಾಸನವು ಹೇಳುತ್ತದೆ. ನಂತರ "೮ನೇ ಶತಮಾನದಲ್ಲಿ ಇದೇ ಪಟ್ಟದ ಕಲ್ಲಿನ ಶಾಸನದ ಪ್ರಕಾರ ಲೋಕ ಮಹಾದೇವಿ ನಿರ್ಮಿಸಿದ ಲೋಕೇಶ್ವರ ದೇಗುಲದ ಗೋಯಿನ್ನ ಪೊಡ್ಡಿ, ಬಾದಿ ಪೊಡ್ಡಿಯರೇ ಕರ್ನಾಟಕದ ಪ್ರಥಮ ದೇವಾಲಯದ ಸೂಳೆಯರು" (ಪ್ರಸನ್ನ ಕುಮಾರ್:೨೦೧೪:೮೧). ಮುಂದುವರಿದು ನೋಡುವುದಾದರೆ ವಿಜಾಪುರ ಜಿಲ್ಲೆಯ ಪಟ್ಟದಕಲ್ಲು, ನಾಗಮಂಡಲ ತಾಲೂಕಿನ ಮಂಣೆ, ಹೊನ್ನಾಳಿ ತಾಲೂಕಿನ ನ್ಯಾಮತಿ, ರೋಣ ತಾಲೂಕಿನ ಸೂಡಿ, ಗದಗ ತಾಲೂಕಿನ ಲಕ್ಕುಂಡಿ, ಹರಪನಹಳ್ಳಿ ತಾಲೂಕಿನ ಬಾಗಳಿ, ಹಿರೇಮ್ಯಾಗಳ ಕೇರಿ, ಹಡಗಲಿ ತಾಲೂಕಿನ ಮೋರಿಗೇರೆ, ಮುದ್ದೇಬೀಹಾಳ ತಾಲೂಕಿನ ನಾಲತವಾಡಿ, ಹುನಗುಂದ ತಾಲೂಕಿನ ಅರಸಿ ಬೀದಿ, ನಂದ ವಡಗಿ, ಹೊವಿಹಳ್ಳಿ, ಮುಂಡರಗಿ ತಾಲೂಕಿನ ಕೂರಲಹಳ್ಳಿ, ಶಿಗ್ಗಾಂವಿ

ತಾಲೂಕಿನ ಬಂಗಾಪುರ, ದಾವಣೆಗೆರೆ ತಾಲೂಕಿನ ಬೇತೂರು, ಆದೋನಿ ತಾಲೂಕಿನ ಚಿನ್ನತುಂಬಳ, ಬಳ್ಳಾರಿ ತಾಲೂಕಿನ ಸಿರುಗುಪ್ಪ, ಕೊಪ್ಪಳ ತಾಲೂಕಿನ ಕುಕನೂರು, ಕಾರೂರು, ರಾಯಚೂರು ತಾಲೂಕಿನ ಇಟಗಿ, ಹೀರೆಕೆರೂರು ತಾಲೂಕಿನ ಕಾಗಿನೆಲೆ, ಸಿಂದಗಿ ತಾಲೂಕಿನ ದೇವರನಾವದಿಗಿ, ಶಿಕಾರಪುರಿ ತಾಲೂಕಿನ ಬಳ್ಳಿಗಾವೆ, ಬೇಲೂರು ತಾಲೂಕಿನ ಹಳೆ ಬಿಡು, ಚನ್ನರಾಯ ಪಟ್ಟಣ ತಾಲೂಕಿನ ಕೆಂಬಾಳು, ಮಂಡ್ಯ ತಾಲೂಕಿನ ಬಸರಾಳು, ಗುಬ್ಬಿತಾಲೂಕಿನ ಸಂಪಿಗೆ, ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರ, ಕುಂದಾಪುರ ತಾಲೂಕಿನ ಕೋಟೇಶ್ವರ ಮುಂತಾದ ಗ್ರಾಮಗಳ ದೇವಾಲಯಗಳಲ್ಲಿ ದೇವದಾಸಿಯರಿದ್ದ ಉಲ್ಲೇಖಗಳು ದೊರೆಯುತ್ತವೆ.

ಥರ್ಸ್ಟನ್ ರವರು ದಕ್ಷಿಣ ಭಾರತದ ಜಾತಿಗಳು ಮತ್ತು ಬುಡಕಟ್ಟುಗಳು ಎಂಬ ಲೇಖನದಲ್ಲಿ ದೇವದಾಸಿಯರ ಬಗ್ಗೆ ಬರೆದಿದ್ದಾರೆ. ದೇವದಾಸಿ ಅಥವಾ ಬಸವಿಯರನ್ನಾಗಿ ಮಾಡಬೇಕೆಂದು ಕೊಂಡಿರುವ ತಾಯಂದಿರುಗಳು ಯೂರೋಪಿನ ನ್ಯಾಯಾಧೀಶರಿಗೆ ಮನವಿಯನ್ನು ನೀಡಿರುವ ಕುರಿತಾಗಿ ತಿಳಿಸಿದ್ದಾರೆ. "ಹದಿನೈದು ಮತ್ತು ಹನ್ನೆರಡನೇಯ ವಯಸ್ಸಿನ ಇಬ್ಬರು ಹೆಣ್ಣು ಮಕ್ಕಳನ್ನು ನಾನು ಹೊಂದಿದ್ದೇನೆ. ನಮ್ಮ ಜಾತಿ ಪದ್ಧತಿಗಳಿಗನುಗುಣವಾಗಿ ಗುರುವಿನ ಆಜ್ಞೆಯ ಅನುಸಾರವಾಗಿ ದೇವಾಲಯದಲ್ಲಿ ತಾಳಿಕಟ್ಟುವ ಅವಶ್ಯಕತೆಯಿದೆ. ಹಾಗಾಗಿ ಸಂಬಂಧಪಟ್ಟ ಅಧಿಕಾರಿಗಳು ಏನಾದರೂ ತಕರಾರು ಎತ್ತಬಹುದೆಂದು ಭಾವಿಸಿ ನಾನು ಈ ಮನವಿಯನ್ನು ಸಲ್ಲಿಸುತ್ತಿದ್ದೇನೆ. ಆದುದರಿಂದ ನನ್ನ ಹೆಣ್ಣು ಮಕ್ಕಳಿಗೆ ತಾಳಿಕಟ್ಟಲು ಅನುಮತಿ ನೀಡಬೇಕೆಂದು ಗೌರವಾನ್ವಿತ ನ್ಯಾಯಾಧೀಶರನ್ನು ಕೇಳಿಕೊಳ್ಳುತ್ತೇನೆ" *(ಥರ್ಸ್ಟನ್ಇ:೧೯೦೯:೩೫).* ಅಂದರೆ ದೇವದಾಸಿಯಾಗಿ ಮಾಡಲು ಈ ಮೊದಲು ಸರ್ಕಾರಿ ನ್ಯಾಯಧೀಶರ ಅನುಮತಿಯು ಅವಶ್ಯಕವಾಗಿತ್ತು. ಆದರೆ ಇವತ್ತಿನ ಅದೇ ಸರ್ಕಾರ ಈ ಪದ್ಧತಿಯ ನಿಷೇಧ ಕಾನೂನು ತಂದಿದೆ. ಅಂದರೆ ಈ ಪದ್ಧತಿಯು ಸಮಾಜದಲ್ಲಿ ಹೇಗೆ ಮಾರಕವಾಗಿ ಕಾಡುತ್ತಿದೆ ಎಂಬುದಕ್ಕೆಇದು ನಿದರ್ಶನವಾಗಿದೆ.

ವಿಜಯನಗರ ಸಾಮ್ರಾಜ್ಯ ಆಳ್ವಿಕೆಯ ಕಾಲದಲ್ಲಿ ದೇವದಾಸಿ ಪದ್ಧತಿ ಹೆಚ್ಚಾಗಿ ಕಂಡು ಬರುತ್ತದೆ. ಇಲ್ಲಿಗೆ ಭೇಟಿ ನೀಡಿರುವ ಪ್ರವಾಸಿಗರು ವಿಜಯನಗರ ಕುರಿತಾಗಿ ಬರೆದಿರುವ ಬರವಣಿಗೆಯ ಮೂಲಕ ತಿಳಿಯಲಾಗುತ್ತದೆ. ಅಲ್ಲದೆ ಇಲ್ಲಿರುವ ಸೂಳೆ ಬಜಾರ್ ಇದಕ್ಕೆ ಸಾಕ್ಷಿಯಾಗಿ ಕಾಣುತ್ತದೆ "ವಿಜಯನಗರ ಸಾಮ್ರಾಜ್ಯ ಆಳಿದ ಮೇಲೆ ಇಲ್ಲಿರುವ ದೇವದಾಸಿಯರು, ಬಸವಿಯರು, ಪಾತ್ರದವರು ಹೋದ ಸ್ಥಳಗಳು ಸೇರಿಕೊಂಡ ನೆಲೆಗಳು ಒಳರಾಜ್ಯದಲ್ಲಿ : ಕಂಪ್ಲಿ, ಹೊಸಪೇಟೆ, ಹರಪನಹಳ್ಳಿ, ಮರಿಯಮ್ಮನಹಳ್ಳಿ, ಕೊಟ್ಟೂರು, ಕೂಡ್ಲಿಗಿ, ಸುರಪುರ, ರಾಯಚೂರು, ಆನೆಗುಂದಿ. ಹೊರರಾಜ್ಯಗಳಲ್ಲಿ : ಪೆನುಗೊಂಡೆ, ಹೈದ್ರಾಬಾದ್, ತಂಜಾವರ, ಮದ್ರಾಸ್, ಮೀನಾಕ್ಷಿಪುರಂ, ಮಧುರೈ" *(ಚೆನ್ನಣ್ಣ ವಾಲಿಕಾರ: ೨೦೦೦:೩೧೫).* ಹಾಗಾಗಿ ಬಳ್ಳಾರಿ ಜಿಲ್ಲೆ ವ್ಯಾಪ್ತಿಯಲ್ಲಿ ದೇವದಾಸಿ ಪದ್ಧತಿ ವ್ಯಾಪಕವಾಗಿ ಕಂಡುಬರುತ್ತದೆ. ವಿಜಯನಗರ ಸಾಮ್ರಜ್ಯಕ್ಕೆ ಹತ್ತಿರವಾಗಿರುವ ಹೊಸಪೇಟೆ ತಾಲೂಕಿನಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ದೇವದಾಸಿಯರು ಇರುವುದು ಕಂಡು ಬರುತ್ತದೆ. ದೇವದಾಸಿ ಪದ್ಧತಿ ಎಂದರೆ ದೇವರ ಹೆಸರಿನಲ್ಲಿ ದೇವರ ಸೇವೆಗೆಂದು ದೇವಾಲಯಕ್ಕೆ ಮಿಸಲಿಟ್ಟ ಒಬ್ಬ ಅವಿವಾಹಿತ ಹೆಣ್ಣನ್ನು

ದೇವದಾಸಿ ಎಂದು ಕರೆಯುತ್ತಾರೆ. ಆ ಕಾಲದಲ್ಲಿ ಸಂಗೀತ ಮತ್ತು ನೃತ್ಯದಲ್ಲಿ ಪರಿಣತಿಯನ್ನು ಹೊಂದಿರುವ ಮಹಿಳೆಯರನ್ನು ದೇವದಾಸಿಯನ್ನಾಗಿ ಮಾಡುತ್ತಿದ್ದರು. ಅವರು ದೇವಾಲಯದ ಅಂಗಭೋಗ ಮತ್ತು ರಂಗಭೋಗದ ಸೇವೆಯಲ್ಲಿಯೇ ಅವರ ಬದುಕನ್ನು ನಡೆಸುತ್ತಾ, ಅಲ್ಲಿರುವ ಪುರೋಹಿತ ವರ್ಗ ಮತ್ತು ರಾಜರುಗಳು ಅವಳನ್ನು ಲೈಂಗಿಕವಾಗಿ ಬಳಸಿಕೊಳ್ಳುತ್ತಿದ್ದದ್ದು. ಇಡೀ ದೇವದಾಸಿ ಪದ್ಧತಿಯ ಹಿನ್ನೆಲೆಯಲ್ಲಿ ತಿಳಿಯಲಾಗುವುದು. ಆದರೆ ಪ್ರಸ್ತುತ ನೃತ್ಯ ಮತ್ತು ಸಂಗೀತದ ಗಂಧವೂ ತಿಳಿಯದಿರುವ ಹೆಣ್ಣು ಮಕ್ಕಳನ್ನು ದೇವದಾಸಿಯನ್ನಾಗಿ ಬಿಡುವುದು ಕಂಡು ಬರುತ್ತದೆ. ದೇವರು ಧರ್ಮದ ಹೆಸರಿನಲ್ಲಿ ದೇವದಾಸಿಯಾಗುವವಳು ಋತುಮತಿಯಾಗುವ ಮೊದಲೇ ಈ ದೇವದಾಸಿ ಪದ್ಧತಿಗೆ ಒಳಪಡಿಸುತ್ತಿದ್ದರು. ಮತ್ತು ದೇವರಿಗೆ ಮೀಸಲಿರಿಸಿದ ವಸ್ತುಗಳು ಮುಕ್ಕಾಗದಂತೆ ಅಂದರೆ ಪವಿತ್ರವಾಗಿರಬೇಕೆಂಬುವುದು ಪ್ರಧಾನವಾಗಿತ್ತು. ಆದರೆ ಇವತ್ತಿನ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಋತುಮತಿಯಾದ ನಂತರ ಮತ್ತು ಅಂಗವೈಕಲ್ಯ (ವಿಕಲಚೇತನ) ಹೊಂದಿರುವ ಹೆಣ್ಣು ಮಕ್ಕಳನ್ನು ದೇವರ ಹೆಸರಿನಲ್ಲಿ ಬಿಟ್ಟಿರುವುದು ಕಂಡು ಬರುತ್ತದೆ.

**೪.೩ ಬಸವಿ ಪದ್ಧತಿ**

ಬಳ್ಳಾರಿ ಜಿಲ್ಲೆಯ ಕೆಲವು ಪ್ರದೇಶಗಳು ವಿಜಯನಗರ ಆಳ್ವಿಕೆಗೆ ಒಳಪಟ್ಟಿದ ಕಾರಣದಿಂದಾಗಿ ಅವರ ಪರಂಪರೆಯ ಪ್ರಭಾವಕ್ಕೆ ಒಳಗಾಗಿವೆ. ಮಾಧ್ವ ಸಂಪ್ರದಾಯವನ್ನು ಅಳವಡಿಸಿಕೊಂಡಿದೆ. "ಹನುಮನಿಂದ ಮಾಧ್ವ ಸಂಪ್ರದಾಯ ಪ್ರಾರಂಭವಾಗುತ್ತದೆ. ಹನುಮನ ಅವತಾರವೇ ಭೀಮ ಭೀಮನ ಆನಂತರ ಬರುವವನೇ ಮಾಧ್ವ ತಮಿಳುನಾಡಿನ ಶ್ರೀರಂಗದಲ್ಲಿದ್ದ ರಾಮಾನುಜಾಚಾರ್ಯರು ತಿರುಪತಿಗೆ ಹೆಚ್ಚಿನ ಪ್ರಚಾರವನ್ನು ನೀಡಿದರು. ಚೋಳ, ಹೊಯ್ಸಳರ ಅವಧಿಯ ಆನಂತರ ವಿಜಯನಗರ ಆಳ್ವಿಕೆ ಬರುತ್ತದೆ. ವಿಜಯನಗರ ಪರಂಪರೆಯಲ್ಲಿ ಮೊದಲು ಶೈವ ಅರಸರಿದ್ದರು. ಸಾಳುವನರಸಿಂಗ ನಿಂದಲೇ ವೈಷ್ಣವರ ಆಳ್ವಿಕೆ ಪ್ರಾರಂಭವಾಯಿತು. ಕೃಷ್ಣ ದೇವರಾಯನ ಅವಧಿಯಲ್ಲಿ ವ್ಯಾಸರಾಯರು ಬಂದರು. ವ್ಯಾಸರಾಯರು ಆಂಜನೇಯನಿಗೆ ಹೆಚ್ಚು ಮಹತ್ವವನ್ನು ಕೊಟ್ಟರು ಇದರಿಂದಾಗಿ ಕೃಷ್ಣದೇವರಾಯರು ತಿರುಪತಿಯ ಪ್ರಭಾವಕ್ಕೆ ಒಳಗಾದಂತೆ ಆಂಜನೇಯನ ಪ್ರಭಾವಕ್ಕೂ ಒಳಗಾದರು. ವ್ಯಾಸರಾಯರು ಸ್ಥಾಪಿಸಿದ ಆಂಜನೇಯ ಮೂರ್ತಿಗಳು ವಿಶಿಷ್ಟವಾಗಿವೆ. ಕರ್ನಾಟಕದಲ್ಲಿ ೧೦ ನೇ ಶತಮಾನದ ಅವಧಿಯಲ್ಲಿಯೇ ಕಂಬದಲ್ಲಿ ಕೆತ್ತಿದ ಆಂಜನೇಯ ಚಿತ್ರಗಳಿದ್ದರೂ ಅದಕ್ಕೆ ಒಂದು ಸ್ವಾತಂತ್ರ ಅಸ್ತಿತ್ವ ಬಂದುದು ಕೃಷ್ಣದೇವರಾಯನ ಅವಧಿಯಲ್ಲಿಯೇ (೧೫೦೦) ಸೂಮಾರು ೭೦೦ ಕ್ಕೂ ಹೆಚ್ಚು ಆಂಜನೇಯ ದೇವಸ್ಥಾನಗಳನ್ನು ಅವನು ಕಟ್ಟಿಸಿದನೆಂಬ ಪ್ರತೀತಿಯಿದೆ." *(ಶೈಲಜಾ ಹಿರೇಮಠ:೨೦೦೩:೬೨)* ಈ ಎಲ್ಲಾ ಆಂಜನೇಯ ದೇವಾಲಯಗಳಿಗೆ ಬಸವಿ ಬಿಡುವ ಪದ್ಧತಿ ಪ್ರಾರಂಭವಾಗಿದೆ. ಆಂಜನೇಯ ದೇವರಿಗೆ ಬಿಡುವ ಈ ಪರಂಪರೆಗೆ ಸೇರಿದ ಬಸವಿಯರಿಗೆ ಮುದ್ರೆಯನ್ನು ಹಾಕುತ್ತಾರೆ. ಈ ಪದ್ಧತಿಗೆ ಬಿಡುವ ಹೆಣ್ಣು ಮಗಳಿಗೆ ಎದೆಯ ಮೇಲ್ಭಾಗಕ್ಕೆ ಮುದ್ರೆ ಹಾಕುತ್ತಾರೆ. ಒಂದು ಕಡೆ ಶಂಕ ಮತ್ತೊಂದು ಎದೆಯ ಭಾಗದಲ್ಲಿ ಚಕ್ರದ ಮುದ್ರೆಗಳನ್ನು ಬೆಂಕಿಯಲ್ಲಿ ಕಾಸಿ ಒತ್ತುತ್ತಿದ್ದರು. ಮುದ್ರೆಯ ಶಾಖ ಸ್ಪರ್ಶದಿಂದ ಪವಿತ್ರರಾಗುತ್ತಾರೆ ಎಂಬ ನಂಬಿಕೆ ಇವರಲ್ಲಿದೆ.

ಸಾಮಾನ್ಯವಾಗಿ ಮುದ್ರೆ ಹಾಕಿ ಬಿಟ್ಟಿರುವ ಎತ್ತು ಬಸವನಾದರೆ, ಮುದ್ರೆ ಹಾಕಿಸಿಕೊಂಡಿರುವ ಮಹಿಳೆಯನ್ನು ಬಸವಿ ಎಂದು ಕರೆಯುತ್ತಾರೆ. ಹೀಗೆ ಬಿಟ್ಟಿರುವ ಎತ್ತು (ಬಸವ) ಊರಿನ ದೇವಸ್ಥಾನಕ್ಕೆ ಬಿಟ್ಟಿರುವುದರಿಂದ ಅದು ದೇವರಿಗೆ ಸೇರಿದ್ದು, ಊರಿನಲ್ಲಿ ಅದು ಏನು ಮಾಡಿದನು ಯಾರ ಹೊಲವನ್ನು ಮೇಯ್ದಿರೂ ಶಿಕ್ಷಿಸುವುದಿಲ್ಲ. ಆ ಎತ್ತು (ಬಸವ) ಅಥವಾ ಗೂಳಿಗೆ ಸಂಪೂರ್ಣ ಸ್ವತಂತ್ರವಿರುತ್ತದೆ. ಹಾಗೆಯೇ ಬಸವಿಯಾಗಿ ಬಿಟ್ಟಿರುವ ಮಹಿಳೆಯೂ ದೇವರಿಗೆ ಸೇರಿದವಳಾಗಿದ್ದು, ಅವಳಿಗೆ ಲೈಂಗಿಕ ವಿಷಯದಲ್ಲಿ ಸಂಪೂರ್ಣ ಸ್ವತಂತ್ರವಿದೆ. ಹಾಗಾಗಿ ಅವಳು ಯಾವ ಪುರುಷನ ಜೊತೆಯಾದರು ಸಂಬಂಧ ಇಟ್ಟುಕೊಳ್ಳುವ ಸ್ವತಂತ್ರವಿದೆ. ಇದು ಸಮಾಜ ಒಪ್ಪಿತವಾದ ವ್ಯವಸ್ಥೆಯೂ ಆಗಿತ್ತು.

ವಿಜಯನಗರದ ಅರಸರ ರಸಿಕ ಜೀವನವನ್ನು ಕುರಿತಾಗಿ ಅಮುಕ್ತ ಮೌಲ್ಯದ ಗ್ರಂಥದಲ್ಲಿ ಕಾಣಬಹುದು. ಇಲ್ಲಿಯ ರಾಜರು, ನಾಯಕರು, ಪಾಳೇಗಾರರು, ಜಮೀನ್ದಾರರು ಇತರರು ದೇವದಾಸಿಯರ ಪೋಷಣೆಗೆ ಮಹತ್ವಕೊಟ್ಟಿದ್ದಾರೆ. ದೇವಸ್ಥಾನಗಳಲ್ಲಿ ಮತ್ತು ರಾಜಸಭೆಗಳಲ್ಲಿ ವೇಶ್ಯೆಯರ ನೃತ್ಯ ಸ್ಪರ್ಧೆಗಳ ಏರ್ಪಾಡುಗಳು ನಡೆಯುತ್ತಿದ್ದವೆಂದು ತಿಳಿದುಬರುತ್ತದೆ. ಬಸವಿ ಪದವೇ ಶೈವ ಪಂಥಕ್ಕೆ ಸೇರಿದಂತೆ ಕಂಡರೂ ಅವರ ಆಚರಣೆಗಳೆಲ್ಲವೂ ವೈಧಿಕ ಪರಂಪರೆಗೆ ಸೇರಿದುದಾಗಿ ಕಂಡುಬರುತ್ತದೆ. ವೈದಿಕ ಪರಂಪರೆಗೆ ಸೇರಿದ್ದರಿಂದ ಅಗ್ನಿಯು ವೈದಿಕರಿಗೆ ಶ್ರೇಷ್ಟವಾದದಾಗಿದೆ. "ಧರ್ಮ ಪ್ರಚಾರದ ಉದ್ದೇಶ ಮತ್ತು ಪುರುಷಶಾಹಿ ಸಂಸ್ಕೃತಿ ಸ್ವಾರ್ಥತೆಗಳೆರಡೂ ಬಸವಿ ಸಂಪ್ರದಾಯದಲ್ಲಿದೆ" *(ಶೈಲಜಾ ಹಿರೇಮಠ್:೨೦೦೩:೬೨)*. ಇಲ್ಲಿ ಧರ್ಮದ ಪ್ರಚಾರದ ಉದ್ದೇಶಕ್ಕಿಂತ ಹೆಚ್ಚಾಗಿ ಪುರುಷ ಶಾಹಿಗಳ ಸ್ವಾರ್ಥತೆಯೇ ಹೆಚ್ಚಾಗಿ ಕಂಡು ಬರುತ್ತದೆ.

"ವಿಜಯನಗರ ಕಾಲದಲ್ಲಿ ದೇವದಾಸಿ ಪದ್ಧತಿಗೆ ರಾಜಕೀಯ ಹಾಗೂ ಸಾಮಾಜಿಕ ಮುದ್ರೆ ಬಿದ್ದಿದ್ದರಿಂದ ಎಲ್ಲಾ ವೃತ್ತಿಗಳಿಗಿಂತಲೂ ಇದು ಸ್ವಾಭಾವಿಕ ವೃತ್ತಿಯಾಗಿ ಬೆಳೆದು ಬಂತು. ದೇವದಾಸಿ ಪದ್ಧತಿ ಮೇಲ್ವರ್ಗ ಮೇಲ್ಜಾತಿಗಳಲ್ಲಿ ಅಷ್ಟೇ ಅಲ್ಲದೆ ಕೆಳವರ್ಗದವರಲ್ಲಿ 'ಬಸವಿ' 'ಲೇಸಿ' ಯಾಗಿ ಬೆಳೆದು ಬಂದಿದೆ. ಯುದ್ಧದ ಸಂದರ್ಭದಲ್ಲಿ ಸೈನಿಕರನ್ನು ಸೆಳೆಯುವ ಸಲುವಾಗಿ ಬಸವಿಯರ ಸಂಖ್ಯೆಯನ್ನು ಹೆಚ್ಚಿಸಲಾಗುತ್ತಿತ್ತು. ವಿಜಯನಗರದ ರಾಜಧಾನಿ ವಿದ್ಯಾರಣ್ಯದ ಪ್ರಸಿದ್ಧ ಪೇಟೆಗಳಲ್ಲಿ ಅಚ್ಯುತ ಪೇಟೆಯನ್ನು ಸೂಳೆ ಬಜಾರ್ ಎಂದು ಕರೆಯಲಾಗುತ್ತಿದೆ. ಅಲ್ಲಿ ಮೇಲ್ಜಾತಿ ಮತ್ತು ಮಧ್ಯಮಜಾತಿಯ ವೇಶ್ಯೆಯರು ಮಾತ್ರ ಇರುತ್ತಿದ್ದರು. ಅಸ್ಪೃಶ್ಯ ಮಹಿಳೆ ರಾಜಧಾನಿಯ ಒಳಗೆ ಬರಲು ಅನುಮತಿ ಇಲ್ಲದ ಕಾರಣ ಅವಳು ರಾಜಧಾನಿಯ ಹೊರಗೆ ಇರುತ್ತಿದ್ದಳು. ಸೂಳೆ ಬಜಾರ್‌ಗೆ ಸಂಬಂಧಿಸಿದಂತೆ ಸಮಕಾಲಿನ ಕವಿಗಳು ವೇಶ್ಯೆಯನ್ನು ಸುಳ್ಳಿನಂಗಡಿ, ಕಪಟ, ಮೋಸ, ಮಾಡುವ ಸ್ಥಳ ಎಂದು ಹೇಳಿದ್ದಾರೆ. ಅಂದು ವೇಶ್ಯೆಯರ ಸಹವಾಸ ಮಾಡಿದವರ ಬದುಕನ್ನು ಸೂಚಿಸುವ ಜನಪದ ಹಾಡುಗಳು ನಿಜಕ್ಕೂ ಇಂದಿಗೂ ಸಹ ಮನುಷ್ಯನ ಬದುಕಿಗೆ ನಿದರ್ಶನವಾಗಿವೆ.

ತುಂಬಿಟ್ಟು ಗುಪ್ಪುಂಟೆ ತವರಿಗೆ ಮುಪ್ಪುಂಟೆ
ದೊಂಬನಾ ಮನೆಗೆ ಕದವುಂಟೆ ಅಣ್ಣಯ್ಯ
ಸೂಳೇಯ ನಂಬಿದವಗುಂಟೆ ಸಂಸಾರ *(ಚಿನ್ನಸ್ವಾಮಿ ಸೋಸಲೆ:೨೦೦೫:20)* .

ಸೂಳೆಯ ಸಹವಾಸ ಸರಿಯಲ್ಲ ಎಂದು ಹೇಳುತ್ತಿರುವುದನ್ನು ನೋಡಿದರೆ ಅಂದಿನ ಸಂದರ್ಭದಲ್ಲಿ ಸೂಳೆಯರಿಗೆ ಇದ್ದ ಸ್ಥಾನಮಾನ ಅರ್ಥವಾಗುತ್ತದೆ. ಮೇಲ್ಜಾತಿಯ ಸೂಳೆಯ ಸ್ಥಿತಿಯೇ ಹೀಗಿರಬೇಕಾದ'ರೆ ಇನ್ನು ಕೆಳಜಾತಿ ಮಹಿಳೆಯರ ಸ್ಥಿತಿ ಇನ್ನೂಗಂಭೀರಗಿರುತ್ತಿತ್ತು. ೧೨೦೫ ರ ಶಾಸನ ಹಾಗೂ ೧೪೩೦ ರ ಶಾಸನಗಳು ವಿಜಯನಗರದ ಹೊರಗೆ ಇದ್ದ ಹೊಲೆಯರ ಹಟ್ಟಿ, ಮಾದಿಗರ ಹಟ್ಟಿ, ಕೇರಿಗಳ ಮೇಲೆ ಅವರು ಮಾಡುತ್ತಿದ್ದ ಎಲ್ಲಾ ಕೆಲಸಗಳ ಮೇಲೂ ತೆರಿಗೆ ವಿಧಿಸಿದ ಬಗ್ಗೆ ಬೆಳಕು ಚೆಲ್ಲುತ್ತವೆ" *(ನೇತ್ರಾವತಿ ಕೆ ವಿ: ೨೦೧೨: ೧೫೫).* ಹೀಗೆ ರಾಜರ ಆಳ್ವಿಕೆಯ ಸಂದರ್ಭದಲ್ಲಿ ದೇವಾಲಯ ಮತ್ತು ದೇವದಾಸಿಯರನ್ನು ರಾಜರು ಪೋಷಿಸುತ್ತಿದ್ದರು. ಹಾಗಾಗಿ ಆ ಕಾಲದಲ್ಲಿ ಉನ್ನತ ಜಾತಿಯವರು ಕೂಡ ದೇವದಾಸಿಯಾಗಿದ್ದರು. ಆದರೆ ಕೆಳಜಾತಿಯವರಲ್ಲಿ ಬಸವಿಯಂತಹ ಪದ್ಧತಿಗಳನ್ನು ಹುಟ್ಟು ಹಾಕಿದರು. ರಾಜಮನೆತನಗಳ ಪತನದನಂತರ ಮೇಲ್ಜಾತಿಯ ಗಂಡಸರು ಜಾಗೃತರಾಗಿ ದೇವದಾಸಿ ಪದ್ಧತಿಯಿಂದ ತಮ್ಮ ಜಾತಿಯ ಮಹಿಳೆಯರನ್ನು ರಕ್ಷಿಸಿದರು. "ಮೇಲ್ವರ್ಗದ ಗಂಡಸರು ತಮ್ಮ ಹೆಂಡತಿ ಮತ್ತು ಹೆಣ್ಣು ಮಕ್ಕಳಿಗೆ ಮಾತ್ರ ಕಟ್ಟುನಿಟ್ಟಿನ ಲೈಂಗಿಕ ನೀತಿ ನಿಯಮಗಳನ್ನು ಪ್ರತಿಪಾದಿಸುತ್ತಿದ್ದರು. ಇದನ್ನು ಮುಖ್ಯವಾಗಿ ಆಸ್ತಿಯು ತಮ್ಮದೇ ಆದ ರಕ್ತ ಸಂಬಂಧ, ಜಾತಿ ಮತ್ತು ವರ್ಗದಲ್ಲೇ ಹರಿಯುವಂತೆ ನಿಯಂತ್ರಿಸುವ ಸಲುವಾಗಿ ಸತಿಪದ್ಧತಿ ಯಂತಹ ಗಂಡನ ಚಿತೆಯಲ್ಲಿ ಹೆಂಡತಿಯ ಸಜೀವ ದಹನವು ಮೇಲ್ಜಾತಿ ಮೇಲ್ವರ್ಗದಲ್ಲಿ ಜಾಸ್ತಿ ಪ್ರಚಲಿತದಲ್ಲಿತ್ತು. ಕೆಳಜಾತಿಗಳಲ್ಲಿಯೂ ಇದು ಪ್ರಚಲಿತವಿದ್ದರು ಅದರ ಪ್ರಮಾಣ ಕಡಿಮೆ ಇತ್ತು. ಯಾಕೆಂದರೆ ಕೆಳಜಾತಿಗಳಲ್ಲಿ ಗಂಡ ಸತ್ತ ನಂತರ ಬಸವಿಯಾಗಿ ದೇವರಿಗೆ ಬಿಡಲಾಗುತ್ತಿತ್ತು. ಕೆಳಜಾತಿಯ ಹೆಣ್ಣು ಮಕ್ಕಳು ಸಹ ಸತಿಯಾಗಿ ಹೋದರೆ ಅವರ ಸಂಖ್ಯೆ ಕಡಿಮೆಯಾಗಿ ರಾಜ್ಯದಲ್ಲಿ ದೇವದಾಸಿಯರ ಸಂಖ್ಯೆ ಕಡಿಮೆಯಾಗುತ್ತದೆ ಎಂದು ರಾಜ್ಯಧಿಕಾರದ ಮೇಲೆ ಬೀರುವ ಪರಿಣಾಮವನ್ನು ಅರಿತ ರಾಜರು ಸತಿ ಹೋಗುವ ವಿಷಯದಲ್ಲಿ ಕೆಳ ಜಾತಿಗಳಿಗೆ ಐಚ್ಛಿಕತೆಯನ್ನು ಇರಿಸಿದರು. ಮೇಲ್ವರ್ಗದ ಹೆಂಗಸರನ್ನು ಪರದೆ ಮತ್ತು ನಾಲ್ಕು ಗೋಡೆಗಳ ನಡುವೆಯೇ ಕಟ್ಟು ಗೂಟ್ಟಾಗಿ ಉಳಿಯುವಂತೆ ಮಾಡಿ ಅವರನ್ನು ಖಾಸಗಿ ಆಸ್ತಿಗಳಲ್ಲೇ ಅತ್ಯಂತ ಖಾಸಗಿಯಾದುದನ್ನಾಗಿ ನೋಡಲಾಗುತ್ತಿತ್ತು. ದಲಿತ ಮಹಿಳೆಯರು ಜಾತಿಯಲ್ಲಿ, ವರ್ಗದಲ್ಲಿ ಕೆಳಗಿನವರಾದ್ದರು. ಲೈಂಗಿಕ ವಿಷಯದಲ್ಲಿ ಇದು ಯಾವುದೇ ತರಹದ ಅಡ್ಡಿಯನ್ನು ಉಂಟು ಮಾಡುತ್ತಿರಲಿಲ್ಲ. ದಲಿತ ಮಹಿಳೆ ಲೈಂಗಿಕ ವಿಷಯದಲ್ಲಿ ಸಮಾಜದ ಆಸ್ತಿಯಾಗಿದ್ದಳು. ಇಡೀ ದಲಿತ ಕುಟುಂಬ ಊರಿನ ಹೊರಗೆ ಜೀವಿಸುತ್ತಿದ್ದರೂ ಕೂಡ ಅಂತಹ ಮೈಲಿಗೆಗಳು ಕಾಮದ ವಿಷಯದಲ್ಲಿ ಕೆಲಸ ಮಾಡುತ್ತಿರಲಿಲ್ಲ. ಶ್ರೀಮಂತ, ಆಳುವ ಅಥವಾ ಭೂಮಾಲೀಕರ ವರ್ಗದ ಮಹಿಳೆಯರು ತಾವು ಇಂಥಹ ಉಸಿರುಗಟ್ಟಿಸುವ ವಾತಾವರಣದಲ್ಲಿ ಯಾವ ಸಮಸ್ಯೆಗಳಿಗೂ ಸ್ಪಂದಿಸದೇ ಇರುವುದು ಇಲ್ಲಿ ಗಮನಾರ್ಹ ಇಂದೂ ಕೂಡ ಇದು ಬದಲಾಗಿಲ್ಲ ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆಗೆಲ್ಲ ಮೇಲ್ವರ್ಗದ ಮಹಿಳೆಯರು ತಮ್ಮ ಶೋಷಿತ' ವರ್ಗದ ಪರವಾಗಿಯೇ ಇರುತ್ತಾರೆ" *(ನೇತ್ರಾವತಿ ಕೆ ವಿ: ೨೦೧೨: ೧೪೮).* ಹೀಗೆ

ಮೇಲ್ವರ್ಗದವರು ದೇವರು ಮತ್ತು ಧರ್ಮದ ಹೆಸರಿನಲ್ಲಿ ಕೆಳವರ್ಗದವರಿಗೆ ಭಕ್ತಿಯ ಮೌಢ್ಯವನ್ನು ತುಂಬಿ ದಾಸ್ಯತ್ವಕ್ಕೆ ತಳ್ಳುವ ಮೂಲ ಈ ದೇವದಾಸಿ ಪದ್ಧತಿಗೆ ಒಳಪಡುವಂತೆ ಮಾಡಿದರು.

ಬಸವಿ ಸಂಪ್ರದಾಯವು ವಿಜಯನಗರ ಕಾಲದಲ್ಲಿ ಹುಟ್ಟಿಕೊಂಡಿರಬೇಕು. ಈ ಪದ್ಧತಿಯೂ ವಿಜಯನಗರ ಸಾಮ್ರಾಜ್ಯ ರೂಪಿಸಿದ ವ್ಯವಸ್ಥೆ ಆಗಿದ್ದರೂ ಬಸವಿ ಪದ್ಧತಿಗೆ ಧಾರ್ಮಿಕವಾದ ಸ್ವರೂಪವಿದೆ ಎನ್ನಬಹುದು. ಇವರ ಕಾಲದಲ್ಲಿಯೇ ಬಹುಸಂಖ್ಯೆಯಲ್ಲಿ ಹನುಮಂತ ದೇವಾಲಯಗಳನ್ನು ಕಟ್ಟಿಸಿ ಅದಕ್ಕೆ ಹೆಣ್ಣು ಮಕ್ಕಳನ್ನು ಬಸವಿ ಬಿಡುವ ಪದ್ಧತಿಯನ್ನು ಹುಟ್ಟು ಹಾಕಿದರು. ವಿಜಯನಗರ ಸಾಮ್ರಾಜ್ಯಗಳ ಕಾಲದಲ್ಲಿ ಇವರ ಸಂಖ್ಯೆ ಅಧಿಕವಾಗಲು ಕಾರ್ಣಗಳನ್ನು ಸೂಕ್ಷ್ಮವಾಗಿ ಗಮನಿಸಿ ನೋಡಿದಾಗ ಅನೇಕ ಕಾರಣಗಳು ದೊರೆಯುತ್ತದೆ. ಪ್ರಮುಖವಾಗಿ ವಿಜಯನಗರ ಸಾಮ್ರಾಜ್ಯವು ವಾಣಿಜ್ಯ ಕೇಂದ್ರವಾಗಿ ಬೆಳೆಯುತಿತ್ತು. ಹಾಗಾಗಿ ಅನೇಕ ದೇಶ ವಿದೇಶಗಳಿಂದ ಸಾವಿರಾರು ವ್ಯಾಪಾರಸ್ಥರು ಇಲ್ಲಿ ಬಂದು ಆಶ್ರಯ ಪಡೆಯುತ್ತಿದ್ದರು. ವ್ಯಾಪಾರಕ್ಕೆ ಎಂದು ಬಂದವರು ತಿಂಗಳು ಅಥವಾ ವರ್ಷಗಳ ಕಾಲ ಇಲ್ಲಿಯೇ ಉಳಿಯಬೇಕಾಗಿತ್ತು. ಹೀಗೆ ವರ್ಷಾನುಗಟ್ಟಲೆ ಹೆಂಡತಿಯಿಂದ ದೂರ ವಿರುವ ಇವರು ಹೆಣ್ಣಿನ ಸಂಗವನ್ನು ಬಯಸುತ್ತಿದ್ದರು. ಈ ರೀತಿಯ ಬಯಕೆಗಳನ್ನು ಈಡೇರಿಸಲು ಹೆಣ್ಣು ಮಕ್ಕಳನ್ನು ಬಿಡುವ ಸಂಪ್ರದಾಯ ಸಾಮ್ರಜ್ಯದ ಕಾಲದಲ್ಲಿ ಹೆಚ್ಚಾಯಿತು. ಅದ್ದರಿಂದ ದೇವಾಲಯಗಳಿಗೆ ಹೆಣ್ಣು ಮಕ್ಕಳನ್ನು ಬಿಡುವ ಸಂಪ್ರದಾಯಗಳಿಗೆ ವಿಶೇಷವಾದ ಪ್ರಾಧಾನ್ಯತೆಯನ್ನು ನೀಡಿ ಪ್ರೋತ್ಸಾಹಿಸಿದ್ದರು.

ಜಾತಿಯ ಶ್ರೇಣಿಕರಣದಲ್ಲಿ ದೇವರ ಹೆಸರಿನಲ್ಲಿ ಲೈಂಗಿಕವಾಗಿ ಬಳಸಿಕೊಳ್ಳುವ ದಾಸಿಯರು ಕಾಣಿಸಿಕೊಂಡಿರುವರು. ಜಾತಿ ಮತ್ತು ಧರ್ಮದ ನೆಲೆಯಲ್ಲಿ ಪುರೋಹಿತಶಾಹಿಯವರ ರಾಜಕೀಯದಡಿಯಲ್ಲಿ ದೇವಾಲಯದಲ್ಲಿ ಲೈಂಗಿಕವಾಗಿ ಬಳಸಲು ಮಹಿಳೆಯರು ದಾಸಿಯ ರೂಪ ಪಡೆದರು. ಪುರೋಹಿತಶಾಹಿಯವರಾದ ಬ್ರಾಹ್ಮಣ ಮತ್ತು ರಾಜಶಾಹಿಯವರಾದ ಕ್ಷತ್ರಿಯರನ್ನು ಹೊರತು ಪಡಿಸಿದರೆ ಅವರ ಕೆಳಗಿನ ಜಾತಿಯಲ್ಲಿ ಧರ್ಮ ದೇವರಲ್ಲಿ ಸೇವೆಗೆಂದು ಹೆಣ್ಣು ಮಕ್ಕಳನ್ನು ಬಿಡುವುದು ಕಂಡು ಬರುತ್ತದೆ. ಧಾರ್ಮಿಕ ಸಾಮಾಜಿಕವಾಗಿ ಪ್ರಭುತ್ವ ಸಾಧಿಸಿದ ಈ ಎರಡು ವರ್ಗಗಳು ಆರ್ಥಿಕವಾಗಿ, ಸಾಮಾಜಿಕವಾಗಿ ಪ್ರಬಲವಾಗಿದ್ದವು. ಈ ಎಲ್ಲ ನೆಲೆಗಳಿಂದಲು ದುರ್ಬಲವಾಗಿದ್ದ ಕೆಳಶ್ರೇಣಿಯ ಜಾತಿ ಧರ್ಮದವರೆಲ್ಲರೂ ಅವರ ಬಲಿಪಶುವಾದರು ಈ ವರ್ಗದವರು ತಮಗೆ ಅನುಕೂಲವಾಗುವಂತೆ ತಮ್ಮ ಸ್ವೇಚ್ಛಾಚಾರಕ್ಕೆ ಧಕ್ಕೆ ಬರದಂತೆ ತಮ್ಮ ಧಾರ್ಮಿಕ ಮಡಿವಂತಿಕೆ ಹಾಳಾಗಬಾರದು ಹಾಗೆಯೇ ತಮ್ಮ ಲೈಂಗಿಕ ಸ್ವೇಚ್ಛಾಚಾರಕ್ಕೆ ತಡೆ ಬಂದಿರಬಾರದು. ಅದು ಜನತೆಗೆ ವಿಕಾರವಾಗಿ ಕಂಡಿರಲೂ ಬಾರದು. ಆ ಹಿನ್ನೆಲೆಯಲ್ಲಿ ಮಹಿಳೆಯರನ್ನು ದೇವರ ಹೆಸರಿನಲ್ಲಿ ದೇವಾಲಯಕ್ಕೆ ಬಿಡುವಂತೆ ರೂಪಿಸಿದರು. ನೋಡಲು ಮತ್ತು ಮುಟ್ಟಲುಬಹುದಾದ ಮಧ್ಯಮ ಜಾತಿಯವನರನ್ನು ಅಂಗಭೋಗ ಮತ್ತು ರಂಗಭೋಗದ ಸೇವೆಗಳಲ್ಲಿ ರೂಪಿಸಿ ಬೆಳೆಸಿಕೊಂಡು ಬಂದರು. ಮಧ್ಯಮ ಜಾತಿಯಲ್ಲೇ ಶ್ರೇಷ್ಠತೆಯ ಪಟ್ಟಿಗೆ ಸೇರಿದ ಪುರುಷರು ಕ್ಷತೀಯ ಮತ್ತು ಬ್ರಾಹ್ಮಣರ ವ್ಯವಸ್ಥೆಯ ಅಡಿಯಲ್ಲಿ ಕೆಲಸ ಮಾಡುತ್ತಾ ಸಣ್ಣ ಪ್ರಮಾಣದ ಅಧಿಕಾರವನ್ನು ಅನುಭವಿಸುತ್ತಿದ್ದರು.ಹಾಗಾಗಿ

ತಮ್ಮ ಜಾತಿಯ ಮಹಿಳೆಯರನ್ನು ಉಳಿಸಿಕೊಳ್ಳಲು ಈ ಪದ್ಧತಿಗಳನ್ನು ತಮಗಿಂತ ಕೆಳಜಾತಿಯ ಶೂದ್ರರಲ್ಲಿ ಧಾರ್ಮಿಕ ಹೆಸರಿನಲ್ಲಿ ತಮ್ಮ ಲೈಂಗಿಕ ತೃಪ್ತಿಯನ್ನು ಈಡೇರಿಸಿಕೊಳ್ಳಲು ಧಾರ್ಮಿಕ ಮೌಢ್ಯಗಳನ್ನು ತುಂಬಿ ಕೆಳವರ್ಗದಲ್ಲಿ ಬಸವಿ ಪದ್ಧತಿಯನ್ನು ಹುಟ್ಟು ಹಾಕಿದರು.

"ವಿಜಯನಗರ ಸಾಮ್ರಾಜ್ಯದಲ್ಲಿದ್ದ ಅಚ್ಯುತರಾಯ ಪೇಟೆಯನ್ನು ಸೂಳೆ ಬಜಾರ ಎಂದೇ ಗುರುತಿಸುತ್ತಾರೆ. ಅಚ್ಯುತರಾಯ ಬಜಾರದ ಬಲಭಾಗದಲ್ಲಿ ಮೂರ್ತಿ ಇಲ್ಲದ ದೇವಾಲಯವಿದೆ.ಇಲ್ಲಿ ದೊರೆತ ಶಾಸನದ ಉಲ್ಲೇಖದ ಪ್ರಕಾರ ಇಲ್ಲಿ ಆಂಜನೇಯ ದೇವಸ್ಥಾನವಿತ್ತು (ಉದೃತ : ಇನ್ ವಿಜಯನಗರ ಪ್ರೋಗ್ರೆಸ್ ಆಫ್ ರೀಸರ್ಚ್). ಅದು ವೈಷ್ಣವ ಪಂಥದ ಶಿಲ್ಪವನ್ನು ಒಳಗೊಂಡಿದೆ. ವಿಜಯನಗರಕ್ಕೆ ಭೇಟಿ ನೀಡಿದ ಬಹುಪಾಲು ವಿದೇಶಿ ಪ್ರವಾಸಿಗರು ಅಲ್ಲಿರುವ ದೇವಸ್ತ್ರೀಯರ ಕುರಿತಾಗಿ ಉಲ್ಲೇಖಿಸುತ್ತಾರೆ. ಹನುಮಂತ ದೇವರ ದೇವಾಲಯಕ್ಕೆ ಬಸವಿ ಬಿಡುವ ಸಂಪ್ರದಾಯಕ್ಕೆ ಸಾಂಸ್ಕೃತಿಕ ಚಹರೆಗಿಂತಲೂ ವ್ಯಾವಹಾರಿಕ ಚಹರೆ ಇದೆ. ಅದಕ್ಕೆ ಜೋಗತಿ ಸಂಪ್ರದಾಯಕ್ಕಿರುವ ಪ್ರಬಲವಾದ ಪೌರಣಿಕ ಹಿನ್ನೆಲೆಯಿಲ್ಲ." *(ಶೈಲಜ ಹೀರೆಮಠ:೨೦೦೩: ೬೩)* ಜೋಗತಿ ಸಂಪ್ರದಾಯಕ್ಕೆ ರೇಣುಕ ಎಲ್ಲಮ್ಮ ಮತ್ತು ಹುಲಿಗೆಮ್ಮ ದೇವರುಗಳ ಪೌರಾಣಿಕ ಹಿನ್ನೆಲೆ ದೊರೆಯುತ್ತದೆ. ಈ ಬಳ್ಳಾರಿ ಜಿಲ್ಲೆಯ ಹಲವು ಪ್ರದೇಶಗಳಲ್ಲಿ ಬಸವಿಯಾಗಿರುವ ಕುರಿತು ಮಾಹಿತಿ ದೊರೆಯುತ್ತದೆ. ಇಲ್ಲಿ ಮಲ್ಲಯ್ಯ, ಕನಕರಾಯ, ಪೆನ್ನೋಬಳೇಶ್ವರ, ಈರಣ್ಣ, ತಿರುಪತಿ ಮತ್ತು ಆಂಜನೇಯ ದೇವರಿಗೆ ಶಂಕ ಮತ್ತು ಚಕ್ರದ ಮುದ್ರೆಗಳನ್ನು ಹಾಕಿಕೊಂಡಿರುವ ಬಸವಿಯರನ್ನು ಕಾಣಲಾಗುವುದು.

"ವಿಜಯನಗರ ಕಾಲದಲ್ಲಿ ದೇವದಾಸಿಯಾದವರಿಗೆ ಶಂಕ ಹಾಗೂ ಚಕ್ರದ ಮುದ್ರೆಯನ್ನು ಕಾಯಿಸಿ ಗುರುತಿಗಾಗಿ ಹಾಕಲಾಗುತ್ತಿತ್ತು. ಇದು ಸಂಪ್ರದಾಯವಾಗಿ ಬೆಳೆದು ಬಂದಿತು. ಶಂಕ ಮತ್ತು ಚಕ್ರ ವಿಷ್ಣುವಿನ ಆಯುಧಗಳಾಗಿದ್ದು, ವೈಷ್ಣವ ಬ್ರಾಹ್ಮಣರೇ ಇದನ್ನು ಜಾರಿಗೊಳಿಸಿರುತ್ತಾರೆ ಎಂಬುದಕ್ಕೆ ಇವೆ ಬಹಳ ಮುಖ್ಯ ಆಧಾರಗಳಾಗಿ ನಿಲ್ಲುತ್ತವೆ. ಮೇಲ್ಜಾತಿಗಳಲ್ಲಿ ವೈಷ್ಣವ ದೇವರುಗಳಿಗೆ ಮಹಿಳೆಯರನ್ನು ದೇವದಾಸಿಯಾ ಬಿಡಲಾಗುತ್ತಿತ್ತು. ಆದರೆ ಕೆಳಜಾತಿಯ ಮಹಿಳೆಯರನ್ನು ವೈಷ್ಣವ ದೇವಾಲಯಗಳಿಗೆ ದೇವದಾಸಿಯಾಗಿ ಬಿಡುತ್ತಿರಲಿಲ್ಲ ಎಂಬುದನ್ನು ಗಮನಿಸಬೇಕು. ಇವರು ಕೇವಲ ಬಸವಿ, ಲೇಸಿಯರು ಮಾತ್ರ, ಇವರು ಸಮಾಜದ ಸೂಳೆಯರು. ಇವರನ್ನು ವ್ಯವಸ್ಥೆ ತುಂಬಾ ಕೆಟ್ಟದಾಗಿ ನಡೆಸಿಕೊಳ್ಳುತ್ತಿತ್ತು. ಇದರ ಎಲ್ಲಾ ನೋವುಗಳನ್ನೊಳಗೊಂಡ ದಲಿತ ಮಹಿಳೆಯರಿಗೆ ಆಂಜನೇಯನ ದೇವಾಲಯದಲ್ಲಿ ಮುತ್ತನ್ನು ಏಕೆ ಕಟ್ಟಿಸುತ್ತಿದ್ದರು? ಆಂಜನೇಯನಿಗೂ ದಲಿತ ಮಹಿಳೆಯರಿಗೂ ಇರುವ ಸಂಬಂಧವೇನು? ಎಂಬ ಕೂತುಹಲ ಬರದೆ ಇರದು. ಜನಪದ ಸಾಹಿತ್ಯದಲ್ಲಿನ ಆಧಾರದ ಮೂಲಕ ನೋಡುವುದಾದರೆ,

'ಕರಿಯ ಬಂಡೆಯ ಮ್ಯಾಲೆ ಮದರಂಗ ಹೊಯ್ದೊನೆ
ಹರಿಯ ನಾಮದ ಹನುಮಣ್ಣ– ಲಂಕೆಯ
ಉರಿಸಿ ಬಂದೂರ ಬರಗ್ಯಾನೋ
ಕ್ವಾಡಂಗ ನಿವನೆಂದು ಕೇಡು ನುಡಿಯಲೀ ಬೇಡಿ

ನೋಡಿರೆನವ್ವ ಅವನ ಸಾಹಸ ಹಂಪಿಯ
ಕ್ವಾಟೀಯ ಕಿತ್ತು ಉರಿದಾನೋ
ಇದು ಮಂಗನೆಂದು ಕುಂದು ನುಡಿಯಲೀ ಬೇಡಿ
ನೋಡಿರವ್ವ ಅವನ ಸಾಹಸ ಹಂಪಿನ
ಗುಡಿಯನ್ನೇ ಕಿತ್ತು ವೊಗೆದಾನ *(ಚಲುವರಾಜು : ೧೯೯೬ : ೪೧)*

ದಲಿತ ಮಹಿಳೆಯರಿಗೆ ಹನುಮಂತನೇ ಹರಿ. ಲಂಕೆಯನ್ನು ಸುಟ್ಟು ಸೀತೆಯನ್ನು ಕಾಪಾಡಿದ ಹನುಮಂತ ನಮ್ಮನ್ನು ಕೂಡಿ ಕಾಪಾಡುತ್ತಾನೆ ಎಂಬ ಆಶಯ ಈ ಮಹಿಳೆಯರಲ್ಲಿದೆ. ತಮ್ಮ ಈ ದುಸ್ಥಿತಿಗೆ ಕಾರಣವಾದ ಹಂಪಿ ಸಾಮ್ರಾಜ್ಯವನ್ನು ಶಪಿಸುತ್ತ ಹಂಪಿಯ ಕ್ವಾಟೀಯ ಕಿತ್ತು ಉರಿದಾನೋ ಹಂಪಿಯ ಗುಡಿಯನ್ನೇ ಕಿತ್ತು ಒಗೆದಾನೋ ಎಂದು ಹೇಳುವಲ್ಲಿ ಹನುಮಂತ ಹಂಪಿಯನ್ನು ನಾಶ ಮಾಡಿದ ಎಂಬ ಕನಸು ಕಾಣುತ್ತಾರೆ. ಇದು ಅವರ ಆಶಯ. ಪ್ರಭುತ್ವದ ವಿರುದ್ಧ ತಿರುಗಿ ಬೆಳೆದ ದುರ್ಬಲರಿಗೆ ಉಳಿದಿರುವುದು ಒಂದೇ ಆಶಯಗಳ ಮೂಲಕ ಕನಸು ಕಟ್ಟುವುದು. ಅದನ್ನು ಹಾಡಾಗಿಸುವುದು. ಈ ಮೂಲಕ ಯೋಚಿಸುವುದಾದರೆ ಈ ಕಾರಣಕ್ಕಾಗಿಯೇ ದಲಿತ ಮಹಿಳೆಯರು ಮುತ್ತನ್ನು ಆಂಜನೇಯನ ದೇವಸ್ಥಾನದಲ್ಲಿ ಕಟ್ಟಿಸಿಕೊಳ್ಳುತ್ತಿದ್ದಿರಬೇಕು. ಹಂಪಿಯ ಪರಿಸರದಲ್ಲಿ ಹೆಚ್ಚಾಗಿ ಆಂಜನೇಯನ ವಿಗ್ರಹಗಳ ಗುಡಿಗಳು ಕಾಣಸಿಗುವುದನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು. ಸಮುದಾಯ ಯಾವಾಗಲೂ ವ್ಯವಸ್ಥೆಯ ವಿರುದ್ಧದ ತಿರುಗಿ ಬಿದ್ದವರ ಪರವಾಗಿಯೇ ಇರುತ್ತದೆ. ಇನ್ನೂ ಗ್ರಾಮದೇವತೆಗಳ ಹಿನ್ನೆಲೆಗೆ ಸೇರಿದವರು ಗುಪ್ತವಾಗಿ ಆಂಜನೇಯನ ದೇವಸ್ಥಾನದಲ್ಲಿಯೇ ಮುದ್ರೆ ಮತ್ತು ಮುತ್ತು ಕಟ್ಟಿಸುತ್ತಾರೆ. ಗಂಡು ಮಕ್ಕಳಿಗೆ ಮುದ್ರೆಯನ್ನು ಆಂಜನೇಯನ ಗುಡಿಯಲ್ಲಿ ಒತ್ತಿಸುತ್ತಾರೆ. ಇನ್ನುಳಿದಂತೆ ಗ್ರಾಮದೇವತೆಗಳ ಗುಡಿಗಳಲ್ಲಿಯೂ ಮುತ್ತು ಕಟ್ಟಿಸುತ್ತಾರೆ." (ನೇತ್ರಾವತಿ ಕೆ ವಿ: ೨೦೧೨: ೧೫೫-೧೫೬). ಬಸವಿ ಪದ್ಧತಿ ಪೌರಾಣಿಕ ಹಿನ್ನಲೆ ಇಲ್ಲದಿದ್ದರು ಜನಪದರ ಮೌಖಿಕ ಸಾಹಿತ್ಯದ ಆಧಾರಗಳು ಸಿಗುತ್ತವೆ. ಹೀಗೆ ಬಳ್ಳಾರಿ ಜಿಲ್ಲೆಯ ಅನೇಕ ಪ್ರದೇಶಗಳಲ್ಲಿ ಹೆಣ್ಣು ಮಕ್ಕಳನ್ನು ದೇವರ ಹೆಸರಿನಲ್ಲಿ ಸೇವೆಗೆ ಬಿಡುವುದಕ್ಕೆ ಅನೇಕ ಹೆಸರುಗಳಿಂದ ಸೂಚಿಸುತ್ತಾರೆ. ಹೊರಿ ಹೊರಿಸಿಕೊಂಡವರು, ಮನೆಗೆ ಬಿಟ್ಟವರು, ದೇವರಿಗೆ ಬಿಟ್ಟವರು, ದೇವರು ಹೊತ್ತವರು, ಮನೆತನಕ್ಕೆ ಬಿಟ್ಟವರು ಹೀಗೆ ಮೊದಲಾದ ಹೆಸರಿನಿಂದ ಕರೆಯುತ್ತಾರೆ. ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳಲ್ಲಿ ದೇವದಾಸಿಯಾಗಿ ತಮ್ಮ ಹೆಣ್ಣು ಮಕ್ಕಳನ್ನು ದೇವರಿಗೆ ಬಿಡುವ ಸಂಪ್ರದಾಯವನ್ನು ನಡೆಸುತ್ತಾರೆ. ಬಳ್ಳಾರಿ ಜಿಲ್ಲೆಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಲ್ಲಿ ಹೆಚ್ಚಾಗಿ ಮುದ್ರೆ ಹಾಕಿಸಿಕೊಂಡಿರುವ ಮಹಿಳೆಯರು ಕಂಡು ಬರುತ್ತಾರೆ. ಅವರಲ್ಲೂ ಬಹುಪಾಲು ಮಹಿಳೆಯರು ಮುದ್ರೆ ಹಾಕಿಸಿಕೊಳ್ಳುವುದು ಹೊಸಪೇಟೆ ಸಿರುಗುಪ್ಪ, ಕೂಡ್ಲಿಗಿ, ಕಮಲಾಪುರ, ಸಂಡೂರು, ಮರಿಯಮ್ಮನಹಳ್ಳಿಗಳಲ್ಲಿ ಕಂಡುಬರಿತ್ತದೆ. ಈ ಪದ್ಧತಿಗೆ ಒಳಪಡಿಸಲು ಹಾಕುವ ಮುದ್ರೆಗಳಲ್ಲಿ ಎರಡು ವಿಧಗಳನ್ನು ಕಾಣಲಾಗುತ್ತದೆ. ಒಂದು ಗಟ್ಟಿ ಮುದ್ರೆಯಾದರೆ, ಮತ್ತೊಂದು

ಹೂ ಮುದ್ರೆಯಾಗಿದೆ. ಆರಂಭದ ಕಾಲದಲ್ಲಿ ಗಟ್ಟಿಮುದ್ರೆಯೇ ಹೆಚ್ಚು ಪ್ರಚಲಿತವಾಗಿತ್ತು. ಕಾಲಾಂತರದಲ್ಲಿ ನಾಗರಿಕತೆಗೆ ಒಳಗಾದಂತೆಲ್ಲ ಮತ್ತು ಉಗ್ರವಾದ ಆಚರಣೆಗಳು ಸೌಮ್ಯಗೊಳ್ಳತೊಡಗಿದ ಕಾರಣಕ್ಕಾಗಿ ಹೂ ಮುದ್ರೆಯೂ ಆಚರಣೆಗೆ ಬಂದಿದೆ ಎನ್ನಬಹುದು. ದೇವದಾಸಿ ಪದ್ಧತಿಯ ನಿಷೇಧ ಕಾನೂನು ಬಂದ ನಂತರವೂ ಕೂಡ ಈ ಪದ್ಧತಿ ನಡೆದಿದೆ. ಕಾನೂನು ಪ್ರಕಾರ ಬಸವಿ ಬಿಡುವುದು ತಪ್ಪಾಗಿ ಜೈಲು ಮತ್ತು ದಂಡ ಶಿಕ್ಷೆಯನ್ನು ಮನಗಂಡ ಜನರು ಮನೆಯಲ್ಲಿಯೇ ಕದ್ದು ಮುಚ್ಚಿ ಹೂ ಮುದ್ರೆ ಹಾಕುವ ಮೂಲಕ ಬಸವಿಯಾಗಿ ಬಿಟ್ಟಿರುವ ಸಂಗತಿಗಳು ಕ್ಷೇತ್ರಕಾರ್ಯದ ಸಂದರ್ಭಗಳಲ್ಲಿ ಕಂಡುಬಂದಿವೆ.

ಗಟ್ಟಿ ಮುದ್ರೆ: ಸಾಮಾನ್ಯವಾಗಿ ಈ ಅಧ್ಯಯನ ಕ್ಷೇತ್ರದ ವ್ಯಾಪ್ತಿಯಾದ ಬಳ್ಳಾರಿ ಜಿಲ್ಲೆಯ ಅನೇಕ ಪ್ರದೇಶಗಳಲ್ಲಿ ಆಂಜನೇಯ, ಈರಣ್ಣ, ಮಲ್ಲಯ್ಯ, ಕನಕರಾಯ, ಪೆನ್ನೊಬಳೇಶ್ವರ ಮತ್ತು ತಿರುಪತಿ ದೇವರುಗಳ ಮುದ್ರೆ ಹಾಕಿಸಿಕೊಂಡವರು ಕಂಡು ಬರುತ್ತಾರೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಕೂಡ್ಲಿಗಿ, ಮರಿಯಮ್ಮನಹಳ್ಳಿ, ಸಿರುಗುಪ್ಪ, ತೆಕ್ಕಲಕೋಟೆ ಮುಂತಾದ ಪ್ರದೇಶಗಳಲ್ಲಿ ಇವರು ಕಂಡು ಬರುತ್ತಾರೆ. ಈ ಮುದ್ರೆ ಹಾಕಿಸಿಕೊಳ್ಳುವ ಕಾರ್ಯವನ್ನು ಒಂದು ಮದುವೆಯ ಕಾರ್ಯದ ರೂಪದಲ್ಲಿ ನಡೆಸುತ್ತಾರೆ. ಈ ಕಾರ್ಯವನ್ನು ಮಾಡಲು ಶಾಸ್ತ್ರವನ್ನು ಕೇಳಿ ಅವರು ಸೂಚಿಸಿದ ಶುಭ ಮೂಹೂರ್ತದ ದಿನದಂದು ಈ ಕಾರ್ಯವನ್ನು ನೆರವೇರಿಸುತ್ತಾರೆ. ಸಾಮಾನ್ಯವಾಗಿ ಹನುಮಂತನ ಮುದ್ರೆ ಹಾಕಿಸಿಕೊಳ್ಳುವವರು ರಾಮನವಮಿಯ ಲಕ್ಷ್ಮಿಯ ದಿನವಾದ ಶುಕ್ರವಾರ ಅಥವಾ ಶನಿವಾರ ಅಥವಾ ಗುರುವಾರದಂದು ಈ ಕಾರ್ಯವನ್ನು ಮಾಡುತ್ತಾರೆ. ಹೆಣ್ಣು ಮಗಳನ್ನು ದೇವರಿಗೆ ಬಿಡುವ ದಿನದಂದು ತಂದೆ ತಾಯಿ ಮತ್ತು ಬಂಧು ಬಳಗದವರೆಲ್ಲ ಸೇರಿರುತ್ತಾರೆ. ಆ ದಿನ ಮನೆಯನ್ನೆಲ್ಲಾ ಸುಣ್ಣ ಬಣ್ಣ ಹಚ್ಚಿ ಸ್ವಚ್ಚ ಮಾಡಿಕೊಂಡಿರುತ್ತಾರೆ. ದೇವರಿಗೆ ಬಿಡುವ ಹೆಣ್ಣಿಗೆ ಅರಿಶಿಣ ನೀರನ್ನು ಹಾಕಿ ಹಸಿರು ಸೀರೆ ಬಳೆ ಹೂವಿನಿಂದ ಮದುಮಗಳಂತೆ ಅಲಂಕರಿಸುತ್ತಾರೆ. ಆ ದಿನದ ಎಲ್ಲಾ ಕಾರ್ಯಕ್ರಮ ಮುಗಿಯುವವರೆಗೂ ಆಕೆ ಉಪವಾಸವಿರಬೇಕು. ಇಡೀ ಕುಟುಂಬ ಮತ್ತು ಬಂದ ಬಂಧುಗಳೆಲ್ಲೂ ಸೇರಿ ಸಂತೋಷದಿಂದ ಈ ಕಾರ್ಯವನ್ನು ಮಾಡಲು ಮನೆಯಲ್ಲಿ ಹೋಳಿಗೆ ಮತ್ತು ಸಿಹಿ ಅಡುಗೆಯನ್ನು ಮಾಡುತ್ತಾರೆ.

ವಾದ್ಯ ಮೇಳದೊಂದಿಗೆ ದೇವರಿಗೆ ಬಿಡುವ ಹೆಣ್ಣನ್ನು ತಂದೆ ತಾಯಿ ಮತ್ತು ಬಂಧುಗಳು ದೇವಾಲಯಕ್ಕೆ ಕರೆದುಕೊಂಡು ಬಂದು ದೇವರಿಗೆ ಪೂಜೆ ಮಾಡಿದ ನಂತರ ಗರ್ಭಗುಡಿಯ ಎದುರು ಹೊರಗೆ ಕಂಬಳಿಯ ಗದ್ದುಗೆ ಹಾಕಿಸುತ್ತಾರೆ. ನಾಲ್ಕು ಮೂಲೆಗಳಲ್ಲಿ ತುಂಬಿದ ತಂಬಿಗೆಯನ್ನು ಇಟ್ಟು ಒಂಬತ್ತು ಅಥವಾ ಇಪ್ಪತೊಂದು ಎಲೆಯ ಸುರಿಗೆ ಸುತ್ತಿ ಕಳಸ ತುಂಬುತ್ತಾರೆ. ಕುಂಕುಮ ಅರಿಶಿಣ ಹಚ್ಚಿ ಅಲಂಕರಿಸುತ್ತಾರೆ. ಅದರ ಮೇಲೆ' ಮಧ್ಯದಲ್ಲಿ ಹುಡುಗಿಯನ್ನು ಕೂರಿಸುತ್ತಾರೆ. ಪೂಜಾ ಕಾರ್ಯಕ್ಕೆಂದು ತಂದಿರುವ ಅರಶಿಣ, ಕುಂಕುಮ, ತೆಂಗಿನಕಾಯಿ, ಬಾಳೆಹಣ್ಣು ವೀಳ್ಯೆದೆಲೆ ಅಡಿಕೆ, ವಿಭೂತಿ, ಶ್ರೀಗಂಧಗಳನ್ನು ಒಂದು ತಟ್ಟೆಯಲ್ಲಿ ಅಕ್ಕಿ ತುಂಬಿ ಅದರಲ್ಲಿ ೫ ಕೊಬ್ಬರಿ ಬಟ್ಟಲು ದುಂಡಡಿಕೆ ಎಲೆ ಉತ್ತುತ್ತಿ ಕೇರಬೀಜ, ಅರಿಶಿಣದ ಕೊಂಬು, ಬೆಲ್ಲದ ಚೂರು ಇಟ್ಟಿರುತ್ತಾರೆ. ಮತ್ತೊಂದು

ಪರತದಲ್ಲಿ (ತಟ್ಟೆ) ಹೊಸಸೀರೆ, ಹಸಿರು ಬಳೆ, ತಾಳಿಇಟ್ಟು ಪೂಜಾರಿಗೆ ಕೊಡುತ್ತಾರೆ. ಕಳಸ ತುಂಬಿ ಕರಿ ಕಂಬಳಿಯಲ್ಲಿ ಅಕ್ಕಿ, ಬೆಲ್ಲ ಐದು ಗುಂಪು ಅಕ್ಕಿಯ ನಿಧಿಯನ್ನು ಕಂಬಳಿಯ ಮೇಲೆ ಹಾಕುತ್ತಾರೆ. ಇನ್ನೊಂದು ಕಡೆಯಲ್ಲಿ ಹಿತ್ತಾಳೆಯ ತಂಬಾಳಿಯಲ್ಲಿ ಉಣಸೆ ಮರದ ತೊಗಟೆಯಿಂದ ಕೆಂಡ ಮಾಡುತ್ತಾರೆ. ಇದಕ್ಕೆ ಹುಣಸೆ ಮರದ ತೊಗಟೆಯನ್ನು ಬಳಸಲು ಕಾರಣವೇನೆಂದರೆ ಅದು ಹೆಚ್ಚು ಶಾಖ ಮತ್ತು ಬೇಗ ಕಾಯುತ್ತದೆ. ಇಲ್ಲಿರುವ ಅನೇಕ ಮುತ್ತೈದೆಯರಿಗೆ ಮತ್ತು ದೇವರಿಗೆ ಬಿಡುವ ಹುಡುಗಿಗೂ ವೀಳ್ಯೆದೆಲೆಯ ಕಂಕಣವನ್ನು ಕೈಗೆ ಕಟ್ಟುತ್ತಾರೆ. ಐದು ಜನ ಮುತ್ತೈದೆಯರು ಸಾ ಇಟ್ಟು ಕಳಸ ಬೆಳಗುತ್ತಾರೆ. ನಂತರ ಪೂಜಾರಿಯು ಕೆಲವು ಮಂತ್ರಗಳನ್ನು ಹೇಳಿ ಪಂಚಲೋಹದಿಂದ ಮಾಡಿದ ಶಂಕ ಮತ್ತು ಚಕ್ರಗಳ ಮುದ್ರೆಗಳನ್ನು ಕಾಯಿಸುವರು. ಅದು ಕಾದಿದೆಯೇ ಇಲ್ಲವೆ ಎಂದು ಪರಿಕ್ಷಿಸಲು ವೀಳ್ಯೆದೆಲೆಯ ಮೇಲೆ ಮೊದಲು ಮುದ್ರೆ ಒತ್ತುತ್ತಾರೆ. ಕಾದಿರುವ ಮುದ್ರೆಯು ಹಸಿ ಇರುವ ಎಲೆಯ ಮೇಲೆ ಒತ್ತಿದಾಗ ಶಾಖವು ಕೂಡ ಸ್ವಲ್ಪ ಮಟ್ಟಿಗೆ ಕಡಿಮೆಯಾಗುತ್ತದೆ ಎಂಬ ಉದ್ದೇಶವೂ ಇರಬಹುದು ಎಂದು ಸೂಕ್ಷ್ಮವಾಗಿ ಗಮನಿಸಿದಾಗ ತಿಳಿಯುವ ಅಂಶವಾಗಿದೆ. ನಂತರ ದೇವರಿಗೆ ಬಿಡುವ ಹುಡುಗಿಯ ಎದೆಯ ಬಲ ಮೇಲ್ಭಾಗದ ಮೇಲೆ ಚಕ್ರದ ಮುದ್ರೆಗಳನ್ನು ಎಡಭಾಗದ ಮೇಲೆ ಶಂಖದ ಮುದ್ರೆಯನ್ನು ಒತ್ತುತ್ತಾರೆ. ಮತ್ತು ಬಲಗೈಯ ತೊಳ ಮೇಲೆ ಪದ್ಮವನ್ನು ಗುರುತು ಮಾಡುತ್ತಾರೆ. ನಂತರ ಬಟ್ಟಲಿನಲ್ಲಿ ಈಗಾಗಲೇ ಕಲಿಸಿ ಇಟ್ಟಿರುವ ಶ್ರೀಗಂಧವನ್ನು ಅವುಗಳ ಮೇಲೆ ಲೇಪಿಸುತ್ತಾರೆ. ಹೀಗೆ ಬೆಂಕಿಯಲ್ಲಿ ಕಾಯಿಸಿದ ಶಂಖ ಮತ್ತು ಚಕ್ರದ ಮುದ್ರೆಗಳನ್ನು ಹಾಕುವಾಗ ಹುಡುಗಿಯು ಚೀರುವುದು ಅಥವಾ ಅಳುವುದು ಮಾಡಬಾರದು. ಹಾಗೆನಾದರೂ ನೋವನ್ನು ತಾಳಿಕೊಳ್ಳಲಾಗದೆ ಚೀರಿದರೆ ದೇವರ ಹೆಸರನ್ನು ಹೇಳಬೇಕೆಂದು ಪೂಜಾರಿಯೂ ಸೂಚಿಸುತ್ತಾರೆ. ಮುದ್ರೆಯು ಒತ್ತಿರುವುದು ಅಪರಾಧ ಮಾಡಿದ್ದರೆ ಅದು ಗಾಯವಾಗುತ್ತದೆ ಇಲ್ಲದಿದ್ದರೆ ಬೇಗ ಗಾಯ ಗುಣವಾಗುವುದೆಂಬ ನಂಬಿಕೆಯೂ ಅವರಲ್ಲಿತ್ತು. ಹೀಗೆ ಮುದ್ರೆ ಹಾಕಿದ ನಂತರ ಹನುಮಂತ ದೇವರ ತಾಳಿಯನ್ನು ದೇವರ ಪಾದಕ್ಕೆ ಮುಟ್ಟಿಸಿ ಹುಡುಗಿಯ ಕೊರಳಿಗೆ ಪೂಜಾರಿ ಕಟ್ಟುತ್ತಾರೆ. ಹೀಗೆ ಕಟ್ಟುವ ತಾಳಿಯು ಹನುಮಂತನ ಮುದ್ರೆ ಇರುವ ಒಂಟಿ ತಾಳಿಯಾಗಿರುತ್ತದೆ. ಅಂದಿನಿಂದ ಆಕೆಯು ದೇವರಿಗೆ ಬಿಟ್ಟಿರುವ ಬಸವಿಯಾಗುತ್ತಾಳೆ. ಹೀಗೆ ದೇವರಿಗೆ ಬಿಟ್ಟಿರುವ ಮಹಿಳೆಯರಿಗೆ ನಿಯಮದ ಪ್ರಕಾರ ಕೆಲವು ನಿತ್ಯ ನಿಮಯಗಳನ್ನು ಪಾಲಿಸುವ ವಿಷಯಗಳು ಪೂಜಾರಿಯೂ ಕಿವಿಯಲ್ಲಿ ಬೋಧಿಸುತ್ತಾನೆ. ನಂತರ ದೇವಸ್ಥಾನವನ್ನು ೩ ರಿಂದ ೫ ಬಾರಿ ಪ್ರದಕ್ಷಿಣೆ ಹಾಕುತ್ತಾರೆ. ನಂತರ ಅವಳಿಗೆ ತುಂಬಿರುವ ಉಡಿಯನ್ನು ಸಡಿಲಿಸಿ ಎಲ್ಲಾ ಹಿರಿಯರಿಗೂ ನಮಸ್ಕಾರ ಮಾಡಿಸುತ್ತಾರೆ. ನಂತರ ಮನೆಗೆ ಹೋಗಿ ೫ ರಿಂದ ೯ ಮಂದಿ ದೇವದಾಸಿಯರನ್ನು ಕರೆದು ದೇವರಿಗೆ ಬಿಟ್ಟಿರುವ ಹೆಣ್ಣು ಮಕ್ಕಳನ್ನು ಊಟಕ್ಕೆ ಕೂಡಿಸುತ್ತಾರೆ. ಅಲ್ಲಿಗೆ ಅವಳು ಉಪವಾಸ ಬಿಡುತ್ತಾಳೆ. ನಂತರ ಎಲ್ಲಾ ಬಂಧು ಬಳಗ ಮತ್ತು ನೆರೆಹೊರೆಯರಿಗೆ ಊಟ ಮಡಿಸುತ್ತಾರೆ.

ಹೂ ಮುದ್ರೆ: ಆಚರಣೆಗಳು ನಾಗರಿಕತೆಗೆ ಒಳಗಾದಂತೆಲ್ಲ ಸೌಮ್ಯಗೊಳ್ಳುತ್ತಾ ಹೋಗುತ್ತವೆ ಎಂಬ ಶೈಲಜಾ ಹೀರೆಮಠ ಅವರ ಅಭಿಪ್ರಾಯದಂತೆ ಪರಂಪರಾಗತವಾಗಿದ್ದ ಗಟ್ಟಿ ಮುದ್ರೆಯ

ಬದಲಾಗಿ ವಾಸ್ತವದಲ್ಲಿ ಹೂ ಮುದ್ರೆಯೂ ಆಚರಣೆಗೆ ಬಂದಿರುವುದನ್ನು ಗಮನಿಸುವ ಅಂಶವಾಗಿದೆ. ೧೯೮೨ ರಲ್ಲಿ ದೇವದಾಸಿ ಪದ್ಧತಿ ನಿಷೇಧದ ಕಾನೂನು ಜಾರಿಗೆ ಬಂದ ನಂತರ ಅನೇಕ ಹೆಣ್ಣು ಮಕ್ಕಳನ್ನು ಕದ್ದು ಮುಚ್ಚಿ ಕಾನೂನಿನ ಕಣ್ಣು ತಪ್ಪಿಸಿ ಕಳ್ಳತನದಿಂದ ದೇವರಿಗೆ ಬಿಡುವಲ್ಲಿ ಸಮಾಜದ ಜನರಲ್ಲಿ ಅನೇಕ ಬದಲಾವಣೆಗಳು ಕಂಡು ಬಂದಿವೆ. ಅಂತಹ ಬದಲಾವಣೆಯ ನಿಟ್ಟಿನಲ್ಲಿ ಗಟ್ಟಿ ಮುದ್ರೆಯ ಬದಲಾಗಿ ಹೂ ಮುದ್ರೆಯು ಬೆಳಕಿಗೆ ಬಂದಿದೆ ಎನ್ನಬಹುದು.

ಆಧುನಿಕ ನಾಗರಿಕ ಸಮಾಜದ ಜನರು ದೇವದಾಸಿ ಪದ್ಧತಿ ನಿಷೇಧ ಕಾಯ್ದೆ ಜಾರಿಗೆ ಬಂದ ನಂತರ ರಹಸ್ಯವಾಗಿ ದೇವರ ಹೆಸರಿನಲ್ಲಿ ಹೆಣ್ಣನ್ನು ಬಿಡುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬಂದಿರುವ ಅಂಶವಾಗಿದೆ. ಈ ಹಿಂದೇ ದೇವಸ್ಥಾನಗಳಲ್ಲಿ ಬಹಿರಂಗವಾಗಿ ಈ ಸಂಪ್ರದಾಯವನ್ನು ಮಾಡುತ್ತಿದ್ದರು ಕಾನೂನು ಬಂದ ನಂತರ ತಮ್ಮ ತಮ್ಮ ಮನೆಗಳಲ್ಲಿಯೇ ಇಲ್ಲವೆ ಅದರ ಖರ್ಚು ವೆಚ್ಚವನ್ನು ತಾವೇ ವಹಿಸಿ ಹಿರಿಯ ದೇವದಾಸಿಯರ ಮನೆಗಳಲ್ಲಿ ಈ ಕಾರ್ಯವನ್ನು ಮಾಡುತ್ತಾರೆ. ಇದನ್ನು ಗೌಪ್ಯವಾಗಿ ಹಿರಿಯ ದೇವದಾಸಿಯರ ಜೊತೆ ಮಾತನಾಡಿ ಬಂದು ಶುಭ ದಿನವನ್ನು ಗೊತ್ತು ಮಾಡಿ ಮನೆಯನ್ನೆಲ್ಲಾ ಸ್ವಚ್ಚಗೊಳಿಸಿಕೊಂಡು ಯಾರಿಗೂ ತಿಳಿಯದಂತೆ ರಾತ್ರಿಯ ವೇಳೆಯಲ್ಲಿ ದಾಸಪ್ಪ (ಪೂಜಾರಿ) ನನ್ನು ಕರೆಸಿ ಮನೆಯವರೆಲ್ಲಾ ದೇವರ ಕೋಣೆಯಲ್ಲಿ ಸೇರುತ್ತಾರೆ, ಗಟ್ಟಿ ಮುದ್ರೆ ಹಾಕುವಾಗ ಸಿದ್ದ ಮಾಡಿಕೊಂಡಂತೆ ಎಲ್ಲವನ್ನು ತಯಾರುಮಾಡಿಕೊಂಡು ಪೂಜಾರಿಯವರಿಂದ ಮಂತ್ರಗಳನ್ನು ಹೇಳಿಸುತ್ತಾರೆ. ಎರಡು ಮಲ್ಲಿಗೆ ಹೂಗಳನ್ನು ದೇವರ ಪಾದಕ್ಕೆ ಮುಟ್ಟಿಸಿ ದೇವರಿಗೆ ಬೀಡಬೇಕಾದ ಹುಡುಗಿಯ ಎದೆಯ ಬಲಭಾಗಕ್ಕೆ ಮತ್ತು ಎಡಭಾಗಕ್ಕೆ ಒತ್ತುತ್ತಾರೆ. ನಂತರ ತಾಳಿಯನ್ನು ಹಿರಿಯ ದೇವದಾಸಿ ಅಥವಾ ಸೋದರ ಮಾವನಿಂದ ಕಟ್ಟಿಸುತ್ತಾರೆ. ಪೂಜಾರಿಯೂ ನಿಯಮದ ಪ್ರಕಾರ ಆಕೆ ಪಾಲಿಸಬೇಕಾದ ನಿತ್ಯ ನಿಯಮಗಳನ್ನು ಹೇಳಿ ದಕ್ಷಿಣೆ ಪಡೆದುಕೊಂಡು ಹಿಂದಿರುಗುತ್ತಾನೆ. ಬೆಳಗಿನ ಜಾವದಲ್ಲಿ ತಮ್ಮ ಬಂಧು ಬಳಗದವರಿಗೆ ನೆರೆ ಹೊರೆ ಯವರಿಗೆ ಎಲೆ, ಅಡಿಕೆ, ಹಣ್ಣು, ಸಕ್ಕರೆ ಹಂಚುತ್ತಾರೆ. ಆಗ ಎಲ್ಲರಿಗೂ ಹುಡುಗಿಯನ್ನು ದೇವರಿಗೆ ಬಿಟ್ಟಿರುವ ವಿಷಯ ತಿಳಿಸದೆ ಗೌಪ್ಯಾವಾಗಿ ಮುಗಿಸುತ್ತಾರೆ. ಕಾರಣ ಈ ಪದ್ಧತಿ ನಿರ್ಮೂಲನೆಗೆಂದೆ ಮಾಡಿರುವ ಕಾನೂನನ್ನೂ ಸಮಾಜದಲ್ಲಿ ಜಾರಿಗೆ ತರುವ ನಿಟ್ಟಿನಲ್ಲಿ ಅನೇಕ ಸಂಘಟನೆಗಳು ಮತ್ತು ಅದರ ಸದಸ್ಯರುಗಳು ಕೆಲಸ ಮಾಡುತ್ತಿದ್ದಾರೆ. ದೇವದಾಸಿಯಾಗಿ ಬಿಡುವ ವಿಷಯ ತಿಳಿದ ತಕ್ಷಣ ಸಂಘಟನಾಗಾರರಾಗಲಿ ಅಥವಾ ಇತರರಾಗಲಿ ಪೋಲಿಸರಿಗೆ ದೂರು ನೀಡುತ್ತಾರೆ. ಆಗ ಈ ಕಾರ್ಯಗಳನ್ನು ಮಾಡಲು ಆಗುವುದಿಲ್ಲ ಎಂದು ತಿಳಿದಿರುವ ಜನರು ಈ ಪದ್ಧತಿಯ ಆಚರಣೆಯನ್ನು ಸಾಮಾನ್ಯವಾಗಿಗೌಪ್ಯವಾಗಿ ನಡೆಸುವುದು ಕ್ಷೇತ್ರಕಾರ್ಯದಲ್ಲಿ ಕಂಡು ಬಂದಿದೆ.

**ದೇವರ ಹೆಸರಿಗೆ ಬಿಟ್ಟಿರುವ ಮಹಿಳೆ ಪಾಲಿಸಬೇಕಾದ ನಿಯಮಗಳು**

- ಪ್ರತಿ ಶನಿವಾರ ಅಥವಾ ದೇವರ ವಾರದಂದು ಉಪವಾಸವಿರಬೇಕು.
- ಸುಳ್ಳು ಹೇಳಬಾರದು.

- ಹಸಿದು ಬಂದವರಿಗೆ ಅನ್ನ ನೀರು ಕೊಡಬೇಕು.
- ನಿರಾಶ್ರಿತರಾದವರಿಗೆ ಆಶ್ರಯ ನೀಡಬೇಕು.
- ಯಾರಾದರೂ ಬೈದರೆ ಹೊಡೆದರೆ ತಿರುಗಿ ಬೈಯುವುದು ಹೊಡೆಯುವುದು ಮಾಡಬಾರದು.
- ಬೇರೆಯವರ ಎಂಬಲನ್ನು ತಿನ್ನಬಾರದು.
- ಯಾವಾಗಲೂ ದೇವರ ದ್ಯಾನ ಮಾಡುತ್ತಾ ತಮ್ಮನ್ನು ಬಯಸಿ ಬಂದವರಿಗೆ ತೃಪ್ತಿ ಪಡಿಸಬೇಕು.
- ಬಂಧು ಬಳಗದಲ್ಲಿ ಅಥವಾ ಸಾವಿನ ಸುದ್ದಿ ತಿಳಿದ ನಂತರ ಊಟ ಮಾಡಬಾರದು. ಶವ ಸಂಸ್ಕಾರ ಮುಗಿದ ನಂತರ ಸ್ನಾನ ಮಾಡಿ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿದ ನಂತರ ಊಟ ಮಾಡಬೇಕು.

ಈ ಎಲ್ಲಾ ನಿಯಮಗಳನ್ನು ಪಾಲಿಸುವುದು ನಿಮ್ಮ ಕರ್ತವ್ಯವೆಂದು ಹೇಳುತ್ತಾರೆ. ಹೀಗಿನ ಮುದ್ರೆ ಹಾಕಿಸಿ ಕೊಂಡಿರುವ ಕೇಲವರನ್ನು ಗಮನಿಸಿ ಹೇಳುವುದಾದರೆ ಈ ನಿಯಮಗಳನ್ನು ಕಟ್ಟು ನಿಟ್ಟಾಗಿ ಪಾಲಿಸುವುದಿಲ್ಲ. ಅಂದರೆ ಉಪವಾಸವಿರುವುದು ಕಷ್ಟವಾಗುತ್ತದೆ. ಏಕೆಂದರೆಇವರು ಇಡೀ ಕುಟುಂಬದ ಜವಾಬ್ದಾರಿಯನ್ನು ಹೊತ್ತವರು. ಆರ್ಥಿಕವಾಗಿ ಆಧಾರವಾಗಿರುವವರು ಬಹುಪಾಲು ಜನರು ಕೃಷಿ ಕೂಲಿ ಗಣಿಗಾರಿಕೆ ಇತರೆ ಕೆಲಸದಲ್ಲಿ ತೊಡಗಿರುವ ಶ್ರಮ ಜೀವಿಗಳಾಗಿದ್ದಾರೆ. ಹಾಗಾಗಿ ಉಪವಾಸವಿದ್ದು ಅಧಿಕ ಶ್ರಮದ ಕೆಲಸ ಮಾಡುವುದು ಅವರಿಗೆ ಕಷ್ಟವಾಗುತ್ತದೆ. ಅಲ್ಲದೆ ಕೆಲವರು ಯಾರಾದರೂ ಸತ್ತ ಸುದ್ದಿ ತಿಳಿದರೆ ಮನೆಯಲ್ಲಿ ಊಟ ಮಾಡದೆ ಹೋಟಲ್‌ಗಳಲ್ಲಿ ತಿನ್ನುತ್ತಾರೆ. ಶವ ಸಂಸ್ಕಾರದ ನಂತರ ಮನೆಯಲ್ಲಿ ಊಟ ಮಾಡುವುದನ್ನು ಗಮನಿಸಿಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಕಂಡು ಬರುವ ಆಂಜನೇಯ ದೇವಾಲಯಗಳಲ್ಲಿ ಈರಣ್ಣ, ಪೆನ್ನೊಬಳೇಶ್ವರ, ಮಲ್ಲಯ್ಯ ಇತರೆ ದೇವಾಲಯಗಳಲ್ಲಿ ಬಸವಿಯಾಗಿಸುತ್ತಾರೆ. ದೇವರ ಹೆಸರಿನಲ್ಲಿ ಮುದ್ರೆ ಒತ್ತುವ ಪರಂಪರೆಯಲ್ಲಿ ಈ ಭಾಗದ ಹೆಣ್ಣು ಮಕ್ಕಳನ್ನು ದೇವರಿಗೆ ಬಿಡುತ್ತಾರೆ. ಹಡಗಲಿ ತಾಲೂಕಿನಲ್ಲಿ ಆಂಜನೇಯ ಸ್ವಾಮಿಯ ಜಾತ್ರೆಯ ಸಂದರ್ಭದಲ್ಲಿ ಆಂಜನೇಯ ಸ್ವಾಮಿಯ "ಹೆಸರಿನಲ್ಲಿ ಭಕ್ತರಿಗೆ ಭುಜದ ಎಡ, ಬಲ ಭಾಗಕ್ಕೆ ಶಂಕ ಮತ್ತು ಚಕ್ರದ ಮುದ್ರೆ ಹಾಕುತ್ತಾರೆ. ಸಂಸಾರಿಗಳಾದ ಇವರನ್ನು ದಾಸ ದಾಸಿಯರೆಂದು ಕರೆಯುತ್ತಾರೆ" (ಸಿದ್ದೇಶ್ವರಿ ಎ ಎನ್: ೨೦೧೪:೯೦).ಇವರು ದೈವದ ಪರಿಚಾರಕರಾಗಿ ಗುರುತಿಸಿಕೊಳ್ಳುವುದರ ಜೊತೆಗೆ ಸುಳ್ಳು ಹೇಳುವಂತಿಲ್ಲ, ತಪ್ಪು ಮಾಡುವಂತಿಲ್ಲ ಎಂಬ ವಿಧಿ ನಿಷೇಧಗಳನ್ನು ಹಾಕುತ್ತಾ ದೈವಿಭಯದಲ್ಲಿ ಸಮಾಜ ತಿದ್ದುವಿಕೆ ಕಾರ್ಯ ನಡೆಸುತ್ತಾರೆ. ಸಂಡೂರಿನಲ್ಲಿರುವ ಗಂಡಿ ನರಸಿಂಹಸ್ವಾಮಿ ಜಾತ್ರೆಯಲ್ಲಿ ಈ ರೀತಿಯ ಆಚರಣೆ ನಡೆಯುತ್ತದೆ ಎಂದು ಸಿದ್ದೇಶ್ವರಿಯವರು ಬಳ್ಳಾರಿ ಜಿಲ್ಲೆಯ ಜನಪದರ ಆಚರಣೆಯಲ್ಲಿ ತಿಳಿಸಿದ್ದಾರೆ. ಹೀಗೆ ಮುದ್ರೆ ಹಾಕುವ ಮೂಲಕ ದೇವದಾಸಿ ಅಥವಾ ಬಸವಿಯಾಗಿ ಬಿಡುವ ಸಂಪ್ರದಾಯವನ್ನು ಹುಟ್ಟು ಹಾಕಿದ್ದಾರೆ. ಹೀಗಿರುವಲ್ಲಿ ಇದು ಯಾವ ರೀತಿಯ ಸಮಾಜ ತಿದ್ದುವಿಕೆಯಾಗುವ ಕಾರ್ಯವೆಂಬ ಪ್ರಶ್ನೆ ಕಾಡುತ್ತದೆ. ಅಲ್ಲದೆ ನಿಜವಾಗಿ ಅವರು ಆ ವಿಧಿನಿಷೇಧಗಳನ್ನು ಪಾಲಿಸುತ್ತಿದ್ದಾರೆಯೇ? ಗಮನಿಸಿಬೇಕು. ಈ

ಪದ್ಧತಿಯು ಮಹಿಳೆಯನ್ನು ಮುದ್ರೆ ಹಾಕುವ ಮೂಲಕ ಶೋಷಣೆಗೆ ಒಳಪಡಿಸುವ ಕಾರ್ಯವನ್ನು ಮಾಡುತ್ತದೆ. ಹಾಗೆಯೇ ಮುದ್ರೆ ಹಾಕುವ ಕಾರ್ಯವನ್ನು ಮರಿಯಮ್ಮನ ಹಳ್ಳಿಯ ಆಂಜನೇಯ ಮತ್ತು ಕೂಡ್ಲಿಗಿ ಕೊತ್ಲದಯ್ಯ ದೇವರ ಹೆಸರಿನಲ್ಲಿ ಮುದ್ರೆ ಹಾಕುವ ಮೂಲಕ ಬಸವಿ ಬಿಡುವುದು ಆಚರಣೆ ಇದೆ. ಹೀಗೆ ಮುದ್ರೆ ಹಾಕುವ ಪರಂಪರೆಯ ಮೂಲಕ ಕೆಳ ವರ್ಗದವರಲ್ಲಿ ಹೆಣ್ಣು ಮಕ್ಕಳ ಜೀವನ ಬಲಿ ಕೊಡುವ ಪದ್ಧತಿಯಾಗಿದೆ. ಇದಕ್ಕೆ ದೇವರ ಹೆಸರನ್ನು ಲೇಪಿಸಿ ಮುಗ್ಧ ದಲಿತ ಮಹಿಳೆಯರನ್ನು ಲೈಂಗಿಕವಾಗಿ ಬಳಸಿಕೊಳ್ಳಲುಇದು ಮಾಡಿರುವ ಉನ್ನತ ವರ್ಗದವರು ಮಾಡಿರುವ ಉನ್ನಾರವಾಗಿದೆ.

ದೇವರ ಹೆಸರಿನಲ್ಲಿ ಮುದ್ರೆ ಹಾಕಿಸಿಕೊಂಡು ಬಸವಿಯರನ್ನು ಜಾತ್ರೆ ಉತ್ಸವದ ಸಂದರ್ಭಗಳಲ್ಲಿ ಓಕುಳಿ ಆಟಗಳಲ್ಲಿ ಬಳಸಿಕೊಳ್ಳುತ್ತಾರೆ. ಆದರೆ ಪ್ರಸ್ತುತ ದೇವದಾಸಿ ಮತ್ತು ಇತರೆ ಅನಿಷ್ಟ ಆಚರಣೆಯ ನಿಷೇಧ ಕಾನೂನು ಬಂದಾಗಿನಿಂದ ಬಳ್ಳಾರಿ ಜಿಲ್ಲೆಯ ಅಲ್ಲಲ್ಲಿ ನಡೆಯುವ ಓಕುಳಿ ಆಟಗಳು ನಿರ್ಮೂಲನೆಯಾಗಿವೆ ಎಂದು ಹೇಳಬಹುದು. ಆದರೆ ಆಂಧ್ರದ ಹತ್ತಿರದ ಮೀನುಗುಂದ ಮಲ್ಲಯ್ಯನ ಜಾತ್ರೆಯಲ್ಲಿ ಅಲ್ಲಿರುವ ಮಲ್ಲಯ್ಯನ ದೇವರ ಗುಡ್ಡದಲ್ಲಿ ಈಗಲೂ ಓಕುಳಿ ಆಟ ನಡೆಯುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡು ಬಂದಿದೆ. ಅಲ್ಲಿರುವ ಕೆಳವರ್ಗದ ವಿಶೇಷವಾಗಿ ಮಾದಿಗ ಸಮುದಾಯದ ಮಹಿಳೆಯರನ್ನು ಓಕುಳಿ ಆಟದಲ್ಲಿ ಬಳಸಿಕೊಂಡಿದ್ದಾರೆ. ಪ್ರತಿವರ್ಷ ಮಲ್ಲಯ್ಯನ ಜಾತ್ರೆಯಲ್ಲಿ ನಡೆಯುವ ಓಕುಳಿ ಆಟದಲ್ಲಿ ಇವರೇ ಭಾಗಿಗಳಾಗುತ್ತಿರುವುದನ್ನು ಅಲ್ಲಿ ಓಕುಳಿ ಆಟದಲ್ಲಿ ಭಾಗವಹಿಸಿದ ಬಸವಿ ಮಹಿಳೆ ಮಾಹಿತಿ ತಿಳಿಸಿದ್ದಾಳೆ.

**೪.೪ ಜೋಗತಿ ಪದ್ಧತಿ**

ಭಾರತದಾದ್ಯಂತ ಪುರುಷ ದೈವಗಳಿಗಿಂತ ಸ್ತ್ರೀ ದೈವಗಳು ಹೆಚ್ಚಿನ ಸಂಖ್ಯೆಯಲ್ಲಿ ಪ್ರಭಾವಿಯಾಗಿರುವುದನ್ನು ಕಾಣುತ್ತೇವೆ. ಶಿಷ್ಟ ರಕ್ಷಕರು ದುಷ್ಟರ ಶಿಕ್ಷಕರೂ ಆಗಿ ಸ್ತ್ರೀ ದೈವಗಳೇ ಕಂಡು ಬಂದಿರುವುದನ್ನು ಜಗತ್ತಿನ ಪ್ರಾಚೀನ ನಾಗರೀಕತೆಗಳನ್ನು ಗಮನಿಸಿದಾಗ ತಿಳಿದು ಬರುತ್ತದೆ. ಈಜಿಪ್ಟ್, ಸಿರಿಯಾ, ಬ್ಯಾಬಿಲೋನಿಯಾ ಮುಂತಾದ ದೇಶಗಳಲ್ಲಿ ಅತ್ಯಂತ ಪ್ರಾಚೀನವಾದ ಮಾತೃ ದೇವತೆಯ ಆಚರಣೆಯಲ್ಲಿರುವುದನ್ನು ಕಾಣಬಹುದು. ಭಾರತಕ್ಕೆ ಆರ್ಯರು ಬರುವವರೆಗೂ ದ್ರಾವಿಡರು ಹೆಣ್ಣನ್ನೆ ತನ್ನ ಕುಟುಂಬದ ಶಕ್ತಿಯೆಂದೇ ಆರಾಧನೆ ಮಾಡುತ್ತಿದ್ದುದ್ದು ಇತಿಹಾಸದಿಂದ ತಿಳಿದು ಬರುತ್ತದೆ. ಯಾವಾಗ ಪಿತೃ ಪ್ರಾಧಾನ ಸಂಸ್ಕೃತಿಯನ್ನು ಹೊಂದಿದ ಆರ್ಯರು ಭಾರತಕ್ಕೆ ಬಂದರೋ ಅಗ ಬದಲಾವಣೆಯಾಗಿದೆ. ಭಾರತೀಯ ಕೆಲ ಬುಡಕಟ್ಟುಗಳು ಇಂದಿಗೂ ಬಹು ಪತ್ನಿತ್ವವನ್ನು ಕಾಪಾಡಿಕೊಂಡು ಬಂದಿದೆ. ಇವರಲ್ಲಿ ಹೆಣ್ಣಿಗೆ ಮಹತ್ವದ ಸ್ಥಾನವಿದೆ. ಹೆಣ್ಣು ಸಮೃದ್ಧಿಯ ಸಂಕೇತ. ವಂಶದ ಮುಂದುವರಿಕೆಗಾಗಿ ಆಕೆ ಯಾರೊಂದಿಗಾದರು ಸಂಪರ್ಕ ಹೊಂದಿ ಮಕ್ಕಳನ್ನು ಪಡೆಯಲು ಸಮರ್ಥಳು ಇಡೀ ಕುಟುಂಬದ ಅಥವಾ ಗುಂಪಿನಾ ಕೇಂದ್ರ ಶಕ್ತಿ ಹೆಣ್ಣಾಗಿದ್ದಾಳೆ ಎಂಬ ನಂಬಿಕೆ ಇದೆ. ಹೀಗೆ ನಂಬಿ ಇಂದಿಗೂ ಸ್ತ್ರೀ ದೇವತೆಗಳನ್ನು ಆರಾಧಿಸುತ್ತಾ ಬಂದಿರುವ ಅನೇಕ ಸಮುದಾಯಗಳಿವೆ.

ಹೀಗೆ ಸ್ತ್ರೀ ದೈವದ ಆರಾಧಕರಾಗಿ ಹುಟ್ಟಿಕೊಂಡಿರುವುದೇ ಜೋಗತಿ ಪದ್ಧತಿಯಾಗಿದೆ. ಸ್ತ್ರೀ ದೇವತಾ ಆರಾಧಕರು ಯಾವುದೇ ಜಾತಿಯವರಾದರೂ ಇರಬಹುದು. ಮುಖ್ಯವಾಗಿ ಗಮನಿಸುವ ಅಂಶಗಳೆಂದರೆ ಕೆಳಜಾತಿ ವರ್ಗದವರೆ ಜೋಗತಿಯರಾಗುತ್ತಾರೆ. ಆದರೆ ಇಂಥದ್ದೇ ಜಾತಿಯವರು ಜೋಗತಿಯರಾಗಬೇಕೆಂಬ ನಿರ್ಬಂಧಗಳೇನು ಇಲ್ಲ ಎನ್ನಬಹುದು. ಅಲ್ಲದೆ ಇವರನ್ನು ಎಲ್ಲಮ್ಮ ಹುಲಿಗೆಮ್ಮ ಇತರೆ ದೇವತೆಗಳ ಅವತಾರವೆಂದು ಭಾವಿಸುತ್ತಾರೆ. ದೇವಿಯರ ಸೇವೆಯೇ ಜೋಗತಿಯರ ಕರ್ತವ್ಯವಾಗಿರುತ್ತದೆ. ಮಂಗಳವಾರ ಮತ್ತು ಶುಕ್ರವಾರದ ಪೂಜೆಯ ಜೊತೆಗೆ ದೇವಿಯ ಪ್ರಚಾರ ಮತ್ತು ಪ್ರಸಾರವೇ ಜೋಗುತಿಯರಿಗೆ ಮಹತ್ವದಾಗಿರುತ್ತದೆ. ಜೋಗುತಿಯರ ಸಂಪ್ರದಾಯ ಬೆಳೆಯಲು ಮುಖ್ಯವಾಗಿ ಜನತೆಯಲ್ಲಿ ನೆಲೆಯಾಗಿರುವ ರೋಗ ರುಜಿನಗಳು ಮತ್ತು ಅವುಗಳ ನಿವಾರಣೆಗಾಗಿ ಹೇಳಿಕೊಂಡ ಹರಕೆಗಳು ಕಾರಣವಾಗುತ್ತದೆ. ಇದರ ಜೊತೆಗೆ ದೇವತೆಯ ಬಗೆಗೆ ಜನತೆಯಲ್ಲಿರುವ ಭಯವೂ ಕಾರಣವಾಗುತ್ತಿದೆ. ಯಾಕೆ ಜೋಗತಿಯರಾಗುತ್ತಾರೆಂಬ ಪ್ರಶ್ನೆಗೆ ಸಿಕ್ಕ ಉತ್ತರವೆಂದರೆ ದೈವದ ಅಣತಿಯಾಗುವುದು ಆ ದೇವಿ ಕರೆದಾಗ ಬರುವುದಿಲ್ಲ ಎಂದು ಹೇಳಲಾಗದು ಎಂದು ಉತ್ತರಿಸುತ್ತಾರೆ.

ಗಂಡಸರು ಕೂಡ ಜೋಗಮ್ಮ ಜೋಗಪ್ಪಗಳಾಗುತ್ತಾರೆ. ಇವರು ಹೆಂಗಸರ ವೇಷವನ್ನು ಧರಿಸುತ್ತಾರೆ. ಸೀರೆ ಕುಪ್ಪಸ, ಜಡೆ, ಕೈ ಬಳೆ ಇತ್ಯಾದಿಗಳನ್ನು ಹಾಕಿಕೊಂಡು ಹೆಂಗಸರಂತೆಯೇ ಅಲಂಕರಿಸಿಕೊಳ್ಳುತ್ತಾರೆ. ಇನ್ನು ಕೆಲವು ಜೋಗಪ್ಪನವರು ಜೋತರ ಅಂಗಿಯನ್ನು ಇತರೆ ಗಂಡಸರಂತೆ ಹಾಕಿಕೊಂಡು ಕೊರಳೊಳಗೆ ಕವಡೆ ಸರ ಭಂಡಾರದ ಚೀಲ ಹಾಕಿಕೊಂಡಿರುತ್ತಾರೆ. ಸ್ವತಃ ದೇವಿಯ ಭಕ್ತರಾಗಿ ಪ್ರಚಾರಕರಾಗಿರುತ್ತಾರೆ. ನಪುಂಸಕರು, ಗಂಡಸರು, ಹೆಂಗಸರು ಜೋಗುತಿಯರಾಗುತ್ತಾರೆ. ಜೋಗುತಿಯರಿಗೆ ಸಂಭೋಗ ನಿಷಿದ್ಧವಾಗಿದೆ. ಇದು ಮೂಲ ವಿಚಾರವಾದರೆ ವಾಸ್ತವವಾಗಿ ಜೋಗುತಿಯರಿಗೆ ಬಹುತೇಕರು ಸಂಭೋಗದಲ್ಲಿ ನಿರತರಾಗಿದ್ದಾರೆ. ಇನ್ನೂ ಕೆಲವರು ಸಲಿಂಗ ಕಾಮಿಗಳು ಆಗಿರುವುದು ಕಂಡು ಬರುತ್ತದೆ. ಸಂಭೋಗವು ಜೋಗತಿ ಸಂಪ್ರದಾಯವನ್ನು ಮೀರಿದ ಕ್ರಿಯೆಯಾಗಿದೆ. ಮೂಲ ಸಂಪ್ರದಾಯದಲ್ಲಿ ಲೈಂಗಿಕ ಸಂಬಂಧ ನಿಷೇಧಿಸಲ್ಪಟ್ಟಿದೆ. ಆದರೆ ಈಗಿನ ಜೋಗುತಿಯರು ಅವರ ವಂಶ ಬೆಳವಣಿಗೆಗೆ, ಮತ್ತು ಇತರೆ ಕಾರಣಗಳಿಗೆ ಲೈಂಗಿಕ ಸಂಬಂಧವನ್ನು ಇಟ್ಟುಕೊಂಡಿರುತ್ತಾರೆ.

ಸಾಮಾನ್ಯವಾಗಿ ಜೋಗತಿಯರು ಭಂಡಾರದ ಚೀಲವನ್ನು ಕಟ್ಟಿಕೊಂಡಿರುತ್ತಾರೆ. ಕೆಲವು ಜೋಗುತಿಯರು ನವಿಲುಗರಿಗಳಿಂದ ಅಲಂಕರಿಸಿದ ತುಂಬಿದ ಕೊಡವನ್ನು ತಲೆ ಮೇಲೆ ಹೊತ್ತಿರುವುದನ್ನು ಕಾಣಬಹುದು. ಇನ್ನು ಕೆಲವು ಜೋಗತಿಯರು ಹಡಲಿಗೆ ಕೈಯಲ್ಲಿ ಹಿಡಿದಿರುತ್ತಾರೆ. ಅದರೊಳಗೆ ಇರುವ ಪರಶುರಾಮ ಬುಟ್ಟಿಗಳಲ್ಲಿ ಭಂಡಾರ ಮತ್ತು ಕುಂಕುಮವನ್ನು ತುಂಬಿಕೊಂಡಿರುತ್ತಾರೆ. ಇನ್ನು ಕೆಲವರು ಕೈಯೊಳಗೆ ಚೌಡಕಿಯನ್ನು ಹಿಡಿದು ದೇವಿಯ ಮಹಿಮೆಯನ್ನು ಭಕ್ತರಿಗೆ ತಿಳಿಸುವ ಹಾಡುಗಳನ್ನು ಹೇಳುತ್ತಿರುತ್ತಾರೆ. ಜೋಗುತಿಯರು ಹೆಣ್ಣಿನ ಮೌಲ್ಯಗಳನ್ನು ಎತ್ತಿ ಹಿಡಿಯುವಂತಹ ಮತ್ತು ಹೆಣ್ಣು ಯಾವ ರೀತಿ ಇರಬೇಕು ಎಂಬ ಹಾಡುಗಳು ದೇವಿಯ ಸ್ತುತಿ ಪದಗಳು ದೇವಿಯ

ಜೀವನ ಚರಿತ್ರೆ ಕುರಿತು ಹಾಡುಗಳನ್ನು ದೇವಿಯ ಮಹಿಮೆ ಪವಾಡಗಳ ಕುರಿತು ಹಾಡುಗಳನ್ನು ಹೆಚ್ಚಾಗಿ ಹಾಡುವುದರ ಜೊತೆಗೆ ಇತರ ಸಾಮಾಜಿಕ ಕಾರ್ಯಗಳಾದ ಮದುವೆ, ಮೈನೆರೆತಾಗ, ಜವಳ ಮತ್ತು ತೊಟ್ಟಿಲು ಹಾಡು ಮತ್ತು ನಾಮಕರಣ ಹಾಡು ಮುಂತಾದ ಹಾಡುಗಳನ್ನು ಹಾಡುತ್ತಾರೆ. ಇವರು ಜನಪದರ ಜನ ಜೀವನದ ಕುರಿತಾಗಿಯೂ ಹಾಡುಗಳನ್ನು ಹಾಡುತ್ತಾರೆ, ಅಲ್ಲದೇ ಗೈರಿ ಹಾಡುಗಳನ್ನು ಹಾಡುತ್ತಾರೆ. ಹಾಗಾಗಿ ಇವರನ್ನು ಜನಪದ ಕಲಾವಿದರೆಂದು ಹೇಳಬಹುದು.

ಸಾಂಸ್ಕೃತಿಕವಾಗಿ ಜೋಗತಿಯರ ಜನಪದ ಕಲೆಗಳು ಸುಸಂಬಂಧ್ಧವಾಗಿ ತೋರಿದರೂ ಬಹುತೇಕವಾಗಿ ಆರ್ಥಿಕ ಬವಣೆಗಳನ್ನು ಪಡೆ'ದವರೆ ಆಗಿರುವುದರಿಂದ ಜೋಗುತಿಯರುಧಾರ್ಮಿಕ ಕ್ರಿಯಾ ವಿಧಿಯಾಗಿಯೂ ಭಿಕ್ಷಾಟನೆಯನ್ನು ಅನುಸರಿಸುವುದುಂಟು. ಜೋಗುತಿಯರು ತಮ್ಮ ಹಾಡುಗಾರಿಕೆಯನ್ನು ಭಿಕ್ಷಾಟನೆಗಾಗಿ ಬಳಸಿಕೊಳ್ಳುವುದನ್ನು ಕಾಣಲಾಗುವುದು.

**ಜೋಗತಿಯಾಗಿ ಬಿಡಲು ಕಾರಣಗಳು**

೧. ವಂಶಪಾರಂಪರರ್ಯದಿಂದ ಬಂದ ಪದ್ಧತಿ

೨. ಮೈಮೇಲೆ ದೇವರು ಬರುವುದು

೩. ಮೈಮೇಲೆ ಹುರುಕು, ಗಜಕರ್ಣ ಉಂಟಾದಾಗ

೪. ಮಕ್ಕಳ ತಲೆ ಕೂದಲು ಜಡೆಕಟ್ಟಿದರೆ

೫. ಮಕ್ಕಳಾಗದಿದ್ದರೆ ಮತ್ತು ಗಂಡು ಸಂತಾನಕ್ಕಾಗಿ

೬. ವಂಶ ಬೆಳೆಸಲು ಅಥವಾ ಗಂಡು ಮಕ್ಕಳು ಇಲ್ಲದಿರುವುದು

೭. ಊರ ದೇವಿಗೆ ಪಡ್ಲಿಗೆ ಹೊರಲು

೮. ಅಂಗವೈಕಲ್ಯ (ವಿಕಲಚೇತನ) ಮಾಂದ್ಯರಾಗಿರುವುದು ಬುದ್ಧಿ

೯. ಋತುಮಾತಿಯಾಗಿ ಬಹಳ ದಿನಗಳ ಕಾಲ ಮದುವೆಯಾಗದಿರುವುದು

ಮನೆದೇವರು ಅಥವಾ ಕುಲದೇವರುಗಳನ್ನು ಮಾಡಿಕೊಂಡಿರುವ ಮನೆತನಗಳಲ್ಲಿ ಈ ಪದ್ಧತಿಯು ವಂಶ ಪಾರಂಪರ್ಯವಾಗಿ ಬೆಳೆದುಕೊಂಡು ಬರುತ್ತದೆ. ಆ ಊರಿನ ಪೂಜಾಕಾರ್ಯಗಳಲ್ಲಿ ಪಡಲಿಗೆ ಹೊರಲು ಒಬ್ಬ ದೇವದಾಸಿ ಅಥವಾ ಜೋಗುತಿಯು ಬೇಕಾಗಿರುತ್ತಾಳೆ. ಹಾಗಾಗಿ ಆ ಊರಿನಲ್ಲಿ ಈ ಪದ್ಧತಿ ಮುಂದಿವರೆದಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಹಳ್ಳಿಗಳಲ್ಲಿ ದೇವದಾಸಿ ಅವರಲ್ಲಿಯೂ ವಿಶೇಷವಾಗಿ ಇಳಿ ವಯಸ್ಸಿನ ದೇವದಾಸಿ ಸಮಾಜದಲ್ಲಿ ಗೌರವದ ಸ್ಥಾನಮಾನ ಪಡೆದಿರುತ್ತಾಳೆ. ಯಾರಾದರೂ ಸಂಸಾರದಲ್ಲಿ ತೊಂದರೆಗಳು ಕಾಣಿಸಿಕೊಂಡಾಗ ಜನ ಆಕೆಯ ಕಡೆ ಧಾವಿಸುತಾರೆ. ದೇವದಾಸಿಯ ದೇಹದಲ್ಲಿ ದೇವಿ ಬಂದು ತಮ್ಮ ಪ್ರತಿಯೊಂದು ಸಂಕಷ್ಟಕ್ಕೆ ಪರಿಹಾರವನ್ನು ಹೇಳುತ್ತಾಳೆ ಎಂಬ ನಂಬಿಕೆ ಜನರಲ್ಲಿದೆ. ಬಡ ಮತ್ತು ಅಸಹಾಯಕ ಕುಟುಂಬದ ಹುಡುಗಿಯರನ್ನು ದೇವಿಗೆ ಬಿಟ್ಟು ಸಂಕಷ್ಟದಿಂದ ಮುಕ್ತ'ವಾಗುವಂತೆ ಆ ದೇವದಾಸಿ ಅಥವಾ ಜೋಗಮ್ಮ ಆದೇಶ ನೀಡುತ್ತಾಳೆ.

ಇದರಿಂದ ಬಾಯಿಯಿಂದ ಹೊರ ಜೀಳುವ ಶಬ್ದಗಳನ್ನು ಸತ್ಯವೆಂದು ನಂಬಲಾಗುತ್ತದೆ. ಆದರೆ ದೇವದಾಸಿ ಅಥವಾ ಜೋಗತಿ ನೀಡುವ ಆದೇಶದ ಹಿಂದೆ ಊರಿನಲ್ಲಿ ದೇವದಾಸಿಯರ ಸಂಖ್ಯೆ ಹೆಚ್ಚಾಗಲಿ ಎನ್ನುವ ಉದ್ದೇಶವೇ ಇರುತ್ತದೆ. ಒಂದು ಪೀಳಿಗೆಯಿಂದು ಇನ್ನೊಂದು ಪೀಳಿಗೆಯತ್ತ ಈ ವರಸೆ ಸಾಗುತ್ತಲೇ ಇರುತ್ತದೆ. ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ತೋರಣಗಲ್ಲು ಗ್ರಾಮದಲ್ಲಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಿರಿಯ ಜೋಗುತಿಯೊಬ್ಬಳ ಬಳಿ ಪದ್ಧತಿಯ ಕುರಿತಾಗಿ ಮಾತಾನಾಡುತಿರುವಾಗ ಇವಾಗಲೂ ಕೂಡ ಈ ಮುತ್ತು ಕಟ್ಟುವ ಮನಸ್ಥಿತಿ ಆ ಜೋಗುತಿಯಲ್ಲಿ ಕಂಡು ಬಂದಿತು. "ಹೌದಮ್ಮ ಬಿಡಬೇಕು ಇಲ್ಲಾಂದ್ರೆ ಆ ದೇವಿ ಸೇವಾ ಯಾರ್ ಮಾಡಬೇಕು?" ಎಂದು ಹೇಳಿದರು ಅಂದರೆ ಇವುಗಳ ಸೇವೆ ದೇವರ ಸೇವೆ ಎಂಬ ಮೂಢನಂಬಿಕೆಯ ಕೆಲ ಮನಸ್ಥಿತಿಗಳು ಇನ್ನು ಉಳಿದಿರುವುದು ತಿಳಿಯುತ್ತದೆ.

ಮೈ ಮೇಲೆ ಹುರುಕು ಇತರೆ ಚರ್ಮರೋಗದಂತಹ ಕಾಯಿಲೆಗಳು ಕಾಣಿಸಿಕೊಂಡಾಗ ಅವುಗಳನ್ನು ದೇವಿಯ ಕೆಟ್ಟ ದೃಷ್ಟಿ ಎಂದು ತಿಳಿಯುತ್ತಾರೆ. ಅವುಗಳಿಗೆ ನೇರವಾಗಿ ಔಷಧಿಗಳನ್ನು ಕೊಡಿಸದೆಯೇ ಇವತ್ತಿಗೂ ಹಳ್ಳಿಗಳಲ್ಲಿ ದೇವಿ ಅಥವಾ ದೇವರ ಮೊರೆಹೊಗುತ್ತಾ ಕುಂಕುಮ ಭಂಡಾರಗಳನ್ನು ಅವುಗಳಿಗೆ ಔಷದಿ ರೀತಿಯಲ್ಲಿ ಬಳಸುತ್ತಾರೆ. ಹೆಚ್ಚಾದರೆ ಪೂಜಾರಿಗಳ ಬಳಿಗೆ ಹೋಗಿ ಸಂಕಷ್ಟಗಳ ಪರಿಹಾರಕ್ಕಾಗಿ ಮಾರ್ಗಗಳನ್ನು ತಿಳುವುದಕ್ಕೆ ಮುಂದಾಗುತ್ತಾರೆ. ಅವರು ಹರಕೆಯನ್ನು ಹೊತ್ತುಕೊಂಡು ದೇವಿಗೆ ಹುಡುಗ ಹುಡುಗಿಯರನ್ನು ಮೀಸಲು ಬಿಡುವ ಕುರಿತು ಹೇಳುತ್ತಾರೆ. ಹೀಗೆ ಪೂಜಾರಿಯವರ ಮಾತನ್ನು ಕೇಳಿದ ಜನರು ಅವರು ಹೇಳಿದ ಹಾಗೆ ದೇವರಿಗೆ ಬಿಡುತ್ತಾರೆ.

ಮಕ್ಕಳ ತಲೆಕೂದಲು ಜಡೆಗಟ್ಟಿದರೆ ಅವರನ್ನು ದೇವರಿಗೆ ಬಿಡುವ ಪ್ರಮಾಣ ಹೆಚ್ಚಾಗಿದೆ. ಕೂದಲಿನಲ್ಲಿ ಜಡೆ ಮೂಡಿದರೆ ಸಾಕ್ಷಾತ್ ಎಲ್ಲಮ್ಮ, ಹುಲಿಗೆಮ್ಮ, ಹುಚ್ಚಂಗೆಮ್ಮ ಅಥವಾ ಇತರೆ ದೇವಿ ಪ್ರಕಟವಾಗಿದ್ದಾಳೆ ಎಂದು ನಂಬುತ್ತಾರೆ. ಹೀಗಾಗಿ ಆ ಜಟೆಯ ಮೇಲೆ ಕುಂಕುಮ ಭಂಡಾರ ಹಚ್ಚಲಾಗುತ್ತದೆ. ಎಲ್ಲಮ್ಮ ದೇವಿಗೆ ಒಬ್ಬ ಹುಡುಗಿ ತುಂಬ ಇಷ್ಟವಾದರೆ ಆ ಹುಡುಗಿಯ ತಲೆಯಲ್ಲಿ ಜಡೆ ಬೆಳೆಯುತ್ತದೆ ಎಂಬ ಮೂಢನಂಬಿಕೆಯೂ ಕಂಡು ಬರುತ್ತದೆ. ಇದರಿಂದಾಗಿ ಜಡೆ ಮೂಡಿದ ಹುಡುಗಿಯರನ್ನು ದೇವಿಯ ಹೆಸರಿನಲ್ಲಿ ಮೀಸಲು ಬಿಡುತ್ತಾರೆ. ಮಹಿಳೆಗೆ ಮಕ್ಕಳಾಗದಿದ್ದರೆ ಆಕೆ ದೇವಿಗೆ ಹರಕೆ ಹೊತ್ತು ಕೊಳ್ಳುತ್ತಾ ನನ್ನ ಉಡಿ ತುಂಬು ಉಡಿ ಒಳಗೆ ಬಿದ್ದ ಫಲವನ್ನು ನಿನ್ನ ಪಾದಕ್ಕೆ ಅರ್ಪಿಸುತ್ತೇನೆಂದು ಮಕ್ಕಳಿಗಾಗಿ ಅಸಹಾಯಕರಾದ ಮಹಿಳೆಯರು ಹರಕೆ ಹೊತ್ತುಕೊಳ್ಳುತ್ತಾರೆ.

ಆನಂತರ ಆ ಹರಕೆಯನ್ನು ತೀರಿಸಬೇಕಾದ ಜವಾಬ್ದಾರಿ ಇರುತ್ತದೆ. ಅದರಿಂದ ಬಿಡುಗಡೆಯಾಗುವುದು ಅಸಾಧ್ಯ. ಹುಡುಗಿ ಹುಟ್ಟಿನಿಂದಲೇ ಅಂಗವಿಕಲೆಯಾಗಿದ್ದರಂತೂ ಆಕೆಯನ್ನು ಬದುಕಿರುವವರೆಗೂ ರಕ್ಷಿಸುವ ಹೊಣೆ ಬೇಡವೆಂದು ಕೆಲವು ಪಾಲಕರು ಅಂತಹ ಹುಡುಗಿಯನ್ನು ದೇವಿಗೆ ಒಪ್ಪಿಸುತ್ತಾರೆ. ಮಗಳ ಮದುವೆಯಾಗದಿದ್ದರೆ ಅಥವಾ ಗಂಡ ಹೊರ ಹಾಕಿದ್ದರೆ ಕೂಡ ಕೆಲವು ಜನರು ಆಕೆಯನ್ನು ದೇವದಾಸಿಯನ್ನಾಗಿಸಿ ತಮ್ಮ ತಲೆಯ ಮೇಲಿನ

ಭಾರವನ್ನು ಇಳಿಸಿಕೊಳ್ಳುತ್ತಾರೆ. ಆಕೆಯನ್ನು ರಕ್ಷಿಸುವ ಹೊಣೆಗಾರಿಕೆ ಇಲ್ಲವಾಗುತ್ತದೆ ಎಂದು ಭಾವಿಸುತ್ತಾರೆ.

**ಜೋಗತಿಯಾಗುವ ವಿಧಿ ಅಥವಾ ದೀಕ್ಷೆ**

ಯಾವುದೇ ವ್ಯಕ್ತಿಯನ್ನು ಜೋಗಪ್ಪ ಅಥವಾ ಜೋಗಮ್ಮನಾಗಿಸುವ ವಿಧಿಯ ಕ್ರಿಯೇಯು ಒಂದೇ ತೆರನಾಗಿರುವುದಿಲ್ಲ. ಅದು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಜಾತ್ರೆಯ ದಿವಸ ಹುಲಿಗಿ ಕ್ಷೇತ್ರದ ಎಲ್ಲಾದರೊಂದು ಕಡೆ ಅಥವಾ ಹುಲಿಗೆಮ್ಮನ ಪೂಜಾರಿಯ ಮನೆಯಲ್ಲಿ ಅಥವಾ ಈಗಾಗಲೇ ಜೋಗಮ್ಮಂದಿರಾದ ಜನರು ಆಯ್ಕೆ ಮಾಡಿದ ಸ್ಥಳದಲ್ಲಿ ಈ ವಿಧಿಯನ್ನು ನಡೆಸುತ್ತಾರೆ. ಹುಲಿಗೆಮ್ಮನ ಗುಡಿಯ ಪಕ್ಕದಲ್ಲಿರುವ ಮುದ್ದಮ್ಮನ ಗುಡಿಯಲ್ಲಿ ಆಗಾಗ ಇಂಥ ಆಚರಣೆಗಳು ನಡೆಯುತ್ತದೆ.

ಜೋಗತಿಯಾಗುವವರಿಗೆ ಮನೆಯಲ್ಲಿ ಕೆಲವು ಸೂಚನೆಗಳು ದೊರಕುತ್ತವೆ. ಅವೇನೆಂದರೆ ತಲೆಯ ಜಡೆ ಬರುವುದು ಆಹಾರ ಕಡಿಮೆ ಸೇವಿಸುವುದು, ವಿಚಿತ್ರವಾಗಿ ನಡೆದುಕೊಳ್ಳುವುದು ಇದರ ಕೆಲವು ಸೂಚನೆಗಳಾಗಿವೆ. ಆಗ ಕುಟುಂಬದವ ಇವಳು ದೇವಿಗೆ ಬೇಕಾಗಿದ್ದಾಳೆ ಎಂದು ತೀರ್ಮಾನಿಸುತ್ತಾರೆ. ಅಲ್ಲದೆ ಕುಟುಂಬದಲ್ಲಿ ಗಂಡು ಮಕ್ಕಳಿಲ್ಲದಿದ್ದರು ಕೂಡ ಜೋಗತಿ ಬಿಡಲು ತೀರ್ಮಾನಿಸುತ್ತಾರೆ. ನಿಗದಿ ಪಡಿಸಿದ ದಿನದಂದು ಜೋಗತಿ ಆಗಬೇಕಾದ ವ್ಯಕ್ತಿಯನ್ನು ಸ್ನಾನ ಮಾಡಿಸಿ ಹೊಸ ಬಟ್ಟೆ ಉಡಿಸಿ ವಾದ್ಯಸಮೇತ ಗುಡಿಗೆ ಕರೆತರುತ್ತಾರೆ. ಹಾಗೆ ಬರುವಾಗ ಆಕೆಯ ಕೈಯಲ್ಲಿ ಕಂಚಿನ ತಟ್ಟೆಯೊಂದಿರುತ್ತದೆ. ಅದರಲ್ಲಿ ಅಕ್ಕಿ, ತೆಂಗಿನಕಾಯಿ, ಕುಂಕುಮ, ಭಂಡಾರ, ವಿಳ್ಯೆದೆಲೆ ಇಟ್ಟಿರುತ್ತಾರೆ. ಮನೆಯಲ್ಲಿ ಹುಲಿಗೆಮ್ಮನ ಅಥವಾ ದೇವಿಯ ಮೂರ್ತಿ ಏನಾದರೂ ಇದ್ದರೆ ಅದನ್ನು ಒಬ್ಬರು ಹಿಡಿದು ಕೊಳ್ಳುತ್ತಾರೆ ಹೀಗೆ ಬಂದವರು ನೇರವಾಗಿ ತುಂಗಭದ್ರ ನದಿಗೆ ಹೋಗುತ್ತಾರೆ. ಅಲ್ಲಿ ಹೊಳೆ ಬದಿಯಲ್ಲಿ ತಂದಿರುವ ತಟೆ ಮತ್ತು ದೈವಗಳನ್ನು ಪ್ರತಿಷ್ಠಾಪಿಸುತ್ತಾರೆ. ಬ್ಯಾಟೆಗೆಂದು ತಂದಿರುವ ಕುರಿಯನ್ನು ಒಂದು ಬದಿಯಲ್ಲಿ ಕಟ್ಟುತ್ತಾರೆ. ಆನಂತರ ಎಲ್ಲರೂ ಸ್ನಾನಮಾಡಿ ಜೋಗುತಿ ಆಗುವವಳ ಕೈಯಲ್ಲಿ ಗಂಗಾಪೂಜೆ ಮಾಡಿಸುತ್ತಾರೆ. ಆನಂತರ ಆಕೆಗೆ ಹೊಸ ಬಟ್ಟೆ ಉಡಿಸುತ್ತಾರೆ ಕುಪ್ಪಸ ತೊಡಿಸುತ್ತಾರೆ. ಈ ಇಡೀ ಕೆಲಸವನ್ನು ಜೋಗುತಿಯೊಬ್ಬಳು ನಿಯಂತ್ರಿಸುತ್ತಾಳೆ. ನಂತರ ಹಿರಿಯ ಜೋಗುತಿಯು ಜೋಗುತಿ ಆಗುತ್ತಿರುವವಳ ಕೊರಳಿಗೆ ಹೂವಿನ ಮಾಲೆ ಹಾಕಿ ಮುತ್ತು ಅಥವಾ ದರ್ಶನಮಣಿ ಎಂದು ಕರೆಯುವ ೩-೫-೯ ಹಾಲುಮಣಿಗಳಿಂದ (ಕೆಂಪು, ಬಿಳಿಯ ಮುತ್ತು) ಪೋಣಿಸಿದ ದಾರವನ್ನು ದೇವಿಯ ಹೆಸರಿನಲ್ಲಿ ಉದೋ..... ಹಾಕುತ್ತಾ ಜೋಗುತಿಯಾಗುತ್ತಿರುವ ಹುಡುಗಿಯ ಕುತ್ತಿಗೆಗೆ ಕಟ್ಟುತ್ತಾರೆ ಹೀಗೆ ಕಟ್ಟಿಸಿಕೊಳ್ಳುವುದನ್ನು ಮುತ್ತು ಕಟ್ಟುವುದು ಎಂದು ಹೇಳುತ್ತಾರೆ. ಮುತ್ತು ಕಟ್ಟಿಸಿಕೊಂಡವಳನ್ನು ಮನೆಯಲ್ಲಿ ಬಿಟ್ಟವಳು ದೇವರನ್ನು ಹೊತ್ತವಳು, ಜೋಗುತಿ, ದೇವದಾಸಿ, ಬಸವಿ ಎಂಬೆಲ್ಲಾ ಹೆಸರುಗಳಿಂದ ಕರೆಯುತ್ತಾರೆ.

ಮುತ್ತುಗಳನ್ನು ಕೊರಗಳಿಗೆ ಕಟ್ಟಿದ ನಂತರದಿಂದ ಅವಳು ಜೋಗುತಿಯಾಗುತ್ತಾಳೆ. ಹೀಗೆ ದೀಕ್ಷೆ ಪಡೆದ ನಂತರ ಅವರ ಜೀವನದಲ್ಲಿ ಪಾಲಿಸಲೇ ಬೇಕಾದ ಕೆಲವು ನಿಯಮಗಳನ್ನು ಉಪದೇಶ

ಮಾಡುತ್ತಾರೆ. ಈ ಉಪದೇಶಗಳನ್ನು ಹಿರಿಯ ಜೋಗುತಿ ಅಥವಾ ಪೂಜಾರಿಯು ಇವರು ಮಾಡಬೇಕಾದ ಮತ್ತು ಮಾಡಬಾರದ ಕೆಲಸಗಳ ಬಗ್ಗೆ ತಿಳುವಳಿಕೆ ನೀಡುತ್ತಾರೆ.

**ಮುತ್ತು ಕಟ್ಟಿಸಿಕೊಂಡವಳಿಗೆ ಉಪದೇಶಗಳು**

೧. ಗಂಡ, ಹೆಂಡತಿಯರು ಸಂಭೋಗ ಮಾಡುವ ದೃಶ್ಯ ನೋಡಬಾರದು, ನೊಡಿದರು ಯಾರ ಮುಂದೆಯು ಹೇಳಾಬಾರದು

೨. ಕರು ಕಿತ್ತುಕೊಂಡು ಹಸುವಿನ ಮೊಲೆ ಕುಡಿಯುವಾಗ ಅದನ್ನು ಬಿಡಿಸಬಾರದು

೩. ಹಸು ಯಾರ ಹೊಲವನ್ನಾದರೂ ಮೇಯುತ್ತಿದ್ದರೆ ಅದನ್ನು ಓಡಿಸಬಾರದು.

೪. ಸುಳ್ಳು ಹೇಳಬಾರದು.

೫. ಎಲ್ಲೂ ಊಟ ಸಿಗದಿದ್ದಾಗ ನಾನು ಹಸಿದಿದ್ದೇನೆ ಎಂದು ಹೇಳಬಾರದು

೬. ಬೇರೆಯವರ ತುತ್ತಿಗೆ ಆಸೆ ಪಡಬಾರದು.

೭. ಬಿಸಿಲಲ್ಲಿ ಇರೋರನ್ನು ನೆರಳಿಗೆ ಕರೆದು ಹಸಿದಿರುವವರಿಗೆ ಅನ್ನ ನೀರು ಕೊಡಬೇಕು.

೮. ಕಷ್ಟದಲ್ಲಿರುವವರಿಗೆ ಸಹಾಯ ಮಾಡಬೇಕು.

೯. ಯಾರಾದರು ನಿನ್ನ ಬೈದರೆ ತಿರುಗಿಬೈಯಬಾರದು

೧೦. ದೇವಿಯ ಸೇವೆ ತಪ್ಪದೆ ಮಾಡಬೇಕು

೧೧. ಕಾಲಿಗೆ ಚಪ್ಪಲಿ ಹಾಕಬಾರದು

೧೨. ಯಾರಾದರೂ ಸತ್ತ ಸುದ್ದಿ ಕೇಳಿದರೆ ಊಟ ಮಾಡಬಾರದು

೧೩. ಇನ್ನೊಬ್ಬರ ಎಂಜಲು ಊಟ ಮಾಡಬಾರದು.

ಈ ಉಪದೇಶಗಳನ್ನು ಮಾಡಿದ ನಂತರ ಹೊಸದಾಸಿ ಜೋಗತಿಯ ಕೈಗೆ ಚೌಡಿಕೆ ಅಥವಾ ಪಡಲಿಗೆ ನೀಡಲಾಗುತ್ತದೆ. ಆಗ ಆಕೆ ಹುಲಿಗೆಮ್ಮನನ್ನು ಧ್ಯಾನಿಸುತ್ತಾ ಹುಲಿಗೆಮ್ಮನ ಅಥವಾ ದೇವಿ ಗುಡಿಗೆ ಬರುತ್ತಾಳೆ. ಗುಡಿಗೆ ೫ ಸುತ್ತು ಪ್ರದಕ್ಷಿಣೆ ಬರುತ್ತಾಳೆ. ಕೆಲವು ನಿರೂಪಕರ ಪ್ರಕಾರ ಹಿಂದೆ ಗಂಗಾ ಪೂಜೆ ಮಾಡಿದನಂತರ ಗುಡಿವರೆಗೆ ಆಕೆ ದಿಗಂಬರಳಾಗಿ ಬರಬೇಕಿತ್ತಂತೆ ಆದರೆ ಈಗ ಬೆತ್ತಲೆಯಾಗಿ ಬರುವುದಿಲ್ಲ ಬಟ್ಟೆ ಧರಿಸಿಕೊಂಡು ಬರುತ್ತಾಳೆ, ಹೀಗೆ ಬಂದವಳು ದೈವಕ್ಕೆ ಕೈ ಮುಗಿದು ೫ ಮನೆ ಭಿಕ್ಷೆ ಬೇಡುತ್ತಾಳೆ. ಮಾತಂಗಿ ಪೂಜೆ ಮಾಡುತ್ತಾಳೆ. ಅನಂತರ ಕುಟುಂಬದವರು ಆಕೆಯನ್ನು ತಾತ್ಕಾಲಿಕವಾಗಿ ನಿರ್ಮಿಸಿರುವ ಹುಲಿಗೆಮ್ಮನ ಗುಡಿಗೆ ಕರೆತರುತ್ತಾರೆ. ಆಕೆಯನ್ನು ಗುಡಿಯಲ್ಲಿ ಕುಳ್ಳಿರಿಸುತ್ತಾರೆ. ಬೇವಿನ ತಪ್ಪಲವನ್ನು ಆಕೆಯ ಇದಿರು ಇಡುತ್ತಾರೆ. ನಂತರ ಕುರಿ ಕೊಯ್ದು ಮಾಂಸದ ಅಡುಗೆ ಮಾಡಿ ಹುಲಿಗೆಮ್ಮನಿಗೆ ನೈವೇದ್ಯ ಇಡುತ್ತಾರೆ. ನಂತರ ಎಲ್ಲರೂ ಸಾಮೂಹಿಕ ಭೋಜನ ಮಾಡುತ್ತಾರೆ. ಭೋಜನದ ನಂತರ ಉಧೋ.....ಉಧೋ........ಎಂದು ಎಲ್ಲರೂ ತಮ್ಮ ಮನೆಗಳಿಗೆ ಹಿಂದಿರುಗುತ್ತಾರೆ. ನಿಧಾನವಾಗಿ ಆಕೆ ತನ್ನ ಹಾಗೆ ಇರುವ ಇತರ ಜೋಗಮ್ಮರ ಕೂಟವನ್ನು ಸೇರುತ್ತಾಳೆ. ಇದೆಲ್ಲ ಕಾರ್ಯವನ್ನು ಹುಲಿಗಿ ಕ್ಷೇತ್ರದಲ್ಲಿ ಮಾಡುತ್ತಾರೆ.

ದೇವದಾಸಿ ಅಥವಾ ಜೋಗುತಿ ಅಥವಾ ಬಸವಿ ಪದ್ಧತಿ ಸಮರ್ಪಣೆಯ ನಿಷೇಧ ಕಾನೂನು ಬಂದ ನಂತರ ಕದ್ದು ಮುಚ್ಚಿ ಮನೆಗಳ ಹತ್ತಿರವೇ ಈ ಕಾರ್ಯಗಳನ್ನು ಮಾಡುತ್ತಾರೆ. ಕೆಲವರು ಹುಲಿಗಿ ಕ್ಷೇತ್ರಕ್ಕೆ ಬರಲಾಗದೆ ತಮ್ಮ ಮನೆಗಳಲ್ಲಿಯೇ ಈ ದೀಕ್ಷಾವಿಧಿಯನ್ನು ನೆರವೇರಿಸುತ್ತಾರೆ. ಹೇಗೆಂದರೆ ಯಾರ ಮನೆಯಲ್ಲಿ ಹುಲಿಗೆಮ್ಮನ ವಿಗ್ರಹ ಇದೆಯೋ ಆ ಮನೆಯನ್ನು ಸಾರಿಸುತ್ತಾರೆ. ಅಂಗಳಕ್ಕೆ ಸಗಣಿ ಹಾಕುತ್ತಾರೆ. ನಂತರ ಹಳದಿ ಬಿಳಿ, ಕೆಂಪು, ಹಸಿರು, ನೀಲಿ ಬಣ್ಣ, ಇದ್ದಿಲು ಪುಡಿ, ಕುಂಕುಮ, ಭಂಡಾರವನ್ನು ಉಪಯೋಗಿಸಿ ನೆಲದಲ್ಲಿ ಜೋಗ್ತಿ ಪಟ್ಟಿ ಚಿತ್ರ ಬರೆಯುತ್ತಾರೆ. ಚಿತ್ರದ ನಾಲ್ಕು ಮೂಲೆಗಳನ್ನು ಬಳೆ, ವೀಳ್ಯೆಯದೆಲೆ, ನೂಲು ಅಕ್ಷತೆ ಮತ್ತು ಗಂಧಗಳಿಂದ ಅಲಂಕರಿಸಿ ಜೊತೆಗೆ ಕಳಸವನ್ನು ಇಡುತ್ತಾರೆ. ಮೂಲೆಗಳಲ್ಲಿ ಇಡಲಾದ ಕಳಸಗಳಿಗೆ ಒಂದು ವಿಭೂತಿ ಪಟ್ಟಿ ಬೆಲ್ಲದ ಚೂರು, ಕೊಬ್ಬರಿ ಬಟ್ಟಲು, ಬಾಳೆಹಣ್ಣು, ಎಲೆ ಅಡಿಕೆ ಮತ್ತು ಐದು ತರಹದ ಹಣ್ಣುಗಳನ್ನು ಇಡುತ್ತಾರೆ. ನಂತರ ನಾಲ್ಕು ಕಳಸಗಲನ್ನು ಕುಡಿಸುವಂತೆ ನೂಲಿನಿಂದ ಐದು ಅಥವಾ ಒಂಭತ್ತು ಸುತ್ತು ಸುತ್ತುತ್ತಾರೆ. ಹೀಗೆ ಪಟ್ಟದ ನಡುವೆ ಜೋಗುತಿಯಾಗುವ ಹೆಣ್ಣು ಮಗಳನ್ನು ಕೂಡಿಸುತ್ತಾರೆ. ನಾಲ್ಕು ಕಳಸಗಳಿಂದ ಒಂದೊಂದು ನೂಲಿನ ತುಂಡನ್ನು ಎಳೆದು ಆಕೆಯ ಕೊರಳಿಗೆ ಕಟ್ಟುತ್ತಾರೆ. ನಂತರ ಇನ್ನೊಬ್ಬಳು ಜೋಗತಿಯೂ ಒಂಭತ್ತು ಮುತ್ತು ಪೋಣಿಸಿದ ದಾರವನ್ನ ಆಕೆಯ ಕೊರಳಿಗೆ ಕಟ್ಟುತ್ತಾರೆ. ಎಲ್ಲರೂ ಉದೋ...ಉಧೋ... ಎನ್ನುತ್ತಾರೆ. ಅನಂತರ ಹೊಸದಾಗಿ ಆದ ಜೋಗತಿಗೆ ಉಪದೇಶ ನಡೆಯುತ್ತದೆ. ಉಪದೇಶದ ಕೊನೆಯಲಿ ಜೋಗುತಿಯ ತಲೆಯ ಮೇಲೆ ಜನ ಇಲ್ಲವೆ ಕೈಗೆ ಪಡಲಿಗೆಯನ್ನ ನೀಡುತ್ತಾರೆ. ಜೋಗಪ್ಪನಾದರೆ ಕೈಗೆ ಚೌಡಿಕೆ ಕೊಡುತ್ತಾರೆ. ನಂತರ ಜೋಗುತಿಯಾದವಳು ಕನಿಷ್ಟ ೫–೯ ಮನೆದರೂ ಜೋಗ ಗಳಿಗಾಬೇಡಲು ಹೋಗುತ್ತಾಳೆ. ಆಗ ಊರಿನವರು ಜೋಗುತಿಗೆ ಅಕ್ಕಿ ಇತರೆ ಧಾನ್ಯಗಳನ್ನು ಹಾಕುತ್ತಾರೆ. ಜೊತೆಗೆ ದುಡ್ಡು ತರಕಾರಿ ಮತ್ತು ಹಣ್ಣು ಹೀಗೆ ಅವರ ಹತ್ತಿರ ಏನಿದೆಯೋ ಅದನ್ನು ನೀಡುತ್ತಾರೆ. ಈ ರೀತಿಯಲ್ಲಿ ನೀಡಿರುವ ಜನರಿಗೆ ಜೋಗುತಿಯು ಕುಂಕುಮ ಭಂಡಾರವನ್ನು ಹಚ್ಚುತ್ತಾಳೆ. ಹೀಗೆ ಕೆಲವೊಬ್ಬರು ಜೋಗುತಿ ಕಾಲಿಗೆ ನೀರು ಹಾಕಿ ಕಾಲು ಮುಗಿಯುತ್ತಾರೆ. ಹೀಗೆ ಜನರು ಭಯ ಭಕ್ತಿಯಿಂದ ಜೋಗುತಿಯನ್ನು ಕಾಣುತ್ತಾರೆ. ಹೀಗೆ ಮೊದಲು ಜೋಗ ಬೇಡಿ ತಂದಿರುವುದನ್ನು ಅಡುಗೆ ಮಾಡಿ ಸಾಮೂಹಿಕ ಭೋಜನ ಮಾಡಿಸುತ್ತಾರೆ.

ಹೀಗೆ ಒಂದು ಸಾರಿ ಮುತ್ತು ಕಟ್ಟಿಸಿಕೊಂಡ ಮಹಿಳೆಯು ಮತ್ತೆ ಬೇರೆ ಮದುವೆ ಮಾಡಿಕೊಳ್ಳುವಂತಿಲ್ಲ. ಈ ಮೇಲೆ ತಿಳಿಸಿದ ಕ್ರಿಯೆಯಿಂದ ಇವರು ಹುಲಿಗೆಮ್ಮ ಅಥವಾ ಎಲ್ಲಮ್ಮ ಅಥವಾ ಇತರೆ ದೇವಿಯನ್ನು ಮದುವೆಯಾದಂತೆ ಎಂದು ತಿಳಿಯಬೇಕು. ಜೋಗುತಿಯರು ತಾವು ಬಯಸಿದ ಗಂಡನೊಡನೆ ಕೂಡುವುದುಂಟು. ಇದನ್ನು ಪೂಜೆಯಷ್ಟೇ ಪವಿತ್ರ ಎಂದು ಭಾವಿಸುತ್ತಾರೆ. ಹೆಣ್ಣು ದೇವರುಗಳಿಗೆ ಮುತ್ತು ಕಟ್ಟುವ ಪದ್ಧತಿಯಲ್ಲಿ ಎರಡು ರೀತಿಯ ಮುತ್ತು ಕಟ್ಟುವ ಪದ್ಧತಿಯನ್ನು ನೋಡಬಹುದು ೧. ಕನ್ನೆ ಮುತ್ತು ಮತ್ತೊಂದು ೨. ಗರತಿ ಮುತ್ತು. ಕನ್ನೆ ಮುತ್ತುಗೆ ಮತ್ತು ಗರತಿ ಮುತ್ತು ಕಟ್ಟುವ ವಿಧಾನಗಳು ಬಹುತೇಕವಾಗಿ ಒಂದೇಯಾಗಿರುತ್ತದೆ.

### ಕನ್ಯೆ ಮುತ್ತು

ವಿವಾಹವಾಗದಿರುವ ಒಬ್ಬ ಹೆಣ್ಣು ಮಗಳನ್ನು ದೇವರು ದೇವತೆಯ ಹೆಸರಿನಲ್ಲಿ ಕೆಂಪು, ಬಿಳಿ ಮತ್ತು ದೇವಿಯ ಮೂರ್ತಿಯ ಪದಕಗಳನ್ನು ಸೇರಿಸಿ ಕಟ್ಟುವುದನ್ನು ಕನ್ಯೆ ಮುತ್ತು ಕಟ್ಟುವುದು ಎಂದು ಕರೆಯುತ್ತಾರೆ. ಈ ಕನ್ಯೆ ಮುತ್ತು ಕಟ್ಟಿಸಿಕೊಂಡವರು ಮತ್ತೆ ತಿರುಗಿ ಯಾರನ್ನೂ ವಿವಾಹವಾಗುವಂತಿರಲ್ಲಿಲ್ಲ. ತನಗೆ ಮತ್ತು ತನ್ನ ವಂಶದ ಅಭಿವೃದ್ದಿಗಾಗಿ ಇಷ್ಟ ಬಂದ ಪುರುಷನೊಂದಿಗೆ ಅಥವಾ ಹಿರಿಯರು ಗೊತ್ತುಪಡಿಸಿ ಪುರುಷನೊಂದಿಗೆ ಲೈಂಗಿಕ ಸಂಬಂಧವನ್ನು ಹೊಂದಿ ಮಕ್ಕಳನ್ನು ಪಡೆಯಬಹುದು. ಈಗೆ ಹುಟ್ಟಿದ ಮಕ್ಕಳು ತಾಯಿಯ ಕುಲಕ್ಕೆ ಸೇರಿದವರಾಗಿರುತ್ತಾರೆ. ಇವರನ್ನು ಸಮಾಜ ತಂದೆ ಇಲ್ಲದ ಮಕ್ಕಳು, ಸೂಳೆಯ ಮಗ, ಮಗಳು, ದೇವದಾಸಿ ಮಗ, ಮಗಳು, ಜೋಗಮ್ಮನ ಮಗ ಅಥವಾ ಮಗಳು ಎಂದೆಲ್ಲ ಜನರು ಗುರುತಿಸುತ್ತಾರೆ.

### ಗರತಿ ಮುತ್ತು

ಹುಲಿಗೆಮ್ಮ ಅಥವಾ ಎಲ್ಲಮ್ಮ ಇತರೆ ಹೆಣ್ಣು ದೇವತೆಗಳಿಗೆ ಮುತ್ತು ಕಟ್ಟಿಕೊಳ್ಳುತ್ತಾರೆ. ಅದರಲ್ಲಿ ಗರತಿ ಮುತ್ತು ಕೂಡ ಒಂದಾಗಿದೆ. ಗರತಿ ಮುತ್ತು ಎಂದರೆ ಮದುವೆ ಮಾಡಿಕೊಂಡು ದೇವರ ಹೆಸರಿನಲ್ಲಿ ಮುತ್ತು ಕಟ್ಟಿಕೊಳ್ಳುವುದು. ಇವರು ಕೊರಳಿಗೆ ಬಿಳಿ ಮುತ್ತು ಮಾತ್ರ ಧರಿಸುತ್ತಾರೆ. ಕೆಲವರು ಕೆಂಪು ಮುತ್ತು ಬಿಳಿ ಮುತ್ತುಗಳನ್ನು ಧರಿಸುತ್ತಾರೆ. ಈ ಗರತಿ ಮುತ್ತು ಕಟ್ಟಿಸಿಕೊಂಡವರು ಕುಟುಂಬದ ಹಿರಿಯ ಸೊಸೆ ಅಥವಾ ಮಗಳು ಆಗಿರುತ್ತಾಳೆ. ಇಲ್ಲವಾದರೆ ದೇವರು ಅವರಿಗೆ ಒಲಿದು ಬಂದರೆ ಯಾರಾದಾರೂ ಕೂಡ ಗರತಿ ಮುತ್ತನ್ನು ಕಟ್ಟಿಕೊಳ್ಳುತ್ತಾರೆ. ಹೀಗೆ ಗರತಿ ಮುತ್ತನ್ನು ಕಟ್ಟಿಕೊಂಡವರು ಸಂಸಾರಿಗಳಾಗಿರುತ್ತಾರೆ. ವರ್ಷಕ್ಕೊಮ್ಮೆ ಜಾತ್ರೆಗೆ ಇವರೇ ಬರುತ್ತಾರೆ. ಇಲ್ಲಿ ದೇವಿಯ ಪೂಜೆ ಮತ್ತು ಜಾತ್ರೋತ್ಸವದಲ್ಲಿ ಪಾಲ್ಗೊಂಡು ಹಣ್ಣುಕಾಯಿ ಕರಪುರ ಮಾಡಿಸಿಕೊಂಡು ಹೋಗುತ್ತಾರೆ. ಜಡೆ ಬಂದರೆ ದೇವರು ಮೈಮೇಲೆ ಬಂದರು ಕೂಡ ಮದುವೆಯಾದ ಮಹಿಳೆಯು ಗರತಿ ಮುತ್ತನ್ನು ಕಟ್ಟಿಕೊಂಡಿರುತ್ತಾಳೆ. ಜಡೆ ಬಂದು ಮುತ್ತು ಕಟ್ಟಿಸಿಕೊಂಡವರು ಕನ್ಯೆ ಮುತ್ತು ಕಟ್ಟಿಸಿಕೊಂಡವಳಾಗಲಿ ಗರತಿ ಮುತ್ತು ಕಟ್ಟಿಕೊಂಡವಳಾಗಲಿ ಅವಳನ್ನು ಸಾಕ್ಷಾತ್ ಹುಲಿಗೆಮ್ಮ, ಎಲ್ಲಮ್ಮ ಅಥವಾ ಇತರೆ ದೇವಿಯೇ ಎಂದು ಭಾವಿಸುವುದರಿಂದ ಅವಳು ಕಟ್ಟು ನಿಟ್ಟಾಗಿ ಲೈಂಗಿಕ ಬಯಕೆಗಳನ್ನು ತ್ಯಜಿಸಬೇಕಾದ ನಿಯಮವಿದೆ. ಪ್ರಸ್ತುತ ಸಂದರ್ಭದಲ್ಲಿ ಸಂಬಂಧ ಹೊಂದಿರುವ ಜೋಗುತಿಯರನ್ನು ಕ್ಷೇತ್ರಕಾರ್ಯದಲ್ಲಿ ಕಾಣಲಾಗಿದೆ.

ಹುಲಿಗೆಮ್ಮ, ಎಲ್ಲಮ್ಮ, ಉಚ್ಚಂಗೆಮ್ಮ ಮುಂತಾದ ದೇವಿಯ ಭಕ್ತರಲ್ಲಿ ಮುತ್ತುಕಟ್ಟುವ ಅನೇಕ ಬಗೆಯ ಗುಂಪುಗಳಿವೆ ಅವುಗಳೆಂದರೆ

೧. ಗರತಿ ಮುತ್ತು ಹಾಕಿಕೊಂಡ ಜೋಗವ್ವಗಳು.

೨. ಸೂಳೆ ಮುತ್ತು ಹಾಕಿಕೊಂಡ ಜೋಗವ್ವಗಳು.

೩. ಜೋಗುತಿ ಮುತ್ತು ಧರಿಸಿದ ಜೋಗಮ್ಮಗಳು

೪. ಗಂಡು ವೇಷ ಹಾಕಿದ ಜೋಗಮ್ಮಗಳು

೫. ಹೆಣ್ಣು ವೇಷ ಹಾಕಿದ ಜೋಗಮ್ಮಗಳು

೬. ಮಂಗಳಾರತಿ ಜೋಗಪ್ಪಗಳು

೭. ಸಾಮಾನ್ಯ ಭಕ್ತರು" *(ಪುರುಷೋತ್ತಮ ಬಿಳಿಮಲೆ:೧೯೯೯:೩೪).* ಹೀಗೆ ಅನೇಕ ರೀತಿಯ ಜೋಗುತಿಯುರನ್ನು ಕಾಣಬಹುದು. ಇವರೆಲ್ಲರೂ ಕೂಡ ದೇವಿಯು ಸೇವಾ ಮನೋಭಾವನೆಯಿಂದಲೇ ಮುತ್ತು ಕಟ್ಟಿಕೊಳ್ಳುವ ಮೂಲಕ ಸೇವೆಯಲ್ಲಿ ತೊಡಗುತ್ತಾರೆ.

ಜೋಗುತಿಯಾಗಿರುವ ಮಹಿಳೆಯಲ್ಲಿ ವಿಶೇಷವಾಗಿ ಕಂಡುಬರುವ ವೇಷಭೂಷಣ ಎಂದರೆ ಕೈಯಲ್ಲಿ ಜಾಗಟೆ, ಕುದಲಿನಿಂದ ಮಾಡಿದ ಚೌರಿ, ಕೊರಳಲ್ಲಿ ಕವಡೆಸರ, ಕಾಲಲ್ಲಿ ತೊಡೆ ಮತ್ತು ಗೆಜ್ಜೆ ಸರ ಹಣೆಯ ಮೇಲೆ ದೊಡ್ಡ ಆಕಾರದ ಕುಂಕುಮ ಮತ್ತು ಭಂಡಾರ ಇವಿಷ್ಟು ಎಲ್ಲರಿಗೂ ಸಾಮಾನ್ಯವಾಗಿ ಕಂಡು ಬರುವವುಗಳಾಗಿವೆ ಉಳಿದಂತೆ ಕೆಲವರು ಕೈಯಲ್ಲಿ ಜೌಡಿಕೆ, ಪಡಲಿಗೆ ಕೆಲವರು ಜಗ ಕೊಡ ಇವುಗಳನ್ನು ಹೊಂದಿರುತ್ತಾರೆ.

**ಮುತ್ತುಗಳು:** ಜೋಗುತಿಯಾದವಳು ಕೊರಳಲ್ಲಿ ಕೆಂಪು ಮತ್ತು ಬಿಳಿಯ ೯ ಅಥವಾ ಅದಕ್ಕಿಂಥ ಹೆಚ್ಚು ಮುತ್ತುಗಳ ಜೊತೆಗೆ ದೇವಿಯ ಮೂರ್ತಿಗಳುಳ್ಳ ಪದಕ, ದೇವಿಯ ಪಾದುಕೆಗಳ ಪದಕ ಮತ್ತು ನಾಲಿಗೆ ಹೀಗೆ ಒಂಬತ್ತು ದೇವಿಯ ಪದಕಗಳನ್ನು ಪೋಣಿಸಿಕೊಂಡು ಧರಿಸುತ್ತಾರೆ. ವಯಸ್ಸು ಇರುವ ಅಂದರೆ ಯೌವನಸ್ಥ ಜೋಗುತಿ ಮಹಿಳೆಯರು ಇತರರಿಗೆ ನಾವು ಬಸವಿ ಸೂಳೆ ದೇವರಿಗೆ ಬಿಟ್ಟವಳು ಎಂದು ಕೀಳಾಗಿ ಕಾಣಿಸಬಾರದು ಎಂದು ಕೇವಲ ತಾಳಿಯನ್ನು ವಿವಾಹ ಮಹಿಳೆಯರಂತೆ ಹಾಕಿಕೊಂಡಿರುತ್ತಾರೆ. ಮತ್ತೆ ಹಬ್ಬ ಹುಣ್ಣಿಮೆ ಅಮಾವಾಸ್ಯೆಗಳ ವಾರದ ದಿನಗಳಂದು ಪೂಜೆ ಮಾಡಲು ಮುತ್ತುಗಳನ್ನು ಧರಿಸಿ ೫– ೯ ಮನೆ ಜೋಗಬೇಡಿ ಮತ್ತೆ ಒಂದು ಪಡಲಿಗೆಯಲ್ಲಿ ಬಿಚ್ಚಿ ಇಡುತ್ತಾರೆ. ಕೆಲವರು ವಯಸ್ಸು ಕಳೆದ ನಂತರ ನಿರಂತರವಾಗಿ ಹಾಕಿಕೊಳ್ಳುತ್ತಾರೆ. ಇವುಗಳು ದೇವಿಯ ಸೇವೆಗೆಂದು ಬಿಟ್ಟಿರುವ ಮಹಿಳೆಗೆ ಬಹಳ ಪ್ರಮುಖವಾದವುಗಳೆನ್ನಬಹುದು.

ವಿಶೇಷವಾಗಿ ಕ್ಷೇತ್ರಕಾರ್ಯದಿಂದ ತಿಳಿದ ವಿಷಯವೆಂದರೆ ಬಿಳಿಯ ಮುತ್ತಿನ ಜೊತೆಗೆ ಕೆಂಪು ಮುತ್ತುಗಳನ್ನು ಕಟ್ಟಿಕೊಂಡರೆ ಅವು ಎಲ್ಲಮ್ಮನ ದೇವಿಯ ಮುತ್ತುಗಳೆಂದು ಮತ್ತು ಕೆಸರಿ ಮಿಶ್ರಿತಕೆಂಪು ಮುತ್ತಿನ ಜೊತೆಯಲ್ಲಿ ಬಿಳಿ ಮುತ್ತುಗಳನ್ನು ಹುಲಿಗೆಮ್ಮ ದೇವರಿಗೆ ಧರಿಸುತ್ತಾರೆ. ಉಚ್ಚಂಗಮ್ಮನ ಒಕ್ಕಲಿನ ಮನೆತನದವರು ಕೇವಲ ಬಿಳಿ ಮುತ್ತುಗಳನ್ನು ಮಾತ್ರ ಕಟ್ಟಿಕೊಳ್ಳುತ್ತಾರೆ ಎಂಬ ಅಂಶಗಳು ತಿಳಿದು ಬಂದಿವೆ.

**ಪಡಲಿಗಿ (ಹಡಲಿಗೆ):** ಜೋಗತಿಯು, ಭಿಕ್ಷೆಗೆ ತರುವ ಬಿದುರಿನ ಬುಟ್ಟಿಗಳಿಗೆ ಹಡಲಿಗೆ ಅಥವಾ ಪಡಲಿಗೆ ಎನ್ನುವರು. ಈ ಪಡಲಿಗೆಯನ್ನು ಎಲ್ಲಾ ಗ್ರಾಮದೇವತೆಗಳ ಪೂಜಾ ಕಾರ್ಯದಲ್ಲಿ ಬಳಸುವರು. ಈ ಪಡಲಿಗೆಯನ್ನು ಮಾತಂಗಿಯರು ಅಥವಾ ಜೋಗತಿಯರು ದೇವಿಯರ ಗುಡಿಯ ಮುಂದೆ ಸಾಲಾಗಿ ಇಟ್ಟು ಪೂಜಿಸುತ್ತಾರೆ. ದೇವಿಯರ ಪೂಜಾ ಕಾರ್ಯ ಆದ ಕೂಡಲೆ ಭಕ್ತರು ಪಡಲಿಗೆ

ತುಂಬಿಸಿ ಅದರಲ್ಲಿದ್ದ ಕುಂಕುಮ ಭಂಡಾರವನ್ನು ಹಣೆಗೆ ಕಚ್ಚಿಕೊಳ್ಳುತ್ತಾರೆ. ಪಡಲಿಗೆಯನ್ನು ಜೋಗ ಬೇಡಲು ಜೋಗಪಣತಿ ನಿಡುವಲ್ಲಿ, ಮನೆದೇವರ ಸಂದರ್ಭದಲ್ಲಿ, ಊರಜಾತ್ರೆಯ ಸಂದರ್ಭಗಳಲ್ಲಿ ಪೂಜಾ ಕಾರ್ಯಗಳಲ್ಲಿ ಪಡಲಿಗೆಯನ್ನು ಬಳಸುತ್ತಾರೆ. ಪಡಲಿಗೆಗಳು ಎರಡು ತಟ್ಟೆಯಾಕಾರದಲ್ಲಿದ್ದು ಅದರ ಕಂಠವು ಸ್ವಲ್ಪ ಎತ್ತರವಾಗಿರುತ್ತವೆ. ಇಂಹವುಗಳು ಎರಡು ಇರುತ್ತವೆ. ಅದರಲ್ಲಿ ಎರಡು ಸಣ್ಣ ಬುಟ್ಟಿಗಳು ಕುಂಕುಮ ಭಂಡಾರಗಳನ್ನು ತುಂಬಿಸಿಡುತ್ತಾರೆ. ಇವುಗಳನ್ನು ಪರಶುರಾಮರು ಎನ್ನುತ್ತಾರೆ. ಹೀಗೆ ದೇವಿಯ ಪೂಜಾ ಕಾರ್ಯದಲ್ಲಿ ಪಡಲಿಗೆಗಳು ಬಹಳ ಮುಖ್ಯವಾಗಿರುತ್ತವೆ. ಮನೆಯಲ್ಲಿ ಮಡಿ ಮೈಲಿಗೆಗಳಾದರೆ ಅಂದರೇ ಯಾರಾದರೂ ಸತ್ತರೆ, ಮನೆಯಲ್ಲಿ ಋತುಮತಿ, ಬಾಣಂತನವಾದರೆ ಈ ಪಡಲಿಗೆಗಳನ್ನು ದೇವಿಯ ಕ್ಷೇತ್ರಕ್ಕೆ ಬಂದು ನೀರಿಗೆ ಬಿಟ್ಟು ಹೊಸ ಪಡಲಿಗೆಗಳನ್ನು ಕೊಂಡು ಹೋಗುತ್ತಾರೆ.

**ಬೆಳ್ಳಿ ಕಡಗ:** ಮುತ್ತು ಕಟ್ಟಿಸಿಕೊಂಡ ಜೋಗುತಿಯು ಬೆಳ್ಳಿಯ ಕಡಗವನ್ನು ಧರಿಸಿರುತ್ತಾಳೆ. ಅದನ್ನು ಜತ್ತಕಡಗ ಎನ್ನುತ್ತಾರೆ. ದೇವರು ಅಂದರೆ ಮುತ್ತು ಮತ್ತು ಕಡಗ ಹಾಕುವುದರ ಮೂಲಕ ಬರುವಂತದ್ದು, ಈ ಕಡಗವನ್ನು ಗಂಡು ಮಕ್ಕಳು ಹಿರಿಯರ ಮದುವೆಯಲ್ಲಿ ಬಟ್ಟೆಯನ್ನು ಏರಿಸಿದಾಗ ಕಡಗವನ್ನು ತೊಳೆಸಿ ಗಂಡು ಮಕ್ಕಳು ಬಟ್ಟೆಗೆ ಹಾಕುತ್ತಾರೆ. ಅತ್ತೆ ಮಾವ ಸೇರಿ ಬಟ್ಟೆ ಏರಿಸಿದಾಗ ಹೆಣ್ಣು ಮಕ್ಕಳ ಬಟ್ಟೆಗೆ ಮುತ್ತು ಹಾಕಿ ಪೂಜೆ ಮಾಡಿ ಹೋಳಿಗೆ ಪಂಕ್ತಿ ಅಂತ ಮಾಡಿ ಹೋಳಿಗೆ ಊಟ ಮಾಡಿಸುತ್ತಾರೆ. ದೇವರ ಹೆಸರಿನಲ್ಲಿ ಮುತ್ತು ಕಟ್ಟಿಸಿಕೊಂಡ ಜೊಗುತಿಯರು ಬಲಗೈಯಲ್ಲಿ ಕಡ್ಡಾಯವಾಗಿ ಇದನ್ನು ಧರಿಸಿರುತ್ತಾರೆ. ಇವುಗಳನ್ನು ದೇವಿಯಾರಿಗಾದರು ಒಳ್ಳೆಯದು ಮಾಡಿದರೆ ಭಕ್ತರು  ಜೋಗುತಿಯರಿಗೆ ಈ ಕಡಗ ಕೊಡಿಸುತ್ತಾರೆ.

**ಕವಡೆ ಸರ:** ದೇವಿಯ ಹೆಸರಿನಲ್ಲಿ ಮುತ್ತು ಕಟ್ಟಿಕೊಂಡಿರುವ ಜೊಗುತಿಯರಲ್ಲಿ ಕೆಲವರು ಕವಡೆಯ ಸರ ಹಾಕುತ್ತಾರೆ. ಈ ಕವಡೆಗಳು ದೇವಿಯು ತಾನು ಕೊಂದ ರಾಕ್ಷಸರ ಎಲುಬಿನಿಂದ ಮಾಡಿದ್ದಾಳೆ ಎಂದು ಇವರು ನಂಬುತ್ತಾರೆ. ಇದರ ಜೊತೆಗೆ ಜೊಗುತಿಯರು ಕಾಲಿಗೆ ಗೆಜ್ಜೆಸರ ಹಾಕುತ್ತಾರೆ. ಇದು ಕುಣಿತಕ್ಕೆ ಇದು ಒಳ್ಳೆಯ ಲಯವನ್ನು ಕೊಡುತ್ತದೆ.

**ಚೌರಿ ಹೊತ್ತ ಜೊಗುತಿ:** ಕಾಡು ಆಕಳ ಬಾಲದ ತುದಿಯ ಕೂದಲನ್ನು ಕತ್ತರಿಸಿ ಕ್ಷೌರವನ್ನು ಮಾಡುತ್ತಾರೆ. ಕೂದಲು ಭದ್ರವಾಗಿ ನಿಲ್ಲುವಂತೆ ಮಾಡಲು ಬೆಳ್ಳಿಯ ಹಿಡಿಯನ್ನು ಹಾಕಿರುತ್ತಾರೆ. ದೈವಕ್ಕೆ ಈ ಚೌರಿಯಿಂದ ಗಾಳಿ ಬೀಸುತ್ತಾರೆ. ಈ ಕ್ಷೌರವನ್ನು ಕಾಮದೇನು ಎಂದು ಭಾವಿಸುತ್ತಾರೆ.

**ಜಗ:** ಮುತ್ತು ಕಟ್ಟಿಕೊಂಡ ಜೋಗುತಿಯರು ಜಗ ಹೊರುತ್ತಾರೆ. ಈ ಜಗವನ್ನು ಹೊತ್ತು ದೇವಿಯ ಮಾಹಿಮೆಯನ್ನು ಸಾರುತ್ತಾ ಭಿಕ್ಷೆ ಬೇಡುತ್ತಾರೆ. ಜಗವನ್ನು ಬಿದಿರಿನಿಂದ ಮಾಡಿರುತ್ತಾರೆ. ಅದೊಂದು ಹರವಾದ ತಟ್ಟೆಯಾಗಿರುತ್ತದೆ. ವೃತ್ತಾಕಾರವಾಗಿರುವ ಈ ಬುಟ್ಟಿಯಲ್ಲಿ ನಡುವೆ ಕಳಶವಿಡುವ ಚೆಂಬನ್ನು ನೆಟ್ಟಿರುತ್ತಾರೆ. ಈ ಬುಟ್ಟಿಯ ಸುತ್ತಾ ಬಿಳಿ ಅಥವಾ ಕೆಂಪು ಬಟ್ಟೆಯನ್ನು ಹೊದ್ದಿಸಿರುತ್ತಾರೆ. ಬುಟ್ಟಿಯ ಮುಂದಿನ ಭಾಗಗಳಲ್ಲಿ ಹಸಿರುಬಳೆಗಳನ್ನು ಸಿಕ್ಕಿಸಿರುತ್ತಾರೆ. ಇದನ್ನು ಜಗ ಎನ್ನುತ್ತಾರೆ. ಇತ್ತೀಚಿಗೆ

ಜಗದಲ್ಲಿ ಇರುವ ಕಳಶದ ಚೆಂಜಿನ ಹಿಂದೆ ನವಿಲಿನ ಗರಿಗಳನ್ನು ಸಿಕ್ಕಿಸಿರುತ್ತಾರೆ. ಇಡೀ ಬುಟ್ಟಿಯು ಕುಂಕುಮ ಭಂಡಾರದಲ್ಲಿ ಕೂಡಿರುತ್ತದೆ ಎಂದು ಹೇಳಲಾಗುವುದು.

**ಕೊಡು:** ಕೊಡುವು ಕೂಡ ಹುಲಿಗೆಮ್ಮನ ಅಥವಾ ಎಲ್ಲಮ್ಮ ಅಥವಾ ಇತರೆ ದೇವಿಯ ಪ್ರತೀಕವಾಗಿದೆ. ಹಾಗಾಗಿ ದೇವರ ಸೇವೆಗೆಂದು ಬಿಟ್ಟಿರುವ ಬಹಳ ಮಂದಿ ದೇವದಾಸಿ ಅಥವಾ ಜೋಗುತಿಯರ ಮನೆಯಲ್ಲಿ ಇಟ್ಟಿರುತ್ತಾರೆ. ಮತ್ತೇ ಕೆಲವರು ಒತ್ತುಕೊಂಡು ದೇವಿಯ ಮಹಿಮೆಯನ್ನು ಸಾರುತ್ತಾರೆ. ಈ ಕೊಡವು ತಾಮ್ರ ಅಥವಾ ಹಿತ್ತಾಳೆಯದ್ದಾಗಿರುತ್ತದೆ. ಅದರಲ್ಲಿ ನೀರು ತುಂಬಿರುತ್ತಾರೆ. ಮೇಲ್ಭಾಗದಲ್ಲಿ ಹುಲಿಗೆಮ್ಮ ಅಥವಾ ಎಲ್ಲಮ್ಮ ಇತರೆ ದೇವಿಯ ಮೂರ್ತಿಯನ್ನು ಗಟ್ಟಿಯಾಗಿರಿಸಿ, ನವಿಲುಗರಿ ಅಥವಾ ಹೂಗಳಿಂದ ಶೃಂಗರಿಸಿರುತ್ತಾರೆ. ಕೊಡದ ಕಂಠವನ್ನು ದೇವಿಯ ಕೊರಳೆಂದೇ ಭಾವಿಸಿ ಅದಕ್ಕೂ ಆಭರಣಗಳನ್ನು ಹಾಕುತ್ತಾರೆ. ಇದನ್ನು ಸಿಂಬಿಯ ಮೇಲಿರಿಸಿ ತಲೆಯಲ್ಲಿ ಹೊರುತ್ತಾರೆ. ಜೋಗುತಿಯಾದವರಿಗೆ ಕೆಲವು ದಿನಗಳು ಬಹಳ ಪ್ರಮುಖವಾಗಿರುತ್ತದೆ. ಅವು ದೇವಿಯ ವಾರಗಳು ಮತ್ತು ಹುಣ್ಣಿಮೆಗಳು.

**ದೇವಿಯ ವಾರಗಳು:** ದೇವಿಯನ್ನು ಆರಾಧಿಸುವ ಮತ್ತು ದೇವಿಯ ಹೆಸರಿನಲ್ಲಿ ಮುತ್ತು ಕಟ್ಟಿಸಿಕೊಂಡವರು ದೇವಿಯ ವಾರಗಳು ಬಹಳ ಪ್ರಮುಖವಾಗಿರುತ್ತವೆ. ಮಂಗಳವಾರ ಮತ್ತು ಶುಕ್ರವಾರದ ದಿವಸ ತಪ್ಪದೇ ಪೂಜಿಸುವರು. ಏಕೆ ಇದೇ ವಾರಗಳಲ್ಲಿ ವಿಶೇಷ ಪೂಜೆ ಮಾಡುತ್ತಿರ ಎಂದರೆ ಮಂಗಳವಾರ ರೋಗರುಜಿನ ಗುಣ ಪಡಿಸುವ ದಿನವಾದರೆ, ಶುಕ್ರವಾರ ಮಳೆ ಬೆಳೆ ಫಲ ಸಂತಾನ ನೀಡಿ ಸಮೃದ್ಧಿ ಪಡಿಸುವ ದಿನವೆಂದು ಜನರು ನಂಬಿಕೆ ಇದೆ. ಮಂಗಳವಾರಕ್ಕಿಂತ ಶ್ರೇಯಸ್ಸನ್ನು ಉಂಟು ಮಾಡುವ ಶುಕ್ರವಾರ ದಿವಸವೇ ಬಹಳಷ್ಟು ಜನ ತಮ್ಮ ಪೂಜೆಯನ್ನು ಸಲ್ಲಿಸುತ್ತಾರೆ. ಅಗ್ರಿ ಹುಣ್ಣಿಮೆಯಿಂದ ಕಾರಹುಣ್ಣಿಮೆಯ ತನಕ ಬರುವ ಶುಕ್ರವಾರಗಳಲ್ಲಿಯೇ ಜನ ಉತ್ಸವವನ್ನು ಆಚರಿಸುವುದು ನೋಡಿದರೆ ಶುಕ್ರವಾರವೇ ಈ ದೇವಿಯ ಪ್ರಮುಖ ವಾರವೆಂದು ಗೊತ್ತಾಗುವುದು.

ಉಧೋ...ಉಧೋ...ಎಂಬ ಶಬ್ದವು ಹುಲಿಗೆಮ್ಮ ಮತ್ತು ಎಲ್ಲಮ್ಮ ಇತರೆ ದೇವಿಯವರ ಪೂಜಾ ಕಾರ್ಯ ಸಂದರ್ಭಗಳಲ್ಲಿ ಬಳಸುವ ಪದವಾಗಿದೆ. ಹುಲಿಗೆಮ್ಮ ಅಥವಾ ಎಲ್ಲಮ್ಮ ಇತರೆ ಹೆಣ್ಣು ದೇವರ ಪೂಜೆಯಲ್ಲಿ ದೀಕ್ಷಾ ಕೊಡುವ ಸಮಾಜದಲ್ಲಿ ಈ ಪದವನ್ನು ಉಚ್ಚರಿಸುತ್ತಾರೆ. ಈ ಶಬ್ದವನ್ನು ಬಳಸುವ ಎಲ್ಲಾ ಜೋಗುತಿ ಅಥವಾ ದೇವದಾಸಿಯರನ್ನು ಇದರ ಅರ್ಥವನ್ನು ಕೇಳಿದಾಗ ಅವರ ಅರ್ಥ ನಮಗೆ ಗೊತ್ತಿಲ್ಲ ಎಂಬ ಉತ್ತರವೇ ಸಿಕ್ಕಿದೆ. ಹಾಗಾಗಿ ಚೆನ್ನಣ್ಣ ವಾಲಿಕಾರರ ಸಮಗ್ರ ಜಾನಪದ ಪ್ರಬಂಧದಲ್ಲಿ ಇದರ ಅರ್ಥವನ್ನು ತಿಳಿಸಲಾಗಿದೆ. ಉಧೋ...ಉಧೋ....ಎಂದರೆ ಉದಾಯವಾಗಲಿ, ಉದಯವಾಗಲಿ ಇಲ್ಲವೆ ಜಯವಾಗಲಿ, ಜಯವಾಗಲಿ, ಶುಭವಾಗಲಿ, ಶುಭವಾಗಲಿ ಎಂಬ ಅರ್ಥವನ್ನು ತಿಳಿಸಿದ್ದಾರೆ.

**ಹುಣ್ಣಿಮೆಗಳು:** ಜೋಗತಿಯಾದ ಹೆಂಗಸರಿಗೆ ಈ ಹುಣ್ಣಿಮೆಯ ದಿನಗಳು ಬಹಳ ವಿಶೇಷವೆಂದು ಹೇಳಬಹುದು. ಅದರಲ್ಲೂ ಹುಣ್ಣಿಮೆಯು ಮಂಗಳವಾರ ಮತ್ತು ಶುಕ್ರವಾರವೇನಾದರೂ ಬಂದರೆ ಹಬ್ಬದ ಸಂಭ್ರಮವೇ ಕಾಣುವಂತಿರುತ್ತದೆ. ಮನೆಯಲ್ಲಿ ದೇವರಿಗೆ ವಿಶೇಷ ಪೂಜೆ ಸಲ್ಲಿಸುವುದರ

ಜೊತೆಗೆ ಅವರಿಗೆ ಪ್ರಾದೇಶಿಕವಾಗಿ ಹತ್ತಿರವಿರುವ ದೇವಸ್ಥಾನಕ್ಕೆ ಹೋಗುತ್ತಾರೆ. ಅಲ್ಲಿ ದೇವರ ಹಾಡುಗಳನು ಹಾಡುತ್ತಾರೆ. ಹರಕೆ ಹೊತ್ತವರು ಬೇಡಿಕೊಂಡವರು ಆ ದಿನ ವಿಶೇಷವಾಗಿ ದೇವಾಲಯಕ್ಕೆ ಬರುತ್ತಾರೆ. ಎಲ್ಲಂದರಲ್ಲಿ ಮಾತಂಗಿಯರು ಪಡಲಿಗೆ ಹಿಡಿದುಕೊಂಡು ಬಂದು ಗುಡಿಯ ಸುತ್ತ ಮುತ್ತ ಸೇರಿರುತ್ತಾರೆ. ಹರಕೆ ತಿರಿಸಲು ಬಂದವರು ಕಡುಬು, ಹೋಳಿಗೆ, ಅನ್ನ, ಬದನೆಕಾಯಿ ಮತ್ತು ದಾಣ್ಯಗಳನ್ನು ಜೋಗುತಿಯ ಪಡಲಿಗೆಗೆ ತುಂಬುತ್ತಾರೆ. ಈ ಮೂಲಕ ಮುಂಜಾನೆಯಿಂದ ಸಂಜೆತನಕ ನಡೆಯುವ ದೇವಿಯ ಉತ್ಸವಾರಾಧನೆಯಲ್ಲಿ ವಿಶೇಷ ರೀತಿಯಲ್ಲಿ ಜೋಗುತಿಯರು ಪಾಲ್ಗೊಂಡಿರುತ್ತಾರೆ.

**ರಂಡಿ ಹುಣ್ಣಿಮೆ**: ಕಾರ್ತ ವಿರ್ರ್ಯಾರ್ಜುನನು ರೇಣುಕೆಯ ಗಂಡನಾದ ಜಮದಗ್ನಿಯನ್ನು ಕೊಂದ ದಿನ ರಂಡಿ ಹುಣ್ಣಿಮೆ ದಿನವೆಂದು ಭಕ್ತರ ನಂಬಿಕೆಯಾಗಿದೆ. ದೇವಿಯ ಕುಂಕುಮ, ಮಂಗಳ ಸೂತ್ರಗಳು ತೆಗೆದು ಹಾಕುತ್ತಾರೆ. ಹಾಗಾಗಿ ಕ್ಷೇತ್ರಕ್ಕೆ ಬಂದ ಜೋಗುತಿಯರು ತಮ್ಮ ಕೈಬಳೆಗಳನ್ನು ಒಡೆದುಕೊಳ್ಳುತ್ತಾರೆ. ಇದಕ್ಕೆ ರಂಡಿ ಹುಣ್ಣಿಮೆ ಎಂದು ಹೆಸರು. ಇದು ಹೊಸ್ತಿಲ ಹುಣ್ಣಿಮೆಯಂದು ನಡೆಯುತ್ತದೆ. ಈ ದಿನದಂದು ದೇವಿಯು ರಂಡೆಯಾದಳು ಎಂಬ ನಂಬಿಕೆ ಜನರಲ್ಲಿದೆ.

ರಂಡಿ ಹುಣ್ಣಿಮೆಯ ಹಿಂದಿನ ದಿವಸ ಜೊಗುತಿ ಮತ್ತು ಜೋಗಪ್ಪಂದಿರು ಸಾವಿರಾರು ಸಂಖ್ಯೆಯಲ್ಲಿ ದೇವಸ್ಥಾನಗಳಿಗೆ ಬಂದು ಸೇರುತ್ತಾರೆ. ದೇವಿಯ ಕುರಿತಾದ ಪದಗಳನ್ನು ಚೌಡಿಕೆಯ ಜೊತೆಗೆ ಹಾಡುತ್ತಾರೆ. ಹುಣ್ಣಿಮೆಯ ದಿನ. ಚತುರ್ದಶಿಯ ದಿನದಂದು ಸಾಯಂಕಾಲ ರೋಹಿಣಿ ನಕ್ಷತ್ರದ ಸಮಯದಲ್ಲಿ ದೇವಿಯ ಕಂಕಣ ಮಂಗಳ ಸೂತ್ರದ ವಿಸರ್ಜನೆಯ ಕೆಲಸವನ್ನು ನೆರವೇರಿಸಲಾಗುತ್ತದೆ. ಆ ಸಂದರ್ಭದಲ್ಲಿ ಜೋಗುತಿಯರು ಕೂಡ ತಮ್ಮ ಕೈ ಬಳೆಗಳನ್ನು ಒಡೆದುಕೊಳ್ಳುತ್ತಾರೆ. ಇನ್ನು ಕೆಲವರು ದೇವಿಯ ಮುತ್ತೈದೆ ತನ ಅಳಿಸುವದಿಂದ ಕ್ರಿಯೆಯನ್ನು ದುಃಖವನ್ನು ಲಭೋ.....ಲಭೋ.. ಎಂದು ಅಳುತ್ತಾ ತಾವು ಕೂಡ ರಂಡೆಯ ರೂಪತಾಳುತ್ತಾರೆ. ನಂತರ ಮರುದಿನ ಸುರ್ಯೋದಯದ ಒಳಗೆ ಕ್ಷೇತ್ರವನ್ನು ಬಿಡಬೇಕೆಂಬ ನಂಬಿಕೆ ಇರುವುದರಿಂದ ಎಲ್ಲಾ ಜೋಗುತಿಯರು ಅದೇ ರಾತ್ರಿ ಕ್ಷೇತ್ರವನ್ನು ಬಿಟ್ಟು ಹಿಂದೆ ಹೋಗುತ್ತಾರೆ. ಆ ದಿನ ದೇವಿಯು ವಿಧವೆ ಆಗುವುದನ್ನು ಜೋಗುತಿಯರು ತಾವು ಅಭಿನಯಿಸುತ್ತಾರೆ.

ಮುತ್ತೈದೆ ಹುಣ್ಣಿಮೆ: ದೇವಿಯ ಮಂಗಳ ಸೂತ್ರಧಾರಣೆ ನಡೆದು ಜೋಗುತಿಯರು ಬಳೆ ಧರಿಸುವ ಕಾರ್ಯಕ್ರಮವನ್ನು ಮುತ್ತೈದೆ ಹುಣ್ಣಿಮೆ ಎಂದು ಕರೆಯುತ್ತಾರೆ. ರಂಡಿ ಹುಣ್ಣಿಮೆ ಕಳೆದು ಒಂದು ತಿಂಗಳ ನಂತರ ಬರುವ ಹುಣ್ಣಿಮೆಯ ದಿನದಂದು ಈ ಮುತ್ತೈದೆ ಹುಣ್ಣಿಮೆಯನ್ನು ಜರುಗಿಸುತ್ತಾರೆ.

ಈ ಹುಣ್ಣಿಮೆಯ ದಿನದಂದು ಜೋಗುತಿಯರು ಹಣೆಗೆ ಭಂಡಾರ ಹಚ್ಚಿಕಾಸು ಕೇಳುವರು ಬಂದಿರುತ್ತಾರೆ. ದೇವಿಗೆ ಮಂಗಲ್ಯ ಸೂತ್ರ ಹಾಕಿ ಬಳೆ ತೊಡಿಸುತ್ತಾರೆ. ಸೀರೆ ಕುಪ್ಪಸ ತೊಡಿಸುತ್ತಾರೆ. ವಿಜೃಂಭಣೆಯಿಂದ ನಡೆಯುವ ಈ ಕಾರ್ಯಕ್ರಮದ ಹೊತ್ತಿಗೆ ಜೋಗುತಿಯರು ಬಳೆ ತೊಟ್ಟುಕೊಂಡು ತಾವೂ ಮುತ್ತೈದೆಗಳಾಗುತ್ತಾರೆ. ರಂಡಿ ಹುಣ್ಣಿಮೆಯಂದು ಗುಡಿಯ ಹೊರಗೆ ಹೋಗುವ ದೇವತೆಯು ಈ ದಿವಸ ಗುಡಿಯ ಒಳಗೆ ಬರುತ್ತಾಳೆ ಎಂಬ ನಂಬಿಕೆ ಭಕ್ತರಲ್ಲಿದೆ.

ರಂಡಿ ಹುಣ್ಣಿಮೆ ಮತ್ತು ಮುತ್ತೈದೆ ಹುಣ್ಣಿಮೆ ನಡುವೆ ದೇವತೆಗಳಿಗೆ ಹೋಳಿಗೆ, ತುಪ್ಪ, ಹಾಲು, ಮೊಸರು, ಅಕ್ಕಿ ಪಾಯಸ, ಕಡಬು, ಕರ್ಜಿಕಾಯಿ ಮುಂತಾದವುಗಳನ್ನು ಮಹಾನೈವೇದ್ಯವೆಂದು ದೈವಕ್ಕೆ ಒಪ್ಪಿಸುತ್ತಾರೆ. ದೈವವು ಮುತ್ತೈದೆಯಾಗಲು ಈ ನೈವೇದ್ಯ ಅಗತ್ಯವೆಂದು ಜನರು ಭಾವಿಸುತ್ತಾರೆ. ಹಾಗೆಯೇ ಕೇಂದ್ರ ಜೋಗುತಿಯರು ಮುತ್ತೈದೆ ಹುಣ್ಣಿಮೆಯ ಬರುವುದರೊಳಗಾಗಿ ಊರುಗಳಲ್ಲಿ ಮನೆ ಮನೆಗೆ ಹೋಗಿ ಬಳೆ, ಪಡಲಿಗೆ ಇತರೆ ಹೊಸ ವಸ್ತುಗಳನ್ನು ಕೊಂಡುಕೊಳ್ಳುವ ಸಲುವಾಗಿ ಹಣವನ್ನು ಬೇಡಿ ಪಡೆದು ಕೊಳ್ಳುತ್ತಾರೆ. ಈ ರೀತಿ ರಂಡಿಯಾಗಿರುವ ಪ್ರಯುಕ್ತ ಮುತ್ತೈದೆತನಕ್ಕೆ ಸಹಾಯ ಮಾಡಿದಾಗ ಒಳ್ಳೆದಾಗುವುದು ಎಂಬ ಮನೋಭಾವನೆಯಿಂದ ಕ್ಷೇತ್ರಗಳಿಗೆ ತೆರಳುವ ಜೋಗುತಿಯರಿಗೆ ಹಣ ಸೀರೆ ಇತರೆ ರೂಪದಲ್ಲಿ ಸಹಾಯ ಮಾಡುತ್ತಾರೆ.

ಒಟ್ಟಾರೆಯಾಗಿ ಪಾತರದವರು, ದೇವದಾಸಿ ಪದ್ಧತಿ, ಬಸವಿ ಪದ್ಧತಿ ಮತ್ತು ಜೋಗುತಿ ಪದ್ಧತಿಯನ್ನು ತೌಲನಿಕವಾಗಿ ನೋಡಿದಾಗ ಪಾತ್ರದವರದು ಸಂಗೀತ ಮತ್ತು ನರ್ತನೆಯು ಮುಖ್ಯ ಉದ್ದೇಶವಾಗಿದೆ. ಇವರು ದೇವಾಲಯದ ಆವರಣದಲ್ಲಿಯೇ ಇರುತ್ತಿದ್ದರೆಂಬುದು ತಿಳಿದು ಬರುತ್ತದೆ. ದೇವದಾಸಿಯರು ದೇವಾಲಯಂದ ಅಂಗಭೋಗ ಮತ್ತು ರಂಗಭೋಗ ಸೇವೆಗಾಗಿ ದೇವಾಲಯದಲ್ಲಿ ಪರಿಚಾರಕರಾಗಿದ್ದರು. ಆದರೆ ಪ್ರಸ್ತುತದಲ್ಲಿ ಈ ಪದ್ಧತಿಗಳ ಮುಖ್ಯ ಉದ್ದೇಶ ಕಾರ್ಯಗಳು ಕಂಡುಬರುವುದಿಲ್ಲ. ಅಂದರೆ ದೇವಾಲಯದಲ್ಲಿ ನರ್ತನೆ ಅಂಗಭೋಗ, ರಂಗಭೋಗದ ಸೇವೆಯಲ್ಲಿ ದೇವದಾಸಿಯರು ಕಂಡುಬರುವುದಿಲ್ಲ. ಬಸವಿ ಪದ್ಧತಿಯಲ್ಲಿ ಮುಖ್ಯವಾಗಿ ಲೈಂಗಿಕ ಬಯಕೆಯನ್ನು ತೀರಿಸುವುದು ಮುಖ್ಯವಾಗಿತ್ತು. ವಿಜಯ ನಗರದ ಕಾಲದಲ್ಲಿ ಬಸವಿಯರನ್ನು ಬಿಡುವುದು ಅವರನ್ನು ಲೈಂಗಿಕತೆಗೆ ಬಳಸಿ ಕೊಳ್ಳುವ ಕುರಿತ್ತಾಗಿ ತಿಳಿಯಲಾಗುತ್ತದೆ. ಆ ಕಾಲದಲ್ಲಿ ತಳಸಮುದಾಯಗಳಿಗೆ ಮಾತ್ರ ಮುದ್ರೆ ಒತ್ತುತ್ತಿದ್ದದ್ದು ಕಂಡುಬರುತ್ತಿದೆ. ಪ್ರಸ್ತುತದಲ್ಲಿಯೂ ಕೂಡ ಬಸವಿ ಪದ್ಧತಿ ಜೀವಂತವಾಗಿರುವುದು ಕಂಡು ಕೊಳ್ಳಲಾಗಿದೆ. ಹಾಗೇಯೇ ಜೋಗುತಿ ಪದ್ಧತಿಯು ಮಾತೃ ಮೂಲೀಯ ಹುಲಿಗೆಮ್ಮ ಎಲ್ಲಮ್ಮ ಇತರೆ ಹೆಣ್ಣು ದೇವತೆಗಳ ಪರಂಪರೆ ಹಿನ್ನಲೆಯಲ್ಲಿ ಬಂದಿರುವುದನ್ನು ಗಮನಿಸಲಾಗಿದೆ. ಪ್ರಸ್ತುತದಲ್ಲಿ ಬಸವಿ ಜೋಗುತಿ ಪದ್ಧತಿಗಳು ಪ್ರಚಲಿತದಲ್ಲಿರುವುದು ಕಂಡುಬರುತ್ತದೆ. ಹೀಗೆ ಪಾತ್ರದ ಪದ್ಧತಿ (ಪಾತರದವರು) ದೇವದಾಸಿ ಪದ್ಧತಿ, ಬಸವಿ ಪದ್ಧತಿ, ಜೋಗುತಿ ಪದ್ಧತಿಗೆ ಒಳಗಾದವರು ದೇವರ ಹೆಸರಿನಲ್ಲಿ ವೃತ್ತಿ ಸಂಬಂಧವಾಗಿ ಬೇರೆ ಬೇರೆ ಹೆಸರಿನಿಂದ ಗುರುತಿಸಿಕೊಂಡರೂ ಕೂಡ ಇವರೆಲ್ಲರ ಧಾರ್ಮಿಕ ಆಶಯ ಒಂದೇ ಆಗಿದೆ. ಇವರೆಲ್ಲರ ಕೇಂದ್ರ ಬಿಂದು ದೇವರೆ ಆಗಿದ್ದಾನೆ. ದೇವರನ್ನೇ ಗಂಡನೆನ್ನುವ ಹೆಣ್ಣು ತನ್ನ ದೈಹಿಕ ತೃಪ್ತಿಗಾಗಿ ಅಥವಾ ಸಂತಾನಕ್ಕಾಗಿ ಪರಪುರುಷನ ತೃಪ್ತಿ ಪಡಿಸುವುದು ಸಹಜವಾದುದಾಗಿದೆ. ಯಾವುದೇ ಒಂದು ಆಚರಣೆ, ಹುಟ್ಟಿನ ಆಶಯ ಸದುದ್ದೇಶ ಹೊಂದಿದ್ದರೂ ನಾಗರಿಕತೆಯ ಬೆಳವಣಿಗೆಯಲ್ಲಿ ಅದು ಬೇರೆ ರೂಪ ಪಡೆದುಕೊಳ್ಳುತ್ತದೆ.

ಹೀಗೆ ಪಾತರದ ಪದ್ಧತಿ, ದೇವದಾಸಿ, ಬಸವಿ ಮತ್ತು ಜೋಗುತಿ ಪದ್ಧತಿಯಲ್ಲಿ ಧಾರ್ಮಿಕ ಆಶಯ ಒಂದೇ ಆಗಿದ್ದು, ದೇವರೇ ಕೇಂದ್ರವಾಗಿ ಕಂಡು ಬರುತ್ತದೆ. ಹಾಗಾಗಿ ಇವರನೇಲ್ಲಾ ದೇವದಾಸಿ ಎಂಬ ಹೆಸರಿನಿಂದಲೇ ಗುರುತಿಸುತ್ತಾರೆಂದು ಹೇಳಲಾಗುವುದು.

**ಆಧಾರ ಗ್ರಂಥಗಳು**


ಕೊಟ್ಲಮ್ಮ, *ಬಳ್ಳಾರಿ ಜಿಲ್ಲೆಯ ಬುಡಕಟ್ಟು ದೇವದಾಸಿಯರ ಅಧ್ಯಯನ,* ೨೦೦೮

ಚಂದ್ರಶೇಖರ ಕಂಬಾರ (ಸಂ), *ಕನ್ನಡ ಜಾನಪದ ವಿಶ್ವಕೋಶ ಸಂ.೩ (೨),* ೧೯೮೫

ಚೆನ್ನಕ್ಕ ಎಲಿಗಾರ, *ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,* ೧೯೯೦

ಚೆನ್ನಣ್ಣ ವಾಲೀಕಾರ, *ಕರ್ನಾಟಕ ದೇವಾದಸಿಯರ ಸಮಾಜೋ ಧಾರ್ಮಿಕ ಆರ್ಥಿಕ ಶೈಷಣಿಕ ಸಾಂಸ್ಕೃತಿಕ ರಾಜಕೀಯ ಸಮಸ್ಯೆಗಳು ಸಮಗ್ರ ಅಧ್ಯಯನ,* ೨೦೦೦

ಜೋಗನ್ ಶಂಕರ್, *ದೇವದಾಸಿ ಸಂಪ್ರದಾಯ,* ೧೯೯೩

ಥರ್ಡ್‌ಸ್ಟನ್ ಇ, *ದಕ್ಷಿಣ ಭಾರತದ ಜಾತಿಗಳು ಮತ್ತು ಬುಡಕಟ್ಟುಗಳು,* ೧೯೦೯

ನೇತ್ರಾವತಿ ಕೆ ವಿ, *ದಲಿತ ಮಹಿಳಾ ಸಂಕಥನ,* ೨೦೧೨

ಪುತ್ತಿ ವಸಂತಕುಮಾರ, *ಬಸ್ರೂರಿನ ದೇವದಾಸಿ ಪದ್ಧತಿ,* ೨೦೦೨

ಪ್ರಸನ್ನ ಕುಮಾರ್, *ಬದಲಾವಣೆ ಹಾದಿಯಲ್ಲಿ ದೇವದಾಸಿಯರು,* ೨೦೧೪

ವಿರಕ್ತಮಠ ಶಿವಾನಂದ ಎಸ್ (ಸಂ), ಶಂತಮಠ(ಲೇ) *ಮಹಿಳಾ ಅಧ್ಯಯನ ಸಂಚಿಕೆ೧-ಸಂ-೨,* ೨೦೦೮

ಸಿದ್ದೇಶ್ವರಿ ಎ ಎನ್, *ಬಳ್ಳಾರಿ ಜಿಲ್ಲೆಯ ಜನಪದ ಆಚರಣೆಗಳು,* ೨೦೧೪

ಶೈಲಜ ಹಿರೇಮಠ, *ಪಾತರದವರು,* ೧೯೯೯

ಶೈಲಜ ಹಿರೇಮಠ, *ಸ್ತ್ರೀಕಥನ,* ೨೦೦೩

# ಅಧ್ಯಾಯ: ನಾಲ್ಕು
# ಸಮುದಾಯಗಳ ಪರಿಚಯ

೪.೧.ಪರಿಶಿಷ್ಟ ಜಾತಿ

೪.೨.ಪರಿಶಿಷ್ಟ ಪಂಗಡ

೪.೩. ಹಿಂದುಳಿದ ವರ್ಗಗಳು

# ಅಧ್ಯಾಯ: ನಾಲ್ಕು

## ಸಮುದಾಯಗಳ ಪರಿಚಯ

ಭಾರತ ದೇಶವನ್ನು ಒಳಗೊಂಡಂತೆ ಇಡೀ ವಿಶ್ವವೇ ಹಲವಾರು ಬುಡಕಟ್ಟುಗಳು ಮತ್ತು ಪಂಗಡಗಳಿಂದ ಕೂಡಿದ ಸಮುದಾಯವಾಗಿದೆ. ಒಂದೊಂದು ಬುಡಕಟ್ಟಿನ ಜನರು ತಮ್ಮ ಸಮುದಾಯಗಳಿಗೆ ಬದ್ಧರಾಗಿ ಬೇರೆ ಬೇರೆ ಸಂಸ್ಕೃತಿಗಳಿಂದ ಕೂಡಿದ ಲಕ್ಷಣಗಳನ್ನು ಹೊಂದಿದ್ದು, ಬೇರೆ ಬೇರೆ ಜಾತಿ ಮತಗಳಾಗಿ ವಿಭಜನೆಗೊಂಡು ವಿವಿಧ ರೀತಿಯ ಆರ್ಥಿಕ ಕಸುಬುಗಳನ್ನು ವಂಶ ಪಾರಂಪರ್ಯವಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಭಾರತ ಸಮಾಜ ನಿರ್ಮಾಣದಲ್ಲಿ ಅನೇಕ ಜನಾಂಗದ ಪಾತ್ರ ಪ್ರಮುಖವಾಗಿವೆ. ಪ್ರಾಚೀನ ಭಾರತದ ಇತಿಹಾಸವನ್ನು ಅವಲೋಕಿಸಿ ನೋಡಿದಾಗ ಭಾರತದ ಸಮಾಜದಲ್ಲಿ ಜಾತಿ ಆಧಾರಿತ ಜನಾಂಗದ ಪರಂಪರೆ ವಿಭಿನ್ನ ರೀತಿಯ ಶೈಲಿಗಳು ಇರುವುದು ಕಂಡುಬರುತ್ತಿದೆ. ಒಂದು ಜಾತಿಯ ಜನಾಂಗ ಸಮಾಜದ ವಿವಿಧ ಗುಂಪುಗಳಾಗಿ ವಿಶಿಷ್ಟ ಸಂಸ್ಕೃತಿಯ ಶಿಶುಗಳಂತೆ ಕಂಡುಬರುತ್ತವೆ. ಭಾರತದ ಇತಿಹಾಸದಲ್ಲಿ ಪುರಾತನ ಕಾಲದಿಂದ ಸಾಮಾಜಿಕ ಮತ್ತು ಆರ್ಥಿಕ ವರ್ಗಗಳು ಸಮಾಜ ರಚನೆಯಲ್ಲಿ ವಿಶಿಷ್ಟವಾದ ಪಾತ್ರ ವಹಿಸಿರುವುದನ್ನು ನೋಡಬಹುದು. ಇತಿಹಾಸದ ಸಾಮಾಜಿಕ ರಚನೆಯ ಹೆಜ್ಜೆಗಳನ್ನು ಗಮನಿಸಿದಾಗ ಭಾರತದ ಭವ್ಯ ಸಂಸ್ಕೃತಿ ಸಾಮಾಜಿಕ ವೈವಿಧ್ಯತೆ ಮತ್ತು ಆರ್ಥಿಕ ಕಸುಬುಗಳ ಆಧಾರದ ಮೇಲೆ ಜಾತಿಯು ರಚನೆಗೊಂಡು ಪ್ರತ್ಯೇಕತೆಯನ್ನು ಕಾದಿರಿಸಿಕೊಂಡಿದೆ. ಎಲ್ಲಾ ಗುಂಪುಗಳು ಬೇರೆ ಬೇರೆ ಸಂಸ್ಕೃತಿಯ ಲಕ್ಷಣಗಳ ಬೆಳವಣಿಗೆಗಳನ್ನು ಹೊಂದಿದ್ದು ವಿಶಿಷ್ಟವಾಗಿ ರೂಪಿತವಾಗಿವೆ. ಆದರೂ ಅವುಗಳು ಇಂದಿನ ಸಮಾಜದಲ್ಲಿ ಒಂದಕ್ಕೊಂದು ಪೂರಕವಾಗಿರುವುದನ್ನು ಕಾಣಬಹುದಾಗಿದೆ.

ಒಂದು ಪ್ರದೇಶವನ್ನು ಸೀಮಿತವಾಗಿರಿಸಿಕೊಂಡು ಅಲ್ಲಿನ ಒಟ್ಟಾರೆ ಜನಜೀವನ ಪದ್ಧತಿಯನ್ನು ಅಧ್ಯಯನ ಮಾಡುವುದು ಪ್ರಾದೇಶಿಕ ಸಂಸ್ಕೃತಿ ಎನಿಸಿಕೊಳ್ಳುತ್ತದೆ. ಜಾತಿಯನ್ನು ಲಕ್ಷ್ಯಕ್ಕಿರಿಸಿಕೊಂಡು

ಅಧ್ಯಯನ ಮಾಡುವುದು ಸಮುದಾಯ ಅಧ್ಯಯನವೆನಿಸಿದರೂ ಅದು ಕೂಡ ಪ್ರಾದೇಶಿಕ ವೈಫಲ್ಯಗಳನ್ನು ಪರಿಚಯಿಸುತ್ತದೆ. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಾಂಸ್ಕೃತಿಕ ವ್ಯತ್ಯಾಸಗಳು ತಲೆದೋರುವಂತೆಯೇ ಒಂದು ಪ್ರದೇಶದ ಜಾತಿಯೊಂದರ ಸಂಸ್ಕೃತಿಯು ಇನ್ನೊಂದು ಸಮುದಾಯದ ಸಂಸ್ಕೃತಿಗಿಂತ ಭಿನ್ನತೆಗಳನ್ನು ಹೊಂದಿರಬಹುದು. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಜಾತಿಯು ತಾನು ಜೀವಿಸುವ ಪ್ರದೇಶದ ಸಂಸ್ಕೃತಿಯಲ್ಲಿ ಅನನ್ಯತೆಯನ್ನು ಪಡೆದಿರುತ್ತದೆ. ನಮ್ಮ ಸಾಮಾಜಿಕ ಸಂದರ್ಭವನ್ನು ಗಮನಿಸಿ ಹೇಳುವುದಾದರೆ ಪ್ರತಿಯೊಂದು ಜಾತಿಯೂ ತಾನು ಪ್ರತ್ಯೇಕ ಅಸ್ತಿತ್ವದೊಂದಿಗೆ ಬದುಕುವುದರಿಂದ ಬೇರೊಂದು ಜಾತಿಗಿಂತ ಕೆಲವು ವಿಶಿಷ್ಟ ಲಕ್ಷಣಗಳನ್ನು ಹೊಂದಿರುತ್ತದೆ. ಹಾಗಾಗಿ ಬಳ್ಳಾರಿ ಜಿಲ್ಲೆಯ ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳ ಸಮುದಾಯಗಳ ವಿಶಿಷ್ಟತೆ ಮತ್ತು ಸಾಂಸ್ಕೃತಿ ಅಂಶಗಳನ್ನು ನೋಡುವ ಅವಶ್ಯಕತೆಯಲ್ಲಿ ಸಮುದಾಯಗಳ ಸ್ಥೂಲ ಪರಿಚಯ ಮಾಡುವ ಅಗತ್ಯವಿದೆ ಎನ್ನಲಾಗುವುದು.

**೪.೧ ಪರಿಶಿಷ್ಟ ಜಾತಿ**

ಭಾರತ ದೇಶವು ಕಸುಬಾಧಾರಿತ ಮತ್ತು ವರ್ಣವ್ಯವಸ್ಥೆ ಆಧಾರಿತ ಜಾತಿ, ಪಂಗಡಗಳ ದೇಶವಾಗಿದೆ. ಜಾತಿ ವ್ಯವಸ್ಥೆಯಲ್ಲಿ ಏಣಿಶ್ರೇಣಿ ವ್ಯವಸ್ಥೆ ಇರುವುದನ್ನು ಕಾಣಲಾಗುವುದು. ಸಹಜವಾಗಿ ಕಾಡಿನಲ್ಲಿ ಜೀವಿಸುವ ಮೂಲ ಸಮುದಾಯಗಳು ಆದಿವಾಸಿಗಳಾಗಿ ಮತ್ತು ವರ್ಣವ್ಯವಸ್ಥೆಗೆ ಬಲಿಯಾಗಿರುವ ಕೆಳಸ್ತರದ ಸಮುದಾಯಗಳು ಧನಿ ಇಲ್ಲದ ದಲಿತರಾಗಿ ಕೆಲ ಕಾಲದ ನಂತರದಲ್ಲಿ ರೂಪುಗೊಂಡವು. ಈ ಕೆಳವರ್ಗಗಳ ಅಭಿವೃದ್ಧಿಗಾಗಿ ಬ್ರಿಟಿಷ್ ಸರ್ಕಾರ ೧೯೩೫ರಲ್ಲಿಯೇ ಮೀಸಲಾತಿ ಜಾರಿಗೆ ತಂದಿತು. ಭಾರತ ಸಂವಿಧಾನದಲ್ಲಿ ೩೪೧ನೇ ಅನುಚ್ಛೇದದ ಪ್ರಕಾರ ಪರಿಶಿಷ್ಟ ಜಾತಿಯವರಿಗೆ ಹಾಗೂ ೩೪೨ನೇ ಅನುಚ್ಛೇದದ ಪ್ರಕಾರ ಪರಿಶಿಷ್ಟ ಪಂಗಡದವರಿಗೆ ಮೀಸಲಾತಿಯನ್ನು ಕಲ್ಪಿಸಲಾಗಿದೆ. ಪರಿಶಿಷ್ಟ ಜಾತಿ ಮತ್ತು ಪಂಗಡ ಪಟ್ಟಿಯಲ್ಲಿದ್ದವರಿಗೆ ಸಂವಿಧಾನಬದ್ಧವಾಗಿ ಹಕ್ಕುಗಳನ್ನು ನೀಡುವಲ್ಲಿ ಸಹಕರಿಸಲು ಪರಿಶಿಷ್ಟ ಜಾತಿಯ ರಾಷ್ಟ್ರೀಯ ಮತ್ತು ರಾಜ್ಯಮಟ್ಟ ಆಯೋಗಗಳನ್ನು ರಚಿಸಲಾಗಿವೆ. ಹಾಗಾದರೆ ಮೊದಲು ನಾವು ಪರಿಶಿಷ್ಟರು ಎಂದರೆ ಯಾರು? ಎಂಬುದನ್ನು ತಿಳಿಯುವ ಅವಶ್ಯವಿದೆ. ಅನೇಕ ಜಾತಿಗಳನ್ನು ಹೊಂದಿರುವ ಭಾರತದಂತಹ ಸಮಾಜದಲ್ಲಿ ಏಣಿ-ಶ್ರೇಣಿಗಳನ್ನು ನೋಡಲಾಗುತ್ತದೆ. ಮೊದಲಿಗೆ ನಾಲ್ಕು ವರ್ಣಗಳಾಗಿ ವಿಭಾಗಿಸಲ್ಪಟ್ಟಿದ್ದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಣವ್ಯವಸ್ಥೆಯಲ್ಲಿ ಕಡೆಯ ಸಮಾಜವಾಗಿ ಶೂದ್ರರನ್ನು ಕಾಣಲಾಗುತ್ತದೆ. ಇದರಲ್ಲಿಯೂ ಶೂದ್ರರ ಆಚೆ ಅಸ್ಪೃಶ್ಯರು ಎನ್ನುವ ಭಾಗವೊಂದನ್ನು ಹುಟ್ಟು ಹಾಕಲ್ಪಟ್ಟಿತು. ಈ ಕಟ್ಟಕಡೆಯ ಅಸ್ಪೃಶ್ಯ ಅಥವಾ ಅಂತ್ಯಜ ಎಂದು ಸಮಾಜದಲ್ಲಿ ಗುರುತಿಸಲ್ಪಡುವವರನ್ನು ಭಾರತ ಸ್ವಾತಂತ್ರ್ಯಗೊಂಡ ನಂತರ ಮೀಸಲಾತಿಯ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ ಎಂದು ಕರೆಯಲ್ಪಟ್ಟಿತು. "ಭಾರತ ಸಂವಿಧಾನದ ಅನುಚ್ಛೇದ ೩೪೧, ೩೪೨(೧)ರ ಪ್ರಕಾರ ರಾಷ್ಟ್ರಪತಿಯವರು ಹಾಗೂ(೨)ರ ಪ್ರಕಾರ ಸಂಸತ್ತು ಅರ್ಹ ಸಮುದಾಯಗಳನ್ನು ಅನುಸೂಚಿತ ಜಾತಿ ಮತ್ತು ಬುಡಕಟ್ಟು ಎಂದು ಆದೇಶಿಸಿ ಮೀಸಲಾತಿಯನ್ನು ಕಲ್ಪಿಸಲಾಗಿದೆ. ಇವರನ್ನು ಪರಿಶಿಷ್ಟರು ಎನ್ನುವರು" *(ಮೈತ್ರಿ ಕೆ ಎಂ:೨೦೧೦:*

೧೬೯). ನಮ್ಮ ಭಾರತ ಸಂವಿಧಾನದ ಅನುಚ್ಛೇದ ೩೪೧ರ ಪ್ರಕಾರ ಕರ್ನಾಟಕದ ಪರಿಶಿಷ್ಟ ಜಾತಿಗಳ ಮೀಸಲಾತಿ ಪಟ್ಟಿಯಲ್ಲಿ ೧೦೧ ಜಾತಿಗಳನ್ನು ಸೇರಿಸಿದ್ದಾರೆ. ತುಳಿತಕ್ಕೊಳಗಾದ ಸಮುದಾಯಗಳನ್ನು ಅಧ್ಯಯನಕಾರರು ೧೯೩೦ರ ಹಿಂದೆಯೇ ಗುರುತಿಸಿದ್ದರು. ಮಾರ್ಲೆ ಮಿಂಟೋ ಮಾಂಟೆಗೋ ಚೆಲ್ಮ್ಸ್‌ಫೋರ್ಡ್ ಸುಧಾರಣಾ ವರದಿ ಮತ್ತು ಸೈಮನ್ ಆಯೋಗಗಳು ಈ ತುಳಿತಕ್ಕೆ ಒಳಗಾಗಿರುವ ಸಮುದಾಯಗಳಿಗೆ ಮೀಸಲಾತಿ ನೀಡುವ ಮೂಲಕ ಅಭಿವೃದ್ಧಿಗೊಳಿಸಬೇಕು ಎಂಬ ನಿಟ್ಟಿನಲ್ಲಿ ವರದಿಗಳ ವಾದವನ್ನು ಮಂಡಿಸಿದರು.

ಭಾರತದ ಸಾಮಾಜಿಕ ಪದ್ಧತಿಯ ಲಕ್ಷಣ ಎಂದರೆ ಜಾತಿ. ಇದು ಸಾಮಾಜಿಕ ಅಡಿಪಾಯವಷ್ಟೇ ಅಲ್ಲ. ಸಾಮಾಜಿಕ ಸಂಸ್ಥೆಯಾಗಿ ಬಲಗೊಂಡು ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ಮುಂದುವರೆಯುತ್ತಿದೆ. ಜಾತಿ ಎಂದರೆ ಆಳುವ ವರ್ಗಗಳು ಶ್ರಮ, ಶೋಷಣೆಗೆ ನಿರ್ಮಿಸಿಕೊಂಡ ಕೆಟ್ಟ ವ್ಯವಸ್ಥೆಯಾಗಿದೆ. ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ಪ್ರಾಚೀನ ಕಾಲದಿಂದ ಇಂದಿನ ಆಧುನಿಕ ಕಾಲದವರೆಗೂ ದುಡಿಯುವ ಸಮೂಹಗಳನ್ನು ಶೋಷಿಸುವ ಹಾಗೂ ದಮನಿಸುವ ವಿಧಾನಗಳಲ್ಲಿ ಪ್ರಧಾನ ಪಾತ್ರವಹಿಸುತ್ತಿದೆ. ಜಾತಿ ಎನ್ನುವುದು ಸಮಾಜದೊಳಗೆ ಪ್ರತ್ಯೇಕಗೊಂಡ ವಿಭಿನ್ನವಾದ ವಿಶೇಷ ಘಟಕವಾಗಿದೆ. ಅದು ಇನ್ನೊಂದು ಘಟಕದೊಂದಿಗೆ ಯಾವುದೇ ಸಂಬಂಧವನ್ನು ನಿರಾಕರಿಸುವಂತೆ ವ್ಯವಸ್ಥೆ ಮಾಡಿದೆ. ಒಟ್ಟಿಗೆ ಊಟ ಮಾಡುವಂತಿಲ್ಲ, ವಿವಾಹವಾಗುವಂತಿಲ್ಲ, ಕಸುಬನ್ನು ಜೊತೆಯಲ್ಲಿ ಮಾಡುವಂತಿಲ್ಲ. ಹೀಗೆ ಅಡ್ಡ ಗೋಡೆಗಳು ನಿರ್ಮಾಣವಾಗಿ ಬಿಟ್ಟಿವೆ. ಜಾತಿಗಳು ಮತ್ತೊಂದು ಜಾತಿಯಾಗಿ ಉತ್ಪತ್ತಿಯಾಗಿ ಭಾರತದ ತುಂಬ ಈ ಜಾತಿ – ಉಪಜಾತಿಗಳೇತುಂಬಿ ಹೋಗಿವೆ. ಆರಂಭದಲ್ಲಿದ್ದ ಜಾತಿ ವರ್ಗಗಳೆಂದರೆ;

"೧. ಬ್ರಾಹ್ಮಣರು ಅಥವಾ ಪುರೋಹಿತ ವರ್ಗ

೨. ಕ್ಷತ್ರಿಯರು ಅಥವಾ ಸೈನಿಕ ವರ್ಗ

೩. ವೈಶ್ಯರು ಅಥವಾ ವ್ಯಾಪಾರಸ್ಥರ ವರ್ಗ

೪. ಶೂದ್ರರು ಅಥವಾ ಕಸುಬುದಾರರು ಮುಂದೆ ಈ ವರ್ಗಗಳ ನಡುವೆ ಸಂಕರಗೊಂಡ ಜನ. ಅಥವಾ ಯುದ್ಧದಲ್ಲಿ ಸೆರೆ ಸಿಕ್ಕವರು ಪಂಚಮ ಅಥವಾ ಅಸ್ಪೃಶ್ಯರಾಗಿರಬಹುದು ಎಂದು ಅಂಬೇಡ್ಕರ್ ಅಭಿಪ್ರಾಯಪಟ್ಟಿದ್ದಾರೆ" *(ಚಿನ್ನಸ್ವಾಮಿ ಸೋಸಲೆ ಎನ್.: ೨೦೧೩ : ೪).* ಇಂಥ ಜಾತಿ ವ್ಯವಸ್ಥೆಯನ್ನು ಸೈದ್ಧಾಂತಿಕಗೊಳಿಸಿದವನು, ಕಟ್ಟುನಿಟ್ಟಿನ ಅಲಿಖಿತ ಸಂವಿಧಾನವನ್ನು ರೂಪಿಸಿದವನು ಮನು ಇದನ್ನು ಚಾಚು ತಪ್ಪದೆ ಜಾರಿಗೆ ತಂದವರು ಬ್ರಾಹ್ಮಣರು ಹಾಗೂ ದಲಿತೇತರ ಪ್ರಬಲ ಸ್ಪೃಶ್ಯ ವರ್ಗದವರು ಎಂದು ಅಂಬೇಡ್ಕರ್ ಹೇಳಿದ್ದಾರೆ. ಹಾಗಾಗಿ ಇಂದು ಕೂಡ ಭಾರತದಲ್ಲಿ ಜಾತಿ ವ್ಯವಸ್ಥೆ ಸ್ಥಿರವಾಗಿ ನಿಂತಿದೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಹೊಲೆಯ ಮತ್ತು ಮಾದಿಗ ವರ್ಗದವರಂತೂ ಅಸ್ಪೃಶ್ಯರಾಗಿಯೇ ಜೀವನ ನಡೆಸುತ್ತಿದ್ದಾರೆ. ವರ್ಗವ್ಯವಸ್ಥೆಯಲ್ಲಿ ಕೊನೆಯವರನ್ನು

ಅಂದರೆ ಶೂದ್ರ ಅಥವಾ ಪಂಚಮರು ಅಥವಾ ಅಸ್ಪೃಶ್ಯರನ್ನು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸಿದರು. “ಪ್ರತಿಯೊಂದು ಹಳ್ಳಿಯಲ್ಲಿ ಒಂದು ಅಸ್ಪೃಶ್ಯರ ಕೇರಿ ಇರುತ್ತಿತ್ತು. ಪ್ರತ್ಯೇಕ ಹೊಲೆಯರ ಬಾವಿ ಇರುತ್ತಿತ್ತು. ಗ್ರಾಮಸ್ಥರ ಎಂಜಲು ತಿನ್ನುವುದು, ಹೊಲಸು ಬಳಿಯುವುದನ್ನು ಅಸ್ಪೃಶ್ಯರು ಸಹಜವೆಂಬಂತೆ ಮಾಡಬೇಕಿತ್ತು. ಅಸ್ಪೃಶ್ಯನೊಬ್ಬನು ಮಧ್ಯಾಹ್ನ ೧ರಿಂದ ೯ ಗಂಟೆಯ ಒಳಗೆ ಮಾತ್ರ ಊರಲ್ಲಿ ಪ್ರವೇಶಿಸಬಹುದು. ಕಾರಣ ಅವನ ನೆರಳು ಅವನ ಕಾಲ ಕೆಳಗೆ ಬೀಳಬೇಕೇ ಹೊರತು, ಸವರ್ಣೀಯರ ಮೇಲೆ ಬೀಳಬಾರದು. ಉಗುಳುವುದಕ್ಕೆ ಕೊರಳಿನಲ್ಲಿ ಮಣ್ಣಿನ ಮಡಿಕೆ ಮತ್ತು ದಾರಿಯಲ್ಲಿ ಮೂಡಿದ್ದ ತನ್ನ ಹೆಜ್ಜೆಗಳನ್ನು ಅಳಿಸಲು ಅವನು ಮರದ ರೆಂಬೆಯನ್ನು ನಡಕ್ಕೆ ಕಟ್ಟಬೇಕಾಗಿತ್ತು. ಇದಲ್ಲದೆ ಕೈಯಲ್ಲೊಂದು ಗೆಜ್ಜೆಯ ಬಡಿಗೆ ಹಿಡಿದು ಸದ್ದು ಮಾಡುತ್ತ ಊರನ್ನು ಪ್ರವೇಶಿಸಬೇಕಾಗುತ್ತಿತ್ತು. ಅವರ ಹೆಣ್ಣು ಮಕ್ಕಳು ದೇವರ ಹೆಸರಿನಲ್ಲಿ ಶೋಷಣೆಗೆ ಒಳಗಾಗುವುದು ಅನಿವಾರ್ಯವಾಯಿತು. ಹೀಗೆ ಅಲ್ಪಸಂಖ್ಯೆಯ ಜನರ ಕೈಯಲ್ಲಿ ಬಹುಸಂಖ್ಯೆಯ ಜನರು ನಲುಗಿ ಹೋದರು” *(ನೇತ್ರಾವತಿ ಕೆ ವಿ :೨೦೧೨:೧೨೮-೧೨೯).* ಹೀಗೆ ಪರಿಶಿಷ್ಟ ಜಾತಿಯವರು ಒಂದಲ್ಲಾ ಒಂದು ರೀತಿಯ ಶೋಷಣೆಯನ್ನು ಅನುಭವಿಸುತ್ತಲೇ ಬಂದಿದ್ದಾರೆ. ಇವರಲ್ಲಿ ಅಜ್ಞಾನದ ಮೌಢ್ಯ ತುಂಬಿದ ಕಾರಣಕ್ಕೆ ದೇವರ ಹೆಸರಿನಲ್ಲಿ ಮೂಢನಂಬಿಕೆಯ ಹಿನ್ನೆಲೆಯಲ್ಲಿ ಅವರ ಹೆಣ್ಣುಮಕ್ಕಳನ್ನು ದೇವರಿಗೆ ಬಿಡುವ ಮೂಲಕ ಅವರನ್ನು ಲೈಂಗಿಕವಾಗಿ ಬಳಸುತ್ತಾರೆ. ಈಗಲೂ ಕೂಡ ಈ ತಳಸಮುದಾಯಗಳಲ್ಲಿ ದೇವದಾಸಿ, ಜೋಗುತಿ, ಬಸವಿಯಂತಹ ಆಚರಣೆಗಳು ಪ್ರಚಲಿತದಲ್ಲಿರುವುದನ್ನು ಕಾಣಬಹುದು. ಪರಿಶಿಷ್ಟ ಜಾತಿಯಲ್ಲಿ ಕಂಡುಬರುವ ಮಾದಿಗ, ಚಲುವಾದಿ, ಚೆನ್ನದಾಸರು, ಡೊಂಬರು, ವಡ್ಡರು ಮತ್ತು ಕೊರಗರಲ್ಲಿ ದೇವದಾಸಿಯರನ್ನು ಕಾಣಲಾಗುತ್ತದೆ. ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಈ ಪರಿಶಿಷ್ಟ ಜಾತಿಯ ಸಮುದಾಯಗಳ ಸ್ಥೂಲ ಪರಿಚಯವನ್ನು ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಯ ಹಿನ್ನೆಲೆಯಲ್ಲಿ ಪರಿಚಯಿಸುವುದು ಅಗತ್ಯವಾಗಿದೆ. ಈ ಸಮುದಾಯಗಳು ಧಾರ್ಮಿಕತೆಯ ಮನೋಭಾವ ಮತ್ತು ಅವರ ಮನೆದೇವರುಗಳ ಪೂಜಾಸಂಸ್ಕಾರಗಳು ಮತ್ತು ದೇವದಾಸಿ ಪದ್ಧತಿಯ ಕುರಿತಾಗಿ ಅವರಲ್ಲಿಸದ್ದ ನಂಬಿಕೆಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಹಿಂದಿನಿಂದಲೂ ಜಾತಿಯ ಹಿನ್ನೆಲೆಯಲ್ಲಿ ಅನುಭವಿಸುತ್ತಿರುವ ಶೋಷಣೆ, ದೌರ್ಜನ್ಯಗಳು ಇವತ್ತಿನ ಸಂದರ್ಭದಲ್ಲಿ ಕಣ್ಮರೆಯಲ್ಲಿ ಮೌನವಾಗಿ ನಡೆಯುತ್ತಿವೆ. ಆಗಿನಿಂದಲೂ ದೌರ್ಜನ್ಯ ಶೋಷಣೆಯಲ್ಲಿ ಬೆಳೆದು ಬಂದಿರುವ ಸಮುದಾಯಗಳು ಇವತ್ತಿಗೂ ಅನೇಕ ರೀತಿಯ ಶೋಷಣೆಗೆ ಒಳಗಾಗಿವೆ. ಇವತ್ತಿಗೂ ಕೂಡ ದೇವದಾಸಿ ಪದ್ಧತಿಯನ್ನು ಪರಿಶಿಷ್ಟ ಜಾತಿಗಳಲ್ಲಿ ಹೆಚ್ಚಾಗಿರುವುದನ್ನು ಗಮನಿಸಬಹುದಾಗಿದೆ.

ಕೋಷ್ಟಕ: ೪.೬ ಬಳ್ಳಾರಿ ಜಿಲ್ಲೆಯ ಪರಿಶಿಷ್ಟ ಜಾತಿಯ ದೇವದಾಸಿಯರ ಜನಸಂಖ್ಯೆ

| ಕ್ರಸಂ. | ತಾಲೂಕಿನ ಹೆಸರು | ೨೦೦೭-೦೮ರ ಸಮೀಕ್ಷೆ ಒಟ್ಟು ದೇವದಾಸಿಯರ ಸಂಖ್ಯೆ | ೨೦೦೭-೦೮ನೇ ಸಮೀಕ್ಷೆಯ ಪರಿಶಿಷ್ಟ ಜಾತಿಯ ದೇವದಾಸಿಯರ ಸಂಖ್ಯೆ |
|---|---|---|---|
| ೧. | ಬಳ್ಳಾರಿ | ೧೨೭೯ | ೧೨೬೪ |
| ೨. | ಸಿರುಗುಪ್ಪ | ೧೦೭೯ | ೧೦೩೧ |
| ೩. | ಸಂಡೂರು | ೯೬೮ | ೫೭೬ |
| ೪. | ಹೊಸಪೇಟೆ | ೨೫೯೬ | ೧೨೮೮ |
| ೫. | ಹೂ ಹಡಗಲಿ | ೯೭೮ | ೯೦೦ |
| ೬. | ಹೆಚ್.ಬಿ.ಹಳ್ಳಿ | ೧೮೨೧ | ೧೧೭೯ |
| ೭. | ಕೂಡ್ಲಿಗಿ | ೧೦೨೨ | ೩೭೬ |
| | ಒಟ್ಟು | ೯೭೩೩ | ೬೬೦೪ |

*(ಮೂಲ: ದೇವದಾಸಿ ಪುನರ್ವಸತಿ ಯೋಜನಾ ಕಛೇರಿ, ಬಳ್ಳಾರಿ)*

೨೦೦೭-೦೮ನೇ ಸಾಲಿನಲ್ಲಿ ದೇವದಾಸಿಯರ ಪುರ್ನವಸತಿ ಯೋಜನೆಯ ಅಡಿಯಲ್ಲಿ ದೇವದಾಸಿಯರ ಮರುಸಮೀಕ್ಷೆಯನ್ನು ಮಾಡಲಾಯಿತು. ಅದರಲ್ಲಿ ಇಡೀ ಬಳ್ಳಾರಿ ಜಿಲ್ಲೆಯ ದೇವದಾಸಿಯರ ಸಂಖ್ಯೆಯನ್ನು ಗಮನಿಸಿದಾಗ ಒಟ್ಟಾರೆ ೯೭೩೩ ದೇವದಾಸಿಯರು ಕಂಡುಬರುತ್ತಾರೆ. ಅವರಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆಯಲ್ಲಿ ೬೬೦೪ ದೇವದಾಸಿರು ಕಂಡುಬರುತ್ತಾರೆ. ಇಡೀ ಬಳ್ಳಾರಿ ಜಿಲ್ಲೆಯಲ್ಲಿ ಅಧಿಕಸಂಖ್ಯೆಯಲ್ಲಿ ದೇವದಾಸಿಯರನ್ನು ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪಿಗೆ ಹತ್ತಿರವಿರುವ ಹೊಸಪೇಟೆ ವಿಜಯನಗರ ಕ್ಷೇತ್ರದಲ್ಲಿಯೇ ಕಾಣಬಹುದಾಗಿದೆ ಮತ್ತು ಅತಿ ಕಡಿಮೆ ಸಂಖ್ಯೆ ಎಂದರೆ ಕೂಡ್ಲಿಗಿಯಲ್ಲಿ ಎಂದು ಹೇಳಲಾಗುವುದು. ಇಲ್ಲಿ ಪರಿಶಿಷ್ಟ ಪಂಗಡದಲ್ಲಿಯೇ ಅತಿ ಹೆಚ್ಚಿನ ಸಂಖ್ಯೆಯಲ್ಲಿ ದೇವದಾಸಿಯರು ಕಂಡುಬರುತ್ತದೆ. ಇವರಲ್ಲಿ ಆರವತ್ತು ಜನ ದೇವದಾಸಿಯರ ವ್ಯಕ್ತಿ ಅಧ್ಯಯನ ಮಾಡಲಾಗಿದೆ.

### ೪.೧.೧ ಮಾದಿಗ ಸಮುದಾಯ

ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿರುವ ೧೦೧ ಜಾತಿಗಳಲ್ಲಿ ಮಾದಿಗ ಸಮುದಾಯವು ಒಂದಾಗಿದೆ. ಮಾದಿಗ ಸಮುದಾಯದವರು ಮೂಲತಃ ತೆಲುಗು ದೇಶದವರೆಂದು ಹೇಳಲಾಗಿದೆ. ತಮಿಳು ದೇಶದಲ್ಲಿ ಕೂಡ ಇವರು ಅಧಿಕಸಂಖ್ಯೆಯಲ್ಲಿರುವುದು ಕಂಡುಬರುತ್ತಾರೆ. ಆದರೆ ಆಂಧ್ರದಲ್ಲಿರುವಷ್ಟು ಇವರ

ಸಂಖ್ಯೆ ಭಾರತದ ಇನ್ಯಾವ ಪ್ರದೇಶಗಳಲ್ಲೂ ಕಾಣಲಾಗದು. ಕರ್ನಾಟಕದಲ್ಲಿ ಮೈಸೂರು ಪ್ರಾಂತ್ಯ, ಬಳ್ಳಾರಿ, ಹೊಸಪೇಟೆ, ಹಳೇ ಮೈಸೂರು, ಬೆಂಗಳೂರು ಜಿಲ್ಲೆಗಳಲ್ಲಿ ಸಹ ಇವರ ಸಂಖ್ಯೆ ಅಧಿಕವಾಗಿದೆ. ತಮಿಳು ದೇಶದಲ್ಲಿ ಇವರನ್ನು ಚಕ್ಕಲಿಯನ್ ಎಂದು ಕರೆಯುತ್ತಾರೆ. ಮಾದಿಗರು ತಾವು ಮಾತಂಗಿಯ ಮಕ್ಕಳು ಎಂದೂ ಇನ್ನೂ ಕೆಲವು ಕಡೆ ಆದಿಜಾಂಬವರು ಎಂದು ಕರೆಸಿಕೊಳ್ಳುವುದು ಮಹಾಭಾರತ ಎಂಬ ಮಹಾಮುನಿ ಹಾಗೂ ಅಂದಿನ ಕಾಡುಗುಡ್ಡ ಜನರ ನಾಯಕನ ಸಂತತಿಯವರು ಎಂಬುದಾಗಿ ಇವರ ಕೆಲವು ಪಂಗಡಗಳು ನಂಬಿದ್ದಾರೆ. ಜಾಂಬವಂತ ಮುನಿಯು ಮಾದಿಗರ ಮೂಲ ಪುರುಷ ಎಂದು ಪೌರಾಣಿಕ ಹಿನ್ನೆಲೆಯಲ್ಲಿ ಹೇಳಲಾಗುತ್ತದೆ. ಮಾದಿಗ ಪದವನ್ನು ಮಹಾ+ಆದಿ = ಆದಿ ಪುರುಷನೆಂದು ಹೇಳಲಾಗಿದೆ.

"ಮಾದಿಗ ಎಂಬುದು ಮಾದ+ಇಗ ಎಂಬೆರಡು ಶಬ್ದಗಳಿಂದ ರೂಪಿತವಾಗಿದೆ. ಮಾದ ಎಂಬ ಕನ್ನಡ ಪದದ ಅರ್ಥ ಅಸ್ಪೃಶ್ಯ, ಹರಿಜನ ಎಂದಾಗುತ್ತದೆ. ಇದಕ್ಕೆ ಇಗ ಎಂಬ ತದ್ಧಿತ ಪ್ರತ್ಯಯ ಸೇರಿ ಮಾದಿಗ ಎಂದಾಗಿದೆ. ಇವರನ್ನು ಮಾದಾರಾ, ಮಾತಂಗ, ಮಾಂಗ, ಎಡಗೈಯವರು ಎಂದು ಮುಂತಾದ ಹೆಸರುಗಳಿಂದ ಕರೆಯುವ ವಾಡಿಕೆ ಇದೆ" *(ನೇತ್ರಾವತಿ ಕೆ.ವಿ: ೨೦೧೨:೮೯-೫೦).* ಮಾದಿಗರಿಗೆ ಹರಿಜನರೆಂದು ಕರೆಯುತ್ತಾರೆ. ಸರಕಾರ ಕೂಡ ಇವರಿಗೆ ಜಾತಿ ಪ್ರಮಾಣ ಪತ್ರಗಳಲ್ಲಿ ಮಾದಿಗರನ್ನು ಹರಿಜನರೆಂದು, ಆದಿ ಕರ್ನಾಟಕ(ಎ.ಕೆ)ವೆಂದು ದಾಖಲೆಗಳಲ್ಲಿ ನಮೂದಿಸಿರುತ್ತಾರೆ. ಮಾದಿಗ ಸಮುದಾಯಕ್ಕೆ ಈ ಪದಗಳು ಜಾತಿ ಸೂಚಕವಾಗಿಯೂ ಮತ್ತು ವೃತ್ತಿಯ ಸೂಚಕವಾಗಿಯೂ ಬಳಕೆಗೆ ಬಂದಿವೆ. ಕರ್ನಾಟಕದ ಹೆಚ್ಚಿನ ಭಾಗಗಳಲ್ಲಿ ಇವರು ತಮ್ಮ ಕುಲದೇವತೆ ಮರಿಯಮ್ಮ, ಹುಲಿಗೆಮ್ಮ, ಮಾರೆಮ್ಮ, ದುರ್ಗಮ್ಮ, ಇತರೆ ಶಕ್ತಿಯ ದೇವತೆಗಳನ್ನು ಆರಾಧಿಸುವುದರಿಂದ ಮಾತಂಗಿ ಮಕ್ಕಳೆಂದು ಇವರನ್ನು ಕರೆಯಲಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಅಧಿಕಸಂಖ್ಯೆಯಲ್ಲಿ ಮಾದಿಗ ಸಮುದಾಯದವರು ಇದ್ದಾರೆಂದು ಹೇಳಲಾಗುವುದು. ಇವರು ಬಹಳ ಹಿಂದಿನಿಂದ ಹೆಚ್ಚಾಗಿ ಅಸ್ಪೃಶ್ಯತೆ ಶೋಷಣೆಗೆ ಒಳಗಾಗಿದ್ದಾರೆ. ಊರಿನ ಹೊರಗೆ ಇವರ ವಾಸಸ್ಥಾನವನ್ನಾಗಿ ನೇಮಿಸಿದ್ದಾರೆ. ಹೋಟಲ್, ಶಾಲೆಗಳಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿಯೂ ಸಹ ಇವರು ಅಸ್ಪೃಶ್ಯತೆಯನ್ನು ಅನುಭವಿಸುತ್ತಿದ್ದರು. ಇವರಿಗೆ ಕೀಳಾದ ಕೆಲಸವನ್ನು ಅಥವಾ ಹೊಲಸು ತೆಗೆಯುವ ಕೆಲಸಗಳನ್ನು ನೀಡುತ್ತಿದ್ದರು. ಜೊತೆಗೆ ಕೃಷಿ ಕೂಲಿಯಲ್ಲಿ ಅಧಿಕ ಶ್ರಮದಿಂದ ದುಡಿಸಿಕೊಂಡು ಕಡಿಮೆ ಪ್ರತಿಫಲವನ್ನು ನೀಡುತ್ತಿದ್ದರು. ದುಡಿಮೆಯ ಪ್ರತಿಫಲವಾಗಿ ಕೂಲಿಯನ್ನು ಅನ್ನ, ಧಾನ್ಯಗಳ ರೂಪದಲ್ಲಿ ನೀಡುತ್ತಿದ್ದರು. ಮಾದಿಗರ ಮೂಲ ಕಸುಬು ಚರ್ಮದ ಕೈಗಾರಿಕೆಯಾಗಿತ್ತು. ಹಾಗಾಗಿ ಇವರನ್ನು ಸಾಮಾಜಿಕ ಸ್ತರ ವಿನ್ಯಾಸದಲ್ಲಿ ಕೆಳಸ್ಥಾನವನ್ನು ಈ ಸಮಾಜ ನೀಡಿ ಅಸ್ಪೃಶ್ಯ, ನೀಚ, ಕೊಳಕರು ಎಂಬ ಭಾವನೆಯಿಂದ ನಡೆಸಿಕೊಳ್ಳುತ್ತದೆ.

ಭಾರತದಲ್ಲಿರುವ ಜಾತಿ ಪದ್ಧತಿಯಂತಹ ವಿಸ್ತಾರವಾದ ವ್ಯವಸ್ಥೆಗೆ ಸಮಾನವಾಗಿರುವಂತಹದ್ದನ್ನು ಬೇರೆಲ್ಲೂ ಕಾಣಲಾಗುವುದಿಲ್ಲ. ಇಲ್ಲಿ ಅಸ್ಪೃಶ್ಯತೆ ಎನ್ನುವುದು ಕೇವಲ ಕಾನೂನಿನ ಪ್ರಕಾರ ನಿಷೇಧಿಸಲಾದ ಪದ್ಧತಿಯಾಗಿದೆ. ಸಂವಿಧಾನದಲ್ಲಿ ಡಾ.ಬಿ.ಆರ್ ಅಂಬೇಡ್ಕರ್‌ರವರು ಅಸ್ಪೃಶ್ಯತೆ ಆಚರಣೆಯನ್ನು

೧೭ನೇ ವಿಧಿಯ ಪ್ರಕಾರ ನಿಷೇಧಿಸಲಾಗಿದೆ ಎಂದು ಬರೆದಿದ್ದಾರೆ. ಆದರೆ ಭಾರತ ಸಂವಿಧಾನ ಜಾರಿಗೆ ಬಂದು ಇಷ್ಟು ವರ್ಷಗಳು ಕಳೆದರೂ ಇಂದಿಗೂ ಸಮಾಜದಲ್ಲಿ ಅಸ್ಪೃಶ್ಯತೆ ಆಚರಣೆಯನ್ನು ಕಾಣಬಹುದು. ಈ ಕಾರಣದಿಂದ ತಳಸಮುದಾಯಗಳು ಮಾನಸಿಕ ಹಿಂಸೆಯನ್ನು ಅನುಭವಿಸುತ್ತಿದ್ದಾರೆ. 'ಮಹಾತ್ಮಗಾಂಧಿಯವರು ಇವರನ್ನು ಹರಿಜನ' ಎಂದು ಕರೆದರು. ಅಸ್ಪೃಶ್ಯರು ಮಾತ್ರ ಹರಿಯ ಮಕ್ಕಳಾದರೆ ಉಳಿದವರು ಯಾರ ಮಕ್ಕಳು ಎನ್ನುವ ಪ್ರಶ್ನೆ ನಮ್ಮ ಮುಂದೆ ಬರುತ್ತದೆ. ಹಾಗಾಗಿ ಇವರು ಮನುಷ್ಯರೇ, ಅವರು ಮನುಷ್ಯರ ಮಕ್ಕಳೆಂದು ಗುರುತಿಸಿದರೆ ಸಾಕು ಎನಿಸುತ್ತದೆ. ಈ ಸಮುದಾಯದ ಪ್ರತಿಯೊಂದು ಕುಟುಂಬಗಳು ಪುರುಷರು ಮತ್ತು ಮಕ್ಕಳನ್ನೊಳಗೊಂಡ ಮಹಿಳೆಯರ ಮೇಲೆ ನಾನಾ ರೀತಿಯ ಶೋಷಣೆಗಳನ್ನು ಅನುಭವಿಸುತ್ತಿವೆ. ಅದರಲ್ಲೂ ಮಹಿಳೆಯರನ್ನು ಕುರಿತು ಗಮನಿಸುವುದಾದರೆ, ಇವರು ಅಸ್ಪೃಶ್ಯ ಸಮುದಾಯದಲ್ಲಿ ಅತ್ಯಂತ ಶೋಷಣೆಗೆ ಒಳಗಾದ ಸಮುದಾಯ ಮಹಿಳೆಯರು ಎಂದು ಹೇಳಲಾಗುವುದು. ಈ ಸಮುದಾಯದ ಮಹಿಳೆಯರು ಮೇಲ್ಜಾತಿಯ ಮಹಿಳೆಯರನ್ನು ಪುರುಷರಿಂದ ಅಸ್ಪೃಶ್ಯತೆ ಎಂಬ ನೆರಳಿನಲ್ಲಿ ಶೋಷಣೆಯನ್ನು ಅನುಭವಿಸುತ್ತಾರೆ. ತಳಸಮುದಾಯದ ಹೆಣ್ಣುಮಕ್ಕಳು ಮೇಲ್ಜಾತಿಯ ಪುರುಷರ ಲೈಂಗಿಕ ವಿಕೃತಗಳಿಗೆ ಸಮ್ಮತಿಸಬೇಕೆಂದು ಬಯಸುತ್ತಾರೆ. ಇಂತಹ ಮನೋಭಾವಗಳಿಗೆ ಸುಲಭವಾದ ದಾರಿ ಮಾಡಿಕೊಳ್ಳಲು ದೇವದಾಸಿ ಪದ್ಧತಿಯನ್ನು ಬೆಳೆಸಿದ್ದಾರೆ. ಹೀಗೆ ದೇವದಾಸಿಯು ದೇವರ ಮಗಳು ಎಂಬ ಅಥವಾ ದೇವರ ಹೆಸರಿನಲ್ಲಿ ತಾಳಿಕಟ್ಟುವ ಮೂಲಕ ಅಸ್ಪೃಶ್ಯ ಸಮುದಾಯದಲ್ಲಿರುವ ಮಹಿಳೆಯರನ್ನು ತಮ್ಮ ಕಾಮ ಬಯಕೆಗಾಗಿ ಬಳಸಿಕೊಂಡಿದ್ದಾರೆ. ಇದಕ್ಕೆ ದೇವಿಯ ಪೂಜಾ ಕಾರ್ಯಕ್ಕೆ ಮಾತಂಗಿಯ ಮಕ್ಕಳು ಇರಬೇಕು, ಸೇವೆಗೆಂದು ಮೀಸಲಾಗಿಸಲು ಒಂದು ಕಥೆ ಹೇಳುತ್ತಾರೆ. ಹುಲಿಗೆಮ್ಮ ಮತ್ತು ಎಲ್ಲಮ್ಮ ಚೊಚ್ಚಲ ಗರ್ಭಿಣಿಯಾಗಿರುತ್ತಾರೆ. ಅವರಿಗೆ ಉಳ್ಳಗಡ್ಡೆ, ಬದನೆಕಾಯಿ ತಿನ್ನುವ ಬಯಕೆ ಇರುತ್ತದೆ. ಆಗ ಎಲ್ಲಕ್ಕೂ ಕಷ್ಟದ ಕಾಲವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಇವರು ಒಂದು ತೋಟದಲ್ಲಿ ಉಳ್ಳಗಡ್ಡೆ, ಬದನೆಕಾಯಿ ಬೆಳೆದಿರುವುದನ್ನು ನೋಡಿ ತಿನ್ನುವ ಬಯಕೆಯಿಂದ ಇಬ್ಬರು ತೋಟಕ್ಕೆ ಹೋಗಿ ಉಳ್ಳಗಡ್ಡೆ, ಬದನೆಕಾಯಿಯನ್ನು ಉಡಿಯಲ್ಲಿ ತುಂಬಿಕೊಂಡು ಬರುತ್ತಾರೆ. ಅವರು ತೋಟದಲ್ಲಿ ಕಳ್ಳತನ ಮಾಡಿದ್ದಾರೆಂದು ರೈತ ಗಮನಿಸುತ್ತಾನೆ. ಆಗ ದಾರಿಯುದ್ದಕ್ಕೂ ಬಿದ್ದಿರುವುದನ್ನು ನೋಡಿ ಅದರ ಜೊತೆಗೆ ನಡೆದು ಸಾಗುತ್ತಾನೆ. ಅವುಗಳ ಗುರುತಿನಿಂದ ಹುಲಿಗೆಮ್ಮೆ, ಎಲ್ಲಮ್ಮ ಇವರೇ ಕದ್ದಿದ್ದಾರೆಂಬ ಸಂಗತಿ ತಿಳಿದ ಆ ರೈತ ಅವರನ್ನು ಶಿಕ್ಷೆಗೆ ಒಳಪಡಿಸುತ್ತಾನೆ. ಅಲ್ಲಿ ಎಲ್ಲಾ ಜಾತಿಯ ಜನರು ನೆರೆದಿರುತ್ತಾರೆ. ಆದರೆ ಯಾರು ಅವರನ್ನು ಬಿಡಿಸೋಕೆ ಹೋಗುವುದಿಲ್ಲ. ತುಂಬು ಗರ್ಭಿಣಿಯರಾದ ಎಲ್ಲಮ್ಮ, ಹುಲಿಗೆಮ್ಮನನ್ನು ಮಾದಿಗ ಜಾತಿಯ ಮಾತಂಗಿ ಎಂಬ ಹೆಣ್ಣುಮಗಳು ಅವರ ಶಿಕ್ಷೆಯನ್ನು ತಪ್ಪಿಸಲು ಪ್ರಯತ್ನಿಸಿ ತಾನು ಶಿಕ್ಷೆಗೆ ಗುರಿಯಾಗುತ್ತಾಳೆ. ನಂತರ ಅವರ ಸೇವೆ ಮಾಡುತ್ತಾಳೆ. ಹಾಗಾಗಿಯೇ ಮಾದಿಗ ಸಮುದಾಯದಲ್ಲಿ ಮಾತಂಗಿಯ ಪಾತ್ರಕ್ಕೆ ಸಮಾಜದಿಂದ ಓರ್ವಳನ್ನು ಆಸುವ ಕ್ರಮ ಬಂದಿತು. ಮಾದಿಗರಲ್ಲಿ ಮಾತಂಗಿಯ ಪೂಜೆ ಮತ್ತು ಇತರೆ ಪೂಜಾ ಕಾರ್ಯಕ್ಕೆಂದು ಹೆಣ್ಣು ಮಗಳನ್ನು ಬಿಡುವ ಪದ್ಧತಿ ಜಾರಿಗೆ ತರುತ್ತಾರೆ.

ಮಾದಿಗ ಸಮುದಾಯದಲ್ಲಿ ಮಾತಂಗಿ ದೇವತೆಯ ಪಾತ್ರಕ್ಕೆ ಸಮಾಜದಿಂದ ಓರ್ವಳನ್ನು ಆರಿಸುವ ಕ್ರಮವಿದೆ. ಮೈನೆರೆಯುವ ಸುಮಾರು ೧೦ ರಿಂದ ೧೪ ವರ್ಷದವರೆಗಿನ ತಮ್ಮ ಗ್ರಾಮದ ಹೆಣ್ಣು ಮಕ್ಕಳನ್ನು ಒಂದು ಗೊತ್ತಾದ ಶುಭ ದಿನದಂದು ಕೂಡಿಸಿ ಅಂದು ತಮ್ಮ ಡೋಲು, ವಾದ್ಯ ಘೋಷ್ಠಿ ಹಾಗೂ ಹಾಡಿನಿಂದ ದೇವಿಯ ಕಥೆಯನ್ನು ಬಹುದಾಗಿ ಹೊಗಳಿ, ಎಲ್ಲರೂ ಪ್ರಾರ್ಥಿಸುವರು. ಆಗಲ್ಲಿರುವ ಮೈನೆರೆದಿರುವ ಯಾರ ಮೇಲಾದರು ದೇವಿ ಬರುತ್ತಾಳೆ. ಆಗ ಅಂತಹ ಹುಡುಗಿಯನ್ನು ಮಾತಂಗಿ ಎಂದು ಆರಿಸುವರು. ಅವಳು ಮದುವೆಯಾಗಬಾರದು ಅವಳಿಗೆ ಪ್ರತ್ಯೇಕ ಗುಡಿಸಲನ್ನು ಮಾಡಿ ವಾಸಕ್ಕೆ ನೆಲೆ ಮಾಡುವರು. ಇದು ಒಂದು ಕ್ರಮ. ಆದರೆ ಬೇರೆ ಬೆರೆ ಪ್ರದೇಶಗಳಲ್ಲಿ ಮಾತಂಗಿಯನ್ನು ಆರಿಸುವ ಕ್ರಮ ವಿವಿಧ ರೀತಿಗಳಲ್ಲಿವೆ. ತಳಸಮುದಾಯಗಳಲ್ಲಿ ಈ ರೀತಿಯಲ್ಲಿ ಬಿಟ್ಟಿರುವ ಮಹಿಳೆಯರನ್ನು ದೇವದಾಸಿ, ಬಸವಿ, ಜೋಗತಿ ಎಂದು ಕರೆಯುತ್ತಾರೆ. ಪ್ರಸ್ತುತದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಮಾದಿಗ ಸಮುದಾಯದಲ್ಲಿಯೇ ಅಧಿಕ ದೇವದಾಸಿ ಸಂಖ್ಯೆಯನ್ನು ಗಮನಿಸಬಹುದು. ಈ ಸಮುದಾಯಗಳಲ್ಲಿ ದೇವದಾಸಿ ಪದ್ಧತಿ ಉಳಿಯುವ ಕಾರಣವನ್ನು ನೋಡಿದಾಗ ತಳಸಮುದಾಯಗಳ ಜನರಲ್ಲಿ ಧಾರ್ಮಿಕ ಮೌಢ್ಯದ ಮೂಢನಂಬಿಕೆಗಳನ್ನು ತುಂಬಿ ದೇವರು – ಧರ್ಮ ಎಂಬ ಭಯವನ್ನು ಹುಟ್ಟಿಸಿ ದೇವರ ಸೇವೆಗೆ ಹೆಣ್ಣುಮಗಳನ್ನು ಬಿಡಬೇಕು ಎಂಬುದನ್ನು ಉನ್ನತ ವರ್ಗದ ಪುರೋಹಿತಶಾಹಿ ವ್ಯವಸ್ಥೆಯು ಮಾಡಿದೆ. ಹಾಗೆಯೇ ಇವರ ಮಾತುಗಳಿಂದ ತಳಸಮುದಾಯದ ಮಕ್ಕಳನ್ನು ದೇವರ ಹೆಸರಿನಲ್ಲಿ ಬಿಟ್ಟು ಇವರು ದೇವರ ಹೆಸರಿನಲ್ಲಿ ಅವರನ್ನು ಲೈಂಗಿಕವಾಗಿ ಬಳಸಿಕೊಳ್ಳುತ್ತಿದ್ದಾರೆ. ಪ್ರಸ್ತುತದಲ್ಲಿ ಮಾದಿಗ ಸಮುದಾಯದಲ್ಲಿ ಅಲ್ಲಲ್ಲಿ ಈಗಲೂ ದೇವದಾಸಿ ಪದ್ಧತಿ ಜಾರಿಯಲ್ಲಿರುವುದನ್ನು ಕಾಣಲಾಗುವುದು. ಆದರೆ ಅದರ ಬದಲಾದ ಸ್ವರೂಪದಲ್ಲಿ ಗೌಪ್ಯವಾಗಿ ಈ ಪದ್ಧತಿಯನ್ನು ನಡೆಸಿ ಹೆಣ್ಣು ಮಗಳನ್ನು ದೇವದಾಸಿಯನ್ನಾಗಿ ಮಾಡುತ್ತಿದ್ದಾರೆ.

ಅಸ್ಪೃಶ್ಯ ಸಮುದಾಯದ ದೇವದಾಸಿ ಮಹಿಳೆಯು ಮಾನಸಿಕವಾಗಿ ಅನೇಕ ತೊಳಲಾಟಗಳಿಗೆ ಬಲಿಯಾಗಿರುತ್ತಾಳೆ. ಉನ್ನತ ವರ್ಗದ ವ್ಯಕ್ತಿಗಳು ಅಸ್ಪೃಶ್ಯ ಸಮುದಾಯದ ವಿಶೇಷವಾಗಿ ಮಾದಿಗ ಸಮುದಾಯದ ಮಹಿಳೆಯೊಂದಿಗೆ ಸಂಬಂಧವನ್ನು ಇಟ್ಟುಕೊಳ್ಳುವುದು ತುಂಬ ವಿರಳವಾಗಿ ಕಂಡು ಬರುತ್ತದೆ. ಒಂದು ವೇಳೆ ಉನ್ನತ ವರ್ಗದ ವ್ಯಕ್ತಿ ಅಸ್ಪೃಶ್ಯ ಮಹಿಳೆಯ ಜೊತೆಯಲ್ಲಿ ಸಂಬಂಧ ಇಟ್ಟುಕೊಂಡಿದ್ದರೂ ಅದು ಇತರಿಗೆ ಗೊತ್ತಾಗದಂತೆ ಇರುತ್ತಾರೆ. ಈ ಸಂದರ್ಭಗಳಲ್ಲಿ ಹೇಗೆಂದರೆ ಈ ಜಾತಿ ಹಿನ್ನೆಲೆಯಲ್ಲಿ ಅಸ್ಪೃಶ್ಯಳಾಗುತ್ತಾಳೆ. ಅಂದರೆ ಅಸ್ಪೃಶ್ಯ ದೇವದಾಸಿ ಮಹಿಳೆಯು ಒಂದು ಸಾರಿ ಅಸ್ಪೃಶ್ಯಳಾಗಿ ಮತ್ತೊಂದು ಸಾರಿ ಸ್ಪೃಶ್ಯಳಾಗಿಯೂ ಸಮಾಜದಲ್ಲಿ ಇರುತ್ತಾಳೆ. ಹೇಗೆಂದರೆ ಅಸ್ಪೃಶ್ಯಳಾಗಿ ಸಮಾಜದ ಕಣ್ಣೆದುರಿನಲ್ಲಿದ್ದು, ಎಲ್ಲರಿಗೂ ತಿಳಿದದ್ದಾಗಿದೆ. ಆದರೆ ಅವಳು ಸ್ಪೃಶ್ಯಳಾಗಿರುವುದು ಯಾರಿಗೂ ತಿಳಿಯದಾಗೆ ಕತ್ತಲಲ್ಲಿ ಮಾತ್ರ ಸ್ಪೃಶ್ಯಳಾಗಿರುತ್ತಾಳೆ. ಅಂದರೆ ಮೇಲ್ಜಾತಿಯ ಪುರುಷರಿಗೆ ರಾತ್ರಿಯ ಸಮಯದಲ್ಲಿ ಯಾವುದೇ ಜಾತಿ ಇರುವುದಿಲ್ಲ. ಆಗ ಕೆಳವರ್ಗದ ದೇವದಾಸಿ ಮಹಿಳೆ ಸ್ಪೃಶ್ಯಳಾಗಿಯೇ ಇರುತ್ತಾಳೆ. ಬೆಳಗಾಗುತ್ತಲೇ ಮತ್ತೆ ಅವಳು ಅಸ್ಪೃಶ್ಯಳಾಗುತ್ತಾಳೆ. ಹೀಗೆ ತಮ್ಮ

ಲೈಂಗಿಕ ಬಯಕೆ ತೀರಿಸಿಕೊಳ್ಳಲು ಕತ್ತಲಲ್ಲಿ ಸ್ಪೃಶ್ಯಳಾಗಿ, ಬೆಳಕಿನಲ್ಲಿ ತಾಯಿಯಿಂದ ಅಸ್ಪೃಶ್ಯಳಾಗಿ ಕಾಣುವಂತೆ ಮಾಡುತ್ತಾರೆ. ಅವರಿಗೆ ಹುಟ್ಟಿದ ಮಕ್ಕಳಿಗೆ ಹೆಸರು ಹೇಳುವಂತಿರಲಿಲ್ಲ. ದೇವದಾಸಿ ಮಹಿಳೆಗೆ ದೇವರೆ ಗಂಡನಾಗಿರುತ್ತಾನೆ. ಹಾಗಾಗಿ ಅವಳು ತಂದೆಯ ಹೆಸರಲ್ಲಿ ಅವಳ ಮನೆದೇವರ ಹೆಸರನ್ನು ಹೇಳುತ್ತಾಳೆ.

ಮಾದಿಗರನ್ನು 'ಹರಿಜನ' ಎಂದು ಮಾದಿಗ ಮಹಿಳೆಯರನ್ನು ದೇವದಾಸಿಯರನ್ನಾಗಿ ಮಾಡಿ ದೇವರ ಹೆಂಡತಿ ಎಂದು ಕರೆಯಲಾಯಿತು. ಹೀಗೆ ಈ ಸಮುದಾಯವು ದೈವದ ಹೆಸರಲ್ಲೆ ಶೋಷಣೆಯ ಬದುಕು ನಡೆಸುತ್ತಿದ್ದಾರೆ.

**೪.೧.೨ ಛಲವಾದಿ ಸಮುದಾಯ**

ಮಾನವ ಸಮುದಾಯಗಳು ತನ್ನದೇ ಆದ ವಿಶಿಷ್ಟವಾದ ಸಂಸ್ಕೃತಿ ಹೊಂದಿರುತ್ತವೆ. ಸಮುದಾಯಗಳನ್ನು ಅವರು ಮಾಡುವ ವೃತ್ತಿಯ ಮೂಲಕ ಗುರುತಿಸಿ ಹೆಸರಿಸಲಾಗಿದೆ. ಸಮಾಜದಲ್ಲಿ ಉಚ್ಚ ನೀಚ ಸಮುದಾಯಗಳೆನ್ನುವ ಪರಿಕಲ್ಪನೆಗಳಿವೆ. ಉತ್ತಮ ಕೆಲಸ ಮಾಡುವವರನ್ನು ಉನ್ನತ ಕುಲದವನು, ಕೀಳಾದ ಅಥವಾ ಕೆಳಮಟ್ಟದ ಕೆಲಸ ಮಾಡುವವರು ನೀಚ ಕುಲದವರೆಂಬ ಭಾವನೆಗಳು, ನಮ್ಮ ಸಂಸ್ಕೃತಿಯಲ್ಲಿ ನೆಲೆನಿಂತಿವೆ. ಹೊಲೆಯ ಸಮುದಾಯವು ನಾನಾ ಹೆಸರುಗಳಿಂದ ಕರೆಸಿಕೊಳ್ಳುವ ಒಂದು ತಳವರ್ಗದ ಸಮುದಾಯವಾಗಿದೆ. ಅನಾದಿ ಕಾಲದಿಂದಲೂ ಮೇಲ್ವರ್ಗದವರಿಂದ ಕೆಳವರ್ಗದವರು ಒಂದಲ್ಲ ಒಂದು ರೀತಿಯಲ್ಲಿ ಶೋಷಣೆ ಅನುಭವಿಸುತ್ತಲೇ ಬಂದಿದ್ದಾರೆ. ಇದಕ್ಕೆ ಪೂರಕವಾಗಿ ಪುರೋಹಿತಶಾಹಿ ವರ್ಗ ಅಥವಾ ಆಡಳಿತ ವರ್ಗ ವರ್ಣಭೇದವನ್ನು, ಜಾತಿ ಭೇದವನ್ನು ಕಟ್ಟುನಿಟ್ಟಾಗಿ ರೂಢಿಸಿಕೊಂಡು ಬಂದು ತಳಮಟ್ಟದ ಸಮುದಾಯಗಳನ್ನು ನಿರಂತರವಾಗಿ ತುಳಿಯುತ್ತಲೇ ಬಂದಿವೆ. ಹೀಗಾಗಿ ಶೋಷಣೆ ಎನ್ನುವುದು ಇಲ್ಲಿ ಆಳವಾಗಿ ಬೇರೂರಿದೆ. ಸಮಾಜದ ಎಲ್ಲ ಅವಕಾಶಗಳನ್ನು ಮೇಲ್ವರ್ಗದವರು ಪಡೆದರೆ, ಕೆಳವರ್ಗದ ಚಲುವಾದಿಗಳು ಎಲ್ಲಾ ಅವಕಾಶಗಳಿಂದ ವಂಚಿತರಾಗಿ ಅಮಾನವೀಯವಾಗಿ ಬದುಕಿರುವುದನ್ನು ಕಾಣುತ್ತೇವೆ. ಹಾಗಾಗಿ ಅನೇಕ ಸಮಸ್ಯೆಗಳಿಂದ ಬಳಲುತ್ತಿದೆ ಈ ಚಲುವಾದಿ ಸಮುದಾಯ.

ಆದಿ ದ್ರಾವಿಡರಿಗೆ ಛಲವಾದಿ ಎಂಬ ಪದವೂ ಬಳಕೆಯಲ್ಲಿದೆ. ಛಲ ಉಳ್ಳವನು ಯಾವನೋ ಅವನೇ ಛಲವಾದಿ ಎಂಬ ಗುಣವಾಚಕವನ್ನು ಇದಕ್ಕೆ ಅನ್ವಯಿಸಬಹುದು. ಪುರಾಣಗಳಲ್ಲಿ ಪ್ರಸಿದ್ಧನಾಗಿರುವ ಛಲದಂತೆ ಮಲ್ಲ ಎಂಬುವನ ವಂಶವನ್ನು ಛಲವಾದಿ ಸಮುದಾಯವೆಂದು ಕರೆಯುವುದು ರೂಢಿಯಲ್ಲಿದೆ. ಪೂರ್ವದಿಂದಲೂ ಈ ಸಮುದಾಯ ರಾಜಪ್ರಭುತ್ವದಲ್ಲಿ ರಣಕಹಳೆ ಮೊಳಗಿಸುವ ನಂಬಿಕಸ್ಥ ಸೇವಕರಾಗಿ ಸೇವೆ ಸಲ್ಲಿಸಿದೆ. ನಂತರ ರಾಜಮನೆತನಗಳು ಪತನಗೊಂಡ ನಂತರ ಛಲವಾದಿಯವರು ತಮ್ಮ ಬದುಕಿನ ಜೀವನೋಪಾಯಕ್ಕಾಗಾಗಿ ವಿವಿಧ ಉದ್ಯೋಗಳನ್ನು ಅವಲಂಬಿಸಿದರು. ಛಲವಾದಿ ಸಮುದಾಯವನ್ನು ಹೊಲೆಯ. ಪದದ ಸರಳ ಅರ್ಥ ಹೊಲೆಯ, ಊರ ಹೊರಗೆ ವಾಸಿಸುವ ಜನ ಸಮುದಯಾವೇ ಹೊಲೆಯ ಸಮುದಾಯ ಎಂಬುದಾಗಿ ಮೇಲ್ವರ್ಗದ ಸಮುದಾಯಗಳು ಗುರುತಿಸಿವೆ.

ಮೇಲ್ವರ್ಗದವರು ಈ ಸಮುದಾಯವನ್ನು ತಮ್ಮ ಸೇವೆಗೆ ಸೀಮಿತಗೊಳಿಸಿಕೊಂಡಿತು. ಅವರಿಂದ ಎಲ್ಲ ಬಗೆಯ ಕೆಲಸಗಳನ್ನು ಮಾಡಿಸಿಕೊಂಡಿತು. ಅಂದಿನ ದಿನಗಳಲ್ಲಿ ಕೆಳವರ್ಗದ ಜನತೆ ಬದುಕುವುದು ಅಸಾಧ್ಯವಾಗಿತ್ತು. ಹಸಿವು ನೀಗಿಸಿಕೊಳ್ಳಲು ಉನ್ನತ ವರ್ಗದವರು ಸೂಚಿಸಿದ ಕೆಲಸಗಳನ್ನು ಮಾಡುವುದು ಅನಿವಾರ್ಯವಾಗಿತ್ತು. ಉನ್ನತ ವರ್ಗಗಳಿಗೆ ಸದಾ ಸೇವೆಯನ್ನು ಮಾಡುವ ವರ್ಗವಾಯಿತು.

ಛಲವಾದಿಯವರ ಕೇರಿಗಳು ಸಹ ಊರ ಹೊರಗಡೆ ಇರುತ್ತಿದ್ದವು. ಆ ಕೇರಿಗಳಲ್ಲಿ ಕೆಲವೊಂದು ದೇವತೆಗಳ ಗುಡಿಗಳನ್ನು ಕಟ್ಟಿಕೊಂಡಿದ್ದರು. ಮೇಲ್ವರ್ಗದವರು ಈ ಸಮುದಾಯಗಳಲ್ಲಿ ದೇವರ ಮೇಲೆ ಅಪಾರವಾದ ಭಯ – ಭಕ್ತಿಯನ್ನು ಹುಟ್ಟು ಹಾಕಿದ್ದರು. ಇದರಿಂದ ಬಹುಪಾಲು ಛಲವಾದಿ ಜನ ದೇವರುಗಳಿಗೆ ಭಯ – ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಉಗ್ರರೂಪದ ಆ ದೇವತೆಗಳನ್ನು ಬಹಳ ನಿಯಮ ನಿಷ್ಠೆಯಿಂದ ಆರಾಧಿಸುತ್ತಾರೆ. ಛಲವಾದಿ – ಮಾದಿಗರಲ್ಲಿ ಪುರುಷ ದೇವತೆಯನ್ನು ಆರಾಧಿಸುವ ಪದ್ಧತಿ ತೀರಾ ಕಡಿಮೆ. ಅವರು ಗ್ರಾಮದೇವತೆಯನ್ನು ಆರಾಧಿಸುತ್ತಾರೆ. ಪ್ರಸ್ತುತದಲ್ಲಿ ಆಧುನಿಕತೆಯ ಹಾದಿಯಲ್ಲಿರುವುದರಿಂದ ಬಳ್ಳಾರಿ ಜಿಲ್ಲೆಯ ಛಲವಾದಿ ಸಮುದಾಯ ಕೆಲವು ಸ್ತ್ರೀ ಮತ್ತು ಪುರುಷ ದೇವರುಗಳನ್ನು ಆರಾಧಿಸುವುದನ್ನು ನೋಡಬಹುದು. ಆದರೂ ಸಹ ಸ್ತ್ರೀ ದೇವತೆಗಳನ್ನು ಹೆಚ್ಚಾಗಿ ಪೂಜಿಸುತ್ತಾರೆ. ಅಂಥವುಗಳಲ್ಲಿ ಎಲ್ಲಮ್ಮ, ದುರುಗಮ್ಮ, ಮಾತಂಗಿ, ಕೆಂಚಮ್ಮ, ಹುಲಿಗೆಮ್ಮ ಮುಂತಾದವುಗಳಾಗಿವೆ. ವಿಶೇಷವಾಗಿ ದೇವಿಯ ಆರಾಧಕರಿಗೆ ಮಂಗಳವಾರ ಮತ್ತು ಶುಕ್ರವಾರಗಳ ಜೊತೆಗೆ ಕೆಲವು ಹುಣ್ಣಿಮೆಗಳು ಪ್ರಮುಖವಾಗುತ್ತವೆ. ಭಾರತ ಹುಣ್ಣಿಮೆ ಅಥವಾ ಕಾರುಹುಣ್ಣಿಮೆ ಅಥವಾ ಇತರೆ ದೇವಿಯ ಜಾತ್ರೆ ಮಹೋತ್ಸವದ ಸಂದರ್ಭಗಳಲ್ಲಿ ದೇವಿಯ ಕ್ಷೇತ್ರಕ್ಕೆ ಹೋಗಿ ಛಲವಾದಿ ಸಮುದಾಯದವರು ಪ್ರತಿ ವರ್ಷ ಹರಕೆ ಸಲ್ಲಿಸಿ ಬರುವ ಸಂಪ್ರದಾಯವಿದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಹೆಣ್ಣು ದೇವರುಗಳಿಗೆ ಈ ಸಮುದಾಯದ ಹೆಣ್ಣುಮಕ್ಕಳನ್ನು ದೇವಿಯ ಹೆಸರಿನಲ್ಲಿ ಮುತ್ತುಕಟ್ಟುವ ಸಂಪ್ರದಾಯವನ್ನು ನಡೆಸಿಕೊಂಡು ಬಂದಿದ್ದಾರೆ. ಹಾಗಾಗಿ ಈ ಸಮುದಾಯದಲ್ಲಿ ಆಯಾ ಮನೆ ಅಥವಾ ಕುಲದೇವರುಗಳಿಗೆ ಹೆಣ್ಣುಮಕ್ಕಳನ್ನು ಬಿಟ್ಟುಕೊಂಡಿರುವ ಅನೇಕ ಕುಟುಂಬಗಳನ್ನು ಕಾಣಬಹುದು. ಪರಿಶಿಷ್ಟ ಜಾತಿಯಲ್ಲಿ ಛಲವಾದಿ ಸಮುದಾಯದ ದೇವದಾಸಿಯರ ಸಂಖ್ಯೆ ೨ನೇ ಸ್ಥಾನ ಹೊಂದಿದೆ ಎನ್ನಲಾಗುವುದು. ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಕಂಡು ಬರುವ ದೇವದಾಸಿಯರನ್ನು ಹೊಂದಿರುವ ಸಮುದಾಯಗಳಲ್ಲಿ ಮಾದಿಗರಿಗೆ ಹೋಲಿಸಿದರೆ ಇವರಲ್ಲಿ ಸ್ವಲ್ಪ ಪ್ರಮಾಣ ಕಡಿಮೆ ಇದೆ ಎಂದು ಹೇಳಲಾಗುವುದು.

ಛಲವಾದಿ ಸಮುದಾಯವು ಕೂಡ ಅಸ್ಪೃಶ್ಯ ಸಮುದಾಯವೆಂದು ಗುರುತಿಸಿಕೊಂಡಿದೆ. ಈ ಸಮುದಾಯ ಕೂಡ ಮಾದಿಗ ಸಮುದಾಯದಷ್ಟೇ ಸಾಮಾಜಿಕ ಶೋಷಣೆಗೆ ಒಳಗಾಗಿದೆ. ಹೊಲೆಯ ಮಾದಿಗರು ಒಂದೇ ಎಂಬ ಭಾವನೆಗಳು ಕೂಡ ಕಂಡು ಬರುತ್ತವೆ. ಆದರೆ ಜಾತಿ ಆಧಾರಿತವಾಗಿ ನೋಡಿದಾಗ ತಿಳಿಯುತ್ತದೆ ಸಮಾಜದಲ್ಲಿ ಅತಿಯಾದ ಅಸ್ಪೃಶ್ಯತೆಯನ್ನು ಈಗಲೂ ಅನುಭವಿಸುತ್ತಿರುವ ಸಮುದಾಯಗಳು ಇವು ಎಂದು. ಛಲವಾದಿ ಸಮುದಾಯವು ಆರ್ಥಿಕವಾಗಿ, ಶೈಕ್ಷಣಿಕವಾಗಿ ಬಹಳ ಹಿಂದುಳಿದಿರುವುದು ಕಂಡು ಬರುತ್ತದೆ. ಸಾಮಾಜಿಕವಾಗಿ ಹಿಂದುಳಿದ ಸಮುದಾಯವು ಆರ್ಥಿಕವಾಗಿ,

ಶೈಕ್ಷಣಿಕವಾಗಿ ಮುಂದುವರೆಯುವುದು ಕಷ್ಟ ಸಾಧ್ಯವಾದುದು. ಬಳ್ಳಾರಿ ಜಿಲ್ಲೆಯಲ್ಲಿ ಕಂಡು ಬರುವ ಛಲವಾದಿ ಸಮುದಾಯದವರು ತಮ್ಮ ಹೆಣ್ಣು ಮಕ್ಕಳನ್ನು ಹುಲಿಗೆಮ್ಮ, ಎಲ್ಲಮ್ಮ, ಉಚ್ಚಂಗೆಮ್ಮ, ದುರುಗಮ್ಮ ಹೆಣ್ಣುದೇವರುಗಳಿಗೆ ದೇವದಾಸಿಯರನ್ನಾಗಿ ಮಾಡಿದ್ದಾರೆ. ಇನ್ನೂ ಗಂಡು ದೇವರುಗಳೆಂದರೆ ಕನಕರಾಯ, ಮಲ್ಲಯ್ಯ ಇತರೆ ಗಂಡು ದೇವರುಗಳಿಗೆ ಬಿಟ್ಟಿರುವುದು ಕಂಡುಬರುತ್ತದೆ.

### ೩.೧.೩ ಚೆನ್ನದಾಸ ಸಮುದಾಯ

ಚೆನ್ನದಾಸ ಸಮುದಾಯವು ಮೂಲತಃ ಅಲೆಮಾರಿ ಸಮುದಾಯವಾಗಿದ್ದು, ಇವತ್ತಿಗೂ ಕೆಲವು ಪ್ರದೇಶಗಳಲ್ಲಿ ಕೆಲ ಕುಟುಂಬಗಳು ಅಲೆಮಾರಿಯಾಗಿರುವುದುಂಟು. ಚೆನ್ನದಾಸರ ಸಮುದಾಯಕ್ಕೆ ಪ್ರಾದೇಶಿಕವಾಗಿ ಬೇರೆಬೇರೆ ಉಪನಾಮಗಳಿದ್ದರೂ ಈ ಸಮುದಾಯ ಚೆನ್ನದಾಸರು ಎಂದೇ ತನ್ನ ಜಾತಿಯನ್ನು ದಾಖಲಿಸುತ್ತದೆ. ಚೆನ್ನದಾಸರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ದಂಡಿಗೆ ದಾಸರ, ಜಂಬೂ ದಾಸರ, ಚಕ್ರವಾದ್ಯ ದಾಸರ, ಹರಿದಾಸರ, ಶಂಖದಾಸರ, ಗೋಪಾಳ ಬುಟ್ಟಿದಾಸರ, ನಾಮದ ದಾಸರ, ಹೊಲೆಯ ದಾಸರ, ದಾಸರಿ, ಮಾಲದಾಸರ ಇತ್ಯಾದಿ ಹೆಸರುಗಳಿಂದ ಚೆನ್ನದಾಸರನ್ನು ಗುರುತಿಸುತ್ತಾರೆ. ಇವರನ್ನು ಪ್ರಾದೇಶಿಕ ನೆಲೆಯಲ್ಲಿ ಸ್ಥಳೀಯರು ದಾಸರ, ದಾಸರಿ ಎಂದೇ ಬಳಕೆ ಮಾಡುತ್ತಾರೆ.

'ದಾಸರಿ ಎಂದರೆ ವೈಷ್ಣವ ಭಿಕ್ಷುಕರ ವರ್ಗ. ದಾಸ ಅಥವಾ ದೇವರ ಸೇವಕ ಎಂಬುದರಿಂದ ಈ ಹೆಸರು ಬಂದಿದೆ ಎಂದಿರುವರು. ದಾಸರಿ, ದಾಸ ಎಂಬ ಪದವು ಸೇವಕ ಎಂಬ ಅರ್ಥವನ್ನು ಕೊಡುತ್ತದೆ. ಅನೇಕ ವಿದ್ವಾಂಸರು ದೇವರ ಸೇವೆಗೆ ಮೀಸಲಾದವರು ದಾಸರು ಎಂದು ಗುರುತಿಳಿಸಿದ್ದಾರೆಂದು' ದಾಸರ ಪ್ರತಿಭೆ ಎಂಬ ಸಂಶೋಧಕರು ತಿಳಿಸಿದ್ದಾರೆ.

ಒಟ್ಟಾರೆಯಾಗಿ ಚೆನ್ನದಾಸ ಎನ್ನುವ ಪದದ ಅರ್ಥವನ್ನು ನೋಡಿದಾಗ ಚೆನ್ನು ಎನ್ನುವ ವಾದ್ಯ ನುಡಿಸುವವರು ಚೆನ್ನದಾಸರು ಎನ್ನುವರು. ಮೊದಲ ದಾಸ ಸಮುದಾಯದ ಒಂದು ಪಂಗಡದವರು ಈ ಚೆನ್ನು ವಾದ್ಯವನ್ನು ಭಿಕ್ಷೆ ಬೇಡುವ ಅಥವಾ ಹನುಮಂತ ದೇವರ ಪೂಜೆಯ ಸಂದರ್ಭದಲ್ಲಿ ನುಡಿಸುತ್ತಿದ್ದರು.

ಒಂದು ಕಾಲದಲ್ಲಿ ವೈಷ್ಣವ ಧರ್ಮ ಪ್ರಚಾರಕರಾಗಿ ಊರೂರು ಅಲೆಯುತ್ತಾ ಬಂದವರು ಹಾಗೂ ಇಂದಿಗೂ ಸಹ ಧರ್ಮದ ಪ್ರಚಾರಕ್ಕಾಗಿ ತಮ್ಮ ಜೀವನವನ್ನು ಮುಡುಪಾಗಿಟ್ಟ ಚೆನ್ನದಾಸರು ಎಂತಲೂ ಕರೆಯುತ್ತಾರೆ. ಇಲ್ಲಿ ಚೆನ್ನ ಎಂಬ ಪದವನ್ನು ಚೆನ್ನಾಗಿ ಹಾಡುವ ದಾಸರು ಎಂದು ಅರ್ಥೈಸಬಹುದಾಗಿದೆ. ಈ ಸಮುದಾಯದ ಮೂಲ ಕಸುಬು ಭಿಕ್ಷೆ. ಭಿಕ್ಷೆಯಲ್ಲಿ ಎರಡು ವಿಧ ಉಂಟು. ಒಂದು ಕಲಾ ಮಾಧ್ಯಮದ ಪ್ರದರ್ಶನಗಳ ಮೂಲಕ ಬೇಡುವುದು. ಏಕತಾರಿ, ತಂಬೂರಿಗಳನ್ನು ಬಳಸಿ ತತ್ವಪದಗಳನ್ನು ಹಾಡುತ್ತಾ ದಮ್ಮಡಿ ಬಳಸಿ ಗಂಗೆ ಗೌರಿ ಪದಗಳನ್ನು ಹಾಡುತ್ತಾ ಬೇಡುವುದು. ೨ನೆಯದಾಗಿ ಬರೀ ವಾದ್ಯಗಳನ್ನು ಬಾರಿಸುತ್ತಾ ಗೋಪಾಲ ಬುಟ್ಟಿಯೊಂದಿಗೆ ಬೇಡುವುದು. ಗಂಟೆ, ಜಾಗಟೆ ಮತ್ತು ಶಂಖಗಳನ್ನು ಬಳಸುವ ಇವರು ಹಾಡು ಹೇಳುವಲ್ಲಿ ವಾದ್ಯಗಳನ್ನು ಬಾರಿ, ಶಂಖ

ಊದಿ 'ಶ್ರೀಮನ್ ವೆಂಕಟರಮಣ ಗೋವಿಂದಾ ಗೋವಿಂದ' ಎನ್ನುತ್ತಾ ಮನೆ ಮನೆಗೆ ಹೋಗುವರು. ಈ ರೀತಿಯ ಭಿಕ್ಷೆ ಬೇಡುವವರು ಪ್ರಮುಖವಾಗಿ ಗೋಪಾಲ ಬುಟ್ಟಿಯನ್ನು, ಅದನ್ನು ಒಯ್ಯುದವರು ವಿಶೇಷವಾಗಿ ಗಂಗೆ – ಗೌರಿ ಹಾಡು ಹೇಳುವ ಸ್ತ್ರೀ ಗುಂಪಿನವರು, ಜೋಳಿಗೆಯನ್ನು ತೆಗೆದುಕೊಂಡು ಧಾನ್ಯಗಳನ್ನು ಸಂಗ್ರಹಿಸುತ್ತಾರೆ.

ಚೆನ್ನದಾಸ ಸಮುದಾಯವು ಒಂದು ಕಾಲದಲ್ಲಿ ಅಲೆಮಾರಿಗಳಾದ್ದು ಇವರ ಕುಲವೃತ್ತಿ ಭಿಕ್ಷೆಯನ್ನು ಬೇಡುವುದಾಗಿತ್ತು. ಇಂದು ಕುಲವೃತ್ತಿ ಕಣ್ಮರೆಯಾಗುತ್ತಾ ಇದೆ. ಒಂದು ಕಾಲದಲ್ಲಿ ನೆಲೆ ಇಲ್ಲದ ಇವರು ಕಾಲಕ್ರಮೇಣ ನೆಲೆನಿಂತರೂ. ಇಂದು ಬದಲಾಗುವ ಸಮಾಜಕ್ಕೆ ಹೊಂದಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

ತಿರುಪತಿ ತಿಮ್ಮಪ್ಪನ ಬೆಟ್ಟ ಚೆನ್ನದಾಸರ ಸಮುದಾಯದ ಮೂಲ ಧಾರ್ಮಿಕ ಕೇಂದ್ರವಾಗಿದೆ. ಅಲ್ಲಿಗೆ ಹೋಗಲು ಆಗದವರು ತಮ್ಮ ಸುತ್ತಲಿನ ಪ್ರಸಿದ್ಧ ಹನುಮಂತ ದೇವರ ದೇವಸ್ಥಾನಗಳನ್ನು ತಮ್ಮ ಧಾರ್ಮಿಕ ಕೇಂದ್ರಗಳೆಂದು ಭಾವಿಸುತ್ತಾರೆ. ಹಾಗಾಗಿಯೇ ಈ ಸಮುದಾಯದಲ್ಲಿ ಹೆಣ್ಣು ಮಕ್ಕಳಿಗೆತಿರುಪತಿ ತಿಮ್ಮಪ್ಪನ ಹೆಸರಿನಲ್ಲಿ ಮುದ್ರೆ ಹಾಕಿಸಿ ಮನೆತನಕ್ಕೆ ಬಿಟ್ಟುಕೊಳ್ಳುತ್ತಾರೆ. ಈ ಮೂಲಕ ಚೆನ್ನದಾಸರ ಸಮುದಾಯದಲ್ಲಿಯೂ ದೇವದಾಸಿ ಪದ್ಧತಿ ಇರುವುದು ತಿಳಿದುಬರುತ್ತದೆ. ಬಳ್ಳಾರಿ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಈ ಚೆನ್ನದಾಸರ ಸಮುದಾಯದಲ್ಲಿ ದೇವದಾಸಿಯರು ಕಂಡು ಬರುತ್ತಾರೆ.

ಹಿಂದಿನ ಕಾಲದಿಂದಲೂ ತಮ್ಮ ಕುಲದೇವರಾದ ವೆಂಕಟೇಶ್ವರನ ಭಕ್ತರಾದ ಇವರು ಮನೆ ಮನೆಗೆ ಹೋಗಿ ಭಿನ್ನಹ ನೀಡಿಸಿಕೊಂಡು ಅದರಿಂದಲೇ ಜೀವನ ಸಾಗಿಸುತ್ತಾರೆ.

ಚೆನ್ನದಾಸರ ಸಮುದಾಯದಲ್ಲಿ ಹಿಂದಿನ ಕಾಲದಿಂದಲೂ ದೇವದಾಸಿ ಪದ್ಧತಿ ಇರುವುದಕ್ಕೆ ಮತ್ತು ಮಹಿಳೆಯರ ಬಗ್ಗೆ ಆಳುವ ವರ್ಗದ ಕುರಿತಾದ ಅಂಶಗಳು ಹೇಗಿದ್ದವು ಎಂಬುದಕ್ಕೆ ಬಳ್ಳಾರಿ ಜಿಲ್ಲೆಯ ಕುರುಗೋಡು ತಾಲೂಕಿನ ಗೋನಾಳ ಗ್ರಾಮದಲ್ಲಿ ಸಿಕ್ಕ ತಾಮ್ರಪಟದಿಂದ ಕೆಲವೊಂದು ಮಾಹಿತಿಯನ್ನು ತಿಳಿಯಲಾಯಿತು(ಮೂಲ ಮಾಹಿತಿ: ದಾಸರ ಪ್ರತಿಭ). ಈ ತಾಮ್ರಪಟದ ಸಾಲುಗಳು ಭಾರತದ ಹರಿದಾಸರಿಗೆ ಎಚ್ಚರಿಗೆ ಎಂಬ ಹೆಸರಿನಿಂದ ಪ್ರಾರಂಭವಾಗಿದೆ ಹಾಗೂ ದಾಸರ ಕುಲಲಾಂಛನಗಳಾದ ಶಂಕ, ಚಕ್ರ, ಹರಿನಾಮಗಳ ಚಿತ್ರಗಳನ್ನು ಉಲ್ಲೇಖಿಸಿದ್ದಾರೆ. ಈ ತಾಮ್ರಪಟವು ಮಹಿಳೆಯರನ್ನು ಕುರಿತು ಹೇಳುತ್ತಿದ್ದು, ಪ್ರಾಚೀನ ಕಾಲದಲ್ಲಿ ಮಹಿಳೆಯರನ್ನು ಮೇಲ್ವರ್ಗ ಅಥವಾ ಆಳುವ ವರ್ಗ ಶೋಷಣೆಗೆ ಒಳಪಡಿಸಿತ್ತು ಎಂಬುದನ್ನು ತಿಳಿಸುತ್ತದೆ. ಈ ತಾಮ್ರಪಟದ ಮೂಲಪ್ರತಿಯು ಸಿಗಲಿಲ್ಲವಾದ್ದರಿಂದ ಜೆರಾಕ್ಸ್ ಪ್ರತಿಯ ತಾಮ್ರಪಟವನ್ನು ವಿಶ್ಲೇಷಿಸಲಾಗಿದೆ.

ಹರಿದಾಸರು ಹೇಗೆ ಬದುಕಬೇಕು, ಯಾವ ನಿಯಮಗಳನ್ನು ಪಾಲಿಸಬೇಕು ಎಂಬುದನ್ನು ಮೇಲ್ವರ್ಗದವರು ಎಚ್ಚರಿಕೆ ನೀಡಿದ್ದಾರೆ. ಇದು ಪ್ರಾಚೀನ ಕಾಲದ ಹರಿದ್ವಾರದಿಂದ ಬಂದ ತಾಮ್ರಪಟವಾಗಿದೆ ಎಂಬುದು ಗೊತ್ತಾಗುತ್ತದೆ.

**ತಾಮ್ರಪಟದಲ್ಲಿ ಸೂಚಿಸಿದ ಅಂಶಗಳು**

೧. ಕೆಟ್ಟ ವರ್ತನೆಯ ಹೆಂಗಸರನ್ನು(ವೇಶ್ಯೆ) ದೂರ ಮಾಡುವುದು.

೨. ಸದ್‌ವರ್ತನೆಯುಳ್ಳ ಸಂಸಾರಕ್ಕೆ ಹತ್ತಿರ ಮಾಡಿಕೊಳ್ಳುವುದು.

೩. ಪ್ರಾಪ್ತ ವಯಸ್ಕಳಾದ ದಾಸ ಜಾತಿಯ ಸೂಳೆಯು ತನ್ನದೇ ಜಾತಿಯ ಪುರುಷನೊಬ್ಬನಿಗೆ ಮಾತ್ರ ಜೀವನ ಪೂರ್ತಿ ಜೊತೆಗಿರುವುದು.

೪. ಸಂಸಾರಸ್ಥೆ ಹೆಂಗಸರಿಗೆ ಇರುವ ನಿಯಮ ಸಾದಾಚಾರ, ಪರಜಾತಿಯ ಪುರುಷರೊಂದಿಗೆ ಕೂಡ ಜೀವಿಸುವ ವೇಶ್ಯೆಗೆ ಇರುವ ನಿಯಮ ಈ ಕೆಳಗಿನಂತಿದೆ.

೫. ಸಂಸಾರಸ್ಥೆ ಹೆಂಗಸರಲ್ಲಿ ಹುಟ್ಟಿದ ಸಂತಾನ ಮಾಣಿಕ್ಯದಂತೆ ಪ್ರಜ್ವಲಿಸುತ್ತದೆ. ದುರಾಚಾರದ ಹೆಂಗಸರಲ್ಲಿ ಹುಟ್ಟಿದ ಸಂತಾನ ಮಸಿ ಬಳಿದ ಮೇಲಿನ ಪಾತ್ರೆಯಂತೆ(ನಾಯಿ ಮೂಸಿದ ಮಡಿಕೆ) ಅದಕ್ಕಾಗಿ ಹರಿದಾಸರುಗಳಿಗೆ

೬. ಸಂಸಾರಸ್ಥರಲ್ಲಿ ಹುಟ್ಟಿದ ಪುತ್ರ, ಸಂಸಾರ ಪುತ್ರ ಸದಾಚಾರಿಣಿಪುತ್ರ. ಈತನಿಗೆ ಸದಾಚಾರಣೆ ಕುಟುಂಬದಲ್ಲಿ ವಿವಾಹ ಮಾಡತಕ್ಕದ್ದು.

೭. ವೇಶ್ಯೆಯ ಮಗಳನ್ನು ಸಂಸಾರಸ್ಥ ಕುಟುಂಬಗಳ ಗಂಡು ಮಕ್ಕಳು ವಿವಾಹವಾಗುವಂತಿಲ್ಲ.

೮. ವೇಶ್ಯೆಯೊಬ್ಬಳ ಮಗಳು ಮತ್ತೊಬ್ಬ ವೇಶ್ಯೆ ಮಗನನ್ನೇ ವಿವಾಹವಾಗತಕ್ಕದ್ದು.

೯. ವಂಶದ ಕಾರಣದಿಂದಾಗಿ ವೇಶ್ಯೆಯರನ್ನು ಬಿಡುವಂತಿಲ್ಲ. ಒಂದು ವೇಳೆ ವೇಶ್ಯೆಯ ಮಗಳನ್ನು ಸದಾಚಾರ ಕುಟುಂಬದ ಗಂಡು ಮಕ್ಕಳು ವಿವಾಹವಾದರೆ ಜಾತಿಯಿಂದಲೇ ಬಹಿಷ್ಕಾರ ಹಾಕತಕ್ಕದ್ದು ಎಚ್ಚರಿಕಾ... ಎಚ್ಚರಿಕಾ...

೧೦. ಬ್ರಾಹ್ಮಣರು, ವಡ್ಡರು, ಮುಸ್ಲಿಂರು, ಮಾಲಾ, ಮಾದಿಗರು ಹರಿದಾಸರಿಗೆ ಗಂಡು ಮಾಡಿಕೊಳ್ಳಬಹುದು(ಹರಿದಾಸರೊಂದಿಗೆ ವೈವಾಹಿಕ ಸಂಬಂಧ ಮಾಡಿಕೊಳ್ಳಬಹುದು) *(ಮಾಹಿತಿ: ದಾಸರ ಪ್ರತಿಭಾ, ದಿ: ೨೭.೫.೨೦೧೮).*

ಈ ಮೇಲಿ ತಾಮ್ರಪಟವು ಜಾತಿಕಟ್ಟಳೆಗಳನ್ನು ವಿಧಿಸುವಂತಹ ಪತ್ರವಾಗಿದೆ. ಈ ತಾಮ್ರಪಟದಲ್ಲಿ ಹರಿದಾಸರಾದವರು ಕೆಟ್ಟ ವರ್ತನೆಯ ಹೆಂಗಸರಿಂದ ದೂರವಿರಬೇಕು ಮತ್ತು ಉತ್ತಮ ಸಂಸಾರವುಳ್ಳ ವ್ಯಕ್ತಿಯಾಗಿ ಜೀವಿಸಬೇಕು. ವೇಶ್ಯೆರಾದವರು ಅವರ ಜಾತಿಯ ಪುರುಷನೊಂದಿಗೆ ಜೀವನ ಸಾಗಿಸಬೇಕು ಮತ್ತು ಉತ್ತಮ ಸಂಸಾರದ ಗರತಿಯು ಸದಾಚಾರದಿಂದ ಇರುವಳು. ಇವಳ ಹೊಟ್ಟೆಯಲ್ಲಿ ಹುಟ್ಟುವ ಮಗುವು ಸಹ ಮಾಣಿಕ್ಯದಂತೆ ಪ್ರಜ್ವಲಿಸುತ್ತದೆ. ಆದರೆ ವೇಶ್ಯೆಯರ ಹೊಟ್ಟೆಯಲ್ಲಿ ಹುಟ್ಟಿದ ಮಗುವು ಮಸಿ ಬಳಿದ ಮೇಲಿನ ಪಾತ್ರೆಯಂತೆ ಇರುತ್ತದೆಂದು ಈ ತಾಮ್ರಪಟದಲ್ಲಿ ತಿಳಿಸಿದ್ದಾರೆ.

ಹರಿದಾಸರ ಪುರುಷ ಮಹಿಳೆಯರು ಹೀಗೆ ಬದುಕಬೇಕೆಂಬ ಕಟ್ಟುಪಾಡುಗಳನ್ನು ವಿಧಿಸಿದಂತೆ ಈ ತಾಮ್ರಪಟದಲ್ಲಿ ಕಾಣುತ್ತೇವೆ. ಸಂಸಾರಸ್ಥರಲ್ಲಿ ಹುಟ್ಟಿದ ಮಗ ಸದಾಚಾರಿಣಿ ಪುತ್ರನಾಗಿದ್ದು,

ಈತನಿಗೆ ಸದಾಚಾರಣೆ ಕುಟುಂಬದಲ್ಲಿ ವಿವಾಹ ಮಾಡತಕ್ಕದ್ದು. ಅಲ್ಲದೇ ವೇಶ್ಯೆಯ ಮಗನಿಗೆ ಸಂಸಾರಸ್ಥ ಕುಟುಂಬಗಳ ಗಂಡು ಮಕ್ಕಳು ವಿವಾಹವಾಗಬಾರದು ಎಂದು ತಿಳಿಸುತ್ತಾರೆ. ಅಂದರೆ ವೇಶ್ಯೆಯರು ವೇಶ್ಯೆಯರಾಗಿ ತಮ್ಮ ಜೀವನ ಸಾಗಿಸಬೇಕು ಎನ್ನುವ ಕಲ್ಪನೆ ಅವರಲ್ಲಿದೆ. ಹಾಗಾದರೆ ಯಾರಿಗೆ ಇವರು ವೇಶ್ಯೆಯರಾಗುತ್ತಾರೆ ಎನ್ನುವ ಪ್ರಶ್ನೆ ತೆಗೆದಾಗ ಮೇಲ್ವರ್ಗದವರಿಗೆ ವೇಶ್ಯೆಯರಾಗಿ ಬಾಳಬೇಕಾಗುತ್ತದೆ. ವೇಶ್ಯೆಯರು ಸಂಚಾರದ ಕುಟುಂಬದ ಗಂಡುಮಕ್ಕಳು ವೇಶ್ಯೆಯರ ಮಹಿಳೆಯರನ್ನು ಮದುವೆಯಾಗುವಂತಿಲ್ಲ. ಒಂದು ವೇಳೆ ಮದುವೆಯಾಗಿದ್ದರೆ ಅವರನ್ನು ಜಾತಿಯಿಂದಲೇ ಬಹಿಷ್ಕಾರ ಮಾಡಬೇಕೆಂದು ತಾಮ್ರಪಟದಲ್ಲಿ ಎಚ್ಚರಿಕೆ ನೀಡಲಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ಹೊಸದಾಗಿ ದೇವದಾಸಿಯರನ್ನು ಬಿಡುವುದಿಲ್ಲ. ಇತ್ತೀಚಿನ ದಿನಗಳಲ್ಲಿ ಈ ಪದ್ಧತಿ ಕಣ್ಮರೆಯಾಗುತ್ತಿದೆ. ಹಳೆ ತಲೆಮಾರಿನ ಹಿರಿಯ ದೇವದಾಸಿಯರನ್ನು ಮಾತ್ರ ನೋಡಬಹುದು. ಅಂದರೆ ಸಮುದಾಯ ಎಚ್ಚೆತ್ತುಕೊಂಡಿದೆ ಎಂದು ಹೇಳಬಹುದು. ಈ ಸಮುದಾಯದ ದೇವದಾಸಿ ಮಹಿಳೆಯರು ಉನ್ನತ ಮತ್ತು ತಮ್ಮ ಕುಲದವರೊಂದಿಗೆ  ಮಾತ್ರ ಸಂಬಂಧ ಹೊಂದಿರುವುದು ಕ್ಷೇತ್ರಕಾರ್ಯದಲ್ಲಿ ತಿಳಿದು ಬಂದಿದೆ.

**೪.೧.೪ ಡೊಂಬರ ಸಮುದಾಯ**

ಡೊಂಬರು ಎಂಬ ಅಲೆಮಾರಿ ಸಮುದಾಯವು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಕಂಡು ಬರುವ ಸಮುದಾಯವಾಗಿದೆ. ಡೊಂಬರೆಂದರೆ ಡೊಂಬರಾಟ ಆಡುವವರು. ಬೀದಿ ಬೀದಿಯಲ್ಲಿ ಚಿಕ್ಕ ಮೈದಾನಗಳಲ್ಲಿ ತಮ್ಮದೇ ಆದ ರೀತಿಯಲ್ಲಿ ತಾತ್ಕಾಲಿಕ ರಂಗವನ್ನು ಸಿದ್ಧಪಡಿಸಿಕೊಂಡು ತಮ್ಮ ಕಲೆಯನ್ನು ಪ್ರದರ್ಶನ ಮಾಡುವವರಾಗಿದ್ದಾರೆ. ಒಂದೂರಿಂದ ಇನ್ನೊಂದು ಊರಿಗೆ ತಿರುಗುತ್ತಾ ತಮ್ಮ ಕಲೆಯನ್ನು ಪ್ರದರ್ಶನ ಮಾಡುವ ಮೂಲಕ ಜೀವನ ನಡೆಸುತ್ತಿರುತ್ತಾರೆ.ಇವರು ಭಾರತದ ಶ್ರೇಣೀಕರಣದಲ್ಲಿ ಕೆಳಜಾತಿಯವರೆಂದು ಪರಿಗಣಿಸಲ್ಪಟ್ಟಿದ್ದಾರೆ. ಕೆಳಸಮುದಾಯದ ಡೊಂಬರು ಊರಿನಿಂದ ಊರಿಗೆ ಅಲೆಯುತ್ತಾ ತಮ್ಮ ಅಂಗಸಾಧನೆ, ನೃತ್ಯ, ಸಂಗೀತ ಮುಂತಾದ ಕಲೆಗಳನ್ನು ಮೊದಲಿನಿಂದ ಮೈಗೂಡಿಸಿಕೊಂಡು ಪ್ರದರ್ಶನ ನೀಡುತ್ತಾ ಬಂದವರು. "ಡೊಂಬರು ಅಲೆಮಾರಿಗಳಾಗಿದ್ದು ಡೊಂಬರಾಟವನ್ನು ನಂಬಿ ಬದುಕುವ ಸಮೂಹವಾಗಿದೆ. ಇವರನ್ನು ಡೊಮ್ಮರ, ಡೊಂಬರಿ, ದೊಮ್ರಿ, ರೆಡ್ಡಿ, ಡೊಂಬರ ಎಂದು ಕರೆಯಲಾಗುತ್ತದೆ"(ಜ್ಯೋತಿ ಡಿ.ಬಿ: ೨೦೦೮:೧೪). ಡೊಂಬರಾಟವೇ ಇವರ ಪ್ರಮುಖ ಕಲೆಯಾಗಿ ಪ್ರದರ್ಶನ ವೃತ್ತಿಯೂ ಆಗಿದೆ ತಂತಿ ಮೇಲೆ ನಡೆಯುವುದು, ವಿವಿಧ ಕಸರತ್ತುಗಳನ್ನು ಪ್ರದರ್ಶಿಸುವುದು, ಮೋಡಿ ಮಾಡುವುದು ಇದರ ಜೊತೆಗೆ ಎತ್ತಿನ ಕೊಂಬು ಕೆತ್ತುವುದು, ಮರದಿಂದ ಬಾಚಣಿಕೆಗಳನ್ನು ತಯಾರಿಸುವುದು, ಗೊಂಬೆಗಳನ್ನು ತಯಾರಿಸುವ ಕೆಲಸಗಳನ್ನು ಮಾಡುವವರಾಗಿದ್ದಾರೆ. ಡೊಂಬರಲ್ಲಿ ಮೂಲತಃ ಮಾತೃಪ್ರಧಾನತೆಯ ವಿಶಿಷ್ಟ ಗುಣವಿರುವುದರಿಂದ ಮಾತೃ ಆರಾಧನೆ ಹೆಚ್ಚು ಕಂಡು ಬರುತ್ತದೆ. ಅಲ್ಲದೆ ಸಮುದಾಯದೊಳಗೆ ಹೆಣ್ಣಿಗೆ ವಿಶೇಷ ಗೌರವ ನೀಡಲಾಗುತ್ತದೆ. ಇಂದಿಗೂ ಇವರಲ್ಲಿ ಪೂಜಿಸುವ ದೇವರುಗಳೆಂದರೆ ಸವದತ್ತಿ ಎಲ್ಲಮ್ಮ, ಹುಲಿಗೆಮ್ಮ, ಸುಂಕಲಮ್ಮ, ದುರ್ಗಮ್ಮ ಮತ್ತು ಗುತ್ತೆಮ್ಮ ಇತರೆ ದೈವಗಳನ್ನು

ಆರಾಧಿಸಿಕೊಂಡು ಬಂದಿದ್ದಾರೆ. "ವೈಷ್ಣವ ಪಂಥದ ರಾಜಮನೆತನಗಳು ವೈಷ್ಣವ ಧರ್ಮ ಪ್ರಚಾರಕ್ಕಾಗಿ ಡೊಂಬರ ಕಲಾವಿದರನ್ನು ಬಳಸಿಕೊಂಡಿದ್ದಾರೆ. ಹಾಗಾಗಿ ಇವರು ಹನುಮಂತ, ವೆಂಕಟೇಶ್ವರ, ಕನಕರಾಯ, ನರಸಿಂಹನನ್ನು ಪೂಜಿಸುವುದುಂಟು ಕುಟುಂಬದಲ್ಲಿರುವ ಮಕ್ಕಳಲ್ಲಿ ಒಬ್ಬ ಮಗನನ್ನು ದಾಸಪ್ಪನನ್ನಾಗಿ ನೇಮಕ ಮಾಡುತ್ತಾರೆ ಅಥವಾ ಒಬ್ಬ ಮಗಳನ್ನು ಬಸವಿಗೆ ಬೀಡುವುದಾಗಿ" *(ಜ್ಯೋತಿ ಡಿ.ಬಿ:೨೦೦೮:೧೧೩).* ಕ್ಷೇತ್ರಕಾರ್ಯದ ಮಾಹಿತಿಯನ್ನು ತಿಳಿಸಿದ್ದಾರೆ.

"ಯಾವುದೇ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಬಲ ಕೋಮಿಸಿದವರು ತಮ್ಮ ಧಾರ್ಮಿಕತೆ ಬಗ್ಗೆ ಬಂಡವಾಳಶಾಹಿ ವರ್ಗವು ಧಾರ್ಮಿಕತೆಯನ್ನು ತಮ್ಮ ಬಂಡವಾಳ ಮಾಡಿಕೊಂಡು ಪ್ರತಿಷ್ಠೆಯ ಮೂಲಕ ಸಮಾಜದಲ್ಲಿ ಅತ್ಯುನ್ನತ ಸ್ಥಾನ ಪಡೆದುಕೊಂಡಿರುವುದು ಸಾಮಾನ್ಯ ವಿಷಯವಾಗಿವೆ. ಪುರೋಹಿತ ವರ್ಗವು ಅವರ ಮುನ್ನಡೆಗೆ ಬೇಕಾದ ಪರಿಸರ ರೂಪಿಸಿಕೊಂಡು ಉಳಿದವರನ್ನೆಲ್ಲಾ ಹಿಂಬಾಲಕರನ್ನಾಗಿ ಮಾಡಿಕೊಂಡಿರುವುದನ್ನು ಇತಿಹಾಸ ತಿಳಿಸುತ್ತದೆ"(ಜ್ಯೋತಿ ಡಿ.ಬಿ:೨೦೦೮: ೮). ಧಾರ್ಮಿಕತೆಯಲ್ಲಿ ದೇವರು ದೇವತೆಗಳು ಸಾಮಾಜಿಕ ಜೀವನದಲ್ಲಿ ರೂಪಿಸುವ ಹಾಗೂ ಏನಾದರೂ ಸಮಸ್ಯೆಗಳು ಉದ್ಭವಿಸಿದಾಗ ಅದರ ಬಗ್ಗೆ ಪರಿಹಾರಗಳನ್ನು ಸಮುದಾಯದ ಧಾರ್ಮಿಕತೆಯು ಸೂಚಿಸುತ್ತದೆ. ಪುರೋಹಿತ ವರ್ಗದವರಿಂದ ಕಟ್ಟುಕಥೆ, ದಂತಕಥೆಗಳು ಸೃಷ್ಟಿ ಪುರಾಣ ಸಂಹಿತೆಗಳು ಪ್ರಚಾರಗೊಂಡು ಕೆಲವು ಸಂಸ್ಕೃತಿಗಳನ್ನು ಪೀಳಿಗೆಯಿಂದ ಪೀಳಿಗೆಗೆ ವರ್ಗಾಹಿಸುತ್ತಾ ಬಂದಿದ್ದಾರೆ. ಇದನ್ನು ತಳಸಮುದಾಯದವರು ಕಡ್ಡಾಯವಾಗಿ ಪಾಲಿಸುವಂತೆ ಮಾಡಿದ್ದಾರೆ. ಅಲ್ಲದೆ ಧಾರ್ಮಿಕತೆಯ ಕಾರ್ಯ ಮತ್ತು ಪಾಲನೆಗೆ ಪೂಜಾರಿಯ ಮೂಲಕ ನಡೆಯುತ್ತಿತ್ತು. ಕೆಲವು ಪುರೋಹಿತರು ಅಥವಾ ಪೂಜಾರಿ ತಮ್ಮ ಮೈಮೇಲೆ ದೇವರು ಬಂದಂತೆ ನಟಿಸಿ ಕೆಳಜಾತಿಯ ಮಹಿಳೆಯರನ್ನು ದೇವದಾಸಿಯರಾಗುವಂತೆ ಪ್ರೇರೇಪಣೆ ನೀಡುತ್ತಾರೆ. ಆದರೆ ತಳಸಮುದಾಯದ ಈ ಮುಗ್ಧ ಜನರು ಪೂಜಾರಿಯ ನಟನೆಯನ್ನು ಅರಿಯದೆ ಅದನ್ನು ವಿರೋಧಿಸದೆ ದೇವರು – ಧರ್ಮವೆಂಬ ನಂಬಿಕೆಯಲ್ಲಿ ತಮ್ಮ ಸಮುದಾಯದ ಹೆಣ್ಣು ಮಕ್ಕಳನ್ನು ದೇವದಾಸಿ ಪದ್ಧತಿಗೆ ಒಳಪಡಿಸುತ್ತಾರೆ.

"ಡೊಂಬರ ಸಮುದಾಯದಲ್ಲಿ ದೇವದಾಸಿ ಪದ್ಧತಿ ಇರುವುದು ಕಂಡುಬರುತ್ತದೆ *(ಜ್ಯೋತಿ ಡಿ.ಬಿ:೨೦೦೮:೧೨೬).* ಈ ಸಮುದಾಯದವರು ಎಲ್ಲಮ್ಮ, ಹುಲಿಗೆಮ್ಮ, ಚಂದ್ರಗುತ್ತಿ ಎಲ್ಲಮ್ಮ ಮುಂತಾದ ದೇವರುಗಳಿಗೆ ಮುತ್ತು ಕಟ್ಟುವ ಮೂಲಕ ದೇವರಿಗೆ ಹೆಣ್ಣುಮಕ್ಕಳನ್ನು ಬೀಡುತ್ತಾರೆ. ಹಾಗೆಯೇ ಗಂಡು ದೇವರಾದ ಹನುಮಂತರಾಯನ ಮುದ್ರೆ ಹಾಕಿಸುವ ಮೂಲಕ ದೇವರಿಗೆ ಮೀಸಲು ಬಿಡುವುದುಂಟು. ಡಾ. ಜ್ಯೋತಿ ಡಿ.ಬಿ.ಯವರ ಅಧ್ಯಯನದ ಪ್ರಕಾರ ಬಳ್ಳಾರಿಯಲ್ಲಿ ಡೊಂಬರ ಸಮುದಾಯದಲ್ಲಿ ಒಂಬತ್ತು(೯) ಜನ ದೇವದಾಸಿಯರು ಇರುವರು ಎಂದು ತಿಳಿಯಲಾಗಿದೆ. "ಡೊಂಬರಲ್ಲಿ ಬಸವಿ ಬಿಟ್ಟ ಮಹಿಳೆಯನ್ನು ಅವರ ಮಾತಿನಲ್ಲಿ 'ಕುಲಮ್ ಬಿಟ್ಟ' ಅಥವಾ ಕುಲದ ಮಗಳು ಎಂದು ಪರಿಭಾವಿಸಲಾಗುತ್ತದೆ. ಇನ್ನೊಂದು ಅರ್ಥದಲ್ಲಿ 'ಮನೆಯಲ್ಲಿ ಬಿಟ್ಟವಳು' ಎಂದು ಸಹ ಕರೆಯುತ್ತಾರೆ." *(ಜ್ಯೋತಿ ಡಿ.ಬಿ: ೨೦೦೮:೧೩೪).* ಹೀಗೆ ಮುದ್ರೆ ಹಾಕುವ ಮೂಲಕ ಮುತ್ತುಕಟ್ಟುವ

ಮೂಲಕ ಬಸವಿಯನ್ನು ಮನೆಯಲ್ಲಿ ಬಿಟ್ಟುಕೊಂಡು ಆ ಕುಟುಂಬದ ವಂಶವನ್ನು ಬೆಳೆಸುವ ಜವಾಬ್ದಾರಿಯೊಂದಿಗೆ ಇಡೀ ಕುಟುಂಬದ ಪೋಷಣೆಯ ಹೊಣೆಯನ್ನು ಹೊರಿಸುತ್ತಾರೆ.

ಡೊಂಬರ ಸಮುದಾಯದಲ್ಲಿ ಈ ಪದ್ಧತಿಯು ಬರಲು ಕಾರಣವಾದ ಆ ಸಮುದಾಯಗಳ ಐತಿಹ್ಯಗಳನ್ನೊಮ್ಮೆ ಗಮನಿಸಿದಾಗ "ಒಬ್ಬ ರೆಡ್ಡಿ ಬಹುಪತ್ನಿಯರನ್ನು ಹೊಂದಿದ್ದು, ಕಿರಿಯ ಪತ್ನಿಯ ಮೇಲೆ ತುಂಬ ಪ್ರೀತಿ, ಇವಳೇ ಹೊಲದಲ್ಲಿರುತ್ತಿದ್ದ ರೆಡ್ಡಿಗೆ ಊಟ ತೆಗೆದುಕೊಂಡು ಹೋಗಬೇಕು. ಒಂದು ದಿನ ಮಧ್ಯಾಹ್ನ ಊಟವನ್ನು ಕೊಡಲು ಹೊಲಕ್ಕೆ ಹೋಗುತ್ತಾಳೆ. ತುಂಬು ಗರ್ಭಿಣಿಯಾದ ಪ್ರಯುಕ್ತ ಹೊಲದಲ್ಲಿಯೇ ಹೆಣ್ಣು ಮಗುವನ್ನು ಹೆತ್ತಳು. ಅಲ್ಲಿಯೇ ಗುಡಿಸಲು ಹಾಕಿ ತಾಯಿ ಮಗುವನ್ನು ನೋಡಿಕೊಳ್ಳಲಾಯಿತು. ಕೆಲವು ದಿನಗಳು ಕಳೆದ ನಂತರ ಮನೆಗೆ ಬರುತ್ತಾಳೆ. ಹಿರಿಯ ಹೆಂಡತಿ ಸವತಿ ಮತ್ಸರದಿಂದ ತಾಯಿ ಮಗುವನ್ನು ಮನೆಗೆ ಸೇರಿಸಲು ಒಪ್ಪುವುದಿಲ್ಲ. ರೆಡ್ಡಿ ಕಿರಿಯ ಹೆಂಡತಿಯನ್ನು ಬೇರೆ ಮನೆಯನ್ನು ಮಾಡಿ ಇರಿಸುತ್ತಾನೆ. ಒಂದಿಷ್ಟು ಕೊಳ, ಹಗ್ಗ, ಡಂಬು ಇವುಗಳನ್ನು ಮಾತ್ರ ಕೊಟ್ಟು ಬಿಡುತ್ತಾನೆ. ಹಿರಿಯ ಹೆಂಡತಿಗೆ ತನ್ನ ಆಸ್ತಿಯನ್ನೆಲ್ಲವನ್ನು ನೀಡುತ್ತಾನೆ. ಕಿರಿಯ ಹೆಂಡತಿ ಅಸಹಾಯಕಳಾಗಿ ರೆಡ್ಡಿಯು ನೀಡಿದ ಪರಿಕರಗಳನ್ನು ಉಪಯೋಗಿಸಿಕೊಂಡು ಅನೇಕ ವಿಧದ ಕಸರತ್ತುಗಳನ್ನು ಕಲಿಯುತ್ತಾಳೆ. ಈ ಕಸರತ್ತುಗಳನ್ನು ಪ್ರದರ್ಶಿಸಿಯೇ ಹೊಟ್ಟೆ ತುಂಬಿಸಿಕೊಳ್ಳುತ್ತಾಳೆ. ತಾಯಿ ಮಗಳು ತಂತಿಯ ಮೇಲೆ ನಡೆಯುವ ಮತ್ತು ವಿವಿಧ ಕಸರತ್ತುಗಳನ್ನು ಪ್ರದರ್ಶಿಸಿ ಹೊಟ್ಟೆ ತುಂಬಿಸಿಕೊಳ್ಳುವ ಈ ಹುಡುಗಿಯನ್ನು ವಿವಾಹವಾಗಲು ಯಾರು ಮುಂದೆ ಬರುವುದಿಲ್ಲ. ಇವಳು ಮುಂದೆ ಡೊಂಬರ ಚೆನ್ನದಾಸಿ ಎಂದು ವೇಶ್ಯೆಯೆಂದು ಪರಿಗಣಿಸಲ್ಪಡುತ್ತಾಳೆ. ಈ ಒಂದು ಹಿನ್ನೆಲೆಯು ಡೊಂಬರ ಸಮುದಾಯದಲ್ಲಿ ವೇಶ್ಯಾ ಪದ್ಧತಿ ರೂಢಿಯಲ್ಲಿತ್ತು ಎಂಬುದಕ್ಕೆ ಕಾರಣವಿರಬಹುದು *(ಜ್ಯೋತಿ ಡಿ.ಬಿ:೨೦೦೮:೨).*

ಈ ಹಿನ್ನೆಲೆಯಲ್ಲಿ ಡೊಂಬರ ಸಮುದಾಯದಲ್ಲಿ ದೇವದಾಸಿ ಪದ್ಧತಿ ಹುಟ್ಟಿಕೊಂಡಿದೆ ಎನ್ನುವುದಕ್ಕಿಂತ ಮಾತೃದೇವತಾ ಆರಾಧನೆ ಮತ್ತು ಧಾರ್ಮಿಕ ನಂಬಿಕೆಯ ಆಚರಣೆಯಲ್ಲಿ ಹಾಗೂ ಹರಿಕೆಯ ರೂಪದಲ್ಲಿ ಈ ಸಮುದಾಯದಲ್ಲಿ ದೇವದಾಸಿ ಪದ್ಧತಿಯನ್ನು ಕಾಣಲಾಗುವುದು ಎಂದು ಹೇಳಬಹುದು.

ಡೊಂಬರ ಸಮುದಾಯದ ದೇವದಾಸಿ ಮಹಿಳೆಯರು ಹೆಚ್ಚಾಗಿ ಮೇಲ್ವರ್ಗದವರ ಜೊತೆಯಲ್ಲಿ ಸಂಬಂಧ ಹೊಂದಲು ಇಷ್ಟಪಡುತ್ತಾರೆ. ಮೇಲಿನ ಐತಿಹ್ಯ ಗಮನಿಸಿದಾಗ ಇಲ್ಲಿ ರೆಡ್ಡಿಯವರು ಮೇಲ್ವರ್ಗದವರಾಗಿದ್ದಾರೆ. ಹಾಗಾಗಿ ಇವರು ಕೂಡ ಮೇಲ್ವರ್ಗದ ಸಂಬಂಧವನ್ನು ಬಯಸಬಹುದೆಂದು ಊಹಿಸಬಹುದು. ಅಲ್ಲದೆಮೇಲ್ಜಾತಿಯ ಪುರುಷನ ಜೊತೆ ಸಂಬಂಧ ಹೊಂದಿದ್ದರೆ ಸಮಾಜದಲ್ಲಿ ಹೆಚ್ಚಿನ ಗೌರವವಿರುತ್ತವೆ ಎಂಬ ಭಾವನೆಯು ಇರುವುದುಂಟು. ಕೆಳಜಾತಿಯವರೊಂದಿಗೆ ಸಂಬಂಧ ಹೊಂದಿದ್ದರೆ ಸಮಾಜ ನಮ್ಮನ್ನು ಕೀಳಾಗಿ ಕಾಣುತ್ತದೆ ಎಂಬ ಮನೋಭಾವನೆಯಿಂದ ಇವರು ಮೇಲ್ವರ್ಗದವರ ಸಂಬಂಧ ಹೊಂದಲು ಬಯಸುತ್ತಾರೆ.

### ೪.೧.೫ ಭೋವಿ ಸಮುದಾಯ

ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಕಂಡು ಬರುವ ಸಮುದಾಯಗಳಲ್ಲಿ ಭೋವಿ ಸಮುದಾಯವು ಒಂದಾಗಿದೆ. ಈ ಸಮುದಾಯವನ್ನು ವಡ್ಡರು ಅಥವಾ ಭೋವಿಗಳು ಎಂದು ಕರೆಯುತ್ತಾರೆ. ಭೋವಿ ಸಮುದಾಯದವರನ್ನು ಅವರ ವೃತ್ತಿಯ ಆಧಾರದ ಮೇಲೆ ಮಣ್ಣು ವಡ್ಡರು, ಕಲ್ಲುವಡ್ಡರು, ಬಂಡೆಯ ವಡ್ಡರು ಎಂದು ಕರೆಯುತ್ತಾರೆ. ಇವರು ಒರಿಸ್ಸಾದ ಮೂಲದವರಾಗಿದ್ದು, ಆಂಧ್ರಪ್ರದೇಶದ ಮೂಲಕ ಕರ್ನಾಟಕದಲ್ಲಿ ಬಂದು ನೆಲೆಸಿದ್ದಾರೆಂದು ಅಧ್ಯಯನಕಾರರು ತಿಳಿಸಿದ್ದಾರೆ. ಜೀವನ ನಡೆಸಲು ವೃತ್ತಿಯನ್ನು ಆಧರಿಸಿಕೊಂಡು ವಲಸೆ ಬಂದಿದ್ದಾರೆ. ಭೋವಿ ಸಮುದಾಯದವರ ಮಾತೃಭಾಷೆ ತೆಲಗು. ಇವರು ಅನೇಕ ಸಮುದಾಯದೊಂದಿಗೆ ಬೆರೆಯುವುದರಿಂದ ಕನ್ನಡ, ಹಿಂದಿ, ಮರಾಠಿ ಭಾಷೆಗಳನ್ನು ಮಾತನಾಡುತ್ತಾರೆ. ಈ ಸಮುದಾಯದ ಜನರು ಈಗಲೂ ಕೂಡ ಶ್ರಮಜೀವಿಗಳಾಗಿದ್ದಾರೆ. ಬಿಸಿಲಿನಲ್ಲಿ ಬಂಡೆಗಳನ್ನು ಎಬ್ಬಿಸುತ್ತಾ ಬೃಹತ್ತಾದ ಕಲ್ಲುಗಳನ್ನು ಕೀಳುತ್ತಾ ಕೋರೆಗಳಲ್ಲಿ ಕೆಲಸ ನಿರ್ವಹಿಸುತ್ತಾ ಬಿಂಚೆ ಕುಟ್ಟುತ್ತಾ ಜೀವನ ನಡೆಸುತ್ತಿದ್ದಾರೆ. ಜೀವನ ನಿರ್ವಹಣೆಗಾಗಿ ಎಷ್ಟೇ ಕಷ್ಟಕರವಾದ ಕೆಲಸಗಳನ್ನು ಮಾಡಿದರೂ ಶ್ರಮಕ್ಕೆ ತಕ್ಕ ಪ್ರತಿಫಲವಿಲ್ಲದೆ ಸಮಾಜದಲ್ಲಿ ಹಲವಾರು ಸಮುದಾಯಗಳ ತುಳಿತಕ್ಕೆ ಒಳಗಾಗಿರುತ್ತಾರೆ. ಇಂತಹ ನೋವುಗಳನ್ನು ಶ್ರಮದ ಧಣಿಯನ್ನು ಮರೆಯಲು ಕುಡಿತದ ಬಲೆಗೆ ಬಿದ್ದು, ದುಡಿದು ಗಳಿಸಿದ ಹಣದಲ್ಲಿ ಅರ್ಧ ಭಾಗದಷ್ಟು ಕುಡಿತದ ಚಟಗಳಿಗೆ ಖರ್ಚು ಮಾಡಿ ಸಂಸಾರವನ್ನು ಸಾಗಿಸಲು ಆಗದೇ ಇಂದಿಗೂ ಸಹ ಹಲವಾರು ಭೋವಿ ಸಮುದಾಯದ ಕುಟುಂಬಗಳು ಬಡತನ, ನಿರುದ್ಯೋಗ, ಅನಕ್ಷರತೆಯಂತಹ ಸಮಸ್ಯೆಗಳಿಗೆ ಬಲಿಯಾಗುತ್ತಿದ್ದಾರೆ.

ಒಡ್ಡ–ವಡ್ಡ, ವಡ್ಡರು, ವಡ್ರು ಎಂಬ ಪದಗಳು ಸಮಾನ ಅರ್ಥವನ್ನು ಪಡೆದ ಈ ಸಮುದಾಯದ ಹೆಸರುಗಳಾಗಿವೆ. "ಭೋವಿ ಸಮುದಾಯವನ್ನು ಮೊದಲು ವಡ್ಡ–ವಡ್ಡರು ಎಂದು ಕರೆಯುತ್ತಿದ್ದರು. ಆದರೆ ೧೯೪೪ರಲ್ಲಿ ಮೈಸೂರು ರಾಜ್ಯದ ಭೋವಿ ಸಮುದಾಯದ ಪ್ರಥಮ ಪರಿಷತ್ತಿನಲ್ಲಿ ವಡ್ಡರನ್ನು ಭೋವಿಗಳೆಂದು ಕರೆಯಬೇಕೆಂದು ಆದೇಶ ಪಾಸು ಮಾಡಲಾಯಿತು. ಪರಿಣಾಮವಾಗಿ ೧೯೪೬ರಲ್ಲಿ ಮೈಸೂರು ಸರ್ಕಾರದ ಎಲ್ಲಾ ಪ್ರಕಟಣೆಗಳಲ್ಲಿ ವಡ್ಡರ, ಬದಲಾಗಿ ಭೋವಿ ಎಂದು ಕರೆಯಲಾರಂಭಿಸಿತು"*(ಸಂಗಳದ ಎನ್. ಬಿ:೨೦೧೪:೨೯)*. ವಡ್ಡರು ಎನ್ನುವ ಪದ ಮೂಲ ದ್ರಾವಿಡ ಶಬ್ದವಾಗಿದೆ. ವಡ್ಡರು ಕಪ್ಪು ಬಣ್ಣದವರಾದ್ದರಿಂದ ದ್ರಾವಿಡರೆಂದು ಇವರನ್ನು ಕರೆಯುತ್ತಾರೆ. ಇವರು ಕೂಡ ಮಾತೃಮೂಲೀಯ ಕುಟುಂಬವೆಂದು ತಿಳಿದುಬರುತ್ತದೆ. ಇವರು ಹಲವು ಸಾಂಪ್ರದಾಯಗಳನ್ನು ಆಚರಿಸುತ್ತಾರೆ. ಅವರ ಸಂಪ್ರದಾಯಗಳು ದ್ರಾವಿಡ ಮತ್ತು ಆರ್ಯ ಸಂಸ್ಕೃತಿಯ ಮಿಲನವಾಗಿದೆ. ಹುಟ್ಟು ಸಾವಿನ ನಡುವೆ ಹಲವಾರು ರೀತಿಯ ವಿಧಿ – ವಿಧಾನಗಳನ್ನು ಸಂಪ್ರದಾಯಗಳನ್ನು ಆಚರಿಸುತ್ತ ಜೀವನವನ್ನು ಮಾಡುತ್ತಾ ಬಂದಿದ್ದಾರೆ. ಕೆಲವು ಸಂಪ್ರದಾಯ ಆಚರಣೆಗಳು ಜಾತಿಯಿಂದ ಜಾತಿಗೆ ಭಿನ್ನವಾಗಿರುತ್ತವೆ. ಸಮಾಜದಲ್ಲಿ ನಾಗರೀಕತೆ ಬೆಳೆದಂತೆಲ್ಲಾ ಅನೇಕ ನಿಯಮಾವಳಿಗಳು ಬೆಳೆದು ಆಯಾ ಕಾಲದ ಜನರ ನಂಬಿಕೆ ಮತ್ತು ದುಷ್ಟ ಶಕ್ತಿಗಳ ನಿವಾರಣೆಗೆ ರೂಢಿ ಸಂಪ್ರದಾಯಗಳನ್ನು ಆಚರಣೆ ಈ ತಂದಿರಬಹುದು. ಹೀಗೆ ಬಂದಿರುವ ಆಚರಣೆಗಳಲ್ಲಿ ಈ ಭೋವಿ ಸಮುದಾಯದಲ್ಲಿ

ದೇವದಾಸಿ ಪದ್ಧತಿ ಇರುವುದು ಕಾಣಬಹುದು. ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಈ ಸಮುದಾಯದಲ್ಲಿಯೇ ಅತ್ಯಂತ ಕಡಿಮೆ ಅಂದರೆ ಬೆರಳೆಣಿಕೆಯಷ್ಟು ಜನ ದೇವದಾಸಿಯರು ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಕಂಡು ಬರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬಂದಿದೆ.

"ದೇವಸ್ಥಾನ ಕಟ್ಟಿದ ವಡ್ಡರೂ ಸಹ ಕಾರ್ಯಕ್ರಮದಲ್ಲಿ ಭಾಗವಹಿಸಿ ಈ ದೇವಸ್ಥಾನದ ನಿರ್ಮಾಣದಲ್ಲಿ ನಾವು ಎಲ್ಲಾ ರೀತಿಯಿಂದ ಶ್ರಮಿಸಿದ್ದರು. ದೇವಸ್ಥಾನದಲ್ಲಿ ನಮ್ಮನ್ನು ಬಿಡುವುದಿಲ್ಲ ಎಂದೂ ದೂರಿದರು" *(ಉಳ್ಳೇಶ್ವರಪ್ಪ ಎಂ:೨೦೦೮ :೧೧೪).* ಇದರಿಂದ ಇವರು ಕೂಡ ಅಸ್ಪೃಶ್ಯತೆಯ ಶೋಷಣೆ ಒಳಗಾಗಿರುವುದು ತಿಳಿಯುತ್ತದೆ.

**೪.೧.೬ ಕೊರವ ಸಮುದಾಯ**

ಕೊರವ ಸಮುದಾಯ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಕಂಡುಬರುವುದಾಗಿದೆ. ಕೊರವರಿಗೆ, ಕೊರಚ ಅಥವಾ ಕೊರ್ಚ, ಕೊರಮ ಎಂದು ಕರೆಯುತ್ತಾರೆ. ಕೊರಮ ಎನ್ನುವುದು ಜಾತಿಸೂಚಕವಾದ ಪದವಾಗಿದೆ. ಕರ್ನಾಟಕದಲ್ಲಿ ಕೊರಮರನ್ನು ಕೊರವ, ಕೊರಮ, ಕೊರಚ, ಭಜಂತ್ರಿ, ಕುರುಮನ್ ಎಂದೆಲ್ಲ ಗುರುತಿಸುತ್ತಾರೆ. ಹೆಣ್ಣುಮಕ್ಕಳನ್ನು ಕೊರವಿ, ಕೊರಮಿ, ಕೊರವಂಜಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಇವರು ಬುಟ್ಟಿ ಹೆಣೆಯುವ, ಹಗ್ಗ ಹೊಸೆಯುವ, ಈಚಲುಮರದ ಗರಿಗಳಿಂದ ಕಸಬರಿಗೆ(ಪೊರಕೆ) ಮಾಡುವ, ಕಣಿ ಹೇಳುವ, ಎತ್ತುಗಳ ವ್ಯಾಪಾರ ಮಾಡುವ ಹೀಗೆ ಅನೇಕ ವೃತ್ತಿಗಳನ್ನು ಮಾಡುತ್ತಾ ಜೀವನ ಸಾಗಿಸುತ್ತಿದ್ದಾರೆ.

ಕೊರವ ಒಂದು ಅಲೆಮಾರಿ ಸಮುದಾಯವಾಗಿದ್ದು, ಇವರಲ್ಲಿ ದೈವತ್ವದ ಭಾವನೆಗಳು, ನಂಬಿಕೆಗಳು ಅಚಲವಾಗಿ ಉಳಿದು ಬೆಳೆದುಕೊಂಡು ಬಂದಿವೆ. ಯಾವುದೋ ಒಂದು ಅವ್ಯಕ್ತ ಶಕ್ತಿ ಜನತೆಯ ಬದುಕನ್ನು ನಿಯಂತ್ರಿಸುತ್ತದೆಯಾದ್ದರಿಂದ ಸಾಮಾನ್ಯ ಅಸಮಾನ್ಯಗಳ ಮಧ್ಯೆ ಕಂಡು ಬರುವ ವ್ಯತ್ಯಾಸಗಳೇ ನಂಬಿಕೆಗಳ ಮೂಲವಾಗಿದೆ. ಮನುಷ್ಯರು ಮಾನಸಿಕ ತೊಳಲಾಟಕ್ಕೆ ಎಂದು ಒಳಗಾದರೋ ಅಂದೇ ಅವರು ನಂಬಿಕೆಗಳಿಗೆ ಮಾರುಹೋದರು. ಇಂತಹ ಮಾರುಹೋಗುವಿಕೆಗೆ ನಿಸರ್ಗದಲ್ಲಿರುವ ಶಕ್ತಿಗಳೇ ಕಾರಣವಾಗಿರಬೇಕು. ಕೊರವರು ಪ್ರಮುಖವಾಗಿ ಶಕ್ತಿದೇವತೆಗಳನ್ನು ಆರಾಧಿಸುತ್ತಾರೆ. ಹುಲಿಗೆಮ್ಮ, ಮಾರೆಮ್ಮ, ಸುಂಕಲಮ್ಮ, ಯಲ್ಲಮ್ಮ, ತಾಯಮ್ಮ, ಊರಮ್ಮ ಮೊದಲಾದ ದೇವತೆಗಳನ್ನು ಹೆಚ್ಚಾಗಿ ಪೂಜಿಸುತ್ತಾರೆ. ಈ ದೇವತೆಗಳು ಇವರ ಕುಲದೇವತೆಗಳೂ ಆಗಿದ್ದಾರೆ. ಎಲ್ಲಿ ದೇವತೆಗಳನ್ನು ಮಂಗಳವಾರ ಮತ್ತು ಶುಕ್ರವಾರ ಪೂಜಿಸುವರೋ ಅಲ್ಲಿ ಈ ದೇವತೆಗಳು ನಮ್ಮನ್ನು ಕಾಪಾಡುತ್ತಾರೆಂದು ನಂಬುತ್ತಾರೆ. ಕೊರಮರು ಮೂಲತಃ ಸ್ತ್ರೀ ಸಂಪ್ರದಾಯ ಸಂಸ್ಕೃತಿಯಲ್ಲಿ ಬೆಳೆದ ದ್ರಾವಿಡ ಮೂಲದ ಸಮುದಾಯವಾಗಿದೆ. ಇವರಲ್ಲಿ ಸ್ತ್ರೀ ದೈವಗಳೇ ಪ್ರಧಾನವಾಗಿ ಕಂಡುಬರುತ್ತಾರೆ. ಪುರುಷ ದೈವಗಳು ಸಹ ಇವರಲ್ಲಿ ಪ್ರಾಮುಖ್ಯತೆಗಳಿಸಿದರೂ ಅವುಗಳಿಗೆ ಎರಡನೇ ಸ್ಥಾನದ ಕಲ್ಪನೆ ಇದೆ ಎಂದು ಹೇಳಬಹುದು. ಆ ಕಾರಣಕ್ಕಾಗಿಯೇ ಕೊರವರಲ್ಲಿ ವೆಂಕಟೇಶ್ವರನಿಗೆ, ಹುಲಿಗೆಮ್ಮ ದೇವಿಗೆ ಸಿಕ್ಕ ಪ್ರಾಧಾನ್ಯತೆ ಇತರ ದೈವಗಳಿಗೆ ಸಿಕ್ಕಿರುವುದು ಕಡಿಮೆ ಎಂದು ತೋರುತ್ತದೆ. ಅವರ ಮೂಲ

ಆರಾಧನ ದೈವ ಹುಲಿಗೆಮ್ಮ. ಆಕೆಯ ನಂತರ ಯಲ್ಲಮ್ಮ, ಸುಂಕಲಮ್ಮ ಮೊದಲಾದ ದೈವಗಳನ್ನು ಆರಾಧಿಸುವ ಪರಿಪಾಠವಿದೆ. ಇವುಗಳ ನಂತರ ತಿರುಪತಿ ತಿಮ್ಮಪ್ಪನ ಕುರಿತು ಆರಾಧ್ಯ ಭಾವನೆ ಹೊಂದಿದ್ದಾರೆ.

"ಕೊರಮ ಬುಡಕಟ್ಟಿನಲ್ಲಿ ದೇವದಾಸಿ ನಿದರ್ಶನಗಳು ಅಲ್ಲಲ್ಲಿ ವಿರಳವಾಗಿ ಕಾಣಸಿಗುತ್ತವೆ. ಅತಿ ಹಿಂದುಳಿದ, ಮೌಢ್ಯ ಮತ್ತು ಬಡತನದ ತವರಾದ ಈ ಜನರಲ್ಲಿ ಮೂಢನಂಬಿಕೆಗಳು ಯಥೇಚ್ಛವಾಗಿ ಕಂಡು ಬರುತ್ತವೆ. ಆದರೆ ದೇವದಾಸಿ ಪದ್ಧತಿ ಮಾತ್ರ ವ್ಯಾಪಕವಾಗಿ ತೋರುವುದಿಲ್ಲ. ಆದರೆ ಕೆಲವು ಮನೆತನಗಳಲ್ಲಿ ದೇವರ ಮುದ್ರೆ ಹಾಕಿಸಿಕೊಳ್ಳುವ, ಬಸವಿ ಬಿಡುವ ಸಂಪ್ರದಾಯ ಇತ್ತಂತೆ. ಈಗ ಯಾರನ್ನು ಕೇಳಿದರೂ ಈ ಬುಡಕಟ್ಟಿನವರು ಹಿಂದೆ ಇದ್ದರು. ಈಗ ಇಲ್ಲವೆನ್ನುತ್ತಾರೆ. ದೇವದಾಸಿಯರನ್ನು ಮಾಡುವುದರಿಂದ ಒಳ್ಳೆದಾಗುತ್ತದೆ ಎಂಬ ನಂಬಿಕೆ ಇತ್ತು ಎಂದು ಹೇಳುತ್ತಾರಾದರೂ ಇದೆಲ್ಲದಕ್ಕೆ ಬಡತನವೆ ಕಾರಣ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಚಿಕ್ಕ ಹೆಣ್ಣುಮಕ್ಕಳನ್ನು ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ದೇವರ ಮುದ್ರೆ(ಶಂಖ-ಚಕ್ರ)ಯನ್ನು ತೋಳ ಮೇಲೆ ಒತ್ತಿಸುತಿದ್ದರಂತೆ. ಅಂದಿನಿಂದ ಆಕೆ ದೇವದಾಸಿ. ಆಕೆಯನ್ನು ಯಾರೂ ಮದುವೆ ಮಾಡಿಕೊಳ್ಳುವಂತಿಲ್ಲ. ದೇವದಾಸಿ ತನಗೆ ಇಷ್ಟಬಂದವನ ಜೊತೆ ಬಾಳಬಹುದಿತ್ತು ಅಥವಾ ವಿಲಾಸ ಜೀವನ ನಡೆಸಬಹುದಿತ್ತು. ಈ ಬುಡಕಟ್ಟಿನಲ್ಲಿ ವೇಶ್ಯಾಜೀವನ ನಡೆಸುತ್ತಿದ್ದ ಒಂದು ಗುಂಪನ್ನು ವಿದ್ವಾಂಸರು ಗುರತಿಸಿ ದಾಖಲಿಸಿದ್ದಾರೆ. ಮದುವೆಯಾಗದ ಹೆಣ್ಣುಮಕ್ಕಳನ್ನು ಗಿರವಿ ಇಡುತ್ತಿದ್ದ ಬಗೆಗೆ ಮತ್ತು ಪತ್ನಿಯರನ್ನು ಮಾರುತ್ತಿದ್ದ ಬಗ್ಗೆ ಮದ್ರಾಸ್ ಪ್ರಾಂತ್ಯದ ಕೆಲಭಾಗದ ಕೊರವರ ದಾಖಲೆಗಳೂ ಇವೆ. ಆರ್.ಇ. ಎಂಥೋವನ್ ಅವರು "The patrods or shawl weavers (patra a scarf) are dancers, singers and prostitutes connected with Venkatagiri in North Arcor; The suli's(kansuli) are prostitutes" ಎಂಬ ಅಂಶಗಳನ್ನು ದಾಖಲಿಸಿದ್ದಾರೆ. ಎಡ್ಗರ್ ಥರ್ಸ್ಟರ್ನ್ ಅವರು ಶ್ರೀ ರೂಪಾರಾವ ನಾಯುಡು ಅವರು ಹೇಳಿರುವ "Obtaining their living by prostitution. They also kidnap or sell children for this purpose. Some of the women of this class are thriving well in the Madras Presidency as experts in the dancing. They are kept by rich people and are called in the Telugu country Eru kala Bogamvaru, in Tamil Korava Themidia. They also train monkeys and show them to the public" ಇದಲ್ಲದೇ ಈ ಬುಡಕಟ್ಟಿನಲ್ಲಿ "ಒಬ್ಬ ಹೆಂಗಸು ಒಂದಾದ ಮೇಲೊಂದರಂತೆ ಏಳು ಜನ ಗಂಡಸರನ್ನು ಮದುವೆ ಮಾಡಿಕೊಂಡರೆ ಅವನು ಸತ್ತು ಹೋದಾಗ ಅಥವಾ ವಿಚ್ಛೇಧನ ಮಾಡಿದಾಗ ಅವಳನ್ನು ಪೆದ್ದಾ ಬೋಯಸಾನಿ ಎಂದು ಕರೆದು ತುಂಬಾ ಗೌರವ ಕೊಡುವರು. ಮದುವೆ ಹಾಗೂ ಧಾರ್ಮಿಕ ಸಮಾರಂಭಗಳಲ್ಲಿ ಅವಳು ಮುಂದಾಳುವೆನಿಸುವಳು ಎನ್ನುವ ಅಂಶಗಳು ತಿಳಿದು ಬರುತ್ತವೆಯಾದರೂ ದಕ್ಷಿಣ ಕರ್ನಾಟಕದ ಈ ಬುಡಕಟ್ಟಿನಲ್ಲಿ ಇಂದು ಇಂತಹ ಯಾವ ಪದ್ಧತಿಗಳು ಕಂಡುಬರುವುದಿಲ್ಲ. ಆದರೆ ಹಿಂದಿನ ತಲೆಮಾರಿನಲ್ಲಿ ಚಿತ್ರದುರ್ಗ ಜಿಲ್ಲೆಯ ಕೆಲವು

ಭಾಗದಲ್ಲಿ ಮುದ್ರೆ ಒತ್ತಿಸಿಕೊಂಡವರು ಇದ್ದರೆಂದು ಹೇಳುತ್ತಾರೆ. ತುಮಕೂರು ಜಿಲ್ಲೆಯ ಕೆಲವು ಕಡೆ ಅಂದರೆ ಹೀರೆ ಜಿರರೆಯ ದೊಡ್ಡ ಕೃಷ್ಣಯ್ಯನವರು ಹೇಳುವ ಹಾಗೆ ಸಾರ್ತವಳ್ಳಿಯಲ್ಲಿ ಇಂತಹ ಪದ್ಧತಿ ಇದ್ದ ಬಗೆಗೆ ಕೇಳಿದ್ದೇವೆಂದು ಈ ಬುಡಕಟ್ಟಿನಲ್ಲಿ ಸಾಮಾಜಿಕ ಜ್ಞಾನ ಹೆಚ್ಚಿದಂತೆಲ್ಲ ಮೂಢನಂಬಿಕೆಗಳು ದೂರಾದಂತೆಲ್ಲಾ ಇಂತಹ ಪದ್ಧತಿಗಳು ದೂರಾಗುತ್ತಾ ಬಂದಿವೆ" *(ರಾಮಯ್ಯ ಬಿ :೨೦೦೨:ಪು ೧೮೨).*

ಈ ಮೇಲಿನ ಉಲ್ಲೇಖಕ್ಕೆ ಸಂಬಂಧಿಸಿದಂತೆ 'ಅಮರಚಿಂತ ಜಂಬಣ್ಣನವರ ಕುರುಮಯ್ಯ ಮತ್ತು ಅಂಕುಶದೊಡ್ಡಿ' ಎಂಬ ಕಾದಂಬರಿಯಲ್ಲಿ ದೇವಿರಿಯನ್ನು ದೇವರ ಹೆಸರಿಗೆ ಬಿಡುವ ಮಾತುಕತೆ ನಡೆಯುತ್ತದೆ. ಆದರೆ ಅವಳು ಬೇರೊಬ್ಬನನ್ನು ಮದುವೆಯಾಗುತ್ತಾಳೆ. ಇನ್ನೊಂಥು ಮದುವೆಯಾದವಳು ತನಗೆ ಹಣ ಕೊಡಬೇಕಾದುದರಿಂದ ಅವಳನ್ನು ಮದುವೆ ಮಾಡಿಕೊಂಡು ಬೇರೊಬ್ಬರಿಗೆ ಮತ್ತೆ ಮಾರುವ ಕೆಲಸಕ್ಕೆ ಕೈ ಹಾಕುವ ಪ್ರಸಂಗವನ್ನು ಕಾಣುತ್ತೇವೆ.

**೪.೨. ಪರಿಶಿಷ್ಟ ಪಂಗಡಗಳು ಅಥವಾ ಬುಡಕಟ್ಟುಗಳು**

ಭಾರತವು ಅನೇಕ ಬುಡಕಟ್ಟುಗಳಿಂದ ಕೂಡಿರುವ ದೇಶ. ಸಾವಿರಾರು ಬುಡಕಟ್ಟುಗಳು ಇಲ್ಲಿ ವಾಸಿಸುತ್ತಿದ್ದು, ತಮ್ಮದೇ ಆದ ವೈಶಿಷ್ಟ್ಯಗಳಿಂದ ಕೂಡಿರುತ್ತವೆ. ಹಾಗೆಯೇ ಕರ್ನಾಟಕವನ್ನು ಗಮನಿಸುವುದಾದರೆ ೫೦ ಬುಡಕಟ್ಟುಗಳಿದ್ದು ಇವುಗಳು ಕೂಡ ವಿಶಿಷ್ಟ ಸಂಪ್ರದಾಯ, ಆಚರಣೆ, ಸಂಸ್ಕೃತಿಗಳನ್ನು ಹೊಂದಿರುವಂಥವುಗಳಾಗಿವೆ. ಮೂಲತಃ ಆದಿಮಾನವನ ಕಾಲದಿಂದಲೂ ಈ ವರ್ಗ. ಹಾಗೆಯೇ ಬಂದಿರುವಂಥದ್ದು. ಇವರ ವೃತ್ತಿ ಆದಿಯಿಂದಲೂ ಬೇಟೆಯಾಡುವುದು, ಗೆಡ್ಡೆ-ಗೆಣಸುಗಳನ್ನು ಅಗೆಯುವುದು. ಇವೇ ಅವರ ಆಹಾರದ ಮೂಲಗಳಾಗಿದ್ದವು.

ಪ್ರಕೃತಿಯ ಮಡಿಲಿನಲ್ಲಿ "ಒಂದೇ ವಂಶಾನುಕ್ರಮದಿಂದ ಸಂಬಂಧ ಹೊಂದಿ ಒಂದೇ ವಿಧವಾದ ದೈಹಿಕ ಲಕ್ಷಣಗಳಿಂದ ಕೂಡಿ, ಒಂದು ಭೌಗೋಳಿಕ ಪ್ರದೇಶದಲ್ಲಿ ವಾಸಿಸುವ ಜನರ ಗುಂಪಿಗೆ ಬುಡಕಟ್ಟು ಎಂದು ಹೆಸರು" *(ಮೈತ್ರಿ ಕೆ.ಎಂ:೨೦೧೦:೪೦).* ಇವರನ್ನು ಆದಿವಾಸಿ, ಗಿರಿಜನ, ವನವಾಸಿಗಳು, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗವೆಂದು ಸಹ ಗುರುತಿಸುತ್ತಾರೆ.

ಆದಿವಾಸಿಗಳು ತನ್ನ ಪರಿಸರದಲ್ಲಿ ಲಭ್ಯವಿರುವ ಹಾಗೂ ತನ್ನ ಬದುಕಿಗೆ ಹಿತವೆನಿಸಿರುವುದನ್ನೆಲ್ಲವನ್ನೂ ಬಳಸಿದೆ. ಪರಿಸರದಲ್ಲಿರುವ ಕ್ರಿಮಿ, ಕೀಟ, ಸಸ್ಯ, ಪ್ರಾಣಿ-ಪಕ್ಷಿಗಳನ್ನು ತಿಂದು ತನ್ನ ಹಸಿವನ್ನು ನೀಗಿಕೊಂಡು ಪ್ರಕೃತಿಯಲ್ಲಿ ಬದುಕುತ್ತಿದ್ದೆ. ಅಲ್ಲದೆ ಇವುಗಳಲ್ಲಿ ಯಾವುದು ಆರೋಗ್ಯಕರ, ಯಾವುದು ಅನಾರೋಗ್ಯ ಅಥವಾ ಮಾರಕ ಆಹಾರ ವಸ್ತುಗಳೆಂದು ತಿಳಿದವನಾಗಿದ್ದರು. ಅಲ್ಲದೆಯೇ ನಿಸರ್ಗದ ಕುರಿತಾಗಿ ಚೆನ್ನಾಗಿ ಅರಿತವರಾಗಿದ್ದರು. ಇವರು ಯಾವಾಗ ಹೂ ಹಣ್ಣು ಬಿಡುವವು. ಪ್ರಾಣಿ-ಪಕ್ಷಿಗಲು ಮರಿ ಹಾಕುವ ಕಾಲ ಇವುಗಳನ್ನೆಲ್ಲವನ್ನು ಅರಿತವಳಾಗಿದ್ದರು. ಇದು ನಿಸರ್ಗದ ಮಡಿಲಿನಲ್ಲಿ ಬದುಕುವ ಆದಿವಾಸಿ ಸಮುದಾಯಕ್ಕೆ ತಿಳಿದಿರುವ ವಿಚಾರಗಳಾಗಿವೆ. ಪ್ರಕೃತಿಯನ್ನು ಚೆನ್ನಾಗಿ ಓದಿದವರಾಗಿದ್ದಾರೆ. ಆದಿವಾಸಿಗಳು ಕಾಲಕ್ಕೆ ತಕ್ಕಂತೆ ಹಣ್ಣುಹಂಪಲು, ಗೆಡ್ಡೆ-

ಗೆಣಸು ತಿನ್ನುತ್ತಾ ಕಾಲಕ್ಕೆ ತಕ್ಕಂತೆಯೇ ಬದುಕುತ್ತಿದ್ದರು. ಪ್ರಕೃತಿಯಲ್ಲಿ ನಡೆಯುವ ಅತಿವೃಷ್ಟಿ, ಅನಾವೃಷ್ಟಿ ಇತ್ಯಾದಿ ಪ್ರಕೃತಿ ವಿಕೋಪಗಳಿಂದ ತಪ್ಪಿಸಿಕೊಳ್ಳಲು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗಿ ಅಲ್ಲಿಯ ಪ್ರಕೃತಿಗೆ ತಕ್ಕಂತೆ ಬದುಕುತ್ತಾರೆ. ಹಣ್ಣುಹಂಪಲು ಜಿಡದಿರುವ, ಗೆಡ್ಡೆಗೆಣಸು ಸಿಗದಿರುವ ಕಾಲದಲ್ಲಿ ಬುಡಕಟ್ಟುಗಳು ಬೇಟೆಯಾಡಿ ಜೀವನ ನಡೆಸುತ್ತಿದ್ದರು. ಬೇಟೆಗಾಗಿ ಕಲ್ಲು, ಬಡಿಗೆ, ಎಲುಬುನ ಅಸ್ತ್ರಗಳನ್ನು ಬಳಸುತ್ತಿದ್ದರು. ಕಾಲಾಂತರದಲ್ಲಿ ಬುಡಕಟ್ಟುಗಳು ಪಶುಪಾಲನೆ ಮತ್ತು ಕೃಷಿಯಲ್ಲಿ ತೊಡಗಿಕೊಂಡರು. ಇದರಿಂದ ಅಲೆಮಾರಿಯಾಗಿ ಕಾಡುಗಳನ್ನು ತಿರುಗುತ್ತಿದ್ದ ಬುಡಕಟ್ಟು ಜನರು ಒಂದೆಡೆ ನೆಲೆನಿಂತರು. ಕೃಷಿಗೆ ಬೇಕಾದ ಎಲ್ಲಾ ಪೂರಕ ಸಾಧನಗಳನ್ನು ತಯಾರಿಸಲು ಪ್ರಾರಂಭಿಸಿದರು. ಅವರ ಕುಟುಂಬ ಅದೇ ಕಸುಬನ್ನು ಮುಂದುವರಿಸಿದಂತವರು ಅವರಲ್ಲಿ ಕುಶಲತೆ ಕಂಡುಕೊಂಡರು. ಕಾಲಾಂತರದಲ್ಲಿ ಅವರನ್ನು ಕಸುಬಿನ ಹೆಸರಿನಲ್ಲಿ ಕರೆಯಲಾರಂಬಿಸಿದರು.

ಬುಡಕಟ್ಟು ಎಂಬ ಪದಕ್ಕೆ ಅರ್ಥ ವಿವರಣೆಯನ್ನು ಸಮಾಜಶಾಸ್ತ್ರಜ್ಞರು ಇತಿಹಾಸಕಾರರು ನಾನಾ ಅರ್ಥದಲ್ಲಿ ಬಳಸಿದ್ದಾರೆ. ಕಿಟ್ಟೆಲ್ ಅರ್ಥಕೋಶದಲ್ಲಿ ಬುಡಕಟ್ಟು ಎಂಬ ಶಬ್ದಕ್ಕೆ ಕುಟುಂಬ ಹಾಗೂ ಕುಲ ಎಂಬ ಅರ್ಥವನ್ನು ನೀಡಿದ್ದಾರೆ. ಬುಡಕಟ್ಟು ಎಂಬ ಪದವು ಆಂಗ್ಲ ಭಾಷೆಯಲ್ಲಿ ಬಳಕೆಯಾಗುವ 'ಟ್ರೈಬ್' ಎಂಬ ಪದಕ್ಕೆ ಸಮಾನಾರ್ಥಕ ಪದವೆಂದು ಬಳಸಲಾಗುತ್ತಿವೆ. ಇದು ಲ್ಯಾಟೀನ್ ಭಾಷೆಯ ಟ್ರೈಬಸ್ ಎಂಬ ಪದದಿಂದ ಉಗಮಗೊಂಡಿದೆ. ಯಾವ ಜನರು ಗತಕಾಲದಿಂದಲೂ ನಿಸರ್ಗದ ಮಡಿಲಲ್ಲಿ ಸುಖವಾಗಿ ಬದುಕಲು ಬಯಸುವರೋ ಪ್ರಕೃತಿಯಲ್ಲಿ ದೊರೆಯುವುದನ್ನು ತಿನ್ನುತ್ತಾ ತನ್ನದೇಯಾದ ಒಂದು ವಿಶಿಷ್ಟ ರೀತಿಯ ಜೀವನ ವಿಧಾನದಿಂದ ಜೀವಿಸುವವರೇ ಅವರನ್ನು ಬುಡಕಟ್ಟು ಅಥವಾ ಆದಿವಾಸಿ ಅಥವಾ ಗಿರಿಜನ ಎಂದು ಕರೆಯುತ್ತಾರೆ. ಈಹಗೆ ಬದುಕುತ್ತಿರುವ ಜನಸಮುದಾಯಗಳನ್ನು ಬ್ರಿಟೀಷ್ ಅಧಿಕಾರಿಗಳು ಭಾರತೀಯ ಸಮುದಾಯಗಳನ್ನು ಅಧ್ಯಯನ ಮಾಡಿ ಜಾತಿ, ಬುಡಕಟ್ಟು, ಅಲೆಮಾರಿ, ಬುಡಕಟ್ಟು ಅಥವಾ ಅಪರಾಧಿ ಬುಡಕಟ್ಟುಗಳೆಂದು ವಿಂಗಡಿಸಿರುವರು. ಭಾರತದಲ್ಲಿ ಹಲವಾರು ಚಾರಿತ್ರಿಕ ಮತ್ತು ಸಾಮಾಜಿಕ ಕಾರಣಗಳಿಂದ ಅನೇಕ ಬುಡಕಟ್ಟುಗಳು ಮತ್ತು ಜಾತಿಗಳು ಸಮಾನಸ್ಕಂದವಾಗಿ ಬೆಳೆಯಲು ಅವಕಾಶ ಇಲ್ಲದ್ದನ್ನು ಮನಗಂಡು ಅಂತಹ ವರ್ಗಗಳನ್ನು ಗುರುತಿಸಿ ಅವಕ್ಕೆ ವಿಶಿಷ್ಟ ಸೌಲಭ್ಯಗಳನ್ನು ಒದಗಿಸಲು ಭಾರತದ ಸಂವಿಧಾನದಲ್ಲಿ ಅವಕಾಶ ಮಾಡಿಕೊಡಲಾಗಿದೆ. ಸಂವಿಧಾನದ ೩೪೧, ೩೪೨ನೆಯ ಅನುಚ್ಛೇದಗಳ ಪ್ರಕಾರ ರಾಷ್ಟ್ರಪತಿ ಅಂಥ ವರ್ಗಗಳನ್ನು ಗುರುತಿಸಿ ಅವುಗಳ ಪಟ್ಟಿಯನ್ನು ಪ್ರಕಟಿಸಿದ್ದಾರೆ. ಸಂವಿಧಾನದ ಪರಿಶಿಷ್ಟ ಭಾಗವಾಗಿ ಇವು ಸೇರಿರುವುದರಿಂದ ಈ ಪಟ್ಟಿಯಲ್ಲಿರುವ ವರ್ಗಗಳನ್ನು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ(ಅನುಸೂಚಿತ) ಬುಡಕಟ್ಟುಗಳು ಎಂದು ಪರಿಗಣಿಸಲಾಗುತ್ತದೆ. ಭಾರತದ ಸಂವಿಧಾನದ ಅನುಚ್ಛೇದ ೩೪೨(೧) ರ ಪ್ರಕಾರ ರಾಷ್ಟ್ರಪತಿಯವರು ಹಾಗೂ (೨)ರ ಪ್ರಕಾರ ಸಂಪತ್ತು ಅರ್ಹ ಸಮುದಾಯಗಳನ್ನು ಅನುಸೂಚಿತ ಬುಡಕಟ್ಟುವೆಂದು ಆದೇಶಿಸಿ ಮೀಸಲಾತಿಯನ್ನು ಕಲ್ಪಿಸಿದರು. ಹೀಗೆ ಪರಿಶಿಷ್ಟ ಪಂಗಡ ಅಥವಾ ಬುಡಕಟ್ಟುಗಳಲ್ಲಿ ಬೇಡ ಬುಡಕಟ್ಟು ಒಂದಾಗಿದೆ.

## ೪.೨.೧ ಬೇಡ ಬುಡಕಟ್ಟು

ಕರ್ನಾಟಕದಲ್ಲಿ ಕಂಡುಬರುವ ಐವತ್ತು ಬುಡಕಟ್ಟುಗಳಲ್ಲಿ ಬೇಡ ಬುಡಕಟ್ಟು ಒಂದಾಗಿದೆ. ಬೇಡ ಬುಡಕಟ್ಟಿನವರು ವಿಶಿಷ್ಟ ಸಂಪ್ರದಾಯ, ಆಚರಣೆ, ಸಂಸ್ಕೃತಿಗಳನ್ನು ಹೊಂದಿರುವಂತಹ ಬುಡಕಟ್ಟಾಗಿದೆ. ಮೂಲತಃ ಆದಿಮಾನವನ ಕಾಲದಿಂದಲೂ ಈ ಬೇಡ ಬುಡಕಟ್ಟು ಬಂದಿರುವಂಥದ್ದಾಗಿದೆ. ಇವರ ಮೂಲವೃತ್ತಿ ಆದಿಕಾಲದಿಂದಲೂ ಬೇಟೆಯಾಡುವುದು, ಗೆಡ್ಡೆ-ಗೆಣಸುಗಳನ್ನು ಅಗೆಯುವುದು. ಇವೇ ಇವರ ಕಸುಬು ಮತ್ತು ಆಹಾರ ಸಂಗ್ರಹಣೆಯ ಮೂಲಗಳಾಗಿದ್ದವು. ಕರ್ನಾಟಕದಲ್ಲಿ ನಾಯಕ, ತಳವಾರ, ವಾಲ್ಮೀಕಿ, ಬೇಡ ಮುಂತಾದ ಹೆಸರುಗಳಿಂದ ಗುರುತಿಸಲ್ಪಡುತ್ತಾರೆ.

ಬೇಡ ಎಂದರೆ ಬೇಟೆಗಾರ ಎಂದರ್ಥ. ಇವರು ಬೇಟೆಯನ್ನು ಕಸುಬಾಗುಳ್ಳ ಬಿಲ್ಲ ಜಾತಿಗೆ ಹೊಂದಿಕೊಂಡವರು ಎಂದಾಗುತ್ತದೆ. ಮೂಲತಃ ಬೇಡರು ಅರಣ್ಯವಾಸಿಗಳು. ಇವರು ತಮ್ಮ ಜೀವನಕ್ಕಾಗಿ ಬೇಟೆಯಾಡಿ ಬದುಕುವುದೇ ಪ್ರಮುಖವಾಗಿ ರೂಢಿಯಾಗಿತ್ತು. ಇದರಿಂದ ಬೇಟೆ ಮತ್ತು ಬೇಡ ಎರಡು ಪದಗಳು ಒಂದೇ ಎಂದು ತಿಳಿದು ಬರುತ್ತದೆ. ಈ ಕಾರಣದಿಂದ ಬೇಟೆ ವೃತ್ತಿಗನುಗುಣವಾಗಿ ಬೇಡ ಪದವು ಬಳಕೆಗೆ ಬಂದಿದೆ. ಆಡು ಭಾಷೆಯಲ್ಲಿ ಈ ಪದವು ಬೇಟೆ ನಂತರ ಬೇಡ ಎಂದು ರೂಪಾಂತರಗೊಂಡಿದೆ. ಬೇಟೆ ಎಂಬ ಪದವೇ ಬೇಟೆ>ಬೇಡ ಎಂದು ಬದಲಾವಣೆ ಆಗಿರುವುದು.

ಬೇಟೆಯ ಮೂಲಕವೇ ಗುರುತಿಸಿಕೊಂಡವರನ್ನು ಬೇಡರು ಎಂದು ಕರೆದರು. ಇದಕ್ಕೆ ಮತ್ತೊಂದು ಐತಿಹ್ಯವನ್ನು ಗಮನಿಸಬಹುದು. ಜಾತಿ ನಿರ್ಮಾಣದಲ್ಲಿ ತೊಡಗಿದ್ದ ಬ್ರಾಹ್ಮಣನು ಹಸಿಮಣ್ಣಿನಿಂದ ಅನೇಕ ಜಾತಿಗಳನ್ನು ನಿರ್ಮಿಸಿ ಊರೊಳಗೆ ಎಸೆಯುತ್ತಿದ್ದನು. ಬ್ರಾಹ್ಮಣನು ಸೃಷ್ಟಿಸಿ ಸಾಕೆನಿಸಿ ಕೈಯಲ್ಲಿದ್ದ ಮಣ್ಣನ್ನು ಬೇಡವೆಂದು ಕಾಡಿನಲ್ಲಿ ಎಸೆದನು. ಅದರಲ್ಲಿಯೇ ಒಂದು ಸಮೂಹ ಸೃಷ್ಟಿಯಾಗಿದೆ. ಅವರೆ ಬೇಡರು ಎಂದು ಕರೆಸಿಕೊಂಡಿದ್ದರು.

ಮತ್ತೊಂದು ಐತಿಹ್ಯದ ಪ್ರಕಾರ ಬೇಡ ಬುಡಕಟ್ಟಿನವರು ಕಣ್ವಋಷಿಯ ವಂಶಜರೆಂದು ನಂಬಿಕೆಯಿದೆ. ತಮ್ಮ ವಂಶದ ಮೂಲ ಪುರುಷ ಶ್ರೀಮಹರ್ಷಿ ವಾಲ್ಮೀಕಿಯೆಂದು ಕರೆದುಕೊಳ್ಳುವ ಪದ್ಧತಿಯೂ ಇವರಲ್ಲಿದೆ. ಋಷಿಮುನಿಗಳಾದ ವಾಲ್ಮೀಕಿ ಮೂಲತಃ ಅರಣ್ಯವಾಸಿಗ. ಈತನು ಬೇಟೆಯಿಂದಲೇ ಜೀವನ ಸಾಗಿಸುತ್ತಿದ್ದ ಹಾಗೂ ಕ್ರೂರಿಯಾಗಿದ್ದು ಮುಂದೆ ದೇವರ ಕೃಪೆಯಿಂದ ಪರಿವರ್ತನೆಯಾಗಿ ಮಹರ್ಷಿಯಾಗಿ ಆರಾಧನೆಗೆ ಅರ್ಹವಾಗಿರುವುದು ಕಂಡು ಬರುತ್ತದೆ.

ಬೇಡ ಸಮುದಾಯದ ಹಿನ್ನೆಲೆ ನೋಡಿದಾಗ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಲಿಸಿದಾಗ ಭಿನ್ನವಾದ ಹೇಳಿಕೆಗಳು ಇವರ ಪೂರ್ವಿಕರು ಅನುಕರಣೆ ಮಾಡಿಕೊಂಡು ಬಂದಂತಹ ಆಚರಣೆಗಳ ಮೇಲೆ ಪ್ರಭಾವಿತರಾಗಿರುವುದು ತಿಳಿದುಬರುತ್ತದೆ. ಪುರಾಣಗಳಲ್ಲಿ ಪ್ರಸ್ತಾಪವಾಗಿರುವಂತೆ ಮೂಲತಃ ಕಾಡಿನಲ್ಲಿ ವಾಸವಾಗಿದ್ದುಕೊಂಡು, ವನ್ಯಪ್ರಾಣಿ ಪಕ್ಷಿಗಳ ಭೇಟೆಯಾಡುವ ವೃತ್ತಿಯಿಂದ ಜೀವಿಸುವ ಜನ ಸಮುದಾಯವನ್ನು ಬೇಡರು ಎಂದು ಕರೆಯಲಾಗಿದೆ. ಬೇಡರ ಕಣ್ಣಪ್ಪ ಎನ್ನುವ

ವ್ಯಕ್ತಿಯೂ ಮೂಲತಃ ಬೇಟೆಯ ಪರಂಪರೆಯಿಂದ ಬೆಳೆದು ಬಂದಿದ್ದಾನೆ. ಇವನು ಬೇಡ ಬುಡಕಟ್ಟಿನ ಆಚರಣೆಯ ಹಾಗೂ ಆದರ್ಶ ವ್ಯಕ್ತಿ ಎಂದು ತಿಳಿದುಬರುತ್ತದೆ. ಬೇಡರ ಕಣ್ಣಪ್ಪ ಮೂಲತಃ ಅರಣ್ಯವಾಸಿ ಎಂಬುದಕ್ಕೆ ಬೇಡರ ಎಂಬ ನಾಮಾಂಕಿತದ ಮುಂದೆ ಇರುವ ಪದವೇ ರುಜುವಾತಾಗಿದೆ. ಈತನು ಬೇಟೆ ಆಡುತ್ತಿದ್ದನೆಂಬುದಕ್ಕೆ ಪುರಾಣಗಳಲ್ಲಿ ಶಿವನಿಗೆ ಮೊಲದ ಮಾಂಸವನ್ನು ಪ್ರಸಾದವಾಗಿ ನೀಡಿರುವುದು ಕಂಡು ಬರುತ್ತದೆ. ಇಂದಿಗೂ ಬೇಡರು ಯುಗಾದಿ ಹಬ್ಬದಂದು ಮೊಲದ ಬೇಟೆಗೆ ಪ್ರಾಧಾನ್ಯತೆ ನೀಡುತ್ತಿರುವುದು ಇಡೀ ಹೈದರಾಬಾದ್ ಕರ್ನಾಟಕದಲ್ಲಿ ಸರ್ವಸಾಮಾನ್ಯವಾಗಿ ಕಂಡುಬರುತ್ತದೆ. ತಮ್ಮ ನಿತ್ಯಜೀವನದಲ್ಲಿ ಕೆಲವೊಂದು ಆಚರಣೆ ಸಂದರ್ಭದಲ್ಲಿ ಬೇಡರು ಪ್ರಾಣಿ ಬಲಿ ನೀಡಿ ಸಂಪ್ರದಾಯಗಳನ್ನು ಪೂರ್ಣಗೊಳಿಸುವುದನ್ನು ನೋಡಬಹುದು.

ಬುಡಕಟ್ಟು ಸಮುದಾಯಗಳು ಶಕ್ತಿದೇವತೆಗಳ ಆರಾಧಕರಾಗಿರುತ್ತಾರೆ. ಅಂತೆಯೇ ಬೇಡ ಸಮುದಾಯದವರು ಹೆಣ್ಣು ಮತ್ತು ಗಂಡು ದೇವರುಗಳನ್ನು ಆರಾಧಿಸುತ್ತಾರೆ. ಈ ದೇವತೆಗಳು ಪ್ರಾದೇಶಿಕವಾಗಿ ಹಲವಾರು ಹೆಸರುಗಳಿಂದ ಕಾಣಿಸಿಕೊಳ್ಳುತ್ತವೆ. ದುರ್ಗಮ್ಮ, ಮಾರೆಮ್ಮ, ಪಾಲಕಮ್ಮ, ಅಂಬಭಾವನಿ, ಚೌಡಮ್ಮ ಮತ್ತು ಎಲ್ಲಮ್ಮ ದೇವಿಯನ್ನು ಆರಾಧಿಸುತ್ತಾರೆ. ವಿಶೇಷವಾಗಿ ಶಿವರಾತ್ರಿ ಸಂದರ್ಭದಲ್ಲಿ ನಾಡಿನ ಹಲವು ಕಡೆಗಳಲ್ಲಿ ದುರ್ಗದೇವತೆಯನ್ನು ಆರಾಧಿಸುತ್ತಾರೆ. ಬೇಡ ಸಮುದಾಯದವರಿಗೆ ಸಾಮಾನ್ಯವಾಗಿ ಒಂದು ಗಂಡು ದೇವರಿದ್ದಾರೆ. ಅವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಆಂಜನೇಯನ ಆರಾಧಕರು ಕಂಡು ಬರುತ್ತಾರೆ. ಪ್ರತಿಯೊಂದು ಬೇಡ ಕುಟುಂಬದಲ್ಲಿ ಸಾಮಾನ್ಯವಾಗಿ ಈ ದೇವರನ್ನು ಆರಾಧಿಸುವುದು ಕಂಡು ಬರುತ್ತದೆ.

ಬೇಡ ಸಮುದಾಯವು ಬುಡಕಟ್ಟಾಗಿದ್ದರೂ ಇಂದು ನಾಗರಿಕ ಜಗತ್ತಿನೊಂದಿಗೆ ಹೊಂದಿಕೊಂಡಿದ್ದಾರೆ. ಕರ್ನಾಟಕದಲ್ಲಿ ನಾಯಕ, ತಳವಾರ, ವಾಲ್ಮೀಕಿ, ಬೇಡ ಮುಂತಾದ ಹೆಸರುಗಳಿಂದ ಗುರುತಿಸಲ್ಪಡುತ್ತಾರೆ. ಬುಡಕಟ್ಟು ಸಮುದಾಯಗಳ ಮಹಿಳೆಯು ಪುರುಷನಿಗಿಂತ ಹೆಚ್ಚು ಶ್ರಮಿಸುತ್ತಾಳೆ. ಇಡೀ ಕುಟುಂಬದ ಆರ್ಥಿಕ ನಿರ್ವಹಣೆಯಲ್ಲಿ ಮಹಿಳೆ ಪ್ರಮುಖ ಪಾತ್ರವಹಿಸುತ್ತಾಳೆ. ಸಮಾಜದಲ್ಲಿ ಮಹಿಳೆಯರನ್ನು ಶೋಷಿಸುವಂತಹ ಹಲವಾರು ಮುಖಗಳು ಅತಿ ಹೆಚ್ಚು ಸಂಕೀರ್ಣವಾಗಿವೆ. ಅದರ ಜೊತೆಗೆ ಕಾಲದಿಂದ ಕಾಲಕ್ಕೆ ಶೋಷಣೆಯ ಮುಖಗಳ ಸ್ವರೂಪ ಅಸಮಾನತೆಗಳು ಬಹುಮುಖಿಯಾಗಿವೆ. ಹಾಗೆಯೇ ಅಸಮಾನ ವ್ಯವಸ್ಥೆಗಳು ದಿನವಿಡೀ ದುಡಿಯುವ ವರ್ಗ ಮತ್ತು ಮಹಿಳೆಯರನ್ನು ತಮ್ಮ ಬಳಕೆಯ ವಸ್ತುವನ್ನಾಗಿ ಪರಿಭಾವಿಸಿವೆ. ಅಲ್ಲದೇ ದೇವರ ಹೆಸರಿನಲ್ಲಿ ಈ ಸಮುದಾಯದಲ್ಲಿ ಮಹಿಳೆಯರನ್ನು ದೇವದಾಸಿಯಾಗಿ ಬಿಡುವುದನ್ನು ಕಾಣಲಾಗುವುದು. ವಿಜಯನಗರ ಕಾಲದಲ್ಲಿ ಬೇಡ ಸಮುದಾಯದಲ್ಲಿ ಈ ಪದ್ಧತಿ ಹುಟ್ಟಿಕೊಂಡಿರಬೇಕೆಂದು ಹೇಳಬಹುದು. "ವಿಜಯನಗರ ಸಾಮ್ರಾಜ್ಯ ಆದ ಮೇಲೆ ದೇವದಾಸಿ, ಬಸವಿ, ಪಾತ್ರದವರು ಹೋದ ಸ್ಥಳಗಳು ಕಂಪ್ಲಿ, ಹೊಸಪೇಟೆ, ಹರಪನಹಳ್ಳಿ, ಮರಿಯಮ್ಮನಹಳ್ಳಿ, ಕೊಟ್ಟೂರು, ಕೂಡ್ಲಿಗಿ, ಸುರಪುರ, ರಾಯಚೂರು, ಆನೆಗೊಂದಿ" *(ಚೆನ್ನಣ್ಣ ವಾಲೀಕಾರ:೨೦೦೦:ಪು.೩೧೫).* ಹೀಗೆ ಮುಂತಾದ ಊರುಗಳಲ್ಲಿ ಸೇರಿಕೊಂಡು

ನೆಲೆಯೂರಿದರು. ಹೀಗಾಗಿ ಈ ಬೇಡ ಸಮುದಾಯದಲ್ಲಿ ಆಂಜನೇಯ ದೇವರಿಗೆ ಬಿಟ್ಟಿರುವ ದೇವದಾಸಿ ಮಹಿಳೆಯರನ್ನು ಹೆಚ್ಚಾಗಿ ಕಾಣಬಹುದು. ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿಯ ತಾಲೂಕುಗಳಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ದೇವದಾಸಿ ಪದ್ಧತಿ ಎನ್ನುವುದು ಜಾತಿ ವ್ಯವಸ್ಥೆಯಲ್ಲಿರುವ ಪದ್ಧತಿ ಯಾವ ಬುಡಕಟ್ಟಿನಲ್ಲೂ ಇಲ್ಲದ ಈ ದೇವದಾಸಿ ಪದ್ಧತಿ ಬೇಡ ಬುಡಕಟ್ಟಿನಲ್ಲಿ ಹೇಗೆ ಪ್ರವೇಶಿಸಿದೆ ಎಂಬುದನ್ನು ತಿಳಿಯುವ ಅಗತ್ಯವಿದೆ ಎನ್ನಿಸುತ್ತದೆ. ಬುಡಕಟ್ಟುಗಳು ಕಾಡಿನಿಂದ ಊರಿನ ಸಂಪರ್ಕಕ್ಕೆ ಬಂದಾಗ ಅವರು ಪಡೆದ ಸೌಲಭ್ಯಗಳಿಗಿಂತ ಕಳೆದುಕೊಂಡಿದ್ದು ಬಹಳಷ್ಟು. ಹೀಗೆ ತಮ್ಮನ್ನು ಕಳೆದುಕೊಂಡವರೆ ಈ ದೇವದಾಸಿಯರು. ಪವಿತ್ರ ಸಮುದಾಯ ತಮ್ಮನ್ನು ಸ್ವೀಕರಿಸದೆ ಇದ್ದಾಗ ಬದುಕಲು ಬೇರೆ ವಿಧಾನವಿಲ್ಲದೆ ಇದ್ದಾಗ ನರಕದ ರೂಪದಲ್ಲಿ ನಿರಂತರವಾಗಿ ಬಾಳಬೇಕಾಯಿತು. ಮೂಲತಃ ತಮ್ಮಲ್ಲಿ ದೇವದಾಸಿ ಪದ್ಧತಿ ಇರಲಿಲ್ಲವಾದರೂ ತಮ್ಮ ಪರಿಸರದ ಒಂದು ಪದ್ಧತಿ ಹೆಸರಿನಲ್ಲಿ ಲಾಂಛನದ ಮೂಲಕ ಕಳೆದುಕೊಳ್ಳುತ್ತಿದ್ದ ಪಾವಿತ್ರ್ಯಕ್ಕೆ ಧಾರ್ಮಿಕ ಮೊಹರನ್ನು ಹಾಕಿಸಿಕೊಳ್ಳಬೇಕಾಯಿತು. ಹಾಗಾಗಿ ಸಮುದಾಯ ಅವರನ್ನು ಸಹೃದಯತೆಯಿಂದ ಕಂಡು ಅವರನ್ನು ಈ ಸಾಮಾಜಿಕ ಅಪಮಾನದಿಂದ ಬಿಡುಗಡೆಗೊಳಿಸಬೇಕಾದ ಅವಶ್ಯಕತೆ ಇದೆ.

**ಕೋಷ್ಟಕ: ೪.೭ ಬಳ್ಳಾರಿ ಜಿಲ್ಲೆಯ ಪರಿಶಿಷ್ಟ ಪಂಗಡದ ದೇವದಾಸಿಯರ ಜನಸಂಖ್ಯೆ**

| ಕ್ರ.ಸಂ. | ತಾಲೂಕಿನ ಹೆಸರು | ೨೦೦೭-೦೮ರ ಸಮೀಕ್ಷೆ ಒಟ್ಟು ದೇವದಾಸಿಯರ ಸಂಖ್ಯೆ | ೨೦೦೭-೦೮ನೇ ಸಮೀಕ್ಷೆಯ ಪರಿಶಿಷ್ಟ ಪಂಗಡದ ದೇವದಾಸಿಯರ ಸಂಖ್ಯೆ |
|---|---|---|---|
| ೧. | ಬಳ್ಳಾರಿ | ೧೨೭೯ | ೧೨ |
| ೨. | ಸಿರುಗುಪ್ಪ | ೧೦೬೯ | ೩೮ |
| ೩. | ಸಂಡೂರು | ೯೬೮ | ೩೮೫ |
| ೪. | ಹೊಸಪೇಟೆ | ೨೫೪೬ | ೧೨೫೫ |
| ೫. | ಹೂವಿನ ಹಡಗಲಿ | ೯೭೮ | ೭೪ |
| ೬. | ಹೆಚ್.ಬಿ.ಹಳ್ಳಿ | ೧೮೨೧ | ೬೩೩ |
| ೭. | ಕೂಡ್ಲಿಗಿ | ೧೦೨೨ | ೬೩೪ |
| | **ಒಟ್ಟು** | **೯೭೩೩** | **೩೦೩೧** |

*(ಮೂಲ: ದೇವದಾಸಿ ಪುನರ್ವಸತಿ ಯೋಜನಾ ಕಛೇರಿ, ಬಳ್ಳಾರಿ)*

೨೦೦೭-೦೮ನೇ ಸಾಲಿನಲ್ಲಿ ದೇವದಾಸಿಯರ ಪುನವರ್ಸತಿ ಯೋಜನೆಯ ಅಡಿಯಲ್ಲಿ ದೇವದಾಸಿಯರ ಮರು ಸಮೀಕ್ಷೆಯನ್ನು ಮಾಡಲಾಯಿತು. ಅದರಲ್ಲಿ ಇಡೀ ಬಳ್ಳಾರಿ ಜಿಲ್ಲೆಯ ದೇವದಾಸಿಯರ ಸಂಖ್ಯೆಯನ್ನು ಗಮನಿಸಿದಾಗ ಒಟ್ಟು ೯೭೩೩ ದೇವದಾಸಿಯರು ಕಂಡುಬರುತ್ತಾರೆ. ಅವರಲ್ಲಿ ಪರಿಶಿಷ್ಟ ಪಂಗಡದಲ್ಲಿ ೩೦೩೧ ದೇವದಾಸಿಯರು ಇರುವುದು ತಿಳಿದುಬರುತ್ತದೆ. ಇಡೀ ಬಳ್ಳಾರಿ ಜಿಲ್ಲೆಯಲ್ಲಿ ಅಧಿಕಸಂಖ್ಯೆಯಲ್ಲಿ ಹೊಸಪೇಟೆ ಅಂದರೆ ವಿಜಯನಗರ ಕ್ಷೇತ್ರದಲ್ಲಿಯೇ ಕಂಡು ಬರುವುದು. ಅತೀ ಕಡಿಮೆಯಾಗಿ ಬಳ್ಳಾರಿ ತಾಲೂಕಿನಲ್ಲಿ ಕಂಡು ಬರುತ್ತವೆ. ಇದಕ್ಕೆ ವಿಜಯನಗರ ಸಾಮ್ರಾಜ್ಯದ ಪ್ರಭಾವವು ಇರಬಹುದಾಗಿದೆ. ಹೊಸಪೇಟೆಯು ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪಿಗೆ ಹತ್ತಿರವಿರುವುದು ಕಾರಣವಾಗಿರಬಹುದು ಎಂದು ಹೇಳಲಾಗುವುದು. ಇವರಲ್ಲಿ ಮೂವತ್ತು ಜನ ದೇವದಾಸಿಯರ ವ್ಯಕ್ತಿ ಅಧ್ಯಯನಕ್ಕೆ ಆಯ್ಕೆ ಮಾಡಕೊಳ್ಳಲಾಗಿದೆ.

**೪.೩. ಹಿಂದುಳಿದ ವರ್ಗಗಳು**

ಭಾರತೀಯ ಸಮಾಜದಲ್ಲಿ ಅನೇಕ ಶತಮಾನಗಳವರೆಗೆ ಜಾತಿ ಪದ್ಧತಿಯ ಆಧಾರಿತ ವ್ಯವಸ್ಥೆ ಇದ್ದಿತು. ಹಾಗೂ ಇತರ ಹಲವಾರು ಕಾರಣಗಳಿಂದಾಗಿ ಮೇಲುಕೀಳು,ಹಿಂದುಳಿದವರು ಎಂಬ ವರ್ಗೀಕರಣಉಂಟಾಯಿತು. ಆದಾಗ್ಯೂ ಸಮಾಜಶಾಸ್ತ್ರೀಯವಾಗಿ ಇಲ್ಲಿ ಹಿಂದುಳಿದ ವರ್ಗಗಳು ಎಂಬ ಪದವನ್ನು ನಿಶ್ಚಿತ ಅರ್ಥದಲ್ಲಿ ಬಳಸಲಾಗಿದೆ. ಹಿಂದುಳಿದ ವರ್ಗಗಳ ಬಗ್ಗೆ ಖಚಿತ ಪರಿಕಲ್ಪನೆ ಇರಬೇಕಾಗಿದೆ. ಹಿಂದುಳಿದ ವರ್ಗದವರನ್ನು ಸಮುದಾಯದ ದುರ್ಬಲ ವರ್ಗದವರೆಂದು ಅಥವಾ ವೀಕರ್ ಸೆಕ್ಷನ್ಸ್ ಆಫ್ ದಿ ಕಮ್ಯೂನಿಟಿ ಎಂಬುದಾಗಿಯೂ ಕರೆಯಲಾಗುತ್ತದೆ. ಭಾರತೀಯ ಸಂವಿಧಾನದಲ್ಲಿ ಈ ಪದವನ್ನು ಬಳಸಿದ್ದರೂ ಸಹ ಅದರಲ್ಲಿ ಹಿಂದುಳಿದ ವರ್ಗಗಳ ಬಗ್ಗೆ ವಿವರಣೆಯಿದೆಯೇ ಹೊರತು ವ್ಯಾಖ್ಯೆಯನ್ನು ನೀಡಲಾಗಿಲ್ಲ.

ಭಾರತೀಯ ಸಂವಿಧಾನದ ೩೪೦ನೇ ವಿಧಿಯ ಪ್ರಕಾರ ಹಿಂದುಳಿದ ವರ್ಗಗಳ ಸ್ಥಿತಿಗತಿಗಳನ್ನು ಹಾಗೂ ಅವರು ಎದುರಿಸುತ್ತಿರುವ ಸಮಸ್ಯೆಗಳನ್ನು ಪರಿಶೀಲಿಸಲು ರಾಷ್ಟ್ರಪತಿಗಳು ತಮಗೆ ಯೋಗ್ಯವೆನಿಸಿದ ವ್ಯಕ್ತಿಗಳಿಂದ ಒಂದು ಆಯೋಗವನ್ನು ರಚಿಸಿಸಮಸ್ಯೆಗಳ ನಿವಾರಣೆಗಾಗಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಕೈಗೊಳ್ಳಬಹುದಾದ ಕಾರ್ಯಕ್ರಮಗಳಾಗುವುವು? ಅವರ ಆರ್ಥಿಕ ಸ್ಥಿತಿಗತಿಯ ಸುಧಾರಣೆಗಾಗಿ ಯಾವ ರೀತಿಯ ಸಹಾಯ ಮಾಡಬಹುದು ಮುಂತಾದ ವಿಷಯಗಳ ಬಗ್ಗೆ ಸರ್ಕಾರಕ್ಕೆ ಒಂದು ವರದಿಯನ್ನು ಸಲ್ಲಿಸುತ್ತದೆ. ರಾಷ್ಟ್ರಪತಿಯವರು ಆ ಶಿಫಾರಸ್ಸನ್ನು ಸಂಸತ್ತುಗಳಲ್ಲಿ ಚರ್ಚೆಗಿಟ್ಟು, ಕೊನೆಗೆ ಒಂದು ತೀರ್ಮಾನವನ್ನು ಮಾಡುತ್ತಾರೆ. ಅಂತೆಯೇ ಭಾರತದ ರಾಷ್ಟ್ರಪತಿಗಳು ಹಿಂದುಳಿದ ವರ್ಗಗಳ ಸಮಸ್ಯೆಗಳ ನಿವಾರಣೆಗಾಗಿ ಹಿಂದುಳಿದ ವರ್ಗಗಳ ಆಯೋಗವನ್ನು ನೇಮಿಸಿದರು. ಈ ಆಯೋಗವು ಸಹ ಹಿಂದುಳಿದ ವರ್ಗಗಳ ಕುರಿತು ಸಮರ್ಪಿತ ವ್ಯಾಖ್ಯೆ ನೀಡಲು ತಮ್ಮ ಅಸಮರ್ಥತೆಯನ್ನು ವ್ಯಕ್ತಪಡಿಸಿತು. ಏಕೆಂದರೆ ಆರ್ಥಿಕವಾಗಿ ಹಿಂದುಳಿದಿದ್ದರೆ ಅವುಗಳನ್ನು ಹಿಂದುಳಿದ ವರ್ಗಗಳಿಗೆ ಸೇರಿಸಬೇಕೆ, ಸಾಮಾಜಿಕವಾಗಿ ಹಿಂದುಳಿದಿದ್ದರೆ ಅವುಗಳನ್ನು ಹಿಂದುಳಿದ

ವರ್ಗಗಳಿಗೆ ಸೇರಿಸಬೇಕೆ ಎಂಬುದರ ಬಗ್ಗೆ ಖಚಿತವಾಗಿ ನಿರ್ಧರಿತವಾಗದ ಹೊರತು ಇವು ಹಿಂದುಳಿದ ವರ್ಗಗಳು ಎಂಬುದಾಗಿ ಪಟ್ಟಿ ಮಾಡುವುದು ಕಷ್ಟ ಸಾಧ್ಯ.

ಒಂದು ಪಂಗಡವು ಸಾಮಾಜಿಕವಾಗಿ ಹಿಂದುಳಿದಿದೆ ಎಂದು ನಿರ್ಧರಿಸಲು ಅದರ ಜಾತಿಯನ್ನು ಅವಲೋಕಿಸುವುದು ಅಗತ್ಯವಾಗಿದೆ. ಏಕೆಂದರೆ ಜಾತಿಯು ಅದರ ಸಾಮಾಜಿಕ ಅಂತಸ್ತನ್ನು ಸೂಚಿಸುತ್ತದೆ. ಉದಾ:– ಬ್ರಾಹ್ಮಣನ ಸಾಮಾಜಿಕ ಅಂತಸ್ತು ಹೆಚ್ಚಿನದು, ಶೂದ್ರನ ಸಾಮಾಜಿಕ ಅಂತಸ್ಸು ಕೆಳಮಟ್ಟದ್ದು, ಬ್ರಾಹ್ಮಣನು ಕೆಳಮಟ್ಟದ ಕೆಲಸ ಮಾಡಿದರೂ ಅವನ ಸಾಮಾಜಿಕ ಅಂತಸ್ತು ಹೆಚ್ಚಿನದೇ ಆಗಿರುತ್ತದೆ. ಆದರೆ ಶೂದ್ರ ಇಲ್ಲವೆ ಅಸ್ಪೃಶ್ಯನು ಉತ್ತಮ ವೃತ್ತಿಯನ್ನು ಅನುಸರಿಸುತ್ತಿದ್ದರೂ ಸಹ ಅವನ ಅಂತಸ್ತು ಕೆಳಮಟ್ಟದ್ದೇ ಆಗಿರುತ್ತದೆ. ಆದರೂ ಆರ್ಥಿಕವಾಗಿ ನೋಡಿದರೆ ಬ್ರಾಹ್ಮಣರಲ್ಲಿಯೂ ಅನೇಕ ಮಂದಿ ಬಡಬ್ರಾಹ್ಮಣರಿದ್ದಾರೆ. ಇದರಿಂದಾಗಿ ಪರಿಶಿಷ್ಟ ಜಾತಿಯನ್ನು ಕೇವಲ ಅಸ್ಪೃಶ್ಯತೆಯ ಆಧಾರದ ಮೇಲೆ ಗುರುತಿಸಲಾಗುವಂತೆ, ಹಿಂದುಳಿದ ವರ್ಗಗಳನ್ನು ಸುಲಭವಾಗಿ ಗುರುತಿಸುವುದು ಸಾಧ್ಯವಿಲ್ಲ.

ಹಿಂದುಳಿದ ವರ್ಗಗಳ ಆಯೋಗದ ಸದಸ್ಯರು ಹಿಂದುಳಿದ ವರ್ಗಗಳನ್ನು ನಿರ್ಧರಿಸಲು ಆರಂಭದಲ್ಲಿ ಹಲವಾರು ಅಭಿಪ್ರಾಯಗಳನ್ನು ಸೂಚಿಸಿದರು. ಕೆಲವರು ಆರ್ಥಿಕವಾಗಿ ಹಿಂದುಳಿದವರೇ ಹಿಂದುಳಿದ ವರ್ಗದವರು ಎಂದರೆ, ಮತ್ತೆ ಕೆಲವರು ಅತಿ ಕಡಿಮೆ ಸಾಕ್ಷರತಾ ಪ್ರಮಾಣವನ್ನು ಹೊಂದಿದ ಜನರೇ ಹಿಂದುಳಿದ ವರ್ಗದವರು ಎಂಬುದಾಗಿ ಅಭಿಪ್ರಾಯಪಟ್ಟರು. ಇನ್ನೂ ಕೆಲವರು ದಿನಗೂಲಿಯಲ್ಲಿ ತೊಡಗಿರುವ ಶ್ರಮಜೀವಿಗಳನ್ನು ಹಿಂದುಳಿದ ವರ್ಗದವರೆಂದು ಪ್ರತಿಪಾದಿಸಿದರು. ಮತ್ತೆ ಕೆಲವರು ಎಲ್ಲಾ ಸ್ತ್ರೀಯರನ್ನು ಹಿಂದುಳಿದ ವರ್ಗಗಳಿಗೆ ಸೇರಿಸಬೇಕೆಂಬ ಅಭಿಪ್ರಾಯ ಮಂಡಿಸಿದರು. ಈ ಬಗೆಯ ವಾದಗಳಲ್ಲಿ ಯಾವುದೇ ಒಂದು ಅಭಿಪ್ರಾಯಕ್ಕೆ ಮಹತ್ವ ನೀಡದೆ, ೧೯೫೬ರಲ್ಲಿ ಬೆಳಕಿಗೆ ಬಂದ ಹಿಂದುಳಿದ ವರ್ಗಗಳ ವರದಿಯಲ್ಲಿ ಆಯೋಗವು ಹಿಂದುಳಿದ ವರ್ಗಗಳನ್ನು ನಿರ್ಧರಿಸಲು ಕೆಲವಾರು ಲಕ್ಷಣಗಳನ್ನು ಕೊಟ್ಟಿರುವುದು. ೧. ಸಾಂಪ್ರದಾಯಿಕ ವರ್ಣಾಶ್ರಮ ಪದ್ಧತಿಯಲ್ಲಿ ಕೆಳಮಟ್ಟದ ಕೊನೆಯ ಶ್ರೇಣಿಗೆ ಸೇರಿದವರು. ೨. ಸಮಾಜ ಯಾವುದೇ ಒಂದು ಜಾತಿಯ ಬಹುಸಂಖ್ಯಾತರು ಅನಕ್ಷರಸ್ಥರಾಗಿ, ಶೈಕ್ಷಣಿಕ ಪ್ರಗತಿಯನ್ನು ಹೊಂದಿರದಿದ್ದರೆ ಅಂಥವರು ೩. ಸರ್ಕಾರಿ ಸೇವೆಯಲ್ಲಿ ಯಾವುದೇ ಒಂದು ಜಾತಿ ಅಥವಾ ಸಮುದಾಯ ಪ್ರಾತಿನಿಧ್ಯತೆ ತೀರ ಕಡಿಮೆ ಇದ್ದರೆ ಅಂಥವರು ೪. ವ್ಯಾಪಾರ, ವ್ಯವಹಾರ ಮತ್ತು ಉದ್ಯೋಗಗಳಲ್ಲಿ ಯಾವುದೇ ಜಾತಿ ಅಥವಾ ಸಮುದಾಯಕ್ಕೆ ಪ್ರಾತಿನಿಧ್ಯವಿಲ್ಲದಿದ್ದರೆ ಅಂಥವರನ್ನು ಹಿಂದುಳಿದ ವರ್ಗಗಳಲ್ಲಿ ಸೇರಿಸುವುದೆಂದು ನಿರ್ಧರಿಸಿದರು.

ಹಿಂದುಳಿದ ವರ್ಗ ಎಂಬುದು ಒಂದು ಸಮಷ್ಟಿ ಸಂಬಂಧವನ್ನು ಸೂಚಿಸುವ ಪದವಾಗಿದೆ. ಇದು ಸರ್ಕಾರಗಳು ಮೀಸಲಾತಿ ನೀಡಲು ಅನುಕೂಲಕ್ಕಾಗಿ ಬಳಸುತ್ತಾ ಬಂದಿರುವ ಪದವಾಗಿದೆ. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಅವಕಾಶ ವಂಚಿತರಾದವರನ್ನು ಮುಂದುವರಿಸಲು ಮತ್ತು ಅವರಿಗೆ ಸೂಕ್ತವಾದ ಸ್ಥಾನಮಾನ ಕಲ್ಪಿಸಲು ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಈ ವರ್ಗವನ್ನು ಅಧಿಕಾರಿ ವರ್ಗ ಸೃಷ್ಟಿಸಿದ್ದು, ಇದರಲ್ಲಿ ಅನೇಕ ಜಾತಿಯ ಜನರು ಸೇರಿದ್ದಾರೆ. ಇವರಲ್ಲಿ ಮೂಲದಲ್ಲಿ

ಬಡುಕಟ್ಟುಗಳಾಗಿದ್ದ ಮತ್ತು ಅಲೆಮಾರಿಗಳಾಗಿದ್ದ ಜನರು, ಕಾಡಿನಿಂದ ನಾಡಿಗೆ ಬಂದ ಕಾಲಕ್ರಮೇಣದಲ್ಲಿ ಒಂದು ಕಡೆ ನೆಲೆಯೂರಿ ಜೀವನ ಸಾಗಿಸುತ್ತಿರುವ ಹಲವಾರು ಜಾತಿಯ ಜನರು ಈ ವರ್ಗದಲ್ಲಿದ್ದಾರೆ. ಇದಲ್ಲದೆ ಊರಿನ ಮುಖಂಡರ ಮತ್ತು ಮೇಲುಜಾತಿಯ ಜನರಿಗೆ ಕೆಲವು ಸೇವೆಗಳನ್ನು ನೀಡುತ್ತಾ ಬಂದಿರುವ ಜನರು ಮುಂದೆ ಅದೇ ಹೆಸರಿನಲ್ಲಿ ಜಾತಿಯಾಗಿ ರೂಪುಗೊಂಡ ಕಾರಣವಾಗಿ ಇಲ್ಲಿ ಅವರನ್ನು ಸೇರಿಸಿದ್ದಾರೆ. ಹೀಗಾಗಿ ಇಲ್ಲಿ ಹಲವಾರು ಜಾತಿಗಳ ಜನರನ್ನು ಒಂದು ವರ್ಗವಾಗಿ ಸರ್ಕಾರ ರೂಪಿಸಿದ್ದರೂ ಅವರಲ್ಲಿ ಸಮಾನತೆಯಿಂದ ಕೂಡಿದ ಬದುಕಾಗಲಿ ತಾರತಮ್ಯರಹಿತ ಜೀವನ ಕ್ರಮವಾಗಲಿ ರೂಢಿಯಲ್ಲಿಲ್ಲ. ಈ ಜಾತಿಗಳಲ್ಲೂ ಭಿನ್ನ ಭಿನ್ನ ಜೀವನ ಕ್ರಮಗಳಿವೆ ಮತ್ತು ಇವರೆಲ್ಲರ ತಾರತಮ್ಯಗಳು ರೂಢಿಯಲ್ಲಿವೆ. ಮೇಲು-ಕೀಳು, ಶುದ್ಧ-ಅಶುದ್ಧ, ನಿಷೇಧ-ನಿಯಮ ನಿರ್ಬಂಧಗಳು ಈ ವರ್ಗದ ಜನರಲ್ಲಿ ಇದ್ದು, ತಾರತಮ್ಯದ ಹಲವು ಮುಖಗಳು ರೂಢಿಯಲ್ಲಿರುವುದು ಕಂಡುಬರುತ್ತದೆ. ಎಲ್ಲಾ ಕಡೆಯೂ ಜಾತಿ ಆಧಾರಿತ ಆಚರಣೆ ಸಂಪ್ರದಾಯ ನಂಬಿಕೆಗಳು ರೂಢಿಯಲ್ಲಿವೆ. ಕರ್ನಾಟದಲ್ಲಿಯೂ ಈ ತೆರೆನಾದ ಆಚರಣೆ ರೂಢಿ ಸಂಪ್ರದಾಯಗಳನ್ನು ಮಾಡುವುದನ್ನು ಕಾಣಲಾಗುವುದು. ಈ ರೀತಿಯ ಆಚರಣೆ ಸಂಪ್ರದಾಯಗಳನ್ನು ಆಚರಿಸುವಲ್ಲಿ ಹಿಂದುಳಿದ ವರ್ಗದಲ್ಲಿನ ಕುರುಬರು ಮತ್ತು ಗಂಗಮತಸ್ಥರು ಮುಂತಾದ ಸಮುದಾಯಗಳಲ್ಲಿ ದೇವದಾಸಿ ಪದ್ಧತಿಯನ್ನು ಕಾಣಬಹುದಾಗಿದೆ. ಇವರ ಮನೆ ಅಥವಾ ಕುಲದೇವರ ಆರಾಧನೆಯ ಹಿನ್ನೆಲೆಯಲ್ಲಿ ಈ ಪದ್ಧತಿ ಬೆಳೆದು ಬಂದಿರುವುದು. ಇದೊಂದು ಅನಿಷ್ಟ ಪದ್ಧತಿಯಾಗಿ ಪ್ರಸ್ತುತ ಪರಿಣಮಿಸಿದರೂ ಈ ಸಮುದಾಯದ ಕೆಲವರು ಸಂಪ್ರದಾಯಗಳಿಗೆ ಒಳಗಾಗಿ ದೇವದಾಸಿ ಪದ್ಧತಿಯನ್ನು ಆಚರಿಸುವುದು ಬಳ್ಳಾರಿ ಜಿಲ್ಲೆಯ ಕೆಲವು ಪ್ರದೇಶದಲ್ಲಿ ಕಂಡು ಬಂದಿದೆ.

**೪.೩.೧ ಗಂಗಾಮತಸ್ಥರು**

ಭಾರತದಲ್ಲಿ ಸಮುದಾಯಗಳನ್ನು ಸಾಮಾನ್ಯವಾಗಿ ವೃತ್ತಿಯ ಹಿನ್ನೆಲೆಯಲ್ಲಿ ಗುರುತಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಇವರು ತಮ್ಮನ್ನು ತಾವು ಅಂಬಿಗರು, ಬೆಸ್ತರು, ಗಂಗಾಮತಸ್ಥರು, ಬಾರಿಕರು ಮುಂತಾದ ಹೆಸರುಗಳಿಂದ ಕರೆದುಕೊಂಡು ಬಂದಿದ್ದಾರೆ. ಇವರು ಕರ್ನಾಟಕ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ವಾಸಿಸುತ್ತಿರುವುದನ್ನು ಕಾಣಬಹುದು. ಗಂಗಾಮತಸ್ಥರು ಯಾವ ಮೂಲದಿಂದ ಬಂದರು ಎಂಬುದನ್ನು ನೋಡಿದಾಗ ಇವರು ಪ್ರಾಚೀನ ಕಾಲದಲ್ಲಿ ನದಿ, ಸರೋವರಗಳ ತೀರದಲ್ಲಿ ಸಮುದ್ರ ದಡಗಳಲ್ಲಿ ವಾಸಿಸುತ್ತಿದ್ದು, ನೀರಿನಲ್ಲಿಯೇ ಕಸುಬನ್ನು ಮಾಡುವವರಾಗಿದ್ದರು. ಅಂದರೆ ನಾವೆ, ದೋಣಿಗಳನ್ನು ನಿರ್ಮಿಸಿಕೊಂಡು ಅವುಗಳ ಮೂಲಕ ಜನರನ್ನು ನದಿಯ ಈ ದಡದಿಂದ ಆ ದಡಕ್ಕೆ ದಾಟಿಸುತ್ತಿದ್ದರು. ಈ ಮುಖಾಂತರ ಅಲ್ಪ ಸ್ವಲ್ಪ ಹಣವನ್ನು ಸಂಪಾದಿಸುತ್ತಿದ್ದರು. ಆ ವೃತ್ತಿಯಿಂದ ಅವರಿಗೆ ಜೀವನ ಸಾಗಿಸುವುದೂ ಕಷ್ಟವಾದಾಗ ತಾವೇ ಬಲೆಗಳನ್ನು ನೇಯ್ದು, ಮೀನು ಹಿಡಿದು ತಾವೂ ಉಪಯೋಗಿಸಿ, ಉಳಿದ ಮೀನುಗಳನ್ನು ಮಾರಿ ಜೀವನ ಸಾಗಿಸುತ್ತಿದ್ದರು. ಈ ರೀತಿಯಲ್ಲಿ ಇವರು ನೀರಿನಲ್ಲಿಯೇ ಕಸುಬನ್ನು ಮಾಡುತ್ತಿದ್ದರಿಂದ ಇವರಿಗೆ ಸಹಜವಾಗಿಯೇ ನೀರಿನ ಮಕ್ಕಳು, ಗಂಗೆಯ ಮಕ್ಕಳು, ಗಂಗಾಪುತ್ರರು ಎಂದು ಹೆಸರು ಬರಲು ಕಾರಣವಾಯಿತು. ಇವರಲ್ಲಿ

ದೋಣಿ ನಡೆಸುವವರನ್ನು ಅಂಬಿಗರೆಂದೂ, ಮೀನು ಹಿಡಿಯುವವರನ್ನು ಬೆಸ್ತರೆಂದು, ಮೀನುಗಾರರೆಂದು ಕರೆಯುತ್ತಾರೆ.

"ಕರ್ನಾಟಕ ರಾಜ್ಯದ ಅನೇಕ ಭಾಗಗಳಲ್ಲಿ ನೆಲೆನಿಂತಿರುವ ಕಬ್ಬೇರರು ಬೇರೆ ಬೇರೆ ಹೆಸರಿನಿಂದ ಗುರುತಿಸಿಕೊಂಡಿದ್ದಾರೆ. ಅವರ ಮೂಲ ಉದ್ಯೋಗದೊಂದಿಗೆ ಹೆಸರುಗಳೆಲ್ಲ ಇರುವುದು ಕಂಡು ಬರುತ್ತದೆ. ೧೯೫೮ರಲ್ಲಿ ಇಡೀ ರಾಜ್ಯದಲ್ಲಿ ನಾನಾ ಹೆಸರುಗಳಿಂದ ಕರೆಯುವ ಕಬ್ಬೇರರೆಲ್ಲರೂ ಬೆಂಗಳೂರಿನಲ್ಲಿ ಸಭೆ ಸೇರಿ ನಾವೆಲ್ಲರೂ ಇನ್ನು ಮುಂದೆ ಗಂಗಾಮತಸ್ಥರೆಂದು ಕರೆದುಕೊಳ್ಳಬೇಕೆಂದು ನಿರ್ಣಯ ಕೈಗೊಂಡರು. ಆದರೆ ಆ ಸಭೆಯಲ್ಲಿ ತೆಗೆದುಕೊಂಡ ನಿರ್ಣಯ ನಿರ್ಣಯವಾಗಿಯೇ ಉಳಿದಿದೆ. ಇಂದಿಗೂ ಸಹ ಬೇರೆ ಬೇರೆ ಹೆಸರಿನಿಂದಲೇ ಗಂಗಮತಸ್ಥರು ಗುರುತಿಸಿಕೊಳ್ಳುತ್ತಿದ್ದಾರೆ" *(ಯಲ್ಲಪ್ಪ ಭೀಮಪ್ಪ:೨೦೧೬:೧೮).* ಬಳ್ಳಾರಿ ಜಿಲ್ಲೆಯಲ್ಲಿ ಬಾರಿಕರು, ಬೆಸ್ತರು, ಅಂಬಿಗರು, ಗಂಗಮತಸ್ಥರೆಂದು ತಮ್ಮ ಸಮುದಾಯದ ಹೆಸರನ್ನು ಹೇಳುತ್ತಾರೆ.

ಗಂಗಮತಸ್ಥರನ್ನು "ಕಬ್ಬೇರ, ಬೆಸ್ತ, ಜಲಗಾರ, ಗಂಗಾಮತಸ್ಥ, ಮಡ್ಡೇರ ಬಾರಿಕ" *(ಉಳ್ಳೇಶ್ವರಪ್ಪ ಎಂ.:೨೦೦೮:೭೦).* ಎಂದು ಹೊಸಪೇಟೆಯ ಭಾಗದಲ್ಲಿ ಕರೆಯುತ್ತಾರೆ. "ಹೊಸಪೇಟೆ ತಾಲೂಕಿನಲ್ಲಿ ಸುಮಾರು ೧೧ ಸಾವಿರದಷ್ಟು ಜನಸಂಖ್ಯೆ ಹೊಂದಿರುವ" *(ಉಳ್ಳೇಶ್ವರಪ್ಪ:೨೦೦೮:೭೦).* ಈ ಸಮುದಾಯದವು ಪ್ರತಿ ಗಂಗಾ ಜಯಂತಿ, ಅಂಬಿಗರ ಚೌಡಯ್ಯ ಜಯಂತಿಗಳನ್ನು ಆಚರಿಸುತ್ತಾರೆ. ಅಲ್ಲದೇ ಬಾರಿಕರು ಮೀನುಗಾರಿಕೆಯೊಂದಿಗೆ ಕೃಷಿಯನ್ನು ಮಾಡುತ್ತಿದ್ದಾರೆ. ಬೆಸ್ತರಿಗೂ ನೀರಿಗೂ ನೇರವಾದ ಸಂಬಂಧವಿದೆ. ಅದಕ್ಕಾಗಿ ಊರಿನ ಕೆರೆಯಿಂದ ಸೂಕ್ತ ಸಮಯಕ್ಕೆ ನೀರು ಹಂಚಲು ನೇಮಕಗೊಂಡಿರುತ್ತಾರೆ. ಇವರನ್ನು ನೀರ್ಗಂಟಿ ಎಂದು ಕರೆಯುತ್ತಾರೆ. ಇವರು ಬಹುತೇಕ ಗಂಗಮತಸ್ಥರೇ ಆಗಿದ್ದಾರೆ ಎನ್ನಲಾಗುವುದು.

ಗಂಗಮತಸ್ಥರಲ್ಲಿ ಹೆಚ್ಚಾಗಿ ಜಲಕ್ಕೆ ಸಂಬಂಧಿಸಿದಂತೆ ಆಚರಣೆಗಳು ಕಂಡುಬರುತ್ತವೆ. ಉತ್ತರ ಕರ್ನಾಟಕದ ಬಹುತೇಕ ಪ್ರದೇಶಗಳಲ್ಲಿ ನೀರಿಗೆ ಸಂಬಂಧಿಸಿದ ಆಚರಣೆಗಳನ್ನು ಕಾಣಬಹುದು. ಗಂಗಮತಸ್ಥರು ಆಷಾಢ ಹುಣ್ಣಿಮೆಯಲ್ಲಿ ಬಹುತೇಕ ಮಳೆಗಾಗಿ ಊರಿನ ಗ್ರಾಮ ದೇವತೆಗಳಿಗೆ ನೀರು ನೀಡುವ ಕಾರ್ಯಕ್ರಮವನ್ನು ಮಾಡುತ್ತಾರೆ. ಕಾರಣ ಇವರ ಕುಲಕಸುಬು ಇಂದಿಗೂ ನೀರಿಗೆ ಸಂಬಂಧಿಸಿದ ಉದ್ಯೋಗವಾಗಿರುವುದರಿಂದ ಹೆಚ್ಚಿನಸಂಖ್ಯೆಯಲ್ಲಿ ಮಳೆಗಾಗಿ ವಿಶಿಷ್ಟ ಆಚರಣೆ ಮಾಡಿ ದೇವರನ್ನು ಪ್ರಾರ್ಥಿಸುತ್ತಾರೆ. ಅದರಲ್ಲೂ ಇನ್ನು ವಿಶೇಷವೆಂದರೆ ಕಪ್ಪೆ ಮದುವೆ, ಕತ್ತೆ ಮದುವೆಗಳನ್ನು ಮಾಡಿದರೆ ಮಳೆ ಬರುತ್ತದೆ ಎಂಬುದು ಅವರ ನಂಬಿಕೆಯಾಗಿದೆ. ಇವರು ಜೋಕುಮಾರನ ಹುಣ್ಣಿಮೆಯನ್ನು ಬಹಳ ಅದ್ಭುತವಾಗಿ ಆಚರಿಸುತ್ತಾರೆ. ಜೋಕುಮಾರನನ್ನು ಗಂಗಮತಸ್ಥರ ಹೆಣ್ಣುಮಕ್ಕಳು ತಲೆಯ ಮೇಲೆ ಹೊತ್ತುಕೊಂಡು ಕಾಲ್ನಡಿಗೆಯಲ್ಲಿಯೇ ಅನೇಕ ಹಳ್ಳಿಗಳಲ್ಲಿ ಏಳು ದಿನ ಏಳು ಊರು ಅಲೆಯುತ್ತಾ ಪೂಜೆ ಮಾಡುತ್ತಾರೆ. ಹೀಗೆ ಪೂಜಿಸುತ್ತಿದ್ದ ಜೋಕುಮಾರ ಏಳನೇ ದಿನ ಸಾಯುತ್ತಾನೆ. ಇಂತಹ ಜೋಕುಮಾರನ ಆರಾಧನಾ ಸಂಪ್ರದಾಯವನ್ನು ಗಂಗಮತಸ್ಥರು ತಲಾತಲಾಂತರದಿಂದ ಆಚರಿಸಿಕೊಂಡು ಬಂದಿದ್ದಾರೆ. ಜೊತೆಗೆ ಇವರು

ಮಾತೃದೇವತಾರಾಧಕರಾದಿದ್ದರೂ ಇವರು ಹುಲಿಗೆಮ್ಮ, ಎಲ್ಲಮ್ಮ, ದುರುಗಮ್ಮ ಮುಂತಾದ ಸ್ತ್ರೀ ದೈವಗಳನ್ನು ಪೂಜಿಸುವರು ಈ ಸಮುದಾಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಹಾಗೆಯೇ ಬಳ್ಳಾರಿ ಜಿಲ್ಲೆಯ ಗಡಿಯಲ್ಲಿರುವ ಕೊಪ್ಪಳದ ಹುಲಿಗೆಮ್ಮದೇವಿಯ ಹಿನ್ನೆಲೆಯಲ್ಲಿ ಗಂಗಮತಸ್ಥರ ಪಾತ್ರವು ಬಹಳ ಪ್ರಮುಖವಾಗಿ ಕಂಡುಬರುತ್ತದೆ. ಅಲ್ಲದೆ ಈಗಲೂ ಕೂಡ ಹುಲಿಗೆಯ ಕ್ಷೇತ್ರದಲ್ಲಿ ನಡೆಯುವ ಹುಲಿಗೆಮ್ಮ ದೇವಿಯ ಜಾತ್ರೆಯಲ್ಲಿ ಗಂಗಮತಸ್ಥರಿಂದಲೇ ಪ್ರಾಧಾನವಾಗಿ ಅನೇಕ ಆಚರಣೆಗಳು ನಡೆಯುತ್ತದೆ. ಈ ಹಿನ್ನೆಲೆಯನ್ನು ಗಮನಿಸಿದಾಗ ಇವರು ಮಾತೃ ಅಥವಾ ಸ್ತ್ರೀ ದೈವಗಳನ್ನು ಹೆಚ್ಚಾಗಿ ಪೂಜಿಸುವುದನ್ನು ಗಮನಿಸಬಹುದು. ಜೊತೆಗೆ ಮಲ್ಲಯ್ಯನ ಆರಾಧನೆ ಮಾಡುವಲ್ಲಿಯೂ ಗಂಗಮತಸ್ಥರು ಕಂಡುಬರುತ್ತಾರೆ.

ಈ ಸಮುದಾಯದಲ್ಲಿ ದೇವದಾಸಿ ಪದ್ಧತಿ ಹುಟ್ಟಿಕೊಳ್ಳಲು ಕಾರಣವನ್ನು ಒಂದು ಐತಿಹ್ಯಾದಿಂದ ತಿಳಿಯಲಾಗುವುದು. "ಅಂಬಿಗನು ದಿನಾಲು ಆ ಕಡೆಯಿಂದ ಈ ಕಡೆಗೆ ತನ್ನ ದೋಣಿಯ ಮೂಲಕ ಜನರನ್ನು ಹೊಳೆ ದಾಟಿಸುತ್ತಿದ್ದನಂತೆ. ಅಂತಹ ಸಮಯದಲ್ಲಿ ಹುಲಿಗೆಮ್ಮಳು ಒಂದು ಒಳ್ಳೆ ರೂಪದಲ್ಲಿ ಹೋಗುತ್ತಿದ್ದುದ್ದನ್ನು ಕಂಡು ಅಂಬಿಗನು ಮನಸ್ಸಿನಲ್ಲಿ ಆಕೆಯ ಬಗ್ಗೆ ಹೊಲಸು ಭಾವಿಸಿ ಕಂಡಾಗ ಇದನ್ನು ಮನಗಂಡ ಹುಲಿಗೆಮ್ಮದೇವಿ ನದಿಯ ನಡುವೆ ತಾನು ಮಾಯವಾಗಿ ಅಂಬಿಗನನ್ನು ಅಂಬಿಗನ ದೋಣಿಯನ್ನು ಮುಳುಗುವಂತೆ ಮಾಡಿದಳು. ಇದನ್ನರಿತ ಅಂಬಿಗನ ಹೆಂಡತಿಯು ತಾಯಿ ನಮ್ಮವ್ವ ನನ್ನ ಗಂಡನನ್ನು ಉಳಿಸವ್ವ ಎಂದು ಬೇಡಿದಾಗ ಹುಲಿಗೆಮ್ಮ ಇದನ್ನೆಲ್ಲಾ ಹೇಳಿದಳು. ಆಗ ಅಂಬಿಗನ ಹೆಂಡತಿ ಆಳುತ್ತಿರುವುದನ್ನು ಕಂಡು ಸರಿ ನಾನು ನಿನ್ನ ಗಂಡನನ್ನು ಉಳಿಸುತ್ತೇನೆ. ಮುಂದೆ ನಿನಗೆ ಮಕ್ಕಳಾದಾಗ ನಿನಗೆ ಹೆಣ್ಣಾಗಲಿ, ಗಂಡಾಗಲಿ ಅವಿಷ್ಟು ಮಕ್ಕಳನ್ನು ನನಗೆ ಬೀಡಬೇಕು. ಅಂದರೆ ಅವರಿಗೆ ಮುತ್ತು ಕಟ್ಟಿಸಬೇಕು ಎಂದು ಹೇಳಿ ಅವರು ತನ್ನ ಸೇವೆ ಮಾಡಬೇಕು ಎಂದೇಳಿ ಮಾಯಾವಾದಳಂತೆ" *(ಕೃಷ್ಣವೇಣಿ ಆರ್.: ೨೦೦೭:೧೧೯).* ಹಾಗಾಗಿಯೇ ಈ ಸಮುದಾಯದಲ್ಲಿ ದೇವದಾಸಿ ಪದ್ಧತಿ ಹುಟ್ಟಿಕೊಂಡಿರಬೇಕು.

ಹಿಂದುಳಿದ ವರ್ಗಗಳ ದೇವದಾಸಿಯರನ್ನು ಗಮನಿಸಿದಾಗ ಇದೇ ಬಳ್ಳಾರಿ ಜಿಲ್ಲೆಯ ತಾಲೂಕಿನಲ್ಲಿ ಗಂಗಮತಸ್ಥರ ಸಮುದಾಯದ ದೇವದಾಸಿಯರನ್ನೇ ಹೆಚ್ಚಿನ ಸಂಖ್ಯೆಯಲ್ಲಿ ಕಾಣಬಹುದು. ಅದರಲ್ಲೂ ಹೊಸಪೇಟೆ ತಾಲೂಕಿನಲ್ಲಿ ಅಧಿಕಸಂಖ್ಯೆಯಲ್ಲಿ ದೇವದಾಸಿಯರು ಈ ಸಮುದಾಯದಲ್ಲಿದ್ದಾರೆ.

**೪.೩.೨ ಕುರುಬ ಸಮುದಾಯ**

ಕರ್ನಾಟಕದ ಹಿಂದುಳಿದ ವರ್ಗಗಳಲ್ಲಿ ಕುರುಬ ಸಮುದಾಯ ಒಂದಾಗಿದೆ. ಮೂಲ ಮಾನವರು ಆಹಾರ ಮತ್ತು ಬೇಟೆಗಾಗಿ ಕುರಿಗಳನ್ನು ಆಶ್ರಯಿಸಬೇಕಾಯಿತು. ಕುರಿಗಳನ್ನು ಪಾಲನೆ ಮಾಡುವವನನ್ನು ಕುರುಪರೆಂದು ಕರೆಯುತ್ತಿದ್ದರು. ಕಾಲಾಂತರದಲ್ಲಿ ಕುರುಪ ಎಂಬುದು ಕುರುಬನಾಗಿ ಬದಲಾಗಿದೆ ಎನ್ನಬಹುದು. ಬೇಟೆಯಾಡಿ ಬದುಕುವ ಮಾನವರು ಮುಂದೆ ಒಂದೆಡೆ ನೆಲೆಸಿ ದಿನಾ ಬೇಟೆಯಾಡಿ ಆಹಾರವನ್ನು ತರುವ ಬದಲು ಅವನ್ನು ಸಾಕಿ ಅವುಗಳ ಮುಖಾಂತರ ಜೀವನವನ್ನು ರೂಪಿಸಿಕೊಂಡವರು ಕುರುಬರೆಂದು ಕರೆಯಿಸಿಕೊಂಡರು. ಪ್ರಾಚೀನ ಕಾಲದಲ್ಲಿ ತಮ್ಮ ಪ್ರಾಣಿಗಳಾದ

ಕುರಿಗಳೊಂದಿಗೆ ಬದುಕುತ್ತಾ ಇದೊಂದು ಉದ್ಯೋಗ ನಿಮಿತ್ತವಾಗಿ ಹಲವಾರು ಉಪಪಂಗಡಗಳ ಹುಟ್ಟಿಗೆ ಕಾರಣವಾಗಿದೆ. ಕುರಿ ಸಾಕಣಿಕೆ ಈ ಸಮುದಾಯದವರ ಕಸುಬಾಗಿದ್ದರಿಂದ ಕುರುಬ ಎನ್ನುವ ಹೆಸರು ಬಂದಿರಬಹುದು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಕುರುಬ ಎಂಬ ಪದವು ಉದ್ಯೋಗ ವಾಚಕವಾಗಿ ಬಂದದ್ದು, ಕುರುಬ ಎಂಬ ನಾಮ ವಿಶೇಷಣ ಕುರಿಗಾಯಿಯಾಗಿದ್ದ ಜನಾಂಗಕ್ಕೆ ಬಂದುದಾಗಿರಬೇಕು. ಈ ಸಮುದಾಯವು ತಮ್ಮ ಕುರಿ ಮುಂದೆಗಳ ಪಾಲನೆಸಿ, ಪೋಷಣೆಗೆ ಸೂಕ್ತ ಜಾಗವನ್ನೇ ಆಶ್ರಯಿಸುವುದು ಅನಿವಾರ್ಯ. ಅದಕ್ಕಾಗಿ ಅವರು ಅರಣ್ಯ, ಹುಲ್ಲುಗಾವಲು ಹಾಗೂ ಎತ್ತರ ಬೆಟ್ಟಗಳಲ್ಲಿ ಸುರಕ್ಷಿತ ಸ್ಥಳಗಳಲ್ಲಿ ವಾಸವಾಗಲೇಬೇಕಾಯಿತು. ಕುರುಬ ಜನ ಒಂದು ಪಂಗಡವಾಗಿ ಬೆಳೆಯುತ್ತಾ ಹೋದಂತೆಲ್ಲ ಅವರ ಆಚಾರ-ವಿಚಾರ, ಉಡುಗೆ-ತೊಡುಗೆ, ಆಹಾರ-ರೂಢಿ ಸಂಪ್ರದಾಯಗಳು ಸ್ವಲ್ಪ ವ್ಯಾತ್ಯಾಸಗಳಿದ್ದರೂ ಇವರು ಹಿಂದೂ ಧರ್ಮದ ಒಂದು ಅಂಶವಾಗಿದ್ದಾರೆ. ಕಾಡುಮೇಡಿನಲ್ಲಿ ಅಲೆದಾಡುವ ಇವರು ಒರಟು ಬಟ್ಟೆತೊಟ್ಟು ಮೈಗೆ ಚಳಿ ಮಳೆಗಳಿಂದ ರಕ್ಷಣೆಗಾಗಿ ಸದಾ ಹೆಗಲ ಮೇಲೆ ಕಪ್ಪು ಕಂಬಳಿ, ಕಾಲಿಗೆ ದಪ್ಪನೆಯ ಚಪ್ಪಲಿಯನ್ನು ಧರಿಸುತ್ತಾರೆ. ಪ್ರತಿಯೊಂದು ಮಂಗಳಕಾರ್ಯ ಇವರಿಂದ ಪ್ರಾರಂಭಗೊಳಿಸುವುದು ಇಂದೂ ವಾಡಿಕೆಯಾಗಿದೆ. ಈ ಸಮುದಾಯವೂ ಸಭ್ಯತೆ ಮತ್ತು ನಂಬುಗೆಯ ಪ್ರತೀಕವಾಗಿದ್ದರಿಂದಲೇ ಈತ ಗುಡ್ಡದ ಮೇಲೆ ನಿಂತು ಕಂಬಳಿ ಬಿಸಿ ಮಳೆ ತರಿಸುತ್ತಿದ್ದ ಎನ್ನುವ ನಂಬಿಕೆಯನ್ನು ಹೊಂದಿದ್ದಾರೆ.

ಪ್ರಾಚೀನ ಕಾಲದಿಂದಲೂ ಕುರಿ ಸಾಕಾಣಿಕೆ, ಕಂಬಳಿ ನೇಯ್ಗೆ ಮತ್ತು ಕೃಷಿಯನ್ನು ಮುಖ್ಯ ಕಸುಬನ್ನಾಗಿ ಮಾಡಿಕೊಂಡು ಬಂದಿದ್ದಾರೆ. ಹೀಗೆ ಪರಂಪರಾನುಗಾತವಾಗಿ ಕುರಿ ಸಾಕಾಣಿಕೆಯನ್ನು ಅವರ ಮುಖ್ಯ ಕಸುಬಾಸಿಸಿಕೊಂಡ ಕುರುಬ ಸಮುದಾಯದಲ್ಲಿ ಪ್ರಚಲಿತದಲ್ಲಿರುವ ಪುರಾಣಗಳು, ಐತಿಹ್ಯಗಳು ಮತ್ತು ನಂಬಿಕೆಗಳು, ಆಚರಣೆಗಳಿಗೆ ಕೂಡ ವಿದ್ವಾಂಸರು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಈ ಸಮುದಾಯದವು ತನ್ನದೇ ಆದ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಿಕೊಂಡು ಬಂದಿರುವುದು. ಮೂಲದಲ್ಲಿ ಒಂದೇ ಆಗಿದ್ದ ಕುರುಬ ಜನಾಂಗವು ಕಾಲಾಂತರದಲ್ಲಿ ಹಲವಾರು ಉಪಪಂಗಡಗಳಾಗಿ ವಿಭಜನೆಗೊಂಡಂತೆ ಕಂಡುಬರುತ್ತದೆ. ಇದಕ್ಕೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗುವುದು, ಉದ್ಯೋಗದಲ್ಲಾದ ಬದಲಾವಣೆ ಆಯಾ ಪ್ರದೇಶದಲ್ಲಿ ರೂಢಿಸಿಕೊಂಡ ಆಚಾರ-ವಿಚಾರಗಳಲ್ಲಿನ ವಿಭಿನ್ನತೆ ಪ್ರಮುಖ ಕಾರಣವಾಗಿರಬಹುದು. ಬಳ್ಳಾರಿ ಜಿಲ್ಲೆಯಲ್ಲಿ ಕುರುಬ ಸಮುದಾಯವನ್ನು ಅಧಿಕಸಂಖ್ಯೆಯಲ್ಲಿ ಕಾಣಬಹುದಾಗಿದೆ. ಇಲ್ಲಿಯೂ ಹಲವಾರು ತಮ್ಮ ವೃತ್ತಿಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಅಲ್ಲದೆ ಇವರ ಜೊತೆಗೆ ಹಲವಾರು ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಹಾಗೆಯೇ ಇವರಲ್ಲಿ ಸಂಪ್ರದಾಯ ಆಚರಣೆಗಳಲ್ಲಿಯೂ ಸ್ವಲ್ಪಮಟ್ಟಿನಲ್ಲಿ ಬದಲಾವಣೆಗಳು ಕಂಡಿವೆ. ಧಾರ್ಮಿಕವಾಗಿ ಅಥವಾ ಸಂಪ್ರದಾಯಿಕವಾಗಿ ಇವರನ್ನು ಗಮನಿಸಿದಾಗ ದೇವರು ಧರ್ಮದ ಭಯ ಭಕ್ತಿಯ ಹಿನ್ನೆಲೆಯಲ್ಲಿ ದೇವದಾಸಿ ಪದ್ಧತಿ ಇರುವುದು ಕಂಡುಬರುತ್ತದೆ. ಈ ಕುರುಬ ಸಮುದಾಯುದಲ್ಲಿ ಹುಲಿಗೆಮ್ಮ ದೇವರಿಗೆ ಮುತ್ತುಕಟ್ಟುವ ಮೂಲಕ ದೇವರದಾಸಿಯಾಗಿರುವುದು ಕಂಡುಬರುತ್ತವೆ. ಆದರೆ ಹಿಂದುಳಿದ ವರ್ಗಗಳಲ್ಲಿ ಅತ್ಯಂತ ಕಡಿಮೆ

ಪ್ರಮಾಣದಲ್ಲಿ ಕುರುಬ ಸಮುದಾಯದ ದೇವದಾಸಿ ಮಹಿಳೆಯರನ್ನು ಕಾಣಲು ಸಾಧ್ಯ. ಈ ದೇವದಾಸಿ ಪದ್ಧತಿ ನಿಮ್ಮ ಸಮುದಾಯದಲ್ಲಿ ಬರಲು ಕಾರಣವೇನೆಂದು ಕ್ಷೇತ್ರದಲ್ಲಿ ತಿಳಿದಾಗ ಹುಲಿಗೆಮ್ಮ ದೇವತೆ ಒಲಿದು ಬಂದ ಕಾರಣಕ್ಕೆ ಮುತ್ತುಕಟ್ಟಿ ದೇವದಾಸಿ ಮಾಡಿರುವುದಾಗಿ ತಿಳಿಸಿದರು.

**ಕೋಷ್ಟಕ: ೪.೮ ಬಳ್ಳಾರಿ ಜಿಲ್ಲೆಯ ಹಿಂದುಳಿದ ವರ್ಗಗಳ ದೇವದಾಸಿಯರ ಜನಸಂಖ್ಯೆ**

| ಕ್ರ.ಸಂ. | ತಾಲೂಕಿನ ಹೆಸರು | ೨೦೦೭-೦೮ರ ಸಮೀಕ್ಷೆಯ ದೇವದಾಸಿಯರ ಒಟ್ಟು ಸಂಖ್ಯೆ | ೨೦೦೭-೦೮ನೇ ಸಮೀಕ್ಷೆಯ ಹಿಂದುಳಿದ ವರ್ಗಗಳ ದೇವದಾಸಿಯರ ಸಂಖ್ಯೆ |
|---|---|---|---|
| ೧. | ಬಳ್ಳಾರಿ | ೧೨೭೯ | ೩ |
| ೨. | ಸಿರುಗುಪ್ಪ | ೧೦೬೯ | – |
| ೩. | ಸಂಡೂರು | ೯೬೮ | ೭ |
| ೪. | ಹೊಸಪೇಟೆ | ೨೫೯೬ | ೫೩ |
| ೫. | ಹೂ ಹಡಗಲಿ | ೯೭೮ | ೪ |
| ೬. | ಹೆಚ್.ಬಿ.ಹಳ್ಳಿ | ೧೮೨೧ | ೧೯ |
| ೭. | ಕೂಡ್ಲಿಗಿ | ೧೦೨೨ | ೧೨ |
| | **ಒಟ್ಟು** | **೯೭೩೩** | **೯೮** |

*(ಮೂಲ: ದೇವದಾಸಿ ಪುನರ್ವಸತಿ ಕೇಂದ್ರ ಬಳ್ಳಾರಿ)*

೨೦೦೭-೦೮ನೆಯ ಸಾಲಿನಲ್ಲಿ ದೇವದಾಸಿಯರ ಪುನವರ್ಸತಿ ಯೋಜನೆಯ ಅಡಿಯಲ್ಲಿ ದೇವದಾಸಿಯರ ಮರುಸಮೀಕ್ಷೆಯನ್ನು ಮಾಡಲಾಯಿತು. ಅದರಲ್ಲಿ ಬಳ್ಳಾರಿ ಜಿಲ್ಲೆಯ ದೇವದಾಸಿಯರ ಸಂಖ್ಯೆಯನ್ನು ಗಮನಿಸುವುದಾದರೆ, ಒಟ್ಟು ೯೭೩೩ ಜನ ದೇವದಾಸಿಯರು ಕಂಡುಬರುತ್ತಾರೆ. ಅವರಲ್ಲಿ ಪರಿಶಿಷ್ಟರನ್ನು ಬಿಟ್ಟು ನೋಡಿದಾಗ ೯೮ ಜನ ದೇವದಾಸಿಯರು, ಹಿಂದುಳಿದ ವರ್ಗಗಳಲ್ಲಿ ಕಂಡುಬರುತ್ತಾರೆ. ಇಲ್ಲಿಯೂ ಕೂಡ ವಿಜಯನಗರ ಸಾಮ್ರಾಜ್ಯಕ್ಕೆ ರಾಜಧಾನಿಯಾಗಿದ್ದ ಹಂಪಿ ಪ್ರದೇಶಕ್ಕೆ ಹತ್ತಿರವಾಗಿರುವ ಹೊಸಪೇಟೆಲ್ಲಿಯೇ ಹೆಚ್ಚಿನ ಸಂಖ್ಯೆಯಲ್ಲಿ ದೇವದಾಸಿಯರನ್ನು ಕಾಣಲು ಸಾಧ್ಯವಾಗುತ್ತದೆ. ಮತ್ತು ಸಿರುಗುಪ್ಪ ತಾಲೂಕಿನಲ್ಲಿ ಹಿಂದುಳಿದ ವರ್ಗದ ದೇವದಾಸಿಯರನ್ನು ಕಾಣಲಾಗುವುದಿಲ್ಲ. ಹಾಗೆಯೇ ಅತಿ ಕಡಿಮೆ ಸಂಖ್ಯೆಯಲ್ಲಿ ಬಳ್ಳಾರಿ ತಾಲೂಕು ಮತ್ತು ಹೂವಿನಹಡಗಲಿಯಲ್ಲಿ ಕಂಡುಬರುತ್ತಾರೆ ಎಂದು ಈ ಸಮೀಕ್ಷೆ ತಿಳಿಸುತ್ತದೆ. ಇವರಲ್ಲಿ ಹತ್ತು ಜನ ದೇವದಾಸಿಯರ ವ್ಯಕ್ತಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳಲ್ಲಿ ದೇವದಾಸಿಯರು ಕಂಡುಬರುವ ಸಮುದಾಯಗಳ ಪರಿಚಯದಲ್ಲಿ ಸಮುದಾಯದ ವೃತ್ತಿ, ಪದ ನಿಷ್ಪತ್ತಿಯನ್ನು ತಿಳಿಸಲಾಗಿದೆ. ಅವರು ಆರಾಧಿಸುವ ಕುಲ ಅಥವಾ ಮನೆದೇವರುಗಳ ಹಿನ್ನೆಲೆಯಲ್ಲಿ ದೇವದಾಸಿ ಪದ್ಧತಿ ಆಯಾ ಸಮುದಾಯಗಳಲ್ಲಿ ಬೆಳೆದುಬಂದಿದೆ ಎಂದು ಹೇಳಲಾಗುವುದು. ಒಟ್ಟಾರೆಯಾಗಿ ನೋಡಿದರೆ ದೇವದಾಸಿಯರಲ್ಲೂ ಜಾತಿವಾರು ವ್ಯಾತ್ಯಾಸಗಳಿವೆ ಎಂದು ಹೇಳಬಹುದು. ಕೆಲವೊಂದು ಜಾತಿಗಳಿಗೆ ಈ ಪದ್ಧತಿ ಹೇರಲ್ಪಟ್ಟದಾಗಿದ್ದರೂ ಕೂಡ ಅವರು ದೇವರು ಧರ್ಮದ ಹಿನ್ನೆಲೆಯಲ್ಲಿ ಪದ್ಧತಿಯಾಗಿ ಬೆಳೆಸಿಕೊಂಡು ಬಂದಿದ್ದಾರೆ.

ಬಳ್ಳಾರಿ ಜಿಲ್ಲೆಯ ಪರಿಶಿಷ್ಟ ಜಾತಿಯ ಸಮುದಾಯಗಳಾದ ಮಾದಿಗ, ಛಲುವಾದಿ, ಡೊಂಬರು, ವಡ್ಡರು, ಚೆನ್ನದಾಸರು ಮತ್ತು ಕೊರಗ ಸಮುದಾಯಗಳಲ್ಲಿ ದೇವದಾಸಿ ಪದ್ಧತಿ ಕಂಡುಬರುತ್ತವೆ. ಇವರನ್ನು ತಳಸಮುದಾಯದ ದೇವದಾಸಿಯರು ಎಂದು ಗುರುತಿಸುತ್ತಾರೆ. ಪರಿಶಿಷ್ಟ ಪಂಗಡದಲ್ಲಿ ಬೇಡಬುಡಕಟ್ಟಿನಲ್ಲಿ ದೇವದಾಸಿಯರು ಪರಿಶಿಷ್ಟ ಜಾತಿಗಿಂತ ಸ್ವಲ್ಪ ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತಾರೆ. ಹಾಗೆಯೇ ಹಿಂದುಳಿದ ವರ್ಗಗಳಲ್ಲಿ ಗಂಗಮತಸ್ಥರಲ್ಲಿ ಅತಿಹೆಚ್ಚಿನ ಸಂಖ್ಯೆಯಲ್ಲಿ ದೇವದಾಸಿಯರು ಕಂಡುಬಂದರೆ ಕುರುಬಗಲ್ಲಿ ಅತಿಕಡಿಮೆ ಎಂದರೆ ಬೆರಳೆಣಿಕೆಯಷ್ಟು ಜನ ದೇವದಾಸಿಯ ಕಂಡು ಬರುತ್ತಾರೆ. ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಹಿಂದುಳಿದ ವರ್ಗದ ದೇವದಾಸಿಯರ ಸಂಖ್ಯೆಗೆ ಹೋಲಿಸಿದಾಗ ಹಿಂದುಳಿದ ವರ್ಗಗಳಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿ ದೇವದಾಸಿಯರು ಕಂಡುಬರುತ್ತಾರೆ. ಅಂದರೆ ಪರಿಶಿಷ್ಟ ಜಾತಿಯಲ್ಲಿ ೬೬೦೪ ಜನ ದೇವದಾಸಿಯರು ಕಂಡುಬಂದರೆ, ಪರಿಶಿಷ್ಟ ಪಂಗಡದಲ್ಲಿ ೩೦೩೧ ಜನ ದೇವದಾಸಿಯರು ಕಂಡುಬರುತ್ತಾರೆ. ಈ ಎರಡು ಜಾತಿ ಮತ್ತು ಪಂಗಡಗಳಗಿಂತ ಹಿಂದುಳಿದ ವರ್ಗಗಳಲ್ಲಿ ೯೮ ಜನ ದೇವದಾಸಿಯರು ಬಳ್ಳಾರಿ ಜಿಲ್ಲೆಯಾದ್ಯದಂತ ಕಂಡುಬರುತ್ತಾರೆ.

**ಆಧಾರ ಗ್ರಂಥಗಳು**


ಉಳ್ಳೇಶ್ವರಪ್ಪ ಎಂ, *ಸ್ವಾತಂತ್ರ್ಯ ನಂತರ ಹೊಸಪೇಟೆ ತಾಲೂಕಿನ ಸಾಂಘಿಕ ನೆಲೆಗಳು*, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

ಕೃಷ್ಣವೇಣಿ ಆರ್, *ಹುಲಿಗೆಮ್ಮ ಜಾನಪದದಲ್ಲಿ ಮಹಿಳಾ ಪ್ರತಿನಿಧೀಕರಣ*, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೭.

ಚಿನ್ನಸ್ವಾಮಿ ಸೋಸಲೆ ಎನ್, *ದಲಿತರ ಮೇಲಿನ ದೌಜನ್ಯ ಮತ್ತು ಸಾಮಾಜಿಕ ನ್ಯಾಯದ ಪ್ರಶ್ನೆಗಳು*, ಯಾಜಿ ಪ್ರಕಾಶನ – ಹೊಸಪೇಟೆ, ೨೦೧೩

ಜ್ಯೋತಿ ಡಿ.ಬಿ, *ಡೊಂಬರ ಸಮುದಾಯದ ಮಹಿಳೆಯರ ಸಮಕಾಲೀನ ಅಧ್ಯಯನ*, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೮.

ನೇತ್ರಾವತಿ ಕೆ.ವಿ., *ದಲಿತ ಮಹಿಳಾ ಸಂಕಥನ*, ಸಖಿ ಪ್ರಕಾಶನ, ಹೊಸಪೇಟೆ, ೨೦೧೨.

ಮೈತ್ರಿ ಕೆ.ಎಂ (ಸಂ), *ಅಲಕ್ಷಿತ ಸಮಾಜಶಾಸ್ತ್ರ*,*ದೂರಶಿಕ್ಷಣ ನಿರ್ದೇಶನಾಲಯ*, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

ಯಲ್ಲಪ್ಪ ಭೀಮಪ್ಪ, *ರಾಯಚೂರು ಜಿಲ್ಲೆಯ ದೊಡ್ಡಿಗಳ ತೌಲನಿಕ ಅಧ್ಯಯನ*, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೬.

ಸಂಗಳದ ಎನ್.ಬಿ., *ಭೋವಿ ಸಮುದಾಯದ ಸಾಮಾಜಿಕ ಅಧ್ಯಯನ*, ಶಶಿ ಪ್ರಕಾಶನ, ಗದಗ, ೨೦೧೪.

# ಅಧ್ಯಾಯ: ಐದು
# ದೇವದಾಸಿಯರ ಜೀವನ: ತೌಲನಿಕ ಅಧ್ಯಯನ

# ಅಧ್ಯಾಯ: ಐದು
# ದೇವದಾಸಿಯರ ಜೀವನ: ತೌಲನಿಕ ಅಧ್ಯಯನ

ಬಳ್ಳಾರಿ ಜಿಲ್ಲೆಯು ಆಂಧ್ರದ ಗಡಿನಾಡು ಪ್ರದೇಶವಾಗಿದೆ. ಬಳ್ಳಾರಿಯು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ತುಂಬ ಹಿಂದುಳಿದ ಜಿಲ್ಲೆಯಾಗಿದೆ. ಹಾಗಾಗಿ ಇದನ್ನು ಹೈದರಾಬಾದ್ ಕರ್ನಾಟಕ ೩೭೧ಜೆ ಪಟ್ಟಿಯಲ್ಲಿ ಸೇರಿಸಲಾಗಿದೆ. ಈ ಪ್ರದೇಶದಲ್ಲಿ ದೇವದಾಸಿಯರು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಾರೆ. 'ದೇವದಾಸಿ ಎಂದರೆ ದೇವರ ಸೇವೆಗೆಂದು ಸಂಸ್ಕಾರದ ಮೂಲಕ ದೈವತ್ವಕ್ಕೆ ನೇಮಿಸಲ್ಪಟ್ಟ ಒಬ್ಬ ಅವಿವಾಹಿತ ಹೆಣ್ಣು' ಎಂದು ಹೇಳಬಹುದು. ದೇವರ ಸೇವೆ ಮಾಡಲು ಎಂದು ನೇಮಿಸಿ ಬಿಟ್ಟಿರುವ ಈ ಮಹಿಳೆಯರನ್ನು ಲೈಂಗಿಕ ತೃಪ್ತಿಗಾಗಿಪುರುಷ ಬಳಸಿಕೊಳ್ಳುತ್ತಿದ್ದಾನೆ ಹೊರತು, ಯಾವ ದೇವಾಲಯದಲ್ಲಿ ದೇವರ ಸೇವೆಯನ್ನು ಮಾಡುತಿಲ್ಲ ಎಂದು ಹೇಳಬಹುದು. ಧಾರ್ಮಿಕ ಕಟ್ಟುಪಾಡುಗಳು, ಮೂಢನಂಬಿಕೆ, ದೈವಶಕ್ತಿ, ಪರಂಪರೆಯ ಹಿನ್ನೆಲೆಯಲ್ಲಿ ದೇವದಾಸಿ ಪದ್ಧತಿ ಬೆಳೆದು ಬಂದಿರುವುದಾಗಿದೆ. ದೇವರು ಮತ್ತು ದೇವಾಲಯಕೋಸ್ಕರ ಬೆಳೆದ ಈ ಪದ್ದತಿಯು ಮುಂದೆ ದೇವರ ಹೆಸರಿನಲ್ಲಿ ಅವರನ್ನು ದೌರ್ಜನ್ಯಕ್ಕೆ ಗುರಿ ಮಾಡಲಾಗಿದೆ. ಸಾಮಾನ್ಯ ಮಹಿಳೆಯರೇ ಸಮಾಜದಲ್ಲಿ ಹಿಂಸೆಯನ್ನು ಅನುಭವಿಸುತ್ತಿರುವಾಗ ಇನ್ನು ದೇವದಾಸಿ ಮಹಿಳೆಯರು ಸಮಾಜದಲ್ಲಿ ಯಾವ ಯಾವ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ ಎಂಬುವುದನ್ನು ನೋಡುತ್ತಾ, ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ, ಆರೋಗ್ಯ ಮತ್ತು ಕಲಾ ಜೀವನವನ್ನು ಕುರಿತಾಗಿ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೫.೧. ಸಾಮಾಜಿಕ ಜೀವನ

ಸಾಮಾಜಿಕ ಸಂಸ್ಥೆಗಳಲ್ಲಿ ಕುಟುಂಬವು ಪ್ರಾಥಮಿಕ ಘಟಕವಾಗಿದೆ. ದೇವದಾಸಿ ಕುಟುಂಬ ಜೀವನದಲ್ಲಿ ಅವರದ್ದೇ ಆದ ಕುಟುಂಬ ವ್ಯವಸ್ಥೆಯು ವಿಶೇಷವಾಗಿ ಕಂಡುಬರುತ್ತದೆ. ಸಾಮಾನ್ಯವಾಗಿ ಇವರ ಕುಟುಂಬವು ಮಾತೃ ಪ್ರಧಾನ ಕುಟುಂಬಕ್ಕೆ ಹೋಲಿಕೆ ಆಗುವಂತೆ ವಿಭಕ್ತ ಕುಟುಂಬ ವ್ಯವಸ್ಥೆಯನ್ನು

ಹೊಂದಿರುತ್ತದೆ. ತಾಯಿ, ತಂದೆ, ಅಣ್ಣ, ತಮ್ಮ ಸಹೋದರಿಯರು ಮತ್ತು ಅಣ್ಣ ತಮ್ಮರ ಹೆಂಡತಿಯರು, ಮಕ್ಕಳನ್ನು ಒಳಗೊಂಡಂತೆ ಒಂದೇ ಕುಟುಂಬದಲ್ಲಿ ವಾಸಿಸುವುದು ಕಂಡು ಬರುತ್ತದೆ. ದೇವದಾಸಿಯರ ಅಣ್ಣ ತಮ್ಮಂದಿರೇನಾದರೂ ಸ್ವಾವಲಂಬಿಗಳಾದರೆ ಮಾತ್ರ ಅವರ ಹೆಂಡತಿ ಮಕ್ಕಳನ್ನೂ ಕರೆದುಕೊಂಡು ಬೇರೆ ಮನೆಯಲ್ಲಿ ವಾಸಮಾಡುತ್ತಾರೆ. ಹಾಗಾಗಿ ಅವಳೇ ಯಜಮಾನಿಯಾಗಿದ್ದು ಅಧಿಕಾರವು ತಾಯಿಯಿಂದ ಮಗಳಿಗೆ ಮುಂದುವರಿಯುತ್ತದೆ. ದೇವದಾಸಿಯ ಕುಟುಂಬದಲ್ಲಿ ಧಾರ್ಮಿಕ ಕ್ರಿಯಾವಿಧಿಗಳನ್ನು ನಡೆಸುವ ಅಧಿಕಾರ ದೇವದಾಸಿ ಮಹಿಳೆಗೆ ಇರುತ್ತದೆ. ಕುಟುಂಬದ ಎಲ್ಲರ ಹೊಣೆ ಹೊತ್ತ ದೇವದಾಸಿ ಮಹಿಳೆಯೇ ಮನೆಯ ಎಲ್ಲಾ ವ್ಯವಹಾರಗಳನ್ನು ಸಮರ್ಥವಾಗಿ ನಿಭಾಯಿಸುತ್ತಾಳೆ. ಅಲ್ಲದೆ ದೇವದಾಸಿಗೆ ಹುಟ್ಟಿರುವ ಮಕ್ಕಳಿಗೆ ತಾನೆ ತಂದೆ ತಾಯಿಯಾಗಿ ಪ್ರೀತಿಯಿಂದ ನೋಡಿಕೊಳ್ಳುವ ಜೊತೆಗೆ ಇಡೀ ಬದುಕನ್ನೇ ಅವರಿಗಾಗಿ ದುಡಿಯುತ್ತಾ ಮುಡಿಪಿಡುತ್ತಾಳೆ. ದೇವದಾಸಿಯರ ಅದೇಷ್ಟು ಕುಟುಂಬಗಳನ್ನು ಕ್ಷೇತ್ರ ಕಾರ್ಯದಲ್ಲಿ ಗಮನಿಸಿದಾಗ ಗಂಡು ಮಕ್ಕಳಿದ್ದರು ಮತ್ತೆ ಹೆಣ್ಣು ಮಗಳನ್ನೂ ದೇವದಾಸಿಯಾಗಿ ಬಿಟ್ಟುಕೊಂಡಿದ್ದಾರೆ. ಕಾರಣ ಗಂಡು ಮಕ್ಕಳು ಮುಂದೆ ಮುಪ್ಪಿನ ಕಾಲದಲ್ಲಿ ನೋಡಿಕೊಳ್ಳುವುದಿಲ್ಲ ಎಂಬ ನಂಬಿಕೆ ಇದರಲ್ಲಿದೆ. ಹಾಗಾಗಿ ಹೆಣ್ಣು ಮಗು ಹುಟ್ಟಿದರೆ ಒಂದು ಕಡೆ ಸಂತೋಷವಾದರೆ ಇನ್ನೊಂದು ಕಡೆ ದೇವದಾಸಿಯಾಗಿ ತಾನು ಅನುಭವಿಸಿದ ನೋವು ನನ್ನ ಮಗಳಿಗೆ ತಗಲುತ್ತದೆ ಎಂಬ ದುಃಖ ಕೂಡ ಕಂಡುಬಂದಿದೆ.

ದೇವದಾಸಿಯರನ್ನು ಇಟ್ಟುಕೊಂಡಿರುವ ವ್ಯಕ್ತಿಗಳು ಅವರನ್ನು ಎಂದಿಗೂ ತಮ್ಮ ಕುಟುಂಬದೊಳಗೆ ಸೇರಿಸಿಕೊಳ್ಳುತ್ತಿರಲಿಲ್ಲ. ಅವರೊಂದಿಗೆ ದೈಹಿಕ ಸಂಬಂಧವನ್ನಷ್ಟೇ ಪಡೆದು ತಮ್ಮ ಕುಟುಂಬದಿಂದ ಹೊರಗೆ ಇರಿಸುತ್ತಿದ್ದರು. ಆದ್ದರಿಂದ ದೇವದಾಸಿಯ ಮಕ್ಕಳು ತಮ್ಮ ತಾಯಿ ಜಾತಿಯನ್ನೆ ಪ್ರತಿನಿಧಿಸುತ್ತಿದ್ದರು. ಕರಾವಳಿ ಪ್ರದೇಶದಲ್ಲಿ ದೇವದಾಸಿ ಪದ್ಧತಿಯ ಜಾತ್ಯಾತೀತವಾಗಿದೆ. ಇಲ್ಲಿ ಅವರಿಗೆ ಎಲ್ಲ ವರ್ಗದ ವ್ಯಕ್ತಿಗಳ ಸಂಪರ್ಕವಿರುವುದರಿಂದ ಪ್ರತ್ಯೇಕತೆ ಎನ್ನುವುದು ಈ ಸಮಾಜದಲ್ಲಿ ಎದ್ದು ಕಾಣುತ್ತದೆ. "ಕೆಲವರು ಇವರನ್ನು ಹಿಂದುಳಿದ ಜಾತಿಯವರು ಎಂದು ಪರಿಗಣಿಸಿದರೂ ಇವರಿಗೆ ಉನ್ನತ ಕುಲದವರೊಂದಿಗೆ ಸಂಪರ್ಕವಿರುವುದರಿಂದ ಮುಂದುವರೆದ ಜನಾಂಗವೆಂದು ಕೆಲವರು ಹೇಳುತ್ತಾರೆ" *(ಪುತ್ತಿ ವಸಂತಕುಮಾರ:೨೦೦೨:೫೧).* ಆದರೆ ಈ ಬಳ್ಳಾರಿ ಜಿಲ್ಲೆಯ ಹಲವು ದೇವದಾಸಿಯರ ಬಳಿ ಉನ್ನತ ವರ್ಗದವರು ಸಂಬಂಧ ಹೊಂದಿದ್ದರೂ ಕೂಡ ಇವರನ್ನು ಕೀಳಾಗಿ ಕಂಡು ಸೂಳೆಯೆಂದೇ ಗುರುತಿಸುವುದು ಕಂಡುಬರುತ್ತದೆ. ದೇವದಾಸಿಯರಿಗೆ ಹುಟ್ಟಿದ ಮಕ್ಕಳು ಅಪ್ಪ ಎಂದು ಕರೆಯುವುದು ಇವರಿಗೆ ನಿಷಿದ್ಧವಾಗಿತ್ತು. ಈ ಮಕ್ಕಳಿಗೆ ಸಾಮಾಜಿಕ ಮನ್ನಣೆ ಸಿಗದೆಯೇ ಇಂತವನ ಮಗ ಮಗಳು ಎಂದು ಗುರುತಿಸದೆ ದೇವದಾಸಿಯ ಮಗ ಮಗಳು ಎಂದೇ ಸಾಮಾಜವು ಗುರುತಿಸುತ್ತದೆ. ತಂದೆಯಾದವನ ಹೆಸರನ್ನು ಯಾವುದೇ ಸರಕಾರದ ಕಡತಗಳಿಗೆ ಸೂಚಿಸುವಂತಿಲ್ಲ. ಮಕ್ಕಳು ತಾಯಿಯ ಹೆಸರನ್ನಷ್ಟೆ ಕಾಗದ ಪತ್ರಗಳಿಗೆ ಉಪಯೋಗಿಸುತ್ತಿದ್ದರು. ತನ್ನ ತಂದೆಯು ಉನ್ನತ ಜಾತಿಯವರಾಗಿದ್ದರು ತಾಯಿಯಿಂದ ಬಂದಂತಹ ಜಾತಿಯನ್ನೇ ಅವಲಂಬಿಸುತ್ತಿದ್ದರು. ಹಿಂದೆ

ಹೆಣ್ಣೇ ವಂಶ ಪ್ರವರ್ತಕಳಾಗಿದ್ದ ವಿಷಯವು ಪುರಾಣಗಳಲ್ಲಿ ಕಂಡುಬರುತ್ತದೆ. ತಾಯಿಯ ಹೆಸರಿನ ಮುಂದೆಯೇ ಮಗುವನ್ನು ಗುರುತಿಸಲಾಗುತ್ತಿತ್ತು. ಈ ರೀತಿಯ ಮಾತೃ ಮೂಲೀಕೆಯ ಪದ್ಧತಿ ಮಹತ್ವವನ್ನು ಇಲ್ಲಿ ಗುರುತಿಸಬಹುದು.

ದೇವದಾಸಿ ಕುಟುಂಬದ ಆಸ್ತಿಯಲ್ಲಿ ತನ್ನ ಅಣ್ಣ ತಮ್ಮಂದಿರಂತೆಯೇ ದೇವದಾಸಿಯೂ ಆಸ್ತಿ ಪಡೆಯುವ ಹಕ್ಕು ಹೊಂದಿದ್ದಾಳೆ. ದೇವದಾಸಿಯರ ಕುಟುಂಬಗಳು ನೋಡಲು ಗೌರವಾನ್ವಿತ ಮನೆತನದಂತೆ ಕಂಡು ಬರುತ್ತವೆ. ಅಲ್ಲದೆ ದೇವದಾಸಿಯರು ವಿವಾಹವಾಗದ ಕಾರಣಕ್ಕೆ ಅವರಿಗೆ ಗಂಡಸಿನ ಯಾವುದೇ ನಿರ್ಬಂಧವಿಲ್ಲದೆ ಸಂಪೂರ್ಣ ಸ್ವಾತಂತ್ರ್ಯವನ್ನು ಹೊಂದಿದ್ದು ಅವಳು ಎಲ್ಲಿಗೆ ಬೇಕಾದರು ಹೋಗಿ ಬರುತ್ತಾರೆ. ದೇವದಾಸಿ ಮಹಿಳೆಯೊಂದಿಗೆ ಸಂಬಂಧವನ್ನು ಹೊಂದಿರುವ ವ್ಯಕ್ತಿಯೊಂದಿಗೆ ಅದೇ ಕುಟುಂಬದ ಸದಸ್ಯರು ಆತ್ಮೀಯವಾಗಿ ನೋಡುತ್ತಿದ್ದರು. ಹಾಗಾಗಿ ಕೆಲವು ದೇವದಾಸಿಯರ ಬಳಿ ಸಂಬಂಧ ಹೊಂದಿರುವ ಪುರುಷರು ತಮ್ಮ ಕುಟುಂಬ ಮತ್ತು ವಿವಾಹವನ್ನು ತ್ಯಜಿಸಿ ತಮ್ಮ ಇಡೀ ಬದುಕನ್ನು ಇವರೊಂದಿಗೆ ಕಳೆಯುತ್ತಿರುವ ನಿದರ್ಶನಗಳಿವೆ. ಜೊತೆಗೆ ಇಲ್ಲಿ ಇಟ್ಟುಕೊಂಡವರು ಎಲ್ಲರ ಎದುರಿಗೆ ಮನೆಗೆ ಬಂದು ಹೋಗುವುದರಿಂದ ಇದು ಮನೆಯ ಎಲ್ಲರಿಗೂ ತಿಳಿದಿರುವುದರಿಂದ ದೇವದಾಸಿ ಮಹಿಳೆಯ ಜೊತೆ ಸಂಬಂಧ ಹೊಂದಿರುವವರಿಗೆ ಯಾವುದೇ ಕೀಳರಿಮೆ ಸಂಕೋಚ ಇಲ್ಲದೆಯೇ ಸಹಜವಾಗಿಯೇ ಇರುತ್ತಾರೆ. ಆದರೆ ಇದು ಕೆಲವು ನಿದರ್ಶನಗಳಲ್ಲಿ ಮಾತ್ರ ಕಾಣಲಾಗುವುದು. ದೇವದಾಸಿಯು ಉನ್ನತ ಸಮುದಾಯದೊಂದಿಗೆ ಸಂಬಂಧ ಹೊಂದಿರುವಾಗ ಅವರು ಸಹಜವಾಗಿ ಕುಟುಂಬದ ಸದಸ್ಯರಂತೆ ಇರದೇ ಬಂದು ಹೋಗುವ ಗಿರಾಕಿಯಂತೆ ಕಾಣಿಸುತ್ತಾರೆ. ಆದರೂ ಗೌರವದಿಂದ ಕಾಣಲಾಗುತ್ತದೆ. ಅಣ್ಣ ತಮ್ಮರ ಹೆಂಡತಿಯರು ಹೊರಗಿನಿಂದ ಬಂದಿರುವ ಕಾರಣ ಅವರು ದೇವದಾಸಿ ಮಹಿಳೆ ಮತ್ತು ಅವರೊಂದಿಗೆ ಸಂಬಂಧ ಹೊಂದಿರುವ ವ್ಯಕ್ತಿಯನ್ನು ಭಾವನಾತ್ಮಕವಾಗಿ ವ್ಯವಹರಿಸುವುದಿಲ್ಲ. ಅಲ್ಲಿಂದ ದೇವದಾಸಿಯ ಅಣ್ಣ ತಮ್ಮಂದಿರು ಬೇರೆಯಾಗುವ ಸಾಧ್ಯತೆಗಳು ಹೆಚ್ಚಾಗಿ ಕಂಡು ಬರುತ್ತದೆ. ಆದರೆ ಕೆಲವು ಕುಟುಂಬಗಳು ಅನ್ಯೋನ್ಯವಾಗಿ ಇರುವುದನ್ನು ಕಾಣಬಹುದು. ಕುಟುಂಬದಲ್ಲಿ ದೇವದಾಸಿ ಮಹಿಳೆಯೇ ಯಜಮಾನಿಯಾಗಿ ಹೊರ ನೋಟಕ್ಕೆ ಕಾಣಿಸಿಕೊಂಡರು ಆಂತರ್ಯದಲ್ಲಿ ಯಾರಿಗೂ ಕಾಣದಂತಹ ಕೈಗಳು ದೇವದಾಸಿಯನ್ನು ನಿಯಂತ್ರಿಸುವ,ಅವಳ ಸ್ವತಂತ್ರವನ್ನು ಕಿತ್ತುಕೊಳ್ಳುವ ಪುರುಷ ಕೈಗಳು ಕಾರ್ಯನಿರ್ವಹಿಸುತ್ತವೆ. ಬಹುತೇಕ ದೇವದಾಸಿ ಕುಟುಂಬಗಳಲ್ಲಿ ಹೆಣ್ಣು ಮಕ್ಕಳು ಮದುವೆಯಾಗದೆಯೇ ಮನೆಯಲ್ಲೆ ಉಳಿದು ಮತ್ತು ಅಣ್ಣ ತಮ್ಮಂದಿರ ಹೆಂಡತಿಯರು ಸೇರಿದಂತೆ ಮಹಿಳೆಯರೆ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ದೇವದಾಸಿಯನ್ನು ಹೊಂದಿರುವ ಕುಟುಂಬಗಳಲ್ಲಿ ಹೆಣ್ಣು ಮಕ್ಕಳ ಮದುವೆಗೆ ಸಂಬಂಧಿಸಿದಂತೆ ಆಲಸ್ಯ ದ್ವೇಷಭಾವನೆ ಬರುವ ಹಾಗೇ ಸಮುದಾಯ ಮಾನಸಿಕವಾಗಿ ಸಿದ್ಧವಾಗಿರುತ್ತದೆ. ಹಾಗಾಗಿ ದೇವದಾಸಿ ಕುಟುಂಬಗಳಲ್ಲಿನ ಹೆಣ್ಣು ಮಕ್ಕಳಿಗೆ ವಿವಾಹವಾಗುವುದು ಕಷ್ಟಕರವಾಗಿದೆ. ಏಕೆಂದರೆ ಸಮಾಜವು ದೇವದಾಸಿಯನ್ನು ಕಳಂಕಿತಳನ್ನಾಗಿ ನೋಡುತ್ತದೆ. ದೇವದಾಸಿ ಮಗಳು ಅಥವಾ ದೇವದಾಸಿ ಇರುವ ಮನೆಯಲ್ಲಿ

ಹೆಣ್ಣು ಮಕ್ಕಳ ಮದುವೆ ಸಹಜವಾಗಿ ನಡೆಯುವುದಿಲ್ಲ. ಆ ಕುಟುಂಬದ ಯಾರಾದರೂ ಅಕ್ಕ ತಂಗಿ ದೇವದಾಸಿಯರಾಗಿದ್ದರೆ ಅವಳನ್ನು ಬಚ್ಚಿಟ್ಟು ವಿವಾಹ ಮಾಡುತ್ತಾರೆ.

ದೇವದಾಸಿಯ ಮಗಳೆಂದರೆ "ತಾಯಿಯಂತೆ ಮಗಳು ನೂಲಿನಂತೆ ಸೀರೆ" ಎಂಬಂತೆ ಮಾತಾನಾಡಿ ಅವಳ ವಿವಾಹಕ್ಕೆ ಅಡ್ಡಿಗಳು ಉಂಟಾಗುತ್ತವೆ. ದೇವದಾಸಿಯಾದ ತಾಯಿ ನ'ನ್ನ ಕಷ್ಟ ನನ್ನ ಮಗಳಿಗೆ ಬರಬಾರದು ಎಂದು ಎಲ್ಲೋ ಬೇರೆ ಊರನಲ್ಲಿ ವಿವಾಹ ಮಾಡಿಕೊಡುತ್ತಾಳೆ. ಇಂತಹನಿದರ್ಶನಗಳು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿವೆ. ಬೇರೆ ಊರಿನಲ್ಲಿ ಮಗಳನ್ನು ತೋರಿಸಿ ವಿವಾಹ ಮಾಡಿಕೊಡುತ್ತಾಳೆ. ನಂತರ ಗಂಡನ ಮನೆಯವರಿಗೆ ಬಸವಿ ಮಗಳೆಂದು ತಿಳಿದು ಅತ್ತೆ ಸೇರದಂತೆ ಗಂಡನ ಕಿರುಕುಳದ' ಮಾತನ್ನು ಸಹಿಸಿಕೊಂಡು ಅವಳು ಜೀವನ ನಡೆಸುತ್ತಿದ್ದಾಳೆ. ಬಸವಿ ಮಗಳನ್ನು ಮುಚ್ಚಿಟ್ಟು ಮದುವೆ ಮಾಡಿದ ನಿಂದನೆಗೆ ಗುರಿಯಾಗಿದ್ದಾಳೆ. ಹಾಗಾಗಿಯೇ ಕೆಲವು ಹೆಣ್ಣು ಮಕ್ಕಳು ಮನೆಯ ಸುತ್ತ ಮುತ್ತ ನಡೆದಿರುವ ವಿವಾಹದ ಚೌಕಟ್ಟಿನಲ್ಲಿ ಆಳಾಗಿ ದುಡಿದು ನಿಂದನೆಗೆ ಗುರಿಯಾಗಿದ್ದಾರೆ. ಹಾಗಾಗಿಯೇ ಕೆಲವು ಹೆಣ್ಣು ಮಕ್ಕಳು ವಿವಾಹದ ಚೌಕಟ್ಟಿನಲ್ಲಿ ಆಳಾಗಿ ದುಡಿದು ಕೂಲಿ ಮಾಡಿ ಗಂಡನಿಂದ ಅತ್ತೆಯಿಂದ ಕಷ್ಟಗಳನ್ನು ಕಂಡು ಬೇಸತ್ತು ಬಡವರ ಹೆಂಡತಿಯಾಗಿ ಇಷ್ಟು ಕಷ್ಟ ಪಡುವ ಬದಲು ದೇವದಾಸಿಯಾಗಿ ಒಬ್ಬ ಶ್ರೀಮಂತನೊಂದಿಗೆ ಬದುಕುವುದು ಉತ್ತಮ ಎಂದು ಹೇಳಿದರು. ಆದರೆ ದೇವದಾಸಿಯ ಬದುಕಿನ ಸುಖವನ್ನು ಅವಳೇ ಬಲ್ಲಳು ದೇವದಾಸಿಯು ಕುಟುಂಬದಲ್ಲಿ, ಸಮಾಜದಲ್ಲಿ ಅನುಭವಿಸಿದ ನೋವುಗಳಿಂದ ಬೇಸತ್ತು ತನ್ನ ಹೆಣ್ಣು ಮಕ್ಕಳನ್ನು ಮದುವೆ ಮಾಡಿ ದೂರ ಕಳುಹಿಸುವ ದೊಡ್ಡ ಬಯಕೆ ಹೊಂದಿರುತ್ತಾಳೆ. ಆದರೆ ಆರ್ಥಿಕವಾಗಿ ದುರ್ಬಲಳಾಗಿರುತ್ತಾಳೆ.. ಅದಕ್ಕಾಗಿಯೇ ಸರ್ಕಾರ ದೇವದಾಸಿ ಕುಟುಂಬದಲ್ಲಿ ಜನಿಸಿದ ಹೆಣ್ಣು ಮಕ್ಕಳ ಮದುವೆಯ ಜವಾಬ್ದಾರಿಯಲ್ಲಿ ಹಣದ ಸಹಾಯವನ್ನು ಮಾಡಿಕೊಡುವುದು ಉತ್ತಮವಾಗಿದೆ. ಏಕೆಂದರೆ, ಈ ದುಬಾರಿ ಕಾಲದಲ್ಲಿ ದೇವದಾಸಿ ಮಗಳು ಎಂಬ ನಿಂದನೆಗಳಿಗೆ, ವರದಕ್ಷಿಣೆ ಮತ್ತು ಮದುವೆ ಮಾಡುವ ಆರ್ಥಿಕ ದುರ್ಬಲತೆ ಅವರನ್ನು ಮತ್ತೆ ದೇವದಾಸಿಯಾಗಿ ಮಾಡುತ್ತಿದೆ.

ಕುಟುಂಬ ನಿರ್ವಹಣೆಯ ಜವಾಬ್ದಾರಿಯ ಹೊಣೆ ಹೊತ್ತ ದೇವದಾಸಿ ಮಹಿಳೆಯರು ಅನಕ್ಷರಸ್ಥರಾಗಿದ್ದರೂ ಕೂಡ ತನ್ನ ಇಡೀ ಕುಟುಂಬದ ಅಣ್ಣ, ತಮ್ಮ, ತಂಗಿ, ಅಕ್ಕನವರಿಗೆ ವಿವಾಹ ಮಾಡಿ ಇದರ ಜೊತೆ ಅವರ ಎಲ್ಲಾಮಕ್ಕಳ ನಾಮಕರಣ, ಬಾಣಂತನ, ಶಿಕ್ಷಣ ಒದಗಿಸುವಲ್ಲಿ ತನ್ನ ಇಡೀ ಅರ್ಧ ಜೀವನವನ್ನೇ ಕಳೆಯುತ್ತಾಳೆ. ಅಲ್ಲದೆಯೇ ಕೆಲವು ಕುಟುಂಬಗಳಲ್ಲಿ ದೇವದಾಸಿಯರಿಗೆ ತನ್ನ ಹೆಣ್ಣು ಮಕ್ಕಳನ್ನು ವಿವಾಹ ಮಾಡಿ ಕೊಟ್ಟು ನೋಡುವ ಹಂಬಲವಿರುತ್ತದೆ. ಕುಟುಂಬ ಎಂದರೆ ಗಂಡ, ಹೆಂಡತಿ ಮಕ್ಕಳನ್ನೊಳಗೊಂಡಂತೆ ಅಜ್ಜ, ಅಜ್ಜಿ, ಚಿಕ್ಕಪ್ಪ, ಚಿಕ್ಕಮ್ಮರನ್ನು ಒಳಗೊಂಡ ಕುಟುಂಬವಂತೂ ತನ್ನದಾಗಲಿಲ್ಲ ತನ್ನ ಮಗಳನ್ನು ವಿವಾಹ ಮಾಡಿ ಅವಳದು ಒಂದು ಕುಟುಂಬ ಮಾಡಬೇಕೆಂದು ಆತುರದಲ್ಲಿರುತ್ತಾಳೆ. ಹೆಣ್ಣು ಮಕ್ಕಳು ಪ್ರೀತಿ-ಪ್ರೇಮಕ್ಕೆ ಬಲಿಯಾಗಿ ಬೇರೆ ಜಾತಿ ಧರ್ಮದ ಪುರುಷನೊಂದಿಗೆ ವಿವಾಹವಾಗುತ್ತಾರೆ. ಹೇಗೋ ಮದುವೆಯಾಯಿತು ಎಂದು ನಿಟ್ಟುಸಿರು ಬಿಡುವುದರಲ್ಲಿಯೇ ಅವಳು ಗಂಡನನ್ನು ಬಿಟ್ಟು ಬಂದು ಮನೆ ಸೇರುತ್ತಾಳೆ. ಮತ್ತೆ ಮದುವೆ ಮಾಡುವ

ಶಕ್ತಿ ಆ ದೇವದಾಸಿ ತಾಯಿಗೆ ಇಲ್ಲದ ಕಾರಣಕ್ಕಾಗಿ ಗುಟ್ಟಾಗಿ ಮಗಳನ್ನು ದೇವದಾಸಿಯನ್ನಾಗಿ ಮಾಡಿಕೊಂಡು ಬಂದಿರುವ ಉದಾಹರಣೆ ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಹೆಣ್ಣು ಋತುಮತಿಯಾಗದೆ ಪವಿತ್ರವಾಗಿರುವಾಗಲೆ ಅವಳನ್ನು ದೇವದಾಸಿಯನ್ನಾಗಿ ಮಾಡುವ ನಿಯಮ ಆಗಿನ ಕಾಲದ್ದಾದರೆ, ಈಗ ಮದುವೆ, ಮಕ್ಕಳಾದ ನಂತರವೂ ದೇವದಾಸಿಯರಾಗುತ್ತಾರೆ. ಈ ಪದ್ಧತಿಯೂ ಬೇರೆ ಸ್ವರೂಪವನ್ನು ಪಡೆದು ಕೊಂಡಿದೆ.

ದೇವದಾಸಿ ಮಹಿಳೆಯರು ಬಹುತೇಕ ಕುಟುಂಬಗಳಲ್ಲಿ ಯಜಮಾನತ್ವದ ಸ್ಥಾನದಲ್ಲಿದ್ದು ಅಣ್ಣ, ತಮ್ಮ, ತಂಗಿಯರಿಗೆ ವಿವಾಹ ಮಾಡುವ ಸಂದರ್ಭಗಳು ಬಂದೆ ಬರುತ್ತದೆ. ಆಗ ದೇವದಾಸಿ ಮಹಿಳೆಯೂ ಮಾನಸಿಕವಾಗಿ ಅಸಮಾನತೆಗೊಳಗಾಗುವ ಸಾಧ್ಯತೆಗಳೇ ಹೆಚ್ಚಾಗಿ ಕಂಡುಬರುತ್ತವೆ. ದೇವದಾಸಿಯರ ಕುರಿತಾಗಿ ಜನರ ಮನಸ್ಸಿನಲ್ಲಿರುವ ಭಾವನೆಯೆಂದರೆ, ಅವಳು ಒಬ್ಬ ಪುರುಷನ ಜೊತೆ ಸಂಬಂಧ ಹೊಂದಿದ್ದರೂ ಸಮಾಜ ಅವಳನ್ನು ವೇಶ್ಯೆಯ ರೀತಿಯಲ್ಲಿ ನೋಡುತ್ತದೆ. ಹಾಗಾಗಿ ಕೆಲವೊಮ್ಮೆ ಮನೆಯಲ್ಲಿ ದೇವದಾಸಿಯಾದವರನ್ನು ಗೌಪ್ಯವಾಗಿಟ್ಟು ಮನೆಗೆ ಬಂದಿರುವ ಬೀಗರು ಹೋಗುವ ವರೆಗೆ ಇಲ್ಲದಿರುವಂತೆ ವ್ಯವಸ್ಥೆ ಮಾಡಿಕೊಳ್ಳುತ್ತಾರೆ. ಕಾರಣ ದೇವದಾಸಿ ಮಹಿಳೆಯರನ್ನು ಸಮಾಜ ಸೂಳೆ ಎಂದು ನೋಡುವ ಮೂಲಕ ಇಂತಹವರ ಅಣ್ಣ ತಮ್ಮಂದಿರಿಗೆ ಹೆಣ್ಣು ಕೊಡುವುದಿಲ್ಲ ಎನ್ನುವ ಪರಿಸ್ಥಿತಿ ಉಂಟಾಗಿರುವುದು. ಅಲ್ಲದೆ ಕೆಲವರು ಈ ಅಪಮಾನ ಸಹಿಸಲಾರದೆ ಆತ್ಮಹತ್ಯೆಗೆ ಪ್ರಯತ್ನ ಮಾಡಿದ್ದಾರೆ. ಇನ್ನು ಕೆಲವು ಕುಟುಂಬಗಳಲ್ಲಿ ಮಾನಸಿಕ ಅಸ್ವಸ್ಥತೆಗೆ ಒಳಗಾದವರೂ ಇದ್ದಾರೆ. ಆಧುನಿಕತೆಯಲ್ಲಿ ಶಿಕ್ಷಣ ಪಡೆದಿರುವ ಹೆಣ್ಣು ಮಕ್ಕಳು ಈ ಪದ್ಧತಿಯ ಕುರಿತಾಗಿ ತಿಳಿದು ತಾವು ಮದುವೆ ಮಾಡಿಕೊಳ್ಳಬೇಕು ಎಂಬ ಹಠ ಮಾಡಿದರು ಅವರನ್ನು ವಿವಾಹವಾಗಲು ಯಾವ ನಾಗರಿಕ ಸಮುದಾಯದ ಪುರುಷರು ಮುಂದೆ ಬರುವುದಿಲ್ಲ. ವಿವಾಹವಾಗದೆ ಇರುವುದು ಸಮಾಜದ ವ್ಯವಸ್ಥೆಯನ್ನು ಮತ್ತೊಂದು ರೀತಿಯ ಅವಮಾನಕ್ಕೆ ಒಳಪಡಿಸುತ್ತದೆ. ಅದಕ್ಕಾಗಿಯೇ ಮತ್ತೊಮ್ಮೆ ಅನಿವಾರ್ಯವಾಗಿ ದೇವದಾಸಿಯಾಗುವ ಮಾರ್ಗವನ್ನು ಕುಟುಂಬಗಳಲ್ಲಿ ಅನುಸರಿಸುತ್ತಾರೆ.

ಹಾಗೇಯೇ ಮೊದಲು ಸಮಾಜದ ವ್ಯವಸ್ಥೆಯಲ್ಲಿರುವ ಜನರ ಮನಸ್ಥಿತಿಗಳು ಬದಲಾಗಬೇಕಿದೆ. ದೇವದಾಸಿ ಮಕ್ಕಳ ಮದುವೆಗೆ ಯುವಕರು ಮಾನಸಿಕವಾಗಿ ಸಿದ್ದರಾಗಬೇಕು. ದೇವದಾಸಿಯರ ಹೆಣ್ಣು ಮಕ್ಕಳ ವಿವಾಹಕ್ಕೆ ಧನ ಸಹಾಯವಾಗಿ ಮಾಡುವ ವಿಶೇಷವಾಗಿ ಯೋಜನೆಯನ್ನು ಸರ್ಕಾರ ಹಾಕಿಕೊಂಡು ಸಮರ್ಪಕವಾಗಿ ಅನುಷ್ಠಾನಕ್ಕೆ ತರಬೇಕು.

**ವಸತಿ ವ್ಯವಸ್ಥೆ:** ವಸತಿಯ ಪರಿಕಲ್ಪನೆಗೆ ಸುದೀರ್ಘವಾದ ಇತಿಹಾಸವಿದೆ. ಕಾಡಲ್ಲಿ ಹಾಗೂ ಬಯಲಲ್ಲಿದ್ದ ಮಾನವನಿಗೆ ಯಾವಾಗ ವಸತಿಯ ಪರಿಜ್ಞಾನ ಮೂಡಿತೋ ಅಂದಿನಿಂದಲೇ ಮಾನವನ ಬೆಳವಣಿಗೆಯ ವಿವಿಧ ಹಂತಗಳ ಇತಿಹಾಸದ ಸಂಪೂರ್ಣ ಮಾಹಿತಿ ದೊರೆಯುತ್ತದೆ. ವಸತಿಯ ಪರಿಕಲ್ಪನೆಯಿಂದಾಗಿ ಮಾನವ ಕುಲದ ರಕ್ಷಣೆ ಹಾಗೂ ಪೋಷಣೆಯ ಜೊತೆಗೆ ಮಾನವನಲ್ಲಿ ಪರಸ್ಪರ ಸ್ನೇಹ ಸಂಬಂಧಗಳೊಂದಿಗೆ ಕುಟುಂಬ ವ್ಯವಸ್ಥೆಯು ಅಸ್ಥಿತ್ವಕ್ಕೆ ಬಂದಿತು. ಹೇಗೆಂದರೆ ವಸತಿಯ ನಿರ್ಮಾಣದಿಂದಾಗಿ ಮಾನವನು ಈ ಹಿಂದಿನ ಭಯ, ಆತಂಕ, ಅಲೆಮಾರಿ ಮತ್ತು

ವಲಸೆಗಳಿಂದ ದೂರವಾಗಿ ಪರಸ್ಪರ ಪ್ರೀತಿ, ಸಂತೃಪ್ತಿ ಹಾಗೂ ವಿಶ್ವಾಸಗಳಿಗೆ ಮೊರೆ ಹೋಗಿದ್ದರಿಂದ ಅವನಲ್ಲಿದ್ದ ಪರಸ್ಪರರೊಂದಿಗಿನ ದ್ವೇಷ, ಕ್ರೌರ್ಯ, ವೈರತ್ವಗಳು ಕಡಿಮೆಯಾಗಿ ಒಬ್ಬರು ಮತ್ತೊಬ್ಬರೊಂದಿಗೆ ಸಹಕಾರ, ಸ್ನೇಹ ಮತ್ತು ಹೊಂದಾಣಿಕೆಯನ್ನು ಮೈಗೂಡಿಸಿಕೊಳ್ಳಲು ಸಾಧ್ಯವಾಯಿತು. ಈ ಹಿನ್ನೆಲೆಯಲ್ಲಿ ಮಾನವನ ಸುದೀರ್ಘ ಇತಿಹಾಸದ ಕಾಲಘಟ್ಟಕ್ಕೆ ವಸತಿಯೇ ಮುಖ್ಯ ಆಧಾರವಾಗಿತ್ತೆಂದು ಅರ್ಥೈಸಹಬಹುದಾಗಿದೆ. ಹೀಗೆ ವಸತಿಯ ವಿನ್ಯಾಸದಲ್ಲಾದ ವಿವಿಧ ಮಾರ್ಪಾಡುಗಳು ಆಯಾ ಕಾಲಘಟ್ಟಕ್ಕೆ ತಕ್ಕಂತೆ ಮಾನವನಲ್ಲಾದ ಬೌದ್ಧಿಕ, ಮಾನಸಿಕ, ಆರ್ಥಿಕ ಹಾಗೂ ತಾಂತ್ರಿಕ ಜ್ಞಾನವನ್ನು ಪ್ರತಿನಿಧಿಸುತ್ತದೆ. ಆರಂಭದಲ್ಲಿ ಗುಹೆಗಳು, ಮರದ ಪೊಟರೆಗಳು, ಎತ್ತರವಾದ ಗಿಡ ಮರಗಳು, ಕಲ್ಲು ಬಂಡೆಗಳು ಇತ್ಯಾದಿ ಆದಿ ಮಾನವನ ವಾಸಸ್ಥಳವಾಗಿ ಕಂಡುಬಂದರೆ, ನಂತರದಲ್ಲಾದ ಬದಲಾವಣೆಗಳು ಮಾನವನ ಬೆಳವಣಿಗೆಯ ಮತ್ತು ಅಭಿವೃದ್ದಿಯ ಸಂಕೇತವೆಂದೆ ಗುರುತಿಸಬೇಕಾಗಿದೆ. ಏಕೆಂದರೆ ಪ್ರಸ್ತುತ ಸನ್ನಿವೇಶದಲ್ಲಿ ಮಾನವನು ವಾಸಿಸುತ್ತಿರುವ ವಸತಿಯ ವಿನ್ಯಾಸ, ರಚನಾ ಸ್ವರೂಪವು ಅವನ ಸಾಮಾಜಿಕ ಆರ್ಥಿಕ ಹಾಗೂ ರಾಜಕೀಯ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಪ್ರಮುಖ ಮಾನದಂಡವಾಗಿ ಪರಿಗಣಿಸಲ್ಪಡುತ್ತಿದೆ. ಪ್ರತಿಯೊಬ್ಬ ಮಾನವರು ತನ್ನ ವಸತಿಯ ವಿಷಯದಲ್ಲಿ ಮತ್ತೊಬ್ಬರಿಂದ ಅನುಕರಣೆ ಮಾಡದೇ ಸಾಧ್ಯವಾದಷ್ಟು ಬದಲಾವಣೆಗಳನ್ನು ಹಾಗೂ ಹೊಸತನವನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಇಂತಹ ಬಹು ವೈವಿಧ್ಯತೆಯುಳ್ಳ ವಸತಿಯ ಹಿನ್ನೆಲೆಯಲ್ಲಿ ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರ ವಸತಿಯ ಸ್ವರೂಪ, ಹಕ್ಕುದಾರಿಕೆ ಬದಲಾವಣೆ ಮತ್ತು ಅದರಲ್ಲಿನ ವಿವಿಧ ಸಮಸ್ಯೆಗಳ ಕುರಿತಾಗಿ ತಿಳಿಯುವುದು ಅವಶ್ಯಕವಾಗಿದೆ.

ಹೆಚ್ಚಿನ ದೇವದಾಸಿ ಮಹಿಳೆಯರಿಗೆ ಸ್ವಂತ ಮನೆ ಅಥವಾ ನಿವೇಶನಗಳು ಇಲ್ಲ. ಇವರು ತಮ್ಮ ತಾಯಿಯ ಮನೆಯಲ್ಲಿಯೇ ವಾಸಿಸುತ್ತಾರೆ. ಅವರ ಅಣ್ಣಂದಿರು ಮತ್ತು ತಮ್ಮಂದಿರು ಇವರಿಗೆ ಮನೆಕೊಡಲು ಒಪ್ಪುವುದಿಲ್ಲ. ಅವರ ಜೊತೆಯಲ್ಲಿಯೇ ವಾಸಿಸುತ್ತಿದ್ದರು, ಜಗಳದಿಂದ ಬೇಸತ್ತಿದ್ದಾರೆ. ದೇವದಾಸಿ ಮಹಿಳೆಯರಿಗೆ ಮನೆ ಕೇವಲ ವಾಸಕ್ಕಿದೆ ರಕ್ಷಣೆಯ ಭಾವನೆಯನ್ನು ಗಟ್ಟಿಗೊಳಿಸುವ ನೆಲೆಯಾಗಿದೆ.

ಆರಂಭ ಕಾಲದಲ್ಲಿ ದೇವದಾಸಿಯರು ದೇವಾಲಯಗಳಲ್ಲಿ ದೇವರ ಸೇವೆ ಮಾಡಿಕೊಂಡು ದೇವಾಲಯದ ಪೂಜೆ, ಪುನಸ್ಕಾರಗಳಲ್ಲಿ ಭಾಗವಾಗಿ ಬಂದ ಭಕ್ತಾದಿಗಳನ್ನು ಸಂರಕ್ಷಣೆ ಮಾಡುವ ಕಾರ್ಯ ನಿರ್ವಹಿಸುತ್ತಿದ್ದರು. ಹೀಗಾಗಿ ಅವರಿಗೆ ಸ್ವಂತ ಮನೆಗಳು ಇಲ್ಲದೆ ದೇವಾಲಯಗಳೇ ಅವರ ಮನೆಗಳಾಗಿದ್ದವು. ನಂತರ ಈ ಪದ್ಧತಿಯ ಸ್ವರೂಪ ಬದಲಾವಣೆಯಾಗಿ ಅಥವಾ ಅರಸರ ಆಳ್ವಿಕೆಗಳು ಕೊನೆಗೊಂಡು ಪುರೋಹಿತಶಾಹಿಗಳು, ಮೇಲ್ವರ್ಗದವರು ತಮ್ಮ ಸ್ವಾರ್ಥ ಸುಖಕ್ಕೆ ದೇವದಾಸಿಯರನ್ನು ಶೋಷಣೆ ಮಾಡತೊಡಗಿದರು. ಪ್ರಾರಂಭದಲ್ಲಿ ಪ್ರತಿಷ್ಠೆಯಿಂದ ಇದ್ದ ದೇವದಾಸಿಯರು ಬೀದಿಪಾಲಾಗಿ ವೇಶ್ಯಾವೃತ್ತಿಗಳಿಗೆ ಕೆಲವರು ತೊಡಗಿಕೊಂಡರೆ, ಕೆಲವರು ಕೂಲಿ ಕೆಲಸ ಮಾಡಿಕೊಂಡು ಬರುವ ಹಣದಲ್ಲಿ ಹೊಟ್ಟೆ-ಬಟ್ಟೆ ನೋಡುಕೊಳ್ಳುತ್ತಿದ್ದಾರೆ. ಹೀಗಾಗಿ ಅವರಿಗೆ ಯಾವುದೇ ಆದಾಯವಿಲ್ಲದ್ದರಿಂದ

ಸರಿಯಾದ ಮನೆಗಳನ್ನು ಕಟ್ಟಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಬಡವರಾದ ಅನೇಕ ದೇವದಾಸಿ ಮಹಿಳೆಯರು ಗುಡಿಸಲುಗಳಲ್ಲಿ ವಾಸವಾಗಿದ್ದಾರೆ. ದೇವದಾಸಿಯರು ಹೆಚ್ಚಾಗಿ ಕೊಳಚೆ ಪ್ರದೇಶಗಳಲ್ಲಿ ವಾಸಮಾಡುತ್ತಿದ್ದರು. ಕಾಲ ಕ್ರಮೇಣ ಸಂಘ ಸಂಸ್ಥೆಗಳು ದೇವದಾಸಿಯರ ಸಮಸ್ಯೆಗಳ ಕುರಿತು ಪ್ರತಿಭಟನೆಗಳನ್ನು ಮಾಡಿ ಸರ್ಕಾರದ ಗಮನಕ್ಕೆ ತಂದವು. ಆಗ ಸರ್ಕಾರ ಎಚ್ಚೆತ್ತುಕೊಂಡು ಪುನರ್ವಸತಿಯ ಹಲವಾರು ಯೋಜನೆಗಳ್ನು ಹಾಕಿಕೊಂಡು ಆ ಯೋಜನೆ ಅಡಿಯಲ್ಲಿ ಮನೆಗಳನ್ನು ನಿರ್ಮಿಸಿಕೊಟ್ಟಿತ್ತು. ಇದರಿಂದ ವಸತಿ ವ್ಯವಸ್ಥೆಯಲ್ಲಿ ಸ್ವಲ್ಪಮಟ್ಟಿಗೆ ಬದಲಾವಣೆಗಳಾಗಿವೆ. ಮೊದಲಿದ್ದ ಗುಡಿಸಲು ಮನೆಗಳ ಸಂಖ್ಯೆ ಸ್ವಲ್ಪಮಟ್ಟಿಗೆ ಕಾಣಿಸುತ್ತಿವೆ ಅಷ್ಟೇ. ಮನೆಕಟ್ಟುವ ಜಾಗ ದೇವದಾಸಿಯರ ಹೆಸರಲ್ಲೇ ಇರಬೇಕು ಎಂಬ ಷರತ್ತಿನ ಮೇರೆಗೆ ಇನ್ನು ಕೆಲವು ದೇವದಾಸಿ ಮನೆಗಳು ಉತ್ತಮಸ್ಥಿತಿಯನ್ನು ತಲುಪಿಲ್ಲ ಎಂದು ಹೇಳಲಾಗುವುದು. ಪ್ರಾಚೀನ ಕಾಲದಿಂದಲೂ ದೇವದಾಸಿ ಪದ್ಧತಿಯಿಂದ ಸಮಾಜದಲ್ಲಿ ಮಹಿಳೆಯರು ಶೋಷಣೆಯನ್ನು ಒಂದಲ್ಲಾ ಒಂದು ರೀತಿ ಅನುಭವಿಸುತ್ತಲೇ ಬಂದಿದ್ದಾರೆ. ದೇವದಾಸಿ ಪದ್ಧತಿಯು ಒಂದೇ ಸಂಪ್ರದಾಯವಾಗಿದ್ದರೂ ಕೂಡ ಸಾಮಾಜಿಕ ವ್ಯವಸ್ಥೆಯಲ್ಲಿ ಸಮುದಾಯಗಳು ತಮ್ಮದೇ ಆದ ಆಚರಣೆ ಸಂಪ್ರದಾಯ ಮತ್ತು ಸಾಮಾಜಿಕ ಸ್ತರವಿನ್ಯಾಸವನ್ನು ಹೊಂದಿರುತ್ತವೆ. ಹಾಗಾಗಿ ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಗಳ ಸಮುದಾಯದಲ್ಲಿನ ದೇವದಾಸಿ ಮಹಿಳೆಯರ ಸಾಮಾಜಿಕ ಬದುಕನ್ನು ಗಮನಿಸಿದಾಗ ವ್ಯತ್ಯಾಸ ಮತ್ತು ಹೋಲಿಕೆಗಳು ಕಂಡುಬರುತ್ತವೆ.

ದೇವದಾಸಿ ಪದ್ಧತಿಯು ದೇವರ ಸೇವೆಯ ಹಿನ್ನೆಲೆಯಲ್ಲಿ ಬೆಳೆದು ಬಂದಿದ್ದಾಗಿದೆ. ಈ ಪದ್ಧತಿಯನ್ನು ಸಮಾಜದ ಅನೇಕ ಸಮುದಾಯಗಳಲ್ಲಿ ಕಾಣುತ್ತೇವೆ. ಅದರಲ್ಲಿ ಪರಿಶಿಷ್ಟ ಜಾತಿಯ ಸಮುದಾಯದ ಜೀವನ ವಿಧಾನವು ಶೋಚನಿಯವಾಗಿದೆ. ಕಾರಣ ದೇವದಾಸಿ ಪದ್ಧತಿಯಂತಹ ಆಚರಣೆಯು ಸಮುದಾಯಕ್ಕೆ ಒಂದು ಕಳಂಕವಾಗಿ ಪರಿಣಿಮಿಸಿದೆ. ಅದರಲ್ಲೂ ಪರಿಶಿಷ್ಟರಲ್ಲಿ ಅಸ್ಪೃಶ್ಯತೆಯ ಜೊತೆಗೆ ಇಂತಹ ಅನಿಷ್ಟ ಪದ್ಧತಿಯನ್ನು ಅನುಭವಿಸುತ್ತಿರುವುದು ಎಲ್ಲಾ ಸಮುದಾಯಗಳ ದೇವದಾಸಿಯರಿಗಿಂತ ಭಿನ್ನವಾದ ಶೋಷಣೆಯಾಗಿ ಕಾಣಲಾಗುತ್ತದೆ. ಅಸ್ಪೃಶ್ಯ ಮಾದಿಗ ಸಮುದಾಯದ ದೇವದಾಸಿಯರು ಹೆಚ್ಚಿನ ಸಂಖ್ಯೆಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತಾರೆ. ಇವರಲ್ಲಿ ಗಂಡುಮಕ್ಕಳು ಇದ್ದರೂ ಸಹ ದೇವದಾಸಿಯಾಗಿ ತಮ್ಮ ಹೆಣ್ಣುಮಕ್ಕಳನ್ನು ಬಿಡುತ್ತಾರೆ. ಕುಟುಂಬದಲ್ಲಿ ಜವಾಬ್ದಾರಿ ಮತ್ತು ಆರ್ಥಿಕ ಹೊಣೆಗಾರಿಕೆಯೊಂದಿಗೆ ಜೀವನ ನಡೆಸಲು ದೇವರಿಗೆ ಬಿಡುತ್ತಾರೆ. ದೇವದಾಸಿ ಮಹಿಳೆ ಕುಟುಂಬದ ಒಳಗೆ ಹೊರಗೆ ಅನೇಕ ದೌರ್ಜನ್ಯಗಳಿಗೆ ಒಳಗಾಗಿದ್ದಾಳೆ. ಬಹುತೇಕವಾಗಿ ಪರಿಶಿಷ್ಟ ಜಾತಿಯ ಸಮುದಾಯಗಳಲ್ಲಿ ದೇವದಾಸಿಯರ ಹತ್ತಿರ ಅವರದೇ ಸಮುದಾಯದವರು ಸಂಬಂಧ ಹೊಂದಿರುತ್ತಾರೆ. ಸಾಮಾನ್ಯವಾಗಿ ಪರಿಶಿಷ್ಟ ಜಾತಿಯ ದೇವದಾಸಿ ಮಹಿಳೆಯೊಂದಿಗೆ ಉನ್ನತ ಸಮುದಾಯದವರು ಲೈಂಗಿಕ ಸಂಬಂಧ ಹೊಂದಿರುವುದು ಕಡಿಮೆ. ಕಾರಣ ಇವರು ಕೆಳಜಾತಿಯ ಅಸ್ಪೃಶ್ಯರಾಗಿರುವುದು. ಒಂದು ವೇಳೆ ಸಂಬಂಧ ಇಟ್ಟುಕೊಂಡಿದ್ದರು. ಯಾರಿಗೂ ತಿಳಿಯದಂತೆ ಬಂದು ಹೋಗುತ್ತಾರೆ. ಅವರಲ್ಲಿ ಕೇವಲ ದೈಹಿಕವಾಗಿ ಮಾತ್ರ ಸಂಬಂಧವಿರುತ್ತದೆ ಹೊರತು, ಅವರ ಮನೆಯಲ್ಲಿ ನೀರು ಸಹ ಕುಡಿಯುವುದಿಲ್ಲ.

ಸಾಮಾನ್ಯವಾಗಿ ತಂದೆ ಯಾರೆಂದು ಗೊತ್ತಿದ್ದರೂ, ಇಂತಹ ಸ್ಥಿತಿಯಲ್ಲಿರುವ ತಂದೆಯ ಕುರಿತು ಮಕ್ಕಳಿಗೆ ಕುರುಹುಗಳೇ ಸಿಗುವುದಿಲ್ಲ. ಸಿಕ್ಕರೂ ಕೂಡ ತಂದೆ ಎಂದು ಹೇಳಲು ಅಥವಾ ಅಪ್ಪನೆಂದು ಕರೆಯಲು ಕೂಡ ಅವಕಾಶವಿಲ್ಲದಂತಹ ಸ್ಥಿತಿಯನ್ನು ಪರಿಶಿಷ್ಟ ಜಾತಿಯಲ್ಲಿ ಕಾಣಲಾಗುತ್ತದೆ. ಒಟ್ಟಾರೆಯಾಗಿ ಜಾತಿ ಮತ್ತು ದೇವದಾಸಿ ಪದ್ಧತಿ ಇವೆರಡರಿಂದಲೂ ಶೋಷಣೆ ದೌರ್ಜನ್ಯಗಳಿಗೆ ಒಳಗಾಗುವವರು ಪರಿಶಿಷ್ಟ ಜಾತಿಯಲ್ಲಿ ಕಂಡುಬರುವ ದೇವದಾಸಿಯರು ಎಂದೇ ಹೇಳಲಾಗುವುದು. ಇವರು ಹೆಚ್ಚಿನ ಬಡತನದ ಸ್ಥಿತಿಯನ್ನು ಅನುಭವಿಸುತ್ತಿದ್ದಾರೆ. ವಸತಿ ವ್ಯವಸ್ಥೆಯೂ ಕೂಡ ಸರಿಯಾಗಿ ದೊರೆತಿಲ್ಲ. ಅಲ್ಲದೆಯೇ ಸಮಾಜದಲ್ಲಿ ಅನಿಷ್ಟವೆಂದು ಪರಿಣಿಮಿಸಿದ ಈ ದೇವದಾಸಿ ಪದ್ಧತಿಗೆ ಒಳಗಾಗುತ್ತಿರುವುದು ಇಂದಿಗೂ ಕ್ಷೇತ್ರಾಧ್ಯಯನದಲ್ಲಿ ಕಂಡುಬಂದಿದೆ.

ಪರಿಶಿಷ್ಟ ಪಂಗಡದವರು ಸಮಾಜದಲ್ಲಿ ಪರಿಶಿಷ್ಟ ಜಾತಿಯವರಿಗಿಂತ ಉನ್ನತ ಸ್ಥಾನದಲ್ಲಿರುವುದು ಕಂಡುಬರುತ್ತದೆ. ಅವರದೆ ಆದ ಜೀವನ ವಿಧಾನದಲ್ಲಿ ಬದುಕುವ ಬುಡಕಟ್ಟು ಸಮುದಾಯಗಳನ್ನು ಕಾಣುತ್ತೇವೆ. ಬೇಡ ಬುಡಕಟ್ಟಿನಲ್ಲಿ ದೇವದಾಸಿ ಪದ್ಧತಿಯನ್ನು ಕಾಣಲಾಗುತ್ತದೆ. ಬೇಡರು ಸಹ ಸಮಾಜದಲ್ಲಿ ಅನಿಷ್ಟವೆಂದೆನಿಸಿದ ದೇವದಾಸಿ ಪದ್ಧತಿಗೆ ಗುರಿಯಾದ ಬುಡಕಟ್ಟಾಗಿದೆ.

ಪರಿಶಿಷ್ಟರಿಗೆ ಹೋಲಿಸಿದರೆ ಇವರು ತಮ್ಮದೇ ಸಮಾಜದಲ್ಲಿ ಉತ್ತಮ ಗೌರವ ಸ್ಥಾನಮಾನಗಳನ್ನು ಹೊಂದಿದ್ದಾರೆ. ದೇವದಾಸಿಯಾಗುವ ಪದ್ಧತಿ ಆಚರಣೆಗಳು ಸಮುದಾಯಗಳಲ್ಲಿ ಒಂದೇ ಆಗಿ ಕಂಡುಬಂದರೂ ಸಹ ಸಾಮಾಜಿಕ ಬದುಕಿನಲ್ಲಿ ಭಿನ್ನತೆಗಳು ಕಂಡುಬರುತ್ತವೆ. ಬೇಡ ಬುಡಕಟ್ಟಿನ ದೇವದಾಸಿ ಮಹಿಳೆಯರು ಬಹುತೇಕವಾಗಿ ತಮ್ಮವರು ಅಥವಾ ಉನ್ನತ ವರ್ಗದ ಪುರುಷರೊಂದಿಗೆ ಸಂಬಂಧವನ್ನು ಹೊಂದಿರುತ್ತಾರೆ. ಪರಿಶಿಷ್ಟ ಜಾತಿಯ ಸಮುದಾಯದ ಪುರುಷರೊಂದಿಗೆ ಸಂಬಂಧ ಹೊಂದುವುದಿಲ್ಲ. ಕಾರಣ ಇವರು ಕೆಳಜಾತಿಯವರಾಗಿರುವುದು. ಅಲ್ಲದೇ ಪರಿಶಿಷ್ಟ ಪಂಗಡದ ದೇವದಾಸಿ ಮಹಿಳೆಯೊಂದಿಗೆ ಸಂಬಂಧವನ್ನು ಹೊಂದಿರುವ ಪುರುಷನು ಎಲ್ಲರಿಗೂ ಗೊತ್ತಿರುವ ರೀತಿಯಲ್ಲಿ ಬಂದು ಹೋಗುವುದು, ಅಲ್ಲೇ ಇರುವುದು ಕಂಡುಬರುತ್ತದೆ. ಕುಟುಂಬಗಳಲ್ಲಿಯೂ ಇವರು ಉತ್ತಮವಾದ ಜೀವನವನ್ನು ನಡೆಸುತ್ತಾರೆ. ಬೇಡ ಸಮುದಾಯದ ದೇವದಾಸಿಯರು ರಂಗಕಲೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಈ ಮೂಲಕ ಸಮಾಜದಲ್ಲಿ ದೇವದಾಸಿ ಎನ್ನುವುದಕ್ಕಿಂತ ರಂಗನಟಿ, ರಂಗಕಲಾವಿದೆ ಎಂದೇ ಹೆಸರುಗಳಿಸಿದ್ದರಿಂದ ಇವರು ದೇವದಾಸಿ ಎಂಬ ಹಣೆಪಟ್ಟಿಯಿಂದ ಕಳಚಿಕೊಂಡಿದ್ದಾರೆ.

ಪರಿಶಿಷ್ಟ ಪಂಗಡದವರಲ್ಲೂ ಕೂಡ ಬಡತನವನ್ನು ಕಾಣಲಾಗುತ್ತದೆ. ಪರಿಶಿಷ್ಟ ಜಾತಿಯವರಿಗಿಂತ ಕಡಿಮೆ ಜನಸಂಖ್ಯೆಯಲ್ಲಿ ದೇವದಾಸಿಯರು ಕಂಡುಬಂದಿದ್ದು, ಹಿಂದುಳಿದ ವರ್ಗಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ದೇವದಾಸಿಯರು ಕಂಡುಬರುತ್ತಾರೆ. ಇವರಲ್ಲಿ ದೇವದಾಸಿ ಪದ್ಧತಿಯ ಕುರಿತು ಜಾಗೃತರಾಗಿದ್ದು, ಪ್ರಸ್ತುತ ದೇವದಾಸಿಯಾಗಿ ಬಿಟ್ಟಿರುವ ಸಂಗತಿಗಳು ಕಡಿಮೆಯಾಗಿವೆ.

ಪರಿಶಿಷ್ಟರಿಗೆ ಹೋಲಿಸಿದರೆ ಹಿಂದುಳಿದ ವರ್ಗಗಳ ಸಮುದಾಯದಲ್ಲಿ ಕಡಿಮೆ ಸಂಖ್ಯೆಯಲ್ಲಿ ದೇವದಾಸಿಯರು ಕಂಡುಬರುತ್ತಾರೆ. ಸಮಾಜದಲ್ಲಿ ಹಿಂದುಳಿದ ವರ್ಗಗಳಿಗೆ ಉತ್ತಮ ಸ್ಥಾನಮಾನಗಳಿವೆ. ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗಿಂತ ಇವರು ಸಾಮಾಜಿಕ ಜೀವನವು ಉತ್ತಮವಾಗಿದೆ. ಇವರಲ್ಲೂ ಸ್ವಲ್ಪಮಟ್ಟಿಗೆ ಬಡತನವು ಕಂಡುಬರುತ್ತದೆ. ಹಿಂದುಳಿದ ವರ್ಗಗಳ ದೇವದಾಸಿಯರ ಹತ್ತಿರ ಪರಿಶಿಷ್ಟ ಪಗಂಡದ ಪುರುಷರು ಮತ್ತು ಉನ್ನತ ವರ್ಗದ ಪುರುಷರು ಸಂಬಂಧ ಹೊಂದಿರುವುದು ಕಂಡುಬಂದಿದೆ. ಪ್ರಸ್ತುತದಲ್ಲಿ ದೇವದಾಸಿ ಪದ್ಧತಿಯು ಈ ಸಮುದಾಯದಲ್ಲಿ ನಿರ್ಮೂಲನೆಯಾಗಿದೆ. ಈ ಹಿಂದೇ ಇದ್ದ ದೇವದಾಸಿಯರಷ್ಟೇ ಕಂಡುಬಂದಿದ್ದಾರೆ. ಪ್ರಸ್ತುತದಲ್ಲಿ ದೇವದಾಸಿ ಬಿಡುವ ಕಾರ್ಯಗಳು ಹಿಂದುಳಿದ ವರ್ಗದಲ್ಲಿ ಕಂಡುಬರುವುದಿಲ್ಲ. ಬಹುತೇಕವಾಗಿ ಗರತಿ ಮುತ್ತುಕಟ್ಟಿಸಿಕೊಂಡವರು ಕಂಡುಬರುತ್ತಾರೆ. ಗಂಗಾಮತಸ್ಥರ ಸಮುದಾಯದಲ್ಲಿ ಮಾತ್ರ ಕನ್ಯೆಮುತ್ತು ಕಟ್ಟಿಸಿಕೊಂಡ ದೇವದಾಸಿಯರು ಅಧಿಕವಾಗಿ ಕಂಡುಬರುತ್ತಾರೆ.

ದೇವದಾಸಿ ಪದ್ಧತಿಯು ಒಂದೇ ಆಗಿದ್ದರೂ ಸಹ ಜಾತಿಯ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳಲ್ಲಿಯೇ ಮೇಲು-ಕೀಳು ಎಂಬ ಮನೋಭಾವನೆಗಳಿವೆ. ಇಂದಿಗೂ ಸಹ ಪರಿಶಿಷ್ಟ ಜಾತಿಯ ಜನರು ತಮಗಿಂತ ಉನ್ನತ ಸಮುದಾಯದ ಮನೆಗಳ ಒಳಗೆ ಹೋಗುವುದಿಲ್ಲ. ಇನ್ನೂ ಜಾತಿ ಪದ್ಧತಿಯು ಕಣ್ಮುಂದೆಯೇ ಜೀವಂತವಾಗಿರುವುದನ್ನು ಕಾಣುತ್ತೇವೆ. ಹೆಚ್ಚಾಗಿ ಪರಿಶಿಷ್ಟ ಜಾತಿಯವರನ್ನು ಕೀಳಾಗಿ ಕಾಣುತ್ತಾರೆ. ಅವರಿಗೆ ಅವ್ಯಾಚ ಶಬ್ದಗಳಿಂದ ನಿಂದಿಸುತ್ತಾರೆ. ಆದರೆ ಪರಿಶಿಷ್ಟ ಪಗಂಡ ಮತ್ತು ಹಿಂದುಳಿದ ಸಮುದಾಯದ ದೇವದಾಸಿಯರು ಈ ರೀತಿಯ ಶೋಷಣೆಯಿಂದ ಸ್ವಲ್ಪಮಟ್ಟಿಗೆ ಮುಕ್ತರಾಗಿದ್ದಾರೆ.

ಒಟ್ಟಾರೆಯಾಗಿ ಪರಿಶಿಷ್ಟ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರ ಸಾಮಾಜಿಕ ಜೀವನ ಗಮನಿಸಿದಾಗ ಪರಿಶಿಷ್ಟ ಜಾತಿಯ ದೇವದಾಸಿಯರ ಸಾಮಾಜಿಕ ಜೀವನ ತುಂಬಾ ಶೋಷಣೆಯ ಮತ್ತು ಶೋಚನಿಯ ಬದುಕಾಗಿ ಕಂಡುಬರುತ್ತದೆ. ಪ್ರಸ್ತುತದಲ್ಲಿಯೂ ಈ ಸಮುದಾಯಗಳಲ್ಲಿ ದೇವದಾಸಿಯರನ್ನು ಬಿಡುವುದು ಕಂಡುಬರುತ್ತದೆ.

### ೫.೨ ಧಾರ್ಮಿಕ ಜೀವನ

ಪ್ರಕೃತಿಯ ಮಡಿಲಲ್ಲಿ ಬದುಕುವ ಜನರು ಬಹುದಿನಗಳ ಹಿಂದಿನಿಂದಲೂ ತಾನು ಕಾಣುವ ಮರ-ಬಳ್ಳಿ, ನೆಲ-ಜಲ ಮತ್ತು ಕಲ್ಲು-ಮಣ್ಣು ಮೊದಲಾದವುಗಳಲ್ಲಿ ಒಂದು ವಿಶೇಷವಾದ ಶಕ್ತಿ ಅಡಗಿದೆ ಎಂದು ನಂಬಿದ್ದಾರೆ. ಮನುಷ್ಯರಿಗೆ ರೋಗ-ರುಜಿನೆ, ಕಾಡಿದಾಗ, ಕಷ್ಟ-ನಷ್ಟಗಳು ಬಂದಾಗ ತನಗೆ ರಕ್ಷಣೆ ಪಡೆಯುವ ಸಲುವಾಗಿ ಕಣ್ಣಿಗೆ ಕಾಣದ ನಿಗೂಢವಾದ ಶಕ್ತಿಯ ಕಡೆಗೆ ಮೊರೆಹೋಗುತ್ತಾರೆ. ಇಲ್ಲಿ ಪ್ರಕೃತಿಯಲ್ಲಿನ ಅಗೋಚರ ಶಕ್ತಿಯ ಮೇಲಿನ ಭಯವು ದೇವರಲ್ಲಿ

ನಂಬಿಕೆ ಹುಟ್ಟುವಂತೆ ಮಾಡುತ್ತದೆ. ಹೀಗೆ ಆರಂಭದಿಂದ ಮಾನವ ಸಮಾಜದಲ್ಲಿ ಹುಟ್ಟಿಕೊಂಡ ದೇವರುಗಳು ಅಥವಾ ದೇವರ ಕಲ್ಪನೆ ಆಯಾ ಸನ್ನಿವೇಶಕ್ಕೆ, ಪ್ರದೇಶಕ್ಕೆ ಸೀಮಿತವಾಗುತ್ತವೆ. ಅಂದಿನಿಂದ ಇಂದಿನವರೆಗೂ ದೇವತೆಗಳು ಅಥವಾ ದೇವರ ಕಲ್ಪನೆ ಒಂದು ಸೀಮೆಗೆ ಸಂಬಂಧಿಸಿರುವುದನ್ನು ನೋಡಬಹುದು.ಆದರೆ ಇವು ಒಂದು ಸಮುದಾಯಕ್ಕೆ ಮಾತ್ರ ಸಂಬಂಧಿಸಿವೆ ಎಂದು ಹೇಳುವುದು ಕಷ್ಟದ ಕೆಲಸವಾಗಿದೆ. ಏಕೆಂದರೆ ದೇವರುಗಳು ಮಾನವನ ಮಾನಸಿಕ ಭಾವನೆಗೆ ಸಂಬಂಧಿಸಿದ್ದಾಗಿದೆ. ದೇವರ ಕುರಿತಾದ ಮಾನವನ ಈ ಮನೋಭಾವನೆಗಳನ್ನೇ ಬಂಡವಾಳವಾಗಿಸಿಕೊಂಡ ಸಮಾಜದ ಬುದ್ಧಿವಂತ ವರ್ಗ ತಳಸಮುದಾಯದವರನ್ನು ದುಡಿಸಿಕೊಳ್ಳುವ ಮತ್ತು ಅವರನ್ನು ಬಳಸಿಕೊಳ್ಳುವ ಸಲುವಾಗಿ ಇವರ ಮೇಲೆ ಅನೇಕ ಧಾರ್ಮಿಕ ಕಟ್ಟು ಪಾಡುಗಳನ್ನು ಹೇರುವ ಕಾರ್ಯಮಾಡುತ್ತಾರೆ.ಈ ಮೂಲಕ ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳಲ್ಲಿ ದೇವದಾಸಿ ಪದ್ಧತಿಯನ್ನು ಹುಟ್ಟು ಹಾಕಿದರು. ಇಲ್ಲಿ ಅನೇಕ ತಳಸಮುದಾಯದ ಮಹಿಳೆಯರನ್ನು ಮತ್ತು ಹಿಂದುಳಿದ ಮಹಿಳೆಯರನ್ನ ದೇವರ ಹೆಸರಿನಲ್ಲಿ ದೇವದಾಸಿಯರನ್ನಾಗಿ ಮಾಡಿರುವುದು ಸಾಕಷ್ಟು ನೋಡಬಹುದಾಗಿದೆ. ಹಲವಾರು ಹೆಣ್ಣು ದೇವತೆಗಳಿಗೆ ಹಾಗೂ ಅದರಂತೆಯೇ ಗಂಡು ದೇವರುಗಳ ಧಾರ್ಮಿಕ ಕೇಂದ್ರಗಳಲ್ಲಿ ಮಹಿಳೆಯರನ್ನು ದೇವರ ಹೆಸರಿನಲ್ಲಿ ದೇವದಾಸಿಯರನ್ನಾಗಿ ಮಾಡುವ ಪದ್ಧತಿಯನ್ನು ಕಾಣಬಹುದಾಗಿದೆ. ಈ ಪದ್ಧತಿ ಮತ್ತು ಅಂತಹ ಧಾರ್ಮಿಕ ಕೇಂದ್ರಗಳಲ್ಲಿ ಇಂದಿಗೂ ಆ ಕಾರ್ಯವನ್ನು ಮುಂದುವರಿಸಿಕೊಂಡು ಬರುತ್ತಿರುವುದನ್ನು ಕಾಣಲಾಗುವುದು. ಪ್ರಸ್ತುತ ಈ ವ್ಯವಸ್ಥೆಗೆ ಒಳಗಾದವರಲ್ಲಿ ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳಲ್ಲಿ ನಮಹಿಳೆಯರು ದೇವದಾಸಿಯಾಗಿ ಕಂಡುಬರುತ್ತದೆ. ಈ ಪದ್ಧತಿಯಲ್ಲಿ ಎಲ್ಲಮ್ಮ, ಹುಲಿಗೆಮ್ಮ, ಉಚ್ಚಂಗೆಮ್ಮ, ಮಾರೆಮ್ಮ, ದುರುಗಮ್ಮ ಹೀಗೆ ಹೆಣ್ಣು ದೇವತೆಗಳಿಗೆ ದೇವದಾಸಿ ಬಿಟ್ಟಂತೆಯೇ ಈರಣ್ಣ, ಮಲ್ಲಯ್ಯ, ಆಂಜನೇಯ, ಪೆನ್ನೋಬಳೇಶ್ವರ, ಕನಕರಾಯ, ಮೈಲಾರಲಿಂಗ ಮತ್ತು ಗೋಣಿಬಸವೇಶ್ವರ ಗಂಡು ದೇವರುಗಳಿಗೆ ಸೇರಿದಂತೆ ಹತ್ತು ಹಲವಾರು ದೇವರುಗಳಿಗೆ ನಡೆದುಕೊಳ್ಳುವುದು ಮತ್ತು ಪೂಜಿಸುವುದನ್ನು ಕಾಣಲಾಗುವುದು. ಇವುಗಳನ್ನು ತಮ್ಮ ಕುಲದೇವರು ಮತ್ತು ಮನೆದೇವರು ಎಂದು ಹೇಳುತ್ತಾರೆ.

ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳಲ್ಲಿನ ಪ್ರತಿಯೊಂದು ಕುಟುಂಬದವರು ತಮ್ಮ ಮನೆಗಳಲ್ಲಿ ದೇವರ ಜಗುಲಿಯನ್ನು ನಿರ್ಮಿಸಿಕೊಂಡಿರುತ್ತಾರೆ. ಅವರವರ ಓಣಿ ಅಥವಾ ಕೇರಿಗಳಲ್ಲಿ ದೇವಸ್ಥಾನಗಳನ್ನು ನಿರ್ಮಿಸಿಕೊಂಡು ಭಯ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಈ ಸಮುದಾಯಗಳು ಹೆಚ್ಚಾಗಿ ಹೆಣ್ಣು ದೇವರುಗಳಿಗೆ ನೆಡೆದುಕೊಳ್ಳುತ್ತಾರೆ. ಪ್ರಾದೇಶಿಕವಾಗಿ ನೋಡಿದಾಗ ಕೆಲವು ಗಂಡು ದೇವರುಗಳಿಗೂ ನಡೆದುಕೊಳ್ಳುವುದುಂಟು. ಇವರಲ್ಲಿ ದೇವರ ಆರಾಧನೆಯ ಜೊತೆಗೆ ಕೋಳಿ ಕುರಿಗಳ ಬಲಿಯನ್ನು ಅರ್ಪಿಸುತ್ತಾರೆ. ಹಾಗೆಯೇ ಹರಕೆಯ ರೂಪದಲ್ಲಿ ಹೆಣ್ಣು ಮಕ್ಕಳನ್ನು ದೇವರಿಗೆ ಅರ್ಪಿಸುವ ಮೂಲಕ ದೇವದಾಸಿಯನ್ನಾಗಿಸುತ್ತಾರೆ. ಪ್ರಾದೇಶಿಕವಾಗಿ ಆಯಾ ಧಾರ್ಮಿಕ ಕೇಂದ್ರಗಳಲ್ಲಿ

ದೇವದಾಸಿಯರನ್ನು ಬಿಡುವ ಆಚರಣೆಯನ್ನು ನಡೆಸುತ್ತಾರೆ. ಬಳ್ಳಾರಿ ಜಿಲ್ಲೆಯ ದೇವದಾಸಿಯರನ್ನು ಯಾವ ಯಾವ ದೇವರುಗಳಿಗೆ ಬಿಟ್ಟಿದ್ದಾರೆ ಎಂಬುದರ ಕುರಿತು ತಿಳಿಸುವುದು ಮತ್ತು ಈ ಹಿಂದಿನ ದೇವದಾಸಿ ಪದ್ಧತಿಯ ಸಂಪ್ರದಾಯ ಮತ್ತು ಆಚರಣೆಗಳು ಪ್ರಸ್ತುತ ಬೇರೆ ಸ್ವರೂಪವನ್ನು ಪಡೆದು ಕೊಂಡಿರುವ ಕುರಿತು ಚರ್ಚಿಸಲಾಗಿದೆ.

ದೇವದಾಸಿ ಪದ್ಧತಿಯ ಆಚರಣೆಗಳನ್ನು ಧಾರ್ಮಿಕ ಕೇಂದ್ರಗಳಲ್ಲಿ ಮಾಡುತ್ತಾರೆ. ಹುಲಿಗೆಮ್ಮ ದೇವರು ಅವರ ಮನೆ ಅಥವಾ ಕುಲದೇವರಾಗಿದ್ದರೆ, ಅವರು ಹುಲಿಗಿ ಕ್ಷೇತ್ರದಲ್ಲಿನ ಹುಲಿಗೆಮ್ಮ ದೇವರಿಗೆ ದೇವದಾಸಿಯನ್ನಾಗಿ ಬಿಡುತ್ತಾರೆ. ಹೀಗೆ ಅನೇಕರು ಅವರವರ ಮನೆ ಅಥವಾ ಕುಲದೇವರುಗಳ ಧಾರ್ಮಿಕ ಕ್ಷೇತ್ರದಲ್ಲಿ ದೇವದಾಸಿಯನ್ನಾಗಿಸುವ ಆಚರಣೆಯನ್ನು ಮಾಡುತ್ತಾರೆ. ಹುಲಿಗೆಮ್ಮ ದೇವರಿಗೆ ಬಿಡುವವರು ಹುಲಿಗಿ ಧಾರ್ಮಿಕ ಕ್ಷೇತ್ರದಲ್ಲಿ, ಉಚ್ಚಂಗೆಮ್ಮ ದೇವರಿಗೆ ಬಿಡುವವರು ಉಚ್ಚಂಗಿದುರ್ಗದಲ್ಲಿ, ಎಲ್ಲಮ್ಮ ದೇವರಿಗೆ ಬಿಡುವವರು ಸವದತ್ತಿಯಲ್ಲಿ, ಮೈಲಾರ ಲಿಂಗ ದೇವರಿಗೆ ಮೈಲಾರದಲ್ಲಿ, ಈರಣ್ಣ ದೇವರಿಗೆ ಬಿಡುವವರು ಆಂಧ್ರದ ಉರುಕುಂದಿಯಲ್ಲಿ, ಪೆನ್ನೋಬಳೇಶ್ವರ ದೇವರಿಗೆ ಬಿಡುವವರು ಆಂಧ್ರದ ಪೆನ್ನೋಬಳದಲ್ಲಿ, ಮಲ್ಲಯ್ಯನಿಗೆ ಬಿಡುವವರು ತೆಕ್ಕಲಕೋಟೆ, ಹೊಸಪೇಟೆ, ಧರ್ಮದಗುಡ್ಡ ಮತ್ತು ಮೀನುಗುಂದಿ ಮಲ್ಲಯ್ಯನ ಗುಡ್ಡದಲ್ಲಿ ಮತ್ತು ಗೋಣಿ ಬಸವೇಶ್ವರನಿಗೆ ಬಿಡುವವರು ಕೂಲಹಳ್ಳಿಯಲ್ಲಿ ದೇವದಾಸಿ ಸಂಪ್ರದಾಯದ ಆಚರಣೆಗಳನ್ನು ಮಾಡುತ್ತಾರೆ. ಹೆಣ್ಣು ದೇವರುಗಳಿಗೆ ಮುತ್ತು ಕಟ್ಟುವ ಆಚರಣೆ ಮಾಡಿದರೆ, ಗಂಡು ದೇವರಿಗೆ ಮುದ್ರೆ ಹಾಕುವ, ಚೌರಿ ಹೊರಿಸುವ ಮತ್ತು ತಾಳಿ ಕಟ್ಟುವ ಆಚರಣೆಗಳನ್ನು ಮಾಡುತ್ತಾರೆ. ಹೀಗೆ ಆಯಾ ಧಾರ್ಮಿಕ ಕೇಂದ್ರಗಳಲ್ಲಿನ ಆಚರಣೆ ಮತ್ತು ಸಂಪ್ರದಾಯಗಳು ವಿಭಿನ್ನವಾಗಿರುವದನ್ನು ಕಾಣಬಹುದು.

**ಧಾರ್ಮಿಕ ಕೇಂದ್ರಗಳು**

೧. ಹುಲಿಗಿ

೨. ಸವದತ್ತಿ

೩. ಉಚ್ಚಂಗಿ ದುರ್ಗ

೪. ಮೈಲಾರ

೫. ಮೀನುಗುಂದಿ ಮಲ್ಲಯ್ಯ ಮತ್ತು ತೆಕ್ಕಲಕೋಟೆ

೬. ಉರುಕುಂದಿ

೭. ಕನಕಗಿರಿ

೮. ಪೆನ್ನೋಬಳ

೯. ಕೂಲಹಳ್ಳಿ

೧೦. ಆಂಜನೇಯ

| ಧಾರ್ಮಿಕ ಕೇಂದ್ರಗಳು ಮತ್ತು ದೇವರುಗಳು | | | | | |
|---|---|---|---|---|---|
| ಕ್ರ.ಸಂ | ಧಾರ್ಮಿಕ ಕೇಂದ್ರ | ದೇವರುಗಳು | ವಿಧಾನ | ಪದ್ಧತಿಗಳು | ದೇವದಾಸಿಯರ ಸ್ಥಳಗಳು |
| ೦೧ | ಹುಲಿಗಿ | ಹುಲಿಗೆಮ್ಮ | ಮುತ್ತು ಕಟ್ಟುವ | ಜೋಗತಿ ಮತ್ತು ದೇವದಾಸಿ | ಬಳ್ಳಾರಿ ಜಿಲ್ಲೆಯ ಎಲ್ಲಾ ಭಾಗಗಳಲ್ಲಿ ಕಂಡುಬರುತ್ತಾರೆ |
| ೦೨ | ಸವದತ್ತಿ | ಎಲ್ಲಮ್ಮ, ರೇಣುಕ ಎಲ್ಲಮ್ಮ | ಮುತ್ತು ಕಟ್ಟುವ | ಜೋಗತಿ ಮತ್ತು ದೇವದಾಸಿ | ಬಳ್ಳಾರಿ ಜಿಲ್ಲೆಯ ಎಲ್ಲಾ ಭಾಗಗಳಲ್ಲಿ ಕಂಡುಬರುತ್ತಾರೆ |
| ೦೩ | ಉಚ್ಚಂಗಿದುರ್ಗ | ಉಚ್ಚಂಗೆಮ್ಮ | ಮುತ್ತು ಕಟ್ಟುವ | ಜೋಗತಿ ಮತ್ತು ದೇವದಾಸಿ ಬೊಮ್ಮನಹಳ್ಳಿ, ಕೂಡ್ಲಿಗಿ, ಹೊಸಪೇಟೆ ಮತ್ತಿತರ ಕಡೆ. | ಹೂವಿನ ಹಡಗಲಿ, ಹಗರಿ |
| ೦೪ | ಮೀನುಗುಂದಿ | ಮಲ್ಲಯ್ಯ, ಗುಡ್ಡದ ಮಲ್ಲಯ್ಯ | ಮುದ್ರೆ ಹಾಕುವ | ಬಸವಿ ಮತ್ತು ದೇವದಾಸಿ | ಸಿರುಗುಪ್ಪ, ಹಳೆಕೋಟೆ, ತೆಕ್ಕಲಕೋಟೆ, ತಾಳೂರು ತೆಕ್ಕಲಕೋಟೆ ಇತರೆ ಊರುಗಳು |
| ೦೫ | ಉರುಕುಂದಿ (ಆದೋನಿ–ಆಂಧ್ರ) | ಈರಣ್ಣ | ಮುದ್ರೆ ಮತ್ತು ತಾಳಿ ಕಟ್ಟುವ | ದೇವದಾಸಿ | ಸಿರುಗುಪ್ಪ, ಕಪ್ಪಗಲ್ಲು |

| | | | | | |
|---|---|---|---|---|---|
| ೦೬ | ಕನಕಗಿರಿ | ಕನಕರಾಯ | ಮುದ್ರೆ ಹಾಕುವ | ಬಸವಿ ಮತ್ತು ದೇವದಾಸಿ | ಸಿರುಗುಪ್ಪ, ಹಳೆಕೋಟೆ, ತೆಕ್ಕಲಕೋಟೆ, ತಾಳೂರು ಇತರೆ ಊರುಗಳು |
| ೦೭ | ಮೈಲಾರ | ಮೈಲಾರ ಲಿಂಗ | ಚೌರಿ ಹೊರಿಸುವುದು | ಗೊರವ – ಗೊರವಿ | ಹೂವಿನ ಹಡಗಲಿ, ಹಗರಿ ಬೊಮ್ಮನಹಳ್ಳಿ, ಕೂಡ್ಲಿಗಿ, ಹೊಸಪೇಟೆ ಇತರೆ ಊರುಗಳು |
| ೦೮ | ಪೆನ್ನೋಬಳ (ಅನಂತಪುರ–ಆಂಧ್ರ) | ಪೆನ್ನೋಬಳೇಶ್ವರ | ಮುದ್ರೆ ಮತ್ತು ತಾಳಿ ಕಟ್ಟುವ | ದೇವದಾಸಿ | ಬಳ್ಳಾರಿ |
| ೦೯ | ಕೂಲಹಳ್ಳಿ | ಗೋಣಿ ಬಸವೇಶ್ವರಪ್ಪ | ಚೌರಿ ಹೊರಿಸುವುದು | ದೇವದಾಸಿ, ಚೌರ ಬಸವಿ | ಹಗರಿ ಬೊಮ್ಮನಹಳ್ಳಿ, ಕೂಡ್ಲಿಗಿ |
| ೧೦ | ಕೂಡ್ಲಿಗಿ, ಕಡಲಬಾಳು, ಮರಿಯಮ್ಮನಹಳ್ಳಿ ಇತ್ಯಾದಿ | ಆಂಜನೇಯ | ಮುದ್ರೆ ಹಾಕುವ | ಬಸವಿ, ದೇವದಾಸಿ | ಬಳ್ಳಾರಿ, ಹೂವಿನ ಹಡಗಲಿ, ಹಗರಿ ಬೊಮ್ಮನಹಳ್ಳಿ, ಸಿರುಗುಪ್ಪ, ಕೂಡ್ಲಿಗಿ, ಹೊಸಪೇಟೆ, ಸಂಡೂರು. |

## ಹುಲಿಗಿಯ ಹುಲಿಗೆಮ್ಮ

ಪ್ರಾರಂಭದಲ್ಲಿ ಜನಪದ ಹೆಣ್ಣು ದೈವಗಳಿಗೆ ಗುಡಿಗಳೇ ಇರಲಿಲ್ಲ. ಬೇವಿನಮರ, ಆಲದಮರ ಹೀಗೆ ನೆರಳು ನೀಡುವಂತಹ ಮರ ಮತ್ತು ಕಲ್ಲುಬಂಡೆಗಳನ್ನು ದೇವತೆಯೆಂದು ನಂಬಿ ಪೂಜಿಸಲು ಪ್ರಾರಂಭಿಸಿದರು. ಇನ್ನು ಕೆಲವು ಕಡೆಗಳಲ್ಲಿ ಬಯಲಲ್ಲಿರುವ ಕಲ್ಲುಬಂಡೆಯೇ ದೈವವಾಗಿರುವುದನ್ನು ಕಾಣುತ್ತೇವೆ. ಇನ್ನೂ ಕೆಲವು ಕಡೆ ಬಯಲಿನಲ್ಲಿಯೇ ತ್ರಿಶೂಲವನ್ನಿಟ್ಟು ದೇವತೆ ಎಂದು ನಂಬಿ ಪೂಜಿಸುತ್ತಾ ನಂತರದ ದಿನಗಳಲ್ಲಿ ಈ ಹೆಣ್ಣು ದೈವಗಳಿಗೂ ಗುಡಿಗಳು ನಿರ್ಮಾಣಗೊಂಡಿರುವುದು ಸಹ ಕಂಡುಬರುತ್ತದೆ. ಆದರೆ ಈ ಗುಡಿಗಳು ಶಿಷ್ಟ ದೈವಗಳ ದೇವಸ್ಥಾನಗಳಂತೆ ವೈಭವದಿಂದ ಕೂಡಿರದೆ ಬಹಳ ಸರಳವಾಗಿರುತ್ತವೆ. ಗರ್ಭಗುಡಿ, ಪ್ರಾಕಾರ, ಪೌಳಿ ಈ ಮುಂತಾದ ಅನುಕೂಲಗಳು ಈ ದೈವಗಳಿಗಿರುವುದು ಕಡಿಮೆ ಎನ್ನಬಹುದು. ಅನೇಕ ಕಡೆಗಳಲ್ಲಿ ಹುತ್ತ ಮಣ್ಣಿನ ಗದ್ದುಗೆ ಮತ್ತು ನೆಲದಲ್ಲಿಯೇ ಎದ್ದ ದುಂಡುಗಲ್ಲುಗಳೇ ದೇವತೆಗಳಾಗಿವೆ. ಹೆಣ್ಣು ದೈವಗಳಿಗೆ ಸ್ತ್ರೀರೂಪದ ಆಕೃತಿ ಇರಬೇಕೆಂದೇನೂ ಇಲ್ಲ, ಒಂದು ಕಲ್ಲು ಗುಂಡಿಗೆ ಹಸಿರು ಸೀರೆ ಸುತ್ತಿದರೆ ಒಂದು ಹೆಣ್ಣು ದೈವ ಸಿದ್ಧವಾಗುತ್ತದೆ. ಅನೇಕ ಹೆಣ್ಣು ದೈವಗಳಿಗೆ ಮುಂಡವಿಲ್ಲದೆ ಬರೀ ರುಂಡವೇ ಪೂಜೆಗೊಳ್ಳುವುದು ವಿಶೇಷ. ಜಮದಗ್ನಿಯ ಅಪ್ಪಣೆಯಂತೆ ಎಲ್ಲಮ್ಮನ ರುಂಡವನ್ನು ಹಾರಿಸಿದ ಕಥೆ ಎಲ್ಲರಿಗೂ ತಿಳಿದದ್ದಾಗಿದೆ. ಆ ರುಂಡಗಳೇ ಗ್ರಾಮ ದೇವತೆಗಳಾಗಿ ಇಂದಿಗೂ ಪೂಜೆಗೊಳ್ಳುತ್ತಿರುವ ಪ್ರತೀತಿ ಇದೆ. ಹೀಗೆ ಜನಪದರು ಪೂಜಿಸಿಕೊಂಡು ಬಂದಿರುವ ದೈವವೆಂದರೆ ಹುಲಿಗಿ ಕ್ಷೇತ್ರದಲ್ಲಿರುವ ಹುಲಿಗೆಮ್ಮ.

ಹುಲಿಗಿ ಕ್ಷೇತ್ರವು ಕರ್ನಾಟಕದ ಕೊಪ್ಪಳ ಜಿಲ್ಲೆಯಲ್ಲಿದೆ. ಮುನಿರಾಬಾದ್ ಗ್ರಾಮವು ಹುಲಿಗೆಮ್ಮ ದೇವಿಯ ಧಾರ್ಮಿಕ ಕೇಂದ್ರವಾಗಿದೆ. ತುಂಗಾಭದ್ರಾ ನದಿಯ ದಂಡೆಯ ಮೇಲಿರುವ ಈ ಕ್ಷೇತ್ರದ ಹುಲಿಗೆಮ್ಮ ದೇವಸ್ಥಾನವು ಅತ್ಯಂತ ಸರಳವಾಗಿದ್ದು ಗರ್ಭಗುಡಿ, ಅಂತರಾಳ ಮತ್ತು ಸಭಾಮಂಟಪವನ್ನು ಹೊಂದಿದೆ. ಗರ್ಭಗುಡಿಯ ಹಿಂಭಾಗದಲ್ಲಿ ಬೃಹತ್ ಬಂಡೆಯೊಂದಿದೆ. ಸಭಾಮಂಟಪದಲ್ಲಿ ನಾಲ್ಕು ಕಂಬಗಳಿವೆ. ದೇವಸ್ಥಾನದ ಪಶ್ಚಿಮಕ್ಕೆ ಆಡಳಿತ ಕಛೇರಿಯನ್ನು ಸ್ಥಾಪಿಸಲಾಗಿದೆ. ಹುಲಿಗೆಮ್ಮ ದೇವಾಲಯವು ದಕ್ಷಿಣಾಭಿಮುಖವಾಗಿದ್ದು, ದೇವಾಲಯದ ಸುತ್ತಲೂ ಪೌಳಿಯಿದ್ದು ಪೌಳಿಯ ಒಳಗಡೆ ಗರುಡಗಂಬ, ಹರಕೆ ಕಂಬ, ಪರಶುರಾಮನ ದೇವಸ್ಥಾನ, ಮುದ್ದಮ್ಮನ ದೇವಸ್ಥಾನ, ಮಾತಂಗಿ ದೇವಸ್ಥಾನಗಳಿವೆ. ಗರ್ಭಗುಡಿಯ ಒಳಗಡೆ ನಾಗಜೋಗಿ ಮತ್ತು ಬಸವಜೋಗಿಯ ಕಲ್ಲಿನ ಮೂರ್ತಿಗಳಿವೆ. ಅಲ್ಲದೇ ಮಾತಂಗಿ ಗುಡಿ ಮುಂದೆ ಮೈಲಾರ ಲಿಂಗನ ಕಂಬ, ಹುಲಿಗೆಮ್ಮ ದೇವಸ್ಥಾನದ ಎದುರುಗಡೆ ಗರುಡಗಂಬ, ಪಕ್ಕದಲ್ಲಿ ಕೊರವಂಜಿ ಕಲ್ಲು, ಬನ್ನಿಮರ ಇವೆ. ಜನರು ಹುಲಿಗೆಮ್ಮನಿಗೆ ಕೈ ಮುಗಿದು ಹೊರಬಂದು ಎಲ್ಲಾ ದೇವರುಗಳಿಗೆ ಕೈ ಮುಗಿಯುವುದನ್ನು ಕಾಣುತ್ತೇವೆ. ಅಂದು ಚಿಕ್ಕ ಗ್ರಾಮವಾಗಿದ್ದ ಹುಲಿಗಿ ಕ್ಷೇತ್ರ ಇಂದು ದೊಡ್ಡದಾಗಿ ಬೆಳೆದಿದೆ. ಧಾರ್ಮಿಕ ಕೇಂದ್ರವಾದ ಹುಲಿಗಿ ಕ್ಷೇತ್ರದ ಹತ್ತಿರದಲ್ಲಿ ಮುನಿರಾಬಾದ್ ಇರುವುದರಿಂದ ಜನರು ಈ ದೇವರನ್ನು ಮುನಿರಾಬಾದ್ ಹುಲಿಗೆಮ್ಮ ಎಂದು ಕರೆಯುತ್ತಾರೆ. ಇಲ್ಲಿ ಕುರುಬರು, ಲಿಂಗಾಯತರು, ಬೆಸ್ತರು, ಬ್ರಾಹ್ಮಣರು, ಬೇಡರು, ಮುಸ್ಲಿಮರು

ಮತ್ತು ಮಾದಿಗ ಸಮುದಾಯ ಮುಂತಾದವರು ಕಂಡುಬರುತ್ತಾರೆ. ಈ ದೇವಿಯ ಜಾತ್ರೆಯ ಸಂದರ್ಭದಲ್ಲಿ ಈ ಎಲ್ಲಾ ಜಾತಿಯವರು ಪಾಲುದಾರಿಕೆಯನ್ನು ವಹಿಸುವುದು ಕಾಣಲಾಗುತ್ತದೆ. ಹುಲಿಗಿ ಕ್ಷೇತ್ರವು ಜಿಲ್ಲೆಯದಾಗಿದ್ದರೂ ಬಳ್ಳಾರಿಗೆ ಹತ್ತಿರವಿರುವುದರಿಂದ ಬಳ್ಳಾರಿ ಜನರು ಅಮಾವಾಸ್ಯೆ, ಹುಣ್ಣಿಮೆ, ಮಂಗಳವಾರ ಮತ್ತು ಶುಕ್ರವಾರದಂದು ಹೆಚ್ಚಾಗಿ ಬಂದು ತಮ್ಮ ಹರಕೆ ತೀರಿಸುತ್ತಾರೆ. ಅಲ್ಲದೇ ಆಂಧ್ರ ಪ್ರದೇಶ ಮತ್ತು ಮಹಾರಾಷ್ಟ್ರದಿಂದಲೂ ಜನರು ಈ ಧಾರ್ಮಿಕ ಕೇಂದ್ರಕ್ಕೆ ಹರಕೆ ತೀರಿಸಲು ಬರುವುದು ವಿಶೇಷ. ಹರಕೆಯಲ್ಲಿ ಹುಲಿಗೆಮ್ಮ ದೇವರ ಹೆಸರು ಹೇಳಿ ಮುತ್ತು ಕಟ್ಟುವ ಪದ್ಧತಿಯನ್ನು ಆಚರಿಸಿಕೊಂಡು ಬರುತ್ತಿದ್ದಾರೆ. ಹುಲಿಗೆಮ್ಮನನ್ನು ಬಳ್ಳಾರಿ ಜಿಲ್ಲೆಯ ಅನೇಕ ಕುಟುಂಬಗಳು ಮನೆ ಅಥವಾ ಕುಲದೇವರಾಗಿ ಹೊಂದಿರುವುದು ಹೆಚ್ಚಾಗಿ ಕಂಡುಬರುತ್ತದೆ. ಭರತಹುಣ್ಣಿಮೆ ಮತ್ತು ಕಾರಹುಣ್ಣಿಮೆ ಸಂದರ್ಭದಲ್ಲಿ ಮತ್ತು ಇತರ ಅಮವಾಸ್ಯೆ ಹುಣ್ಣಿಮೆಗಳಂದು ಹೆಣ್ಣುಮಕ್ಕಳಿಗೆ ದೇವಿಯ ಹೆಸರಿನಲ್ಲಿ ಕೆಂಪು ಮತ್ತು ಬಿಳಿ ಮುತ್ತುಗಳೊಂದಿಗೆ ಹುಲಿಗೆಮ್ಮನ ಮೂರ್ತಿ ಮತ್ತು ಇತರ ಪದಕಗಳನ್ನು ಸೇರಿಸಿ ಕಟ್ಟುವ ಮೂಲಕ ಆ ದೇವಿಯ ದಾಸಿಯರನ್ನಾಗಿಸುತ್ತಾರೆ. ಹೀಗೆ ಮುತ್ತು ಕಟ್ಟುವಲ್ಲಿ ಗರತಿ ಮುತ್ತನ್ನು ಮದುವೆಯಾಗಿ ಗಂಡನಿದ್ದರೂ ಕಟ್ಟಲಾಗುತ್ತದೆ. ಆದರೆ ಈ ರೀತಿ ಗರತಿ ಮುತ್ತು ಕಟ್ಟಿಸಿಕೊಂಡವರು ದೇವದಾಸಿ ಎನಿಸಿಕೊಳ್ಳುವುದಿಲ್ಲ. ಕನ್ಯೆ ಮುತ್ತು ಅವಿವಾಹಿತ ಹೆಣ್ಣು ಮಕ್ಕಳಿಗೆ ಕಟ್ಟುವುದರ ಮುಖಾಂತರ ದೇವದಾಸಿಯರನ್ನಾಗಿ ಮಾಡುತ್ತಾರೆ. ಇವಳು ತನ್ನ ಜೀವಮಾನದಲ್ಲಿ ವಿವಾಹವಾಗುವಂತಿಲ್ಲ. ಯಾರೊಂದಿಗಾದರೂ ದೈಹಿಕ ಸಂಪರ್ಕ ಹೊಂದುವ ಮೂಲಕ ಮಕ್ಕಳನ್ನು ಪಡೆಯತ್ತಾರೆ ಆದರೆ ಈ ರೀತಿಯಾಗಿ ಪಡೆದ ಮಕ್ಕಳಿಗೆ ತಂದೆಯ ಹೆಸರನ್ನಾಗಲಿ, ಆಸ್ತಿಯ ಹಕ್ಕನ್ನಾಗಲಿ ಹೊಂದುವಂತಿಲ್ಲ. ಈ ಪ್ರಕಾರವಾಗಿ ದೇವದಾಸಿಯಾದ ಹಲವರಲ್ಲಿ ಕೆಲವರು ಮಾತ್ರ ವೇಶ್ಯಾವೃತ್ತಿಗೆ ಒಳಗಾಗುತ್ತಾರೆ. ದೇವದಾಸಿಯಾದ ಹಲವರು ಜೀವನ ಪರ್ಯಂತ ಒಬ್ಬನೇ ವ್ಯಕ್ತಿಯ ಜೊತೆ ಬಾಳಿದ ಉದಾಹರಣೆಗಳು ವಿಫುಲವಾಗಿ ದೊರೆಯುತ್ತವೆ. ಇದಕ್ಕೆ ಕಾರಣ ಮಾನ ಮರ್ಯಾದೆ ಮತ್ತು ಆ ವ್ಯಕ್ತಿ ಜೊತೆಗಿನ ಅನ್ಯೋನ್ಯ ಸಂಬಂಧ ಕಾರಣವಾಗಿರುತ್ತದೆ.

ಹುಲಿಗಿ ಕ್ಷೇತ್ರದಲ್ಲಿ ಕಾರ ಹುಣ್ಣಿಮೆ ಮತ್ತು ಭರತ ಹುಣ್ಣಮೆ ದಿನಗಳಂದು ದೇವದಾಸಿ ಬಿಡುವ ಕಾರ್ಯವನ್ನು ಮಾಡುತ್ತಿದ್ದರು. ಆದರೆ ಪ್ರಸ್ತುತದಲ್ಲಿ ಕಾನೂನು ನಿಷೇಧವಿರುವ ಕಾರಣಕ್ಕೆ ಧಾರ್ಮಿಕ ಕೇಂದ್ರಗಳಲ್ಲಿ ದೇವದಾಸಿ ಬಿಡುವ ಕಾರ್ಯವನ್ನು ಮಾಡುವುದು ಕಷ್ಟಕರವಾಗಿದೆ. ಹಾಗಾಗಿ ಈಗ ಮನೆಗಳಲ್ಲಿ ಮತ್ತು ಪೂಜಾರಿ ಮನೆಯಲ್ಲಿ ಹಾಗೂ ತಮ್ಮ ಊರಿನ ಗುಡಿಯ ಮುಂದೆಯೇ ದೇವರಿಗೆ ಹೆಣ್ಣುಮಕ್ಕಳನ್ನು ಅರ್ಪಿಸುವ ಕಾರ್ಯವನ್ನು ಮಾಡುತ್ತಾರೆ.

ಹುಲಿಗೆಮ್ಮ ದೇವರ ಹೆಸರಿನಲ್ಲಿ ದೇವದಾಸಿಯಾದ ಮಹಿಳೆಯೂ ಕಡ್ಡಾಯವಾಗಿ ಪ್ರತಿ ಮಂಗಳವಾರ ಮತ್ತು ಶುಕ್ರವಾರದಂದು ಪಡಲಿಗೆ(ಹಡಲಿಗೆ) ಹಿಡಿದು ಕನಿಷ್ಟ ೫ ಅಥವಾ ೯ ಮನೆ ಜೋಗ ಹಾಕುವ ಮೂಲಕ ಆ ಮನೆಯವರು ನೀಡುವ ದವಸ ಧಾನ್ಯಗಳನ್ನು ತಮ್ಮ ಮನೆಗೆ ತರುವ ಪದ್ಧತಿ ಜಾರಿಯಲ್ಲಿದೆ. ಇದು ಕೆಲ ನಿರ್ಗತಿಕ ದೇವದಾಸಿಯರಿಗೆ ಜೀವನೋಪಾಯವೂ ಹೌದು.

ಇನ್ನೂ ಕೆಲವರು ಈ ಪದ್ಧತಿಯನ್ನು ಆಚರಿಸಲು ಹಿಂದೇಟು ಹಾಕುತ್ತಾರೆ. ಅಲ್ಲದೇ ಇವರನ್ನು ನಿತ್ಯ ಸುಮಂಗಲೆಯರೆಂದು ಪರಿಗಣಿಸಿ ಮನೆಗಳಲ್ಲಿ ನಡೆಯುವ ಎಲ್ಲಾ ಶುಭ ಕಾರ್ಯಗಳಿಗೆ ತಪ್ಪದೇ ಕರೆಯುತ್ತಾರೆ. ಹಾಗೂ ಇವರಿಂದ ಸೋಬಾನೆ ಪದಗಳನ್ನು ಹಾಡಿಸುತ್ತಾರೆ. ಪ್ರತಿ ವರ್ಷ ಹುಲಿಗೆಮ್ಮ ಜಾತ್ರೆಯಲ್ಲಿ ಈ ದೇವಿಯ ಜೋಗಮ್ಮ ಅಥವಾ ದೇವದಾಸಿಯರು ಬಂದು ಸಿಹಿ ಅಡುಗೆ ಮಾಡಿ ಜೋಗಪಣತಿಗೆ ನೀಡಿಸಿ ಪಡಲಿಗೆ ತುಂಬುವ ಕಾರ್ಯವನ್ನು ಮಾಡುತ್ತಾರೆ.

ಕರ್ನಾಟಕದ ನಾನಾ ಭಾಗಗಳಿಂದ ಹಾಗೂ ಬೇರೆ ಬೇರೆ ರಾಜ್ಯಗಳಿಂದ ಭಕ್ತರು ಬರುತ್ತಾರೆ. ಹೆಚ್ಚಾಗಿ ಬಳ್ಳಾರಿ, ರಾಯಚೂರು, ಕೊಪ್ಪಳ ಜಿಲ್ಲೆಗಳು ಮತ್ತು ಆಂಧ್ರದ ರಾಯಲಸೀಮೆಯ ಜಿಲ್ಲೆಗಳಿಂದ ಭಕ್ತರು ಬರುವುದು ವಿಶೇಷ. ವಿಶೇಷವೆಂದರೆ ದಲಿತ ಮತ್ತು ಹಿಂದುಳಿದ ಸಮುದಾಯದವರೇ ಈ ದೇವಿಯ ಭಕ್ತರಾಗಿದ್ದಾರೆ. ಅವರು ತಮ್ಮ ಮನೆ ದೈವವಾಗಿ ಹುಲಿಗೆಮ್ಮನನ್ನು ಸ್ಥಾಪಿಸಿಕೊಂಡಿದ್ದಾರೆ. ಈ ದೈವದ ಭಕ್ತರಾದ ಜನರು ತಮ್ಮ ಸಂತಾನಕ್ಕೆ ಹುಲಿಗಪ್ಪ ಮತ್ತು ಹುಲಿಗೆಮ್ಮ ಎಂಬ ಹೆಸರುಗಳನ್ನು ನಾಮಕರಣ ಮಾಡಿಕೊಂಡಿರುವುದು ಹೇರಳವಾಗಿ ಕಂಡುಬರುತ್ತದೆ.

ಹಿಂದುಳಿದ ವರ್ಗಗಳಲ್ಲಿರುವ ಗಂಗಾಮತಸ್ಥರಲ್ಲಿ ಹೆಣ್ಣುಮಕ್ಕಳನ್ನು ದೇವರಿಗೆ ಬಿಡುವ ಕುರಿತು ಒಂದು ಪವಾಡದ ಕಥೆಯನ್ನು ಹೇಳುತ್ತಾರೆ. "ಅಂಬಿಗನು ದಿನಾಲು ಆಕಡೆಯಿಂದ ಈ ಕಡೆಗೆ ತನ್ನ ದೋಣಿಯ ಮೂಲಕ ಜನರನ್ನು ಹೊಳೆ ದಾಟಿಸುತ್ತಿದ್ದನಂತೆ, ಅಂತಹ ಸಮಯದಲ್ಲಿ ಹುಲಿಗೆಮ್ಮಳು ಬಂದು ಒಳ್ಳೆಯ ರೂಪದಲ್ಲಿ ಹೋಗುತ್ತಿದ್ದುದನ್ನು ಕಂಡು ಅಂಬಿಗನು ಆಕೆಯ ಬಗ್ಗೆ ಹೊಲಸು ಭಾವಿಸಿ ಕಂಡಾಗ ಇದನ್ನು ಮನಗಂಡ ಹುಲಿಗೆಮ್ಮ ದೇವಿ ನದಿಯಲ್ಲಿ ತಾನು ಮಾಯವಾಗಿ ಅಂಬಿಗನನ್ನು ಅಂಬಿಗನ ದೋಣಿಯನ್ನು ಮುಳುಗುವಂತೆ ಮಾಡಿದಳು. ಇದನ್ನರಿತ ಅಂಬಿಗನ ಹೆಂಡತಿಯು ತಾಯಿ ನಮ್ಮವ್ವ ನನ್ನ ಗಂಡನನ್ನು ಉಳಿಸವ್ವ ಎಂದು ಬೇಡಿದಾಗ ಹುಲಿಗೆಮ್ಮ ಇದನ್ನೆಲ್ಲ ಹೇಳಿದಳು. ಆಗ ಅಂಬಿಗನ ಹೆಂಡತಿ ಅಳುತ್ತಿರುವುದನ್ನು ಕಂಡು, ಸರಿ ನಾನು ನಿನ್ನ ಗಂಡನನ್ನು ಉಳಿಸುತ್ತೇನೆ, ಮುಂದೆ ನಿನಗೆ ಮಕ್ಕಳಾದಾಗ ನಿನಗೆ ಹೆಣ್ಣಾಗಲೀ ಗಂಡಾಗಲಿ ಅವಿಷ್ಟು ಮಕ್ಕಳನ್ನು ನನಗೆ ಬಿಡಬೇಕು ಅವರು ನನ್ನ ಸೇವೆ ಮಾಡಬೇಕು ಎಂದೇಳಿ ಮಾಯವಾದಳಂತೆ" *(ಕೃಷ್ಣವೇಣಿ ಆರ್:೨೦೦೭:೧೦೯).* ಹೀಗೆ ಹಿಂದುಳಿದ ವರ್ಗದ ಗಂಗಾಮತಸ್ಥರು ಈ ದೇವಿಯ ಹೆಸರಿನಲ್ಲಿ ತಮ್ಮ ಹೆಣ್ಣುಮಕ್ಕಳಿಗೆ ಮುತ್ತು ಕಟ್ಟಿಸುತ್ತಾರೆ. ಹುಲಿಗೆಮ್ಮ ದೇವತೆಗೆ ಬಳ್ಳಾರಿ ಜಿಲ್ಲೆಯ ಪರಿಶಿಷ್ಟ ಜಾತಿಯಲ್ಲಿ ಕಂಡು ಬರುವ ಮಾದಿಗರು, ಚಲುವಾದಿಗಳು, ವಡ್ಡರು, ಡೊಂಬರು ಮತ್ತು ಚನ್ನದಾಸ ಸಮುದಾಯಗಳ ದೇವದಾಸಿ ಮಹಿಳೆಯರನ್ನು ಹುಲಿಗೆಮ್ಮನಿಗೆ ಬಿಟ್ಟಿರುವುದು ಕಂಡುಬರುತ್ತದೆ. ಮತ್ತೊಂದು ವಿಶೇಷವಾದ ಅಂಶವೆಂದರೆ ಮೊದಲಿಗೆ ಗಂಡು ದೇವರ ಮುದ್ರೆ ಹಾಕಿಸಿಕೊಂಡವರು ನಂತರ ಅವರ ಯೌವನ ಮುಗಿದ ಮೇಲೆ ಅಂದರೆ ೪೦-೪೫ನೇ ವಯಸ್ಸಿನಲ್ಲಿ ಮತ್ತೆ ಹುಲಿಗೆಮ್ಮ ದೇವರಿಗೆ ಮುತ್ತು ಕಟ್ಟಿಸಿಕೊಳ್ಳುತ್ತಾರೆ. ಇದಕ್ಕೆ "ಹರೆಯ ಇರುವವರೆಗೆ ಬಸವಿ ಮುಪ್ಪಿನಲ್ಲಿ ಜೋಗತಿ" ಎಂಬ ಗಾದೆಮಾತು ನೆನಪಾಗುತ್ತದೆ. ಅಂದರೆ ಇಲ್ಲ ಗಮನಿಸಬೇಕಾದ ಅಂಶವೆಂದರೆ

ಜೋಗತಿಯಾದವಳು ಲೈಂಗಿಕತೆಯಲ್ಲಿ ತೊಡಗಬಾರದು ಎಂಬುದು ಜೋಗತಿ ಪರಂಪರೆಯಲ್ಲಿ ಕಂಡುಬರುತ್ತದೆ. ಬಸವಿಯಾದಾಗ ಅವಳ ಯೌವನದ ಸಮಯದಲ್ಲಿ ಯಾರಾದರೂ ಅವಳೊಂದಿಗೆ ಸಂಬಂಧ ಹೊಂದಿರುತ್ತಾರೆ. ಈ ಮೂಲಕವಾಗಿ ಸಂಬಂಧ ಹೊಂದಿದವನು ಆರ್ಥಿಕವಾಗಿ ಅವಳ ಜೀವನಕ್ಕೆ ನೆರವಾಗುತ್ತಾನೆ ಎಂಬುದು ಮತ್ತು ವಯಸ್ಸಾದ ನಂತರ ಅವಳ ಜೀವನ ನಿರ್ವಹಣೆಗಾಗಿ ಜೋಗುತಿಯಾಗಿ ಜೋಗ ಬೇಡುವುದರ ಮೂಲಕ ಬದುಕುತ್ತಾಳೆ. ಹೀಗೆ ಜೋಗತಿಯಾದವಳಿಗೆ ಪ್ರತಿಯೊಂದು ಧಾರ್ಮಿಕ ಆಚರಣೆಯಲ್ಲಿ ಪ್ರಮುಖ ಪಾತ್ರ ನೀಡುತ್ತಾರೆ.

**ಸವದತ್ತಿ ಎಲ್ಲಮ್ಮ**

ಕರ್ನಾಟಕದಲ್ಲಿರುವ ಸವದತ್ತಿಯು ದೇವದಾಸಿಯರ ಒಡಲಾಗಿದೆ ಎಂದು ಹೇಳುತ್ತಾರೆ. ಇಲ್ಲಿಗೆ ಎಲ್ಲಾ ಸಮುದಾಯದ ಜನರು ಅದರಲ್ಲೂ ವಿಶೇಷವಾಗಿ ಕೆಳಜಾತಿಯ ಜನರು ಹೆಚ್ಚಾಗಿ ನಡೆದುಕೊಳ್ಳುತ್ತಾರೆ. ಬೀದರಿನ ಬಸವಕಲ್ಯಾಣ ತಾಲೂಕಿನ ಬಗದುರಿ ಯಲ್ಲಮ್ಮ, ಗುಲ್ಬರ್ಗಾದ ಆಳಂದ ತಾಲೂಕಿನ ಉಚ್ಚಂಗಿ, ಚುಂಚುರುಮಾಪುರ ತಾಯಿ, ಹಡಲಗಿ ಯಲ್ಲಮ್ಮ, ರಾಯಚೂರು ಜಿಲ್ಲೆಯ ಆರೋಲಿ ಹುಲಿಗೆಮ್ಮ, ಕೊಪ್ಪಳ ತಾಲೂಕಿನ ಹುಲಿಗೆಮ್ಮ, ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗ, ಶಿವಮೊಗ್ಗ ಜಿಲ್ಲೆ ಸೊರಬ ತಾಲೂಕಿನ ಚಂದ್ರಗುತ್ತಿ ಮುಂತಾದುವುಗಳ ಮೂಲ ಒಂದೇ ಆಗಿದೆ. ಇವುಗಳಲ್ಲಿ ಪ್ರಾದೇಶಿಕ ಭಿನ್ನತೆಯಿಂದ ಜನರ ಅನುಕೂಲತೆಗಾಗಿ ಕೆಲವೊಂದು ಆಚರಣೆಗಳು ಬೇರೆ ಬೇರೆ ಇದ್ದಾವೆಯೇ ಹೊರತು  ಮೂಲ ಝರಿ ಮಾತ್ರ ಸವದತ್ತಿ ಯಲ್ಲಮ್ಮಳಾಗಿದ್ದಾಳೆ.

"ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯದಲ್ಲಿರುವ ಸುಮಾರು ಪ್ರತಿಶತ ೯೦ರಷ್ಟು ದೇವದಾಸಿಯರು ಯಲ್ಲಮ್ಮ ದೇವಿಗೆ ಮೀಸಲು ಬಿಟ್ಟವರೇ ಆಗಿದ್ದಾರೆ" *(ಸಿದ್ಧರಾಮ ಕಾರಣಿಕ:೨೦೧೩:೪೮).* ಹಾಗಾಗಿ ಸವದತ್ತಿ ಯಲ್ಲಮ್ಮ ದೇವದಾಸಿಯರನ್ನು ಸೃಷ್ಟಿಸುವ ಕೇಂದ್ರವಾಗಿದೆ. ಯಲ್ಲಮ್ಮ ದೇವಿಯು ಈ ಭಾಗದಲ್ಲಿ ಬಹಳ ಪ್ರಸಿದ್ಧಿಯನ್ನು ಹೊಂದಿದ್ದಾಳೆ. ಈ ದೇವಿಯ ಬಗ್ಗೆ ಹಲವಾರು ಕಥೆಗಳನ್ನು ಹೇಳಲಾಗುತ್ತದೆ. ಆಕೆಯ ಮಹಾತ್ಮೆಯನ್ನು ಬಣ್ಣಿಸುವ ರೇಣುಕಾ ಮಹಾತ್ಮೆ ಎಂಬ ಗ್ರಂಥವೂ ಇದೆ. ಜೊತೆಗೆ ಕೆಲ ಧಾರ್ಮಿಕ ಕೃತಿಗಳು ಈ ಬಗ್ಗೆ ವಿವರಣೆ ನೀಡುತ್ತದೆ.

ರೇಣುಕಾ ಎಂದರೆ ಎಲ್ಲಮ್ಮ. ಇವಳು ರೇಣುಕ ರಾಜನ ಮಗಳಾಗಿದ್ದು ಈಕೆಗೆ ಜಮದಗ್ನಿ ಮುನಿಯೊಂದಿಗೆ ವಿವಾಹವಾಗಿರುತ್ತದೆ. ಆಕೆಗೆ ಮಕ್ಕಳಾಗಿ ದೊಡ್ಡವರೂ ಆಗುತ್ತಾರೆ. ಒಂದು ದಿನ ಆಕೆ ನೀರು ತರಲು ನದಿಗೆ ಹೋದಾಗ ಅಲ್ಲಿ ಸುಂದರವಾದ ಹೆಣ್ಣಿನೊಂದಿಗೆ ಜಲಕ್ರೀಡೆಯಲ್ಲಿ ನಿರತನಾಗಿದ್ದ ಚಿತ್ರರಥ ಎಂಬ ಗಂಧರ್ವನನ್ನು ಕಂಡು ಆಕೆ ವಿಚಲಿತಳಾಗುತ್ತಾಳೆ. ರೇಣುಕೆಯ ಈ ಮಾನಸಿಕ ಚಂಚಲತೆಯನ್ನು ದಿವ್ಯದೃಷ್ಟಿಯಿಂದ ನೋಡುವ ಜಮದಗ್ನಿಯು ಕೋಪಗೊಂಡು ತನ್ನ ಮಕ್ಕಳನ್ನು ಕರೆದು ರೇಣುಕೆಯ ತಲೆ ಕತ್ತರಿಸುವಂತೆ ಹೇಳುತ್ತಾನೆ. ಆದರೆ ತಾಯಿಯನ್ನು ಕೊಲ್ಲಲು ಅವರು ನಿರಾಕರಿಸುತ್ತಾರೆ. ಇದರಿಂದಾಗಿ ಅವರನ್ನು ಬೂದಿ ಮಾಡುತ್ತಾನೆ. ಕೊನೆಗೆ ನಾಲ್ಕನೆಯ

ಮಗ ಪರಶುರಾಮ ರೇಣುಕೆಯ ತಲೆಯನ್ನು ಕತ್ತರಿಸುತ್ತಾನೆ. ಋಷಿಯಾದ ಜಮದಗ್ನಿ ಪರಶುರಾಮ ಮತ್ತೆ ನನ್ನ ತಾಯಿ ಮತ್ತು ಸಹೋದರರನ್ನು ಕೇಳಿದಾಗ ಬದುಕಿಸಿಕೊಡುತ್ತಾನೆ.

ರೇಣುಕಾ ದೇವಿಯ ಇನ್ನೊಂದು ಕಥೆಯೂ ಪ್ರಚಲಿತವಾಗಿದೆ. ಪರಶುರಾಮನು ತಂದೆ ಜಮದಗ್ನಿಯ ಮಾತಿನ ಮೇರೆಗೆ ರೇಣುಕೆಯ ಶಿರಚ್ಛೇದನ ಮಾಡುತ್ತಾನೆ. ಆಗ ಆಕೆಯ ರುಂಡ ಎಲ್ಲೋ ಉರುಳಿಹೋಗುತ್ತದೆ. ತಂದೆಯಿಂದ ಪರಶುರಾಮನು ವರವನ್ನು ಪಡೆಯುತ್ತಾನೆ. ಆ ವರದಿಂದ ತಾಯಿಯನ್ನು ಬದುಕಿಸಿಕೊಳ್ಳಬೇಕೆಂದು ಆ ರುಂಡವನ್ನು ಹುಡುಕಾಡಿದ, ಆದರೆ ಆ ರುಂಡ ಪತ್ತೆಯಾಗಲೇ ಇಲ್ಲ. ಹೀಗಾಗಿ ಕೊನೆಗೆ ಆ ತನ್ನ ತಾಯಿಯಂತೆಯೇ ಇದ್ದ ಮಹಿಳೆಯೊಬ್ಬಳನ್ನು ಕೊಂದು ಆಕೆಯ ರುಂಡವನ್ನು ಕತ್ತರಿಸಿ ತಂದು ರೇಣುಕೆಗೆ ಜೋಡಿಸುತ್ತಾನೆ. ಆಕೆ ಜೀವ ಪಡೆಯುತ್ತಾಳೆ. ಕೆಲವು ದಿನಗಳು ಕಳೆದ ಮೇಲೆ ಉರುಳಿ ಹೋಗಿದ್ದ ರುಂಡ ದೊರೆಯುತ್ತದೆ. ಅದನ್ನು ಮತ್ತೆ ರೇಣುಕೆಯ ದೇಹಕ್ಕೆ ಜೋಡಿಸಲು ಆಗುವುದಿಲ್ಲ. ಹಾಗಾಗಿ ಪರಶುರಾಮನು ಹಿಂದೆ ತಾನು ಕೊಂದ ಮಹಿಳೆಯ ದೇಹಕ್ಕೆ ಜೋಡಿಸುತ್ತಾನೆ. ಆಕೆಯೂ ಜೀವಂತವಾಗುತ್ತಾಳೆ. ಆಕೆಯೇ ಮಾತಂಗಿಯಾಗಿದ್ದಳು. ಯಲ್ಲಮ್ಮನ ರುಂಡವನ್ನು ಮಾತಂಗಿಯ ದೇಹಕ್ಕೆ ಇಡುವುದರಿಂದ ಆಕೆಯೂ ದೇವಿಯಾದಳು ಎಂದು ದೇವದಾಸಿ ಮಹಿಳೆಯರು ಕಥೆಯನ್ನು ಹೇಳುತ್ತಾರೆ.

ಜಮದಗ್ನಿಯ ಬಳಿಯಿದ್ದ ಕಾಮಧೇನುವನ್ನು ಕಾರ್ತ್ಯವೀರ್ಯರಾಜ ಅಪಹರಿಸಿಕೊಂಡು ಹೋದಾಗ ಪರಶುರಾಮ ಆತನನ್ನು ಕೊಂದು, ಕಾಮಧೇನುವನ್ನು ಮರಳಿ ತರುತ್ತಾನೆ. ಪರಶುರಾಮ ಆತ್ರವಧಿ ಮಾಡಿದನೆಂದು ಹನ್ನೆರಡು ವರ್ಷ ತೀರ್ಥಯಾತ್ರೆ ಮಾಡುವಂತೆ ಜಮದಗ್ನಿ ಹೇಳುತ್ತಾನೆ. ಪರಶುರಾಮನು ತೀರ್ಥಯಾತ್ರೆ ಹೋದಾಗ ಕಾರ್ತವೀರ್ಯನ ಮಕ್ಕಳು ಜಮದಗ್ನಿಯನ್ನು ಕೊಲ್ಲುತ್ತಾರೆ. ಈ ಸುದ್ಧಿ ತಿಳಿದ ಪರಶುರಾಮ ತಂದೆ ಅಂತ್ಯ ಸಂಸ್ಕಾರ ಮಾಡಿದ ನಂತರ ಇಪ್ಪತ್ತೊಂದು ಬಾರಿ ಭೂಮಂಡಲವನ್ನು ಸುತ್ತುಹಾಕಿ ಕ್ಷತ್ರಿಯರನ್ನು ನಾಶಮಾಡುವುದರಲ್ಲಿ ತೊಡಗುತ್ತಾನೆ. ಇದೇ ಕಥೆಯನ್ನು ದೇವದಾಸಿ ಅಥವಾ ಯಲ್ಲಮ್ಮನ ಸೇವೆಯ ಜೋಗತಿಯರು ಹೀಗೆ ಹೇಳುತ್ತಾರೆ. ಕಾರ್ತವೀರ್ಯನನ್ನು ಕೊಂದ ಪರಶುರಾಮ ಆತನ ಹೊಟ್ಟೆಯಲ್ಲಿದ್ದ ಅಮೃತವನ್ನು ತಂದು ಜಮದಗ್ನಿಯ ಮೇಲೆ ಚುಮುಕಿಸಿದಾಗ ಜಮದಗ್ನಿ ಜೀವಂತವಾಗುತ್ತಾನೆ. ಗಂಡ ಸತ್ತಾಗ ಬಳೆ ಒಡೆದುಕೊಂಡಿದ್ದ ರೇಣುಕೆ, ಆತ ಮತ್ತೆ ಜೀವ ಪಡೆದಾಗ ಮತ್ತೆ ಬಳೆ ತೊಡುತ್ತಾಳೆ. ಇದರ ಆಚರಣೆ ರೂಪಗಳೇ ರಂಡಿ ಹುಣ್ಣಿಮೆ ಮತ್ತು ಮುತ್ತೈದೆ ಹುಣ್ಣಿಮೆಗಳು ಬೆಳೆದುಬಂದಿವೆ. ಪರಶುರಾಮ ಕಾರ್ತವೀರ್ಯನ ತಲೆ ಬುರುಡೆಯನ್ನು ಇಬ್ಭಾಗಿಸಿ ತಾಳ(ಚಳ್ಳಿಮೆ)ವನ್ನು, ಶರೀರದ ನರಗಳಿಂದ ಚೌಡಿಕೆಯನ್ನು ಮಾಡುತ್ತಾನೆ. ವಿಜಯೋತ್ಸವದ ಆನಂದದಲ್ಲಿ ಆ ತಾಳ ಮತ್ತು ಚೌಡಿಕೆಯನ್ನು ತಾಯಿ ಮತ್ತು ಮಕ್ಕಳು ಜೋರಾಗಿ ನುಡಿಸುತ್ತಾರೆ. ಅದರ ಪ್ರತೀಕವಾಗಿ ಇಂದು ಜೋಗುತಿ – ಜೊಗಯ್ಯಗಳು ಈ ಎರಡು ವಾದ್ಯಗಳನ್ನು ನುಡಿಸುತ್ತಾರೆ. ಹಾಗಾಗಿ ಹೆಚ್ಚಿನ ಜನರು ಯಲ್ಲಮ್ಮನ ಪರಂಪರೆಯ ಭಕ್ತರಲ್ಲಿ ಈ ಚೌಡಿಕೆಯನ್ನು ನುಡಿಸುವುದು ಕಂಡುಬರುತ್ತದೆ. ಯಲ್ಲಮ್ಮ ಭಕ್ತರಲ್ಲಿ ಜೋಗಪಣತಿ ನೀಡಿಸುವ ಮತ್ತು ಜಾತ್ರೆಯ ಉತ್ಸವದಲ್ಲಿ ದೇವಿಯನ್ನು ಆರಾಧಿಸುತ್ತಾರೆ. ಇಲ್ಲಿ ಪ್ರಾಣಿ ಪಕ್ಷಿಗಳ ಬಲಿ ಆಚರಣೆಗಳು ಕಂಡುಬರುವುದಿಲ್ಲ.

ಮತ್ತೊಂದು ವಿಶೇಷವೆಂದರೆ ಈ ಯಲ್ಲಮ್ಮ ದೇವರಿಗೆ ಜೋಗಪಣತಿ ಮಾಡಿಸಲು ಹೋಳಿಗೆ ಕಡುಬು ಮಾಡಿದರೆ ಅದಕ್ಕೆ ಮುರಗಿ ತಿರುಗಬಾರದೆಂದು ಹೇಳುತ್ತಾರೆ. ಆದರೆ ಹುಲಿಗೆಮ್ಮ ದೇವರಿಗೆ ಆ ತರಹದ ಯಾವುದೇ ನಿಯಮಗಳು ಇಲ್ಲದಿರುವುದು ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯ ಎಲ್ಲಾ ಭಾಗದ ಜನರು ಇಲ್ಲಿಯ ಯಲ್ಲಮ್ಮ ದೇವಿಯ ಹೆಸರಿನಲ್ಲಿ ದೇವದಾಸಿಯರನ್ನು ಬಿಟ್ಟಿರುವುದನ್ನು ಕಾಣಲಾಗುವುದು.

**ಉಚ್ಚಂಗಿದುರ್ಗದ ಉಚ್ಚಂಗೆಮ್ಮ**

ಉಚ್ಚಂಗಿದುರ್ಗವು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನಲ್ಲಿದ್ದು, ಹರಪನಹಳ್ಳಿಯ ದಕ್ಷಿಣಕ್ಕೆ ೨೮ ಕಿಲೋಮೀಟರ್ ದೂರದಲ್ಲಿದೆ.. ದಾವಣಗೆರೆಯಿಂದಲು ಇದು ೨೮ ಕಿಲೋಮೀಟರ್ ದೂರದಲ್ಲಿದೆ. ಉಚ್ಚಂಗಿದುರ್ಗ ಎಂದು ಹೆಸರು ಬರಲು ಜನಪದರು ನಂಬಿಕೆಯಂತೆ ಒಂದು ಕಥೆಯನ್ನು ಹೇಳುತ್ತಾರೆ. "ಹಿಂದಿನ ಉಚ್ಚಂಗಿ ಬೆಟ್ಟದ ಮೇಲೆ ಸಿದ್ಧರು ವಾಸಿಸುತ್ತಿದ್ದರು. ಅವರು ಸುತ್ತಮುತ್ತಲಿನ ಗ್ರಾಮಗಳಿಂದ ಭಿಕ್ಷೆ ಬೇಡಿಕೊಂಡು ಬರುತ್ತಿದ್ದರು. ಮಾಯ, ಮಾಟ, ಮಂತ್ರ ಮಾಡಿ ಜನರನ್ನು ಭೀತಿಗ್ರಸ್ಥರನ್ನಾಗಿ ಮಾಡಿದ್ದರು. ಇದರಿಂದ ಉಚ್ಚಂಗಿ ಮತ್ತು ಸುತ್ತಮುತ್ತಲಿನ ಜನತೆ ತುಂಬಾ ಭಯಭೀತರಾಗಿದ್ದರು. ಈ ಸಂದರ್ಭದಲ್ಲಿ ದೇವತಾ ಸ್ತ್ರೀಯೊಬ್ಬಳು ಈ ಬೆಟ್ಟದ ಮೇಲೆ ವಾಸಿಸಲು ಇಚ್ಚಿಸಿದಳು. ಆದರೆ ಇದಕ್ಕೆ ಸಿದ್ಧರ ವಿರೋಧವಿತ್ತು. ಹೇಗೋ ಅವರನ್ನು ಒಪ್ಪಿಸಿ ಅವರ ಜೊತೆಗೆ ಇದ್ದಳು. ಅವರಿಗೆ ಅಡುಗೆ ಮಾಡಿ ನೀಡುತ್ತಿದ್ದಳು. ಒಂದುಸಲ ಅಡುಗೆಯಲ್ಲಿ ಭಂಗಿಯ ಪುಡಿಯನ್ನು ಬೆರೆಸಿ ಕುಡಿಸಿದಳು. ಭಂಗಿಯನ್ನು ಕುಡಿದ ಸಿದ್ಧರು ಇವಳನ್ನು ಮೋಹಿಸಲು ಹೋದರು, ಆಗ ಸಿಟ್ಟಿಗೆದ್ದ ಈ ಸ್ತ್ರೀ ಬೆಟ್ಟದ ಮೇಲೆ ಉಚ್ಚೆಯನ್ನು ಮಾಡಿದಳು. ಈ ಉಚ್ಚೆಯ ರಭಸದಲ್ಲಿ ಸಿದ್ಧರು ತೇಲಿ ಕೆಲವರು ಹತರಾದರು, ಮತ್ತೆ ಕೆಲವರು ಕೆಳಗೆ ಬಿದ್ದು ಓಡಿಹೋದರೆಂದು ಹೀಗೆ ಉಚ್ಚೆಯಿಂದಲೇ ಗುರುತಿಸಿ ಉಚ್ಚಮ್ಮ, ಉಚ್ಚಂಗಿ ಎಂಬ ಹೆಸರು ಬಂತೆಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ" *(ಕೊಟ್ರೇಶ್ ಎಂ:೧೯೯೬:೧೧).* ಶಿವಮೊಗ್ಗ ಜಿಲ್ಲೆಯ ಹಿರೇಮಾವೂರಿನಿಂದ ಬಂದ ಈ ದೇವತೆ ಮ್ಯಾಗಳಗೇರಿಯಲ್ಲಿ ವಾಸ್ತವ್ಯ ಮಾಡಿದಳಂತೆ. ನಂತರ ಅಲ್ಲಿಂದ ಪೂರ್ವಕ್ಕೆ ಪ್ರಯಾಣ ಬೆಳೆಸಿದಳು. ಬೇಸಿಗೆ ಕಾಲವಾದ್ದರಿಂದ ದಣಿವಾರಿಸಿಕೊಳ್ಳಲು ಇಂದಿನ ಉಚ್ಚಂಗಿದುರ್ಗದ ಪಶ್ಚಿಮಕ್ಕಿರುವ ತೋಪಿನಲ್ಲಿ ಕುಳಿತುಕೊಳ್ಳುತ್ತಾಳೆ. ಅವಳಿಗೆ ಬಾಯಾರಿಕೆಯಾದ್ದರಿದ ನೀರಿಗಾಗಿ ಹುಡುಕಾಡುತ್ತಾಳೆ. ಅಲ್ಲೆ ಇರುವ ಕುರುಬರು ತಮ್ಮ ಬಳಿ ನೀರಿಲ್ಲದ್ದರಿಂದ ಕುರಿಯ ಹಾಲನ್ನೇ ಕೊಟ್ಟರಂತೆ. ಅದನ್ನು ಕುಡಿದು ಬಾಯಾರಿಕೆ ಕಳೆದುಕೊಂಡು ಇಲ್ಲಿಗೆ ಬರುವ ಜನರಿಗೆಲ್ಲ ಹಾಲಿನಂತ ನೀರು ಸಿಗಲೆಂದು ಹರಸಿದಳಂತೆ. ಅಲ್ಲಿಂದ ಅವಳು ಎತ್ತರವಾದ ಬೆಟ್ಟದ ಮೇಲೆ ನೆಲೆಸಿದಳು. ಈ ಹಿಂದೆ ಈ ಸ್ತ್ರೀ ದಣಿವಾರಿಸಿಕೊಳ್ಳಲು ಕುಳಿತುಕೊಂಡ ಜಾಗದಲ್ಲಿ ಕುರುಬರು ಬಾವಿ ತೆಗೆಯಲಾಗಿ ಅಲ್ಲಿ ಹಾಲಿನಂತಹ ನೀರು ಬರುವುದನ್ನು ಕಂಡು ಸ್ತ್ರೀ ಹರಸಿದ ಹರಕೆ ನೆಪವಾಗಿ ಇವಳನ್ನು ಹುಡುಕಿಕೊಂಡು ಬರುತ್ತಾರೆ. ಹೀಗೆ ಜನರಿಗೆ ದೇವಿಯಾಗಿ ಮಾರ್ಪಾಡಾದಳೆಂದು ಆಕೆ ನೆಲಸಿದ ಪರ್ವತ ಉಚ್ಚ ಎತ್ತರವಾದರಿಂದ ಉಚ್ಚಂಗಿ ದೇವಿಯಾದಳು. ಹೀಗೆ ಆಕೆ ನೆಲೆಸಿದ ಸ್ಥಳಕ್ಕೆ ಉಚ್ಚಂಗಿ

ದುರ್ಗ ಎಂದು, ಆಕೆ ಕುಳಿತುಕೊಂಡಿದ್ದ ತೋಪಿಗೆ ಹಾಲಮ್ಮನ ತೋಪು ಎಂದು ಆಕೆ ನೆಲೆಸಿದ್ದ ಮ್ಯಾಗಳಕೇರಿಯಲ್ಲಿ ಉಚ್ಚಂಗೆಮ್ಮನ ಗುಡಿ ಇರುವುದರಿಂದ ಇದನ್ನು ಜನಪದರು ಸಮರ್ಥಿಸಿ ಹೇಳುತ್ತಾರೆ.

ಉಚ್ಚಂಗೆಮ್ಮ ದೇವರಿಗೆ ಯುಗಾದಿ, ಭರತ ಹುಣ್ಣಿಮೆ, ದಸರಾ, ಕಾರ್ತಿಕದ ಹುಣಿಮ್ಮೆ, ನೂಲ ಹುಣ್ಣಿಮೆಗಳಲ್ಲಿ ಪಡಲಗಿಯನ್ನು ಸಾಮಾನ್ಯವಾಗಿ ತುಂಬಿಸಬೇಕು. ಗಂಡು ಮದುವೆಯ ಅವಧಿಯಲ್ಲಿ ಹೆಣ್ಣಿಗೆ ತಾಳಿಕಟ್ಟಿದರೆ ಮುಗಿಯಿತು ಅವಳು ಗಂಡನ ಅಧೀನದಲ್ಲಿರಬೇಕು. ಹಾಗೆಯೇ ಉಚ್ಚಂಗೆಮ್ಮನ ಹೆಸರಿನಲ್ಲಿ ಮುತ್ತು ಕಟ್ಟಿಸಿಕೊಂಡವರು ದೇವಿಯ ಅಧೀನದಲ್ಲಿ ಇರುತ್ತಾರೆ. ಇಲ್ಲಿ ಕನ್ಯೆ ಮುತ್ತು, ಗರತಿ ಮುತ್ತು ಮತ್ತು ಗಂಡಸು ಮುತ್ತುಗಳನ್ನು ಕಟ್ಟಿಸಿಕೊಳ್ಳುತ್ತಾರೆ. ಕನ್ಯೆ ಮುತ್ತು ಕಟ್ಟಿಸಿಕೊಳ್ಳುವುದು ಎಂದರೆ ಹುಡುಗಿಯಾಗಿರುವಾಗ ದೇವಿಯ ಹೆಸರಿನಲ್ಲಿ ಕೆಂಪು ಬಿಳಿ ಮುತ್ತುಗಳನ್ನು ಕಟ್ಟುವುದು. ಹೀಗೆ ಮುತ್ತು ಕಟ್ಟಿಸಿಕೊಂಡ ಕನ್ಯೆ ಮುಂದೆ ವಿವಾಹವಾಗುವಂತಿಲ್ಲ. ಇದನ್ನು ಕನ್ಯೆ ಮುತ್ತು ಕಟ್ಟುವುದು ಎನ್ನುತ್ತಾರೆ. ಗರತಿ ಮುತ್ತು ಕಟ್ಟುವುದು ಎಂದರೆ ಮದುವೆಯಾದ ಸ್ತ್ರೀಯರು ಗಂಡನನ್ನು ಹೊಂದಿದ್ದರೂ ಮುತ್ತನ್ನು ಕಟ್ಟಿಸಿಕೊಳ್ಳುತ್ತಾರೆ. ಇದು ಹರಕೆಯ ಭಾಗವಾಗಿಯಷ್ಟೇ ಕಾಣುತ್ತದೆ. ಕನ್ಯೆ ಮುತ್ತು ಮತ್ತು ಗರತಿ ಮುತ್ತು ಸಂಪ್ರದಾಯಗಳಿಗೂ ಸಾಕಷ್ಟು ವ್ಯತ್ಯಾಸಗಳಿವೆ. ಸಂಪ್ರದಾಯದಂತೆ ಕುಲದೇವತೆಯಾಗಿ ಉಚ್ಚಂಗೆಮ್ಮ ಬಂದು ಪೀಡಿಸುವುದು ಹಾಗಾಗಿ ದೇವರನ್ನು ಹೊರುತ್ತಾರೆ. ಇವರು ಗರತಿ ಮುತ್ತನ್ನು ಸಾಮಾನ್ಯವಾಗಿ ಅನೇಕ ಸಮುದಾಯದವರು ಕಟ್ಟಿಸಿಕೊಂಡರೆ ಕನ್ಯೆ ಮುತ್ತನ್ನು ಕೆಲವೇ ಕೆಲವು ಸಮುದಾಯದ ಜನರು ಮಾತ್ರ ಕಟ್ಟಿಸಿಕೊಳ್ಳುತ್ತಾರೆ. ಉಚ್ಚಂಗೆಮ್ಮನಿಗೆ ಗಂಡಸು ಮುತ್ತು ಕಟ್ಟಿಸಿಕೊಂಡವರನ್ನು ಇಲ್ಲಿ ಕಾಣಲಾಗುವುದು. ಉಚ್ಚಂಗೆಮ್ಮನನ್ನು ಕುಲದೇವತೆಯಗಿ ಹೊಂದಿದ್ದ ಮನೆಯಲ್ಲಿ ಸಂಪ್ರದಾಯದಂತೆ ಗಂಡು ಮಕ್ಕಳಿಗೆ ಮುತ್ತನ್ನು ಕಟ್ಟಿಸುತ್ತಾರೆ. ಇವರಿಗೂ ದೇವರೊಲಿದು ಗಂಡಸರು ಜಡೆ ಬಿಡುತ್ತಾರೆ. ಸೀರೆ, ಕೈಗೆ ಬಳೆ ಹಾಗೂ ಹೆಂಗಸರಂತೆ ವೇಷಭೂಷಣಗಳನ್ನು ಧರಿಸುತ್ತಾರೆ. ಕೆಲವರು ಅಂಗಿ ಪಂಚೆ ಧರಿಸಿದರೂ ಕೈಗೆ ಬಳೆ ಮಾತ್ರ ತೊಡುತ್ತಾರೆ. ಉಚ್ಚಂಗೆಮ್ಮನನ್ನು ಮನೆದೇವರಾಗಿ ಮಾಡಿಕೊಂಡ ಅನೇಕರಲ್ಲಿ ಈ ಆಚರಣೆ ಕಂಡುಬರುತ್ತದೆ.

ಹುಣ್ಣಿಮೆಯ ದಿನಗಳಲ್ಲಿ ಇಲ್ಲಿಗೆ ಸಾವಿರಾರು ಭಕ್ತರು ಬಂದು ಪೂಜೆ ಪುನಸ್ಕಾರಗಳನ್ನು ಮಾಡಿಕೊಂಡು ಹೋಗುತ್ತಾರೆ. ಅದರಲ್ಲಿಯೂ ಮುತ್ತು ಕಟ್ಟಿಸಿಕೊಂಡವರು ನೂಲ ಹುಣ್ಣಿಮೆಯಲ್ಲಿ ಇಲ್ಲಿಗೆ ಬಂದು ಮುತ್ತುಗಳಿಗೆ ಹೊಸದಾರವನ್ನು ಹಾಕಿಕೊಳ್ಳುತ್ತಾರೆ. ಅಲ್ಲದೆ ಭಾರತ ಹುಣ್ಣಿಮೆಯ ದಿನದಂದು ದೇವಿ ರಂಡೆಯಾದ ದಿನವೆಂದು ತಿಳಿದಿದ್ದಾರೆ. ಮುತ್ತು ಕಟ್ಟಿಸಿಕೊಂಡವರೆಲ್ಲರೂ ಆ ದಿನ ಬಂದು ಸೇರಿ ಅವರೂ ರಂಡೆಯರಾಗುತ್ತಾರೆ. ಕಾರ್ತಿಕ ಹುಣ್ಣಿಮೆಯ ದಿನದಂದು ಕೂಡ ಬರುತ್ತಾರೆ. ಒಟ್ಟಾರೆ ಕುಟುಂಬ ಸಮೇತವಾಗಿ ಬಂದು ಊಟ ಉಪಚಾರ ಮಾಡಿಕೊಂಡು ದೇವಿಗೆ ಪೂಜೆ ಸಲ್ಲಿಸುತ್ತಾರೆ. ಹೀಗೆ ಈ ದಿನಗಳಲ್ಲಿ ಮುತ್ತು ಕಟ್ಟಿಸಿಕೊಂಡವರು ಮುಖ್ಯವಾಗಿ ಸೇರಿ ಬರಲೇಬೇಕೆಂಬ ಕಡ್ಡಾಯ ನಿಯಮವಿದೆ. ಹಾಗಾಗಿ ಇವರೆಲ್ಲಾ ಅಮವಾಸ್ಯೆ, ಹುಣ್ಣಿಮೆ, ಮಂಗಳವಾರ ಮತ್ತು ಶುಕ್ರವಾರಗಳಂದು ಈ ದೇವತೆಗೆ ವಿಶೇಷ ಪೂಜೆ ನಡೆಸಲು ಬರುತ್ತಾರೆ. ಬೆಟ್ಟದಲ್ಲಿರುವ ಉಚ್ಚಂಗೆಮ್ಮನಿಗೆ ಹಣ್ಣು ಕಾಯಿ, ಹೋಳಿಗೆ ಬುತ್ತಿ ಮಾಡಿಸುತ್ತಾರೆ. ನಂತರ ಹಾಲಮ್ಮನ ತೋಪಿನ

ಹತ್ತಿರವೇ ಎಲ್ಲಾ ರೀತಿಯ ಆಚರಣೆಗಳನ್ನು ಮಾಡುತ್ತಾರೆ. ಯುಗಾದಿ, ದಸರಾ, ಕಾರ್ತಿಕ ಮಾಸ, ಭರತ ಹುಣ್ಣಿಮೆಯಲ್ಲಿ ಮುತ್ತುಗಳನ್ನು ಹೊಸದಾಗಿ ಕಟ್ಟಿಸುತ್ತಾರೆ. ಇತ್ತೀಚಿಗೆ ಹುಣ್ಣಿಮೆಯಂತಹ ವಿಶೇಷ ದಿನಗಳಲ್ಲಿ ಮುತ್ತು ಕಟ್ಟಿಸುವ ಕಾರ್ಯ ಕಷ್ಟವಾಗಿದ್ದರಿಂದ, ಸಾಮಾನ್ಯ ದಿನಗಳಲ್ಲಿ ಬಂದು ಮುತ್ತು ಕಟ್ಟಿಸಿಕೊಂಡು ಹೋಗುತ್ತಾರೆ ಎಂಬ ಅಂಶ ಇಲ್ಲಿ ತಿಳಿದುಬಂದಿದೆ. ಇಲ್ಲಿ ಹೂವಿನ ಹಡಗಲಿ, ಹಗರಿ ಬೊಮ್ಮನಹಳ್ಳಿ ಹಾಗೂ ಇತರೆ ಬಳ್ಳಾರಿ ಜಿಲ್ಲೆಯಿಂದ ಕೆಲವರು ಈ ಉಚ್ಚಂಗೆಮ್ಮನಿಗೆ ನಡೆದುಕೊಳ್ಳುತ್ತಾರೆ. ಅಲ್ಲದೇ ಕೆಲವರು ಈ ದೇವಿಯ ಹೆಸರಿನಲ್ಲಿ ಮುತ್ತು ಕಟ್ಟಿಸಿಕೊಂಡಿದ್ದಾರೆ.

ಉಚ್ಚಂಗೆಮ್ಮನ ಹೆಸರಿನಲ್ಲಿ ಬಿಟ್ಟಿರುವ ದೇವದಾಸಿ ಮಹಿಳೆಯರನ್ನು ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳಲ್ಲಿ ಕಾಣಬಹುದು. ಕೂಡ್ಲಿಗಿ, ಹಗರಿ ಬೊಮ್ಮನಹಳ್ಳಿ, ಹಡಗಲಿ ತಾಲೂಕುಗಳಲ್ಲಿ ಉಚ್ಚಂಗೆಮ್ಮನ ಹೆಸರಿನಲ್ಲಿ ಮುತ್ತು ಕಟ್ಟಿಸಿಕೊಂಡಿದ್ದಾರೆ. ಉಚ್ಚಂಗೆಮ್ಮನ ಒಕ್ಕಲಿನ ಮನೆಯವರು ಕೇವಲ ಬಿಳಿ ಮುತ್ತುಗಳನ್ನು ಕಟ್ಟಿಸಿಕೊಳ್ಳುತ್ತಾರೆ. ಹೀಗೆ ಗಂಗಾಮತಸ್ಥ ಸಮುದಾಯದ ದೇವದಾಸಿ ಮಹಿಳೆಯು ಬರಿ ಬಿಳಿ ಮುತ್ತುಗಳನ್ನೇ ಕಟ್ಟಿರುವುದು ಕಂಡುಬಂದಿತ್ತು. ಹಾಗಾಗಿ ವಿಚಾರಿಸಿದರೆ ಅದು ನಾವು ಉಚ್ಚಂಗಮ್ಮನ ಒಕ್ಕಲಿನವರು ಅದಕ್ಕೇ ನಾವು ಬರೀ ಬಿಳಿ ಮುತ್ತುಗಳನ್ನು ಕಟ್ಟುತ್ತೇವೆ ಎಂದು ಹೇಳಿದರು. ಅಲ್ಲದೇ ಅವರು ಗಂಡುಮಕ್ಕಳಿಗೆ ಈ ಮುತ್ತುಗಳನ್ನು ಕಟ್ಟುತ್ತಾರೆ. ಹೆಣ್ಣುಮಕ್ಕಳಿಗೆ ಈ ಮುತ್ತುಗಳನ್ನು ಕಟ್ಟಿದರೆ ಮದುವೆ ಮಾಡುವಂತಿಲ್ಲ. ಆದರೆ ಗಂಡುಮಕ್ಕಳಿಗೆ ಮುತ್ತು ಕಟ್ಟಿದರೂ ಮದುವೆ ಮಾಡುವುದು ಕಂಡುಬರುತ್ತದೆ.

ಉಚ್ಚಂಗೆಮ್ಮ, ಹುಲಿಗೆಮ್ಮ ಮತ್ತು ಯಲ್ಲಮ್ಮ ಇತರೆ ಹೆಣ್ಣು ದೇವರುಗಳ ಜೋಗತಿ ಬಿಟ್ಟವರು ಕೊರಳಲ್ಲಿ ಮುತ್ತು, ಕೈಯಲ್ಲಿ ಬೆಳ್ಳಿಯ ಕಡಗ, ಪಡಲಿಗೆ ಮತ್ತು ಕವಡೆ ಸರವನ್ನು ಧರಿಸುವುದು ಕಂಡುಬರುತ್ತದೆ. ಇವರು ಬಿಳಿ, ಕೆಂಪು ಮತ್ತು ಹಳದಿ ಸೀರೆಗಳನ್ನೆ ಹೆಚ್ಚಾಗಿ ದೇವಿಯ ವಾರದ ದಿನಗಳಂದು ಧರಿಸುವುದು ಕಂಡುಬರುತ್ತದೆ. ಕವಡೆ ಸರಕ್ಕೆ ಯಲ್ಲಮ್ಮ, ಉಚ್ಚಂಗೆಮ್ಮ, ಹುಲಿಗೆಮ್ಮ ಮತ್ತು ಮಾತಂಗಿ ಮುಂತಾದ ಹೆಣ್ಣು ದೇವತೆಗಳ ಸಂಪ್ರದಾಯದಲ್ಲಿ ಬಹಳ ಮಹತ್ವ ಇರುವ ಅಂಶವನ್ನು ಕಾಣಲಾಗುತ್ತದೆ. ಮಹಾರಾಷ್ಟ್ರದ ಅಂಭಾಬಾಯಿ ಸಂಪ್ರದಾಯದಲ್ಲಿ ಗೊಂದಲಿಗರಲ್ಲಿ ಕವಡೆಗೆ ಮಹತ್ವದ ಸ್ಥಾನ ನೀಡಿದ್ದಾರೆಂದು ವಿದ್ವಾಂಸರು ತಿಳಿಸಿದ್ದಾರೆ. "ಕವಡೆ ನಮ್ಮ ದೇಶದಲ್ಲಿ ಬಹುಕಾಲದವರೆಗೆ ನಾಣ್ಯದ ರೂಪದಲ್ಲಿ ಬಳಕೆಯಲ್ಲಿತ್ತು. ೧೯ನೇ ಶತಮಾನದ ಮಧ್ಯಭಾಗದವರೆಗೂ ಇದು ಜಗತ್ತಿನ ತುಂಬ ನಾಣ್ಯ ರೂಪದಲ್ಲಿತ್ತು. ಬಂಗಾಳದ ಬುಡಕಟ್ಟುಗಳಲ್ಲಿ ಒಂದುಕಡೆ ಐದು ಕವಡೆ ಇತ್ಯಾದಿಯಾಗಿ ಹೆಸರಿಡುವ ಪದ್ಧತಿಯಿದೆ. ಒಡಿಶಾದ ಅರ್ಥಮಂತ್ರಿಯನ್ನು ಕವಡೆಯ ಮಂತ್ರಿಯಂದೇ ಕರೆಯಲಾಗುತ್ತದೆ. ಕರ್ನಾಟಕದ ಕೆಲವು ಬ್ರಾಹ್ಮಣ ವರ್ಗಗಳಲ್ಲಿ ವಧುವಿಗೆ ಕೊಡುವ ವಸ್ತುಗಳಲ್ಲಿ ಕವಡೆಗಳೂ ಸೇರಿರುತ್ತವೆ. ನಾಣ್ಯವಾಗಿ ಅಲ್ಲದೇ ಕವಡೆಗೆ ಇನ್ನೂ ಹೆಚ್ಚಿನ ಸಂಕೇತ ಕಲ್ಪಿಸುವವರೂ ಇದ್ದಾರೆ. ಅವು ರುಂಡಮಾಲೆಯ ಸಂಕೇತವೆಂತಲೂ ದೇವಿಯ ಪ್ರತಿರೂಪವೆಂತಲೂ ರೇಣುಕಾ ಯಲ್ಲಮ್ಮನ ಭಕ್ತರು ತಿಳಿಸುತ್ತಾರೆ" (ನೇಗಿನಾಳ ಎಂ.ಬಿ:೧೯೯೨:೨೭೦-೨೭೧). ಹೀಗೆ ಭಾವಿಸಿರುವ ಹುಲಿಗೆಮ್ಮ ಉಚ್ಚಂಗೆಮ್ಮ ಮತ್ತು ಯಲ್ಲಮ್ಮ ಇತರೆ ಹೆಣ್ಣು ದೇವತೆಯ ಭಕ್ತರು ದೇವಿಯ

ಪ್ರತಿರೂಪವಾಗಿ ಕವಡೆ ಸರವನ್ನು ಧರಿಸುತ್ತಾರೆ. ಉಚ್ಚಂಗಿದುರ್ಗ, ಹುಲಿಗಿ, ಸವದತ್ತಿಯಂತಹ ಧಾರ್ಮಿಕ ಕೇಂದ್ರಗಳಲ್ಲಿಹೆಚ್ಚಾಗಿ ಕವಡೆ ಧರಿಸಿದ ಜೋಗತಿ ಮತ್ತು ದೇವದಾಸಿಯರು ಕಂಡುಬರುತ್ತಾರೆ.

**ತೆಕ್ಕಲಕೋಟೆ ವರವಿನ ಮಲ್ಲಯ್ಯ**

ಸಿರುಗುಪ್ಪ ತಾಲೂಕಿನ ತೆಕ್ಕಲಕೋಟೆಯ ಬೆಟ್ಟದಲ್ಲಿ ಮಲ್ಲಯ್ಯನ ದೇವಾಲಯವಿದೆ. ಇದನ್ನು ವರವಿನ ಮಲ್ಲಯ್ಯ ದೇವಸ್ಥಾನ ಎಂದೂ ಕರೆಯುತ್ತಾರೆ. ಈ ದೇವಾಲಯ ಇಲ್ಲಿ ಪುರಾತನ ಕಾಲದಿಂದಲೂ ಅಸ್ತಿತ್ವದಲ್ಲಿರುವುದನ್ನು ಇಲ್ಲಿ ದೊರೆತ ಶಾಸನಗಳು ತಿಳಿಸುತ್ತವೆ. "ಕ್ರಿ ಶ ೧೦೧೭ರಲ್ಲಿನ ಕಲ್ಯಾಣ ಚಾಲುಕ್ಯ ಅರಸ ಜಗದೇಕಮಲ್ಲನ ಮಹಾಮಂಡಳೇಶ್ವರ ಇರುವನೊಳಂಬನು ನೊಳಂಬವಾಡಿ ೩೨ಸಾವಿರವನ್ನು ಆಳುತ್ತಿರುವಾಗ, ಬಲಕುಂದೆ ಮುನ್ನೂರೊಳಗಿನ ಹಗರೆಯ ತಡಿಯ ಸಿರಿಯೂರನ್ನು ಶ್ರೀಮತ್ ಮೈಲಾರದೇವರಿಗೆ ಕೊಟ್ಟಿದ್ದಾರೆ. ಅದರಂತೆಯೇ 'ಕ್ರಿ ಶ ೧೫೩೯ರಲ್ಲಿ ವಿಜಯನಗರದ ಅರಸ ಅಚ್ಯುತರಾಯನಿಗೆ ಪುಣ್ಯವಾಗಲೆಂದು ಪಯಜಕ್ಕಿಯನು ಹರವಿನ ದೇವರಿಗೆ ನೈವೇದ್ಯಕ್ಕೆ ಬಿಡಾರ ಸಹಿತ ಕೆಲವು ದಾನಗಳನ್ನು ನೀಡಿದ್ದಾನೆ' ಪ್ರಾಚೀನವಾದ ದೇವಾಲಯದಲ್ಲಿ ಮಲ್ಲಯ್ಯ, ಮಾಳವ್ವ, ಲಕ್ಷ್ಮಿಯ ಶಿಲ್ಪಗಳಿವೆ" *(ವಿರುಪಾಕ್ಷಿ ಎನ್:೨೦೧೬:೧೬೯)*. ಪ್ರತಿವರ್ಷ ಶಿವರಾತ್ರಿಯಂದು ತುಂಗಾಭದ್ರಾ ನದಿಯಿಂದ ನೀರು ತಂದು ವಿಶೇಷವಾದ ಪೂಜೆ ಮಾಡುತ್ತಾರೆ. ಹಾಗೆಯೇ ಮೇ ತಿಂಗಳಲ್ಲಿ ಬರುವ ಹುಣ್ಣಿಮೆಯ ದಿನದಂದು ಜಾತ್ರೆ ನಡೆಸುತ್ತಾರೆ. ಜಾತ್ರೆಗೆ ಒಂಬತ್ತು ದಿನಗಳ ಮೊದಲು ಮಲ್ಲಯ್ಯ ಮತ್ತು ಮಾಳವ್ವನಿಗೆ ಕಂಕಣವನ್ನು ಕಟ್ಟುತ್ತಾರೆ. ಈ ಜಾತ್ರೆಯಲ್ಲಿ ಹೊಳಗುಂದಿಯಿಂದ ಜನರು ಬಂದು ಕೊಂತಪ್ಪನ ಪೂಜೆ ಮಾಡಿದ ನಂತರವೇ ತೇರನ್ನು ಎಳೆಯತ್ತಾರೆ. ಹೊಳಗುಂದಿಯ ಬೇಡರು ಕುಂಬಸೇವೆ ಮಾಡುತ್ತಾರೆ. ಈ ದೇವಾಲಯದ ಅಧಿದೇವತೆ ಗಂಗಮಾಳವ್ವಳನ್ನು ತಮ್ಮ ಮನೆ ಮಗಳೆಂದು ಭಾವಿಸಿದ್ದಾರೆಂದು ತಿಳಿಸುತ್ತಾರೆ. ಇಲ್ಲಿ ಪೂಜೆ ಸಲ್ಲಿಸುವ ಪೂಜಾರಿಗಳು ಲಿಂಗಾಯತ ಸಮುದಾಯದವರಾಗಿದ್ದಾರೆ.

ತೆಕ್ಕಲಕೋಟೆಯ ಸುತ್ತಮುತ್ತಲಿನ ಜನರು ಈ ದೇವರಿಗೆ ನಡೆದುಕೊಳ್ಳುತ್ತಾರೆ. ಅಲ್ಲದೆ ಈ ಗುಡ್ಡದ ಮಲ್ಲಯ್ಯನ ಹೆಸರಿನಲ್ಲಿ ಹೆಣ್ಣುಮಕ್ಕಳಿಗೆ ಮುದ್ರೆ ಹಾಕುವ ಮೂಲಕ ಬಸವಿ ಬಿಡುವ ಪದ್ಧತಿ ಇದೆ ಎಂದು ಕ್ಷೇತ್ರಕಾರ್ಯದಲ್ಲಿ ಕಂಡಬಂದಿದೆ. ಜಾತ್ರೆ ನಡೆದ ನಂತರದಲ್ಲಿ ಈ ಬಸವಿಯರಿಂದ ಓಕುಳಿ ಆಟ ಆಡಿಸುತ್ತಿದ್ದರು. ಕಾಲಾನಂತರದಲ್ಲಿ ಕಾನೂನಿನ ಪ್ರಕಾರ ಪೋಲೀಸರ ಬಂದೋಬಸ್ತ್‌ನಿಂದ ಈಗ ಓಕುಳಿ ಆಟ ನಿಂತಿದೆ. ಮಲ್ಲಯ್ಯ ದೇವರಿಗೆ ಬಿಟ್ಟಿರುವ ಬಸವಿಯರು ಯೌವನ ಮುಗಿದ ನಂತರ ಹುಲಿಗೆಮ್ಮ ದೇವಿಗೆ ಮುತ್ತು ಕಟ್ಟಿಕೊಳ್ಳುತ್ತಾರೆ. ಈ ದೇವರಿಗೆ ಪರಿಶಿಷ್ಟ ಜಾತಿ ಮತ್ತು ಪಂಗಡದವರು ದೇವದಾಸಿ ಬಿಡುತ್ತಾರೆ. ಆದರೆ ಈ ಭಾಗದಲ್ಲಿ ಹಿಂದುಳಿದ ವರ್ಗದ ದೇವದಾಸಿಯರು ಕಂಡುಬರುವುದಿಲ್ಲ. ಹಾಗಾಗಿ ಮಾದಿಗರಲ್ಲಿಯೂ ಈ ದೇವರಿಗೆ ದೇವದಾಸಿಯರನ್ನು ಬಿಟ್ಟಿರುವವರ ಸಂಖ್ಯೆ ಹೆಚ್ಚಿದೆ ಎಂದು ಹೇಳಲಾಗುವುದು.

**ಉರುಕುಂದಿ ಈರಣ್ಣ**

ಉರುಕುಂದಿ ಎಂಬ ಧಾರ್ಮಿಕ ಕೇಂದ್ರವು ಆಂಧ್ರ ಪ್ರದೇಶದ ಆದೋನಿ ಬಳಿಯಿದೆ. ಇದು ಈರಣ್ಣ ದೇವರ ನೆಲೆಯಾಗಿದೆ. ಉರುಕುಂದಿ ಈರಣ್ಣ ದೇವರಿಗೆ ಹೆಣ್ಣುಮಕ್ಕಳನ್ನು ದೇವದಾಸಿಯನ್ನಾಗಿ

ಬಿಡುವ ಪದ್ಧತಿ ನಡೆಸುತ್ತಾರೆ. ಸಿರುಗುಪ್ಪ ತಾಲೂಕಿನಲ್ಲಿ ಈ ದೇವರಿಗೆ ಬಿಟ್ಟಿರುವ ದೇವದಾಸಿಯರನ್ನು ಕಾಣಬಹುದು. ಈರಣ್ಣ ದೇವರಿಗೆ ಕೆಲವರು ಮುದ್ರೆ ಹಾಕಿಸುವ ಮೂಲಕ ದೇವದಾಸಿಯರಾದರೆ ಇನ್ನೂ ಕೆಲವರು ತಾಳಿ ಕಟ್ಟಿಕೊಳ್ಳುವ ಮೂಲಕ ದೇವದಾಸಿಯರಾಗುತ್ತಾರೆ. ತಾಳಿ ಕಟ್ಟಿಕೊಳ್ಳುವ ಮೂಲಕ ದೇವದಾಸಿಯರಾದವರನ್ನು ಸಿರುಗುಪ್ಪ, ಕಪ್ಪಗಲ್ಲು ಪ್ರದೇಶದಲ್ಲಿ ಕಾಣಲಾಗುತ್ತದೆ. ಮುಂದೆ ಈರಣ್ಣ ದೇವರನ್ನು ಹೊತ್ತ ದೇವದಾಸಿಯರು ಬೆಳ್ಳಿಯ ಜನಿವಾರವನ್ನು ಹಾಕಿಕೊಳ್ಳುತ್ತಾರೆ. ಇದು ಕ್ಷೇತ್ರಕಾರ್ಯದ ಮುಖಾಂತರ ತಿಳಿದುಕೊಂಡ ಸಂಗತಿಯಾಗಿದೆ.

ಉರುಕುಂದಿ ಈರಣ್ಣನಿಗೆ ದೇವದಾಸಿಯಾದವರು ಕೆಲವು ಆಚರಣೆಗಳನ್ನು ಮಾಡುತ್ತಾರೆ. ಅಂತಹ ಆಚರಣೆಯಲ್ಲಿ ಪರುವು(ಉತ್ಸವ) ಮಾಡುವುದನ್ನು ದೇವದಾಸಿಯರು ನಡೆಸಿಕೊಂಡು ಬಂದಿದ್ದಾರೆ. ಈರಣ್ಣ ದೇವರಿಗೆ ಪರುವು ಮಾಡಲು ಶ್ರಾವಣದಲ್ಲಿ ಉರುಕುಂದಿಗೆ ಹೋಗುತ್ತಾರೆ. ಈ ಕಾರ್ಯದ ಕುರಿತಾಗಿ ತಿಳಿಯಲು ಕ್ಷೇತ್ರಕಾರ್ಯವನ್ನು ಮಾಡಿದಾಗ ತಿಳಿದ ಅಂಶವೇನೆಂದರೆ ಮಾದಿಗ ಸಮುದಾಯದ ಮನೆದೇವರು ಈರಣ್ಣ ಆಗಿರುತ್ತಾನೆ. ಈ ದೇವರಿಗೆ ಬಿಟ್ಟಿರುವ ದೇವದಾಸಿಯರು ಪ್ರತಿವರ್ಷ ಮನೆದೇವರಿಗೆ ಪರುವು ಮಾಡುತ್ತಾರೆ. ಈ ಆಚರಣೆಯನ್ನು ನಾಗರ ಅಮವಾಸ್ಯೆಯಲ್ಲಿ ಸೋಮವಾರ ಮತ್ತು ಗುರುವಾರದಂದು ಮಾಡುತ್ತಾರೆ. ಒಂದು ದಿನ ಮುಂಚಿತವಾಗಿಯೇ ಕುಟುಂಬಸಮೇತರಾಗಿ ತೆರಳಿ ದೇವಸ್ಥಾನದಲ್ಲಿ ನಿದ್ರೆ ಮಾಡಿ, ಬೆಳಗಿನ ಜಾವದಲ್ಲಿ ಎದ್ದು ಅಲ್ಲಿರುವ ಕಾಲುವೆಯಲ್ಲಿ ಸ್ನಾನ ಮಾಡಿ ಪೂಜೆಗೆಂದೇ ಮೀಸಲಿರಿಸಿದ ವಿಶೇಷವಾದ ಪಾತ್ರೆಗಳನ್ನು ಹರಿಯುವ ಕಾಲುವೆಯಲ್ಲಿ ತೊಳೆದು ಅಲ್ಲಿಂದಲೇ ನೀರನ್ನು ತಂದು ಅವರು ಉಳಿದಿರುವ ಸ್ಥಳದಲ್ಲಿಯೇ ಒಲೆಗಳನ್ನು ಕಲ್ಲುಗಳಿಂದ ಸಿದ್ಧಪಡಿಸಿ ಅದಕ್ಕೆ ನೀರು ಹಾಕಿ ತೊಳೆದು ಮೊದಲು ಒಲೆ ಪೂಜೆ ಮಾಡಿ ನಂತರ ನೈವೇದ್ಯ ಸಿದ್ಧಪಡಿಸುತ್ತಾರೆ. ಪರುವು ಮಾಡಲು ಬಳಸಿದ ಪಾತ್ರೆಯನ್ನು ಯಾವುದಕ್ಕೂ ಬಳಸದಂತೆ ಮೀಸಲಿರಿಸುತ್ತಾರೆ. ವರ್ಷಕ್ಕೆ ಒಮ್ಮೆ ಪರುವು ಮಾಡಲು ಮಾತ್ರ ಬಳಸುತ್ತಾರೆ. ಈ ಹಿಂದೆ ಮಣ್ಣಿನ ಗಡಿಗೆಗಳನ್ನು ಇದಕ್ಕೆ ಬಳಕೆ ಮಾಡುತ್ತಿದ್ದರು. ಕಾಲಾನಂತರದಲ್ಲಿ ಈಗ ಅಲ್ಯೂಮಿನಿಯಂ ಪಾತ್ರೆಗಳನ್ನು ಬಳಕೆ ಮಾಡುತ್ತಿದ್ದಾರೆ. ನೈವೇದ್ಯಕ್ಕೆಂದು ಅಡುಗೆ ಸಿದ್ಧಪಡಿಸಿದ ನಂತರ ಅಡುಗೆ ಮಾಡಿರುವ ಪಾತ್ರೆಗಳಿಗೆ ಅರಿಶಿನ ಕುಂಕುಮ ಹಚ್ಚಿ, ಪಾತ್ರೆಗಳ ಕಂಠಕ್ಕೆ ಹೂವು ಸುತ್ತಿ ಅಲ್ಲಿಯೇ ಊದಿನಕಡ್ಡಿ ಹಚ್ಚಿ ತೆಂಗಿನಕಾಯಿ ಒಡೆಯುತ್ತಾರೆ. ಹೀಗೆ ದೇವರಿಗೆ ಎಡೆ ಕೊಟ್ಟ ನಂತರವೇ ಅವರು ಊಟ ಮಾಡುತ್ತಾರೆ. ಊಟಮಾಡಿ ಉಳಿದುದನ್ನು ಬುತ್ತಿ ಕಟ್ಟಿಕೊಂಡು ತಮ್ಮ ವಂಶಸ್ಥರಿಗೆ ಮಾತ್ರ ಪ್ರಸಾದದ ರೂಪದಲ್ಲಿ ಹಂಚುತ್ತಾರೆ. ಇದೆಲ್ಲ ಕಾರ್ಯವನ್ನು ದೇವದಾಸಿಯರು ಮಾಡುತ್ತಾರೆ. ಈರಣ್ಣ ದೇವರಿಗೆ ಪರುವು ಮಾಡುವಲ್ಲಿ ನೈವೇದ್ಯಕ್ಕೆ ಸಿದ್ಧಪಡಿಸಿದ ಸಿಹಿ ಅಡುಗೆಯೆಂದರೆ ಉಪ್ಪಿಟ್ಟುರವದಿಂದ ಮಾಡಿದ ಪಾಯಸ, ಬದನೇಕಾಯಿ ಮತ್ತು ಅನ್ನ. ವಿಶೇಷವೆಂದರೆ ಇಲ್ಲಿಗೆ ಬಂದಿರುವ ಭಕ್ತರು ಉಪ್ಪಿಟ್ಟುರವ, ಬೆಲ್ಲ, ಕಡಲೆ, ಅಕ್ಕಿಯನ್ನು ದೇವರಿಗೆ ಕೊಟ್ಟು ಬರುತ್ತಾರೆ. ಹುಲಿಗೆಮ್ಮ, ಯಲ್ಲಮ್ಮ ಇತರೆ ದೇವರಿಗೆ ಪೂಜೆಗೆ ಉಡಿ ಸಾಮಾನು ಕೊಡುವ ರೀತಿಯಲ್ಲಿ ಈರಣ್ಣ ದೇವರಿಗೆ ಪರುವು ಮಾಡಲು ಬಂದಿರುವ ದೇವದಾಸಿಯ ಕುಟುಂಬದವರು ದೇವಸ್ಥಾನಕ್ಕೆ ಇವುಗಳನ್ನು ಕೊಡುತ್ತಾರೆ. ಇವುಗಳನ್ನು ವಿಶೇಷವಾಗಿ

ಪೂಜೆಗೆಂದೇ ಸಣ್ಣ ಸಣ್ಣ ಗಾತ್ರದಲ್ಲಿ ಸಿದ್ಧಪಡಿಸಿ ವ್ಯಾಪಾರಿಗಳು ಮಾರಾಟ ಮಾಡುತ್ತಾರೆ. ಅಲ್ಲದೇ ಪರುವು ಮಾಡಲು ಬೇಕಾದ ಬೆಲ್ಲ, ಕಡಲೆ, ಉಪ್ಪಿಟ್ಟುರವ, ಅಕ್ಕಿ ಮತ್ತು ಹೊಸ ಪಾತ್ರೆಗಳನ್ನು ಇಲ್ಲಿ ವಿಶೇಷವಾಗಿ ಮಾರಾಟ ಮಾಡುವ ಮಳಿಗೆಗಳು ಕಂಡುಬರುತ್ತವೆ. ಮತ್ತೊಂದು ಗಮನಿಸಬೇಕಾದ ಅಂಶವೆಂದರೆ ಬರೀ ದೇವದಾಸಿಯರಷ್ಟೇ ಅಲ್ಲದೆಯೇ ಬೇರೆ ಎಲ್ಲರೂ ಅಂದರೆ ಮನೆದೇವರು ಈರಣ್ಣನಿದ್ದವರೆಲ್ಲಾ ಈ ಧಾರ್ಮಿಕ ಕೇಂದ್ರಕ್ಕೆ ಬಂದು ಪರುವು ಮಾಡಿಕೊಂಡು ಹೋಗುತ್ತಾರೆ.

**ಕನಕಗಿರಿಯ ಕನಕರಾಯ**

ಕರ್ನಾಟಕ ರಾಜ್ಯದ ಈಶಾನ್ಯ ದಿಕ್ಕಿನಲ್ಲಿರುವ ಹಾಗೂ ತುಂಗಾಭದ್ರ ಅಣೆಕಟ್ಟಿನ ಎಡಭಾಗದಲ್ಲಿ ಕೊಪ್ಪಳ ಜಿಲ್ಲೆ ಇದೆ. ಇದು ಸ್ವತಂತ್ರ ಪೂರ್ವದಲ್ಲಿ ಜಹಗೀರು ಜಿಲ್ಲೆಯಾಗಿತ್ತು ಎಂದು ಅಧ್ಯಯನಕಾರರು ತಿಳಿಸಿದ್ದಾರೆ. ಈ ಜಿಲ್ಲೆಯಿಂದ ೫೦ ಕಿಲೋಮೀಟರ್ ದೂರದಲ್ಲಿರುವ ಕನಕಗಿರಿ ಗ್ರಾಮವು ಗಂಗಾವತಿ ತಾಲೂಕಿನ ಹೋಬಳಿಗಳಲ್ಲಿ ಒಂದಾಗಿದೆ. ಹಂಪಿಯಿಂದ ಉತ್ತರಕ್ಕೆ ೩೫ ಕಿಲೋಮೀಟರ್ ದೂರದಲ್ಲಿರುವ ಕನಕಗಿರಿಯು ಉತ್ತರಕ್ಕೆ ಹುಲಿಹೈದರ್, ತಾವರಗೆರೆಗಳಿದ್ದರೆ, ದಕ್ಷಿಣಕ್ಕೆ ೨೫ ಕಿಲೋಮೀಟರ್ ಅಂತರದಲ್ಲಿ ಭತ್ತದ ಕಣಜವೆಂದು ಹೆಸರುವಾಸಿಯಾದ ಗಂಗಾವತಿ ಇದೆ. ಪೂರ್ವಕ್ಕೆ ಕೊಪ್ಪಳ ಇದ್ದರೆ, ಪಶ್ಚಿಮಕ್ಕೆ ಕಾರಟಗಿ ಇದೆ. ಈ ಎಲ್ಲಾ ಪ್ರದೇಶಗಳಿಗೆ ಸಮರ್ಪಕ ಸಾರಿಗೆ ವ್ಯವಸ್ಥೆ ಇದೆ. ಕನಕಗಿರಿಯು ಒಣ ಬೇಸಾಯ ಪ್ರದೇಶವಾಗಿದ್ದರೂ ಪಟ್ಟಣವಾಗಿ ಪರಿವರ್ತನೆಯಾಗಿರುವ ಕಾರಣದಿಂದ ಈ ಭಾಗದ ಪ್ರಮುಖ ವ್ಯಾಪಾರ ಕೇಂದ್ರವಾಗಿದೆ. ಕೃಷಿ, ಗುಡಿ ಕೈಗಾರಿಕೆ, ಕುರಿ ಸಾಕಾಣಿಕೆ ಈ ಭಾಗದ ಜನರ ಪಾರಂಪರಿಕ ವೃತ್ತಿಯಾಗಿದೆ.

ಜನಪದರು ಜೀವನದಲ್ಲಿ ಅನಾದಿ ಕಾಲದಿಂದಲೂ ಹಾಸುಹೊಕ್ಕಾಗಿರುವ ದೇವರ ಆರಾಧನೆ ಸಂಸ್ಕೃತಿ ಜೀವಾಳವಾಗಿದೆ. ಹಾಗಾಗಿ ಅನೇಕ ದೇವರುಗಳನ್ನು ಮತ್ತು ದೇವಾಲಯಗಳನ್ನು ಸ್ಥಾಪಿಸಿಕೊಂಡು ಪೂಜೆ ಪುನಸ್ಕಾರಗಳನ್ನು ನಡೆಸಿಕೊಂಡು ಬರುತ್ತಾರೆ. ಅದರಲ್ಲೂ ಕನಕಗಿರಿ ಇತಿಹಾಸಕ್ಕೆ ಸಂಬಂಧಿಸಿದಂತೆ ಸುಮಾರು ೫೦ಕ್ಕೂ ಹೆಚ್ಚು ದೇವಾಲಯಗಳಿವೆ. ಲಕ್ಷ್ಮೀ ನರಸಿಂಹ ದೇವಾಲಯ (ಕನಕಾಚಲ ದೇವಾಲಯ), ಲಕ್ಷ್ಮೀ ದೇವಾಲಯ, ಮಲ್ಲಿಕಾರ್ಜುನ (ಮಲ್ಲಯ್ಯ) ದೇವಾಲಯ, ಗಜಲಕ್ಷ್ಮೀ ದೇವಾಲಯ, ಪಂಪಾಪತಿ ಗುಡಿ, ಬಸವೇಶ್ವರ ಗುಡಿ, ನಗರೇಶ್ವರ ಗುಡಿ, ತೊಂಡೆ ತೆರವಪ್ಪ ದೇವಾಲಯ, ನೀಲಕಂಠೇಶ್ವರ ದೇವಾಲಯ, ಪೇಟೆ ಬಸವೇಶ್ವರ ದೇವಾಲಯ, ಯಲ್ಲಮ್ಮ ದೇವಿ ದೇವಸ್ಥಾನ, ಹಿರೇಹಳ್ಳದ ಬಸವೇಶ್ವರ ದೇವಸ್ಥಾನ, ಗೋರಾಳಕೇರಿ ದುರ್ಗಮ್ಮ ದೇವಿ ದೇವಸ್ಥಾನ, ಮಹಿಷಾಸುರ ಮರ್ಧಿನಿ, ಅಷ್ಟ ಮಹಿಷ ಕೃಷ್ಣ, ಲಕ್ಷ್ಮೀ, ಉಡುಚಲಮ್ಮ, ಗೊಲ್ಲಕೇರಿ ಆಂಜನೇಯ, ಶಂಕರಲಿಂಗ, ಕರಡಿಗುಡ್ಡ ಆಂಜನೇಯ, ನವಲಿ ಭೋಗಾಪುರೇಶ, ವೆಂಕಟಗಿರಿ ವೆಂಕಟೇಶ್ವರ, ಎಮ್ಮಿಗುಡ್ಡದ ದುರ್ಗಮ್ಮ, ಶಿವ ಪಾರ್ವತಿ ದೇವಾಲಯಗಳನ್ನು ಕಾಣಲಾಗುವುದು.

ಕನಕಗಿರಿಯು ಎರಡನೇ ತಿರುಪತಿಯೆಂದೇ ಹೆಸರಾಗಿದೆ. ಕನಕಗಿರಿಯ ಲಕ್ಷ್ಮೀನರಸಿಂಹನು ತಿರುಪತಿಯ ವೆಂಕಟರಮಣನ ಪ್ರತ್ಯಕ್ಷ ರೂಪವೇ ಆಗಿದ್ದಾನೆ. ವೆಂಕಟರಮಣನೇ ಇಲ್ಲಿ ಕನಕರಾಯನೆಂದು, ಲಕ್ಷ್ಮೀನರಸಿಂಹನೆಂದು, ಕನಕಲಕ್ಷ್ಮೀ ನರಸಿಂಹನೆಂದು ಹೆಸರು ಪಡೆದಿದ್ದಾನೆ. ಈ ಕನಕರಾಯನನ್ನು

ಮನೆದೇವರಾಗಿಸಿಕೊಂಡ ದಲಿತರ ಮನೆಯ ಹೆಣ್ಣುಮಕ್ಕಳು ಇಲ್ಲಿ ಮುದ್ರೆ ಒತ್ತಿಸುವ ಮೂಲಕ ಬಸವಿಯನ್ನಾಗಿ ಬಿಡುವ ಪದ್ಧತಿಯೂ ಕಂಡುಬರುತ್ತದೆ. "ಸಂಜೀವರಾಯನ ಗುಡಿಯ ಮುಂಭಾಗದಲ್ಲಿ ಹಿಂದೂ ಮುಸ್ಲಿಂ ಶೈಲಿಯ ಮಹಲಿನ ಮನೆ ಎಂದು ಕರೆಯುವ ಕಟ್ಟಡವಿದೆ. ಇಲ್ಲಿ ನಿಜಾಮರ ಕಾಲದಲ್ಲಿ ತೆರಿಗೆ ಸಂಗ್ರಹ ಮಾಡಲಾಗುತ್ತಿತ್ತು ಎಂದು ಹೇಳುತ್ತಾರೆ. ಪಕ್ಕದಲ್ಲಿ ಪಾದ ಮಂಟಪ ಎಂದು ಕರೆಯುವ ಪುಟ್ಟ ಮಂಟಪವಿದೆ. ಎರಡು ಪಾದಗಳನ್ನು ಕಲ್ಲಿನಲ್ಲಿ ಕೆತ್ತಿ ಇಡಲಾಗಿದೆ. ಇವು ಕನಕರಾಯನ ಪಾದಗಳೆಂದು ಹೇಳುವರು. ಕೆಳ ವರ್ಗದವರಿಗೆ ಮೊದಲು ದೇವಲಯದೊಳಗೆ ಪ್ರವೇಶ ಇರಲಿಲ್ಲ. ಆದ್ದರಿಂದ ಈ ಪಾದುಕೆಗಳನ್ನೇ ಅವರು ಪೂಜೆಮಾಡಿಕೊಂಡು ಹೋಗುತ್ತಿದ್ದರೆಂದು ಕೆಲವರು ಹೇಳುತ್ತಾರೆ. ಇನ್ನೂ ಕೆಲವರು ಈ ಮಂಟಪವನ್ನು ಮುದ್ರೆ ಮಂಟಪವೆಂದು ಹೇಳುತ್ತಾರೆ. ಈ ಮಂಟಪದಲ್ಲಿ ದಾಸಪ್ಪ, ದಾಸಿಯರಿಗೆ ಮತ್ತು ಬಸವಿಯರಿಗೆ ಮುದ್ರೆ ಹಾಕಲಾಗುತ್ತಿತ್ತು. ಗುಡಿಯ ಮುಂಭಾಗದಲ್ಲಿಯೂ ಈ ರೀತಿ ಮುದ್ರೆ ಹಾಕುವ ಕಾರ್ಯ ನಡೆಸಲಾಗುತ್ತಿತ್ತು" *(ನಾರಾಯಣ ಗಿರಿಯಪ್ಪ:೨೦೦೯:೧೪೫)* ಎನ್ನುವರು. ಹೀಗೆ ಕನಕರಾಯನ ಹೆಸರಿನಲ್ಲಿ ಶಂಖ ಮತ್ತು ಚಕ್ರದ ಮುದ್ರೆಗಳನ್ನು ಹಾಕುವ ಮೂಲಕ ದೇವದಾಸಿಯರನ್ನಾಗಿ ಮಾಡಲಾಗುತ್ತದೆ. ಸಿರುಗುಪ್ಪ ಮತ್ತು ಹಳೆಕೋಟೆಯಲ್ಲಿ ಬಹುತೇಕರು ಕನಕರಾಯನು ನಮ್ಮ ಮನೆದೇವರು ಎಂದು ತಿಳಿಸಿದರು. ಹಾಗಾಗಿ ಕನಕರಾಯನ ಮುದ್ರೆ ಹಾಕಿಸಿಕೊಳ್ಳುವ ಮೂಲಕ ದೇವರ ಸೇವೆಯಲ್ಲಿ ತೊಡಗಿ ದಾಸಿಯಾಗಿದ್ದಾರೆ. ಮಾದರ ದಾಸರು ಈ ಮುದ್ರೆ ಹಾಕಿಸಿಕೊಂಡಿರುವುದು ಈ ಕ್ಷೇತ್ರದಲ್ಲಿ ಕಂಡುಬರುತ್ತದೆ.

ನವರಾತ್ರಿ ಸಂದರ್ಭದಲ್ಲಿ ಕನಕರಾಯ ಜಾತ್ರೆಯ ಸಮಯದಲ್ಲಿ ದಾಸಯ್ಯನವರು ಹೆಚ್ಚಾಗಿ ಕಂಡುಬರುತ್ತಾರೆ. ಈ ಸಂದರ್ಭದಲ್ಲಿ ವೆಂಕಟೇಶ್ವರನ ಭಕ್ತರು ಹಾಗೂ ಕನಕರಾಯನ ಭಕ್ತರು ದಾಸಯ್ಯನವರನ್ನು ಮನೆಗೆ ಆಹ್ವಾನಿಸುತ್ತಾರೆ. ಆ ಸಂದರ್ಭದಲ್ಲಿ ದೇವರನ್ನು ಹೊತ್ತ ದೇವದಾಸಿ ಮಹಿಳೆಯರು ಪ್ರಮುಖ ಪಾತ್ರ ವಹಿಸುತ್ತಾರೆ.

## ಮೈಲಾರದ ಮೈಲಾರಲಿಂಗ

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನಲ್ಲಿರುವ ಈ ಕ್ಷೇತ್ರವನ್ನು ಆದಿ ಮೈಲಾರ, ಹಿರೇ ಮೈಲಾರ, ಉಂಗ್ಲಾರ ಕ್ಷೇತ್ರ ಹೀಗೆ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಹಾವೇರಿ ಜಿಲ್ಲಾ ಕೇಂದ್ರಕ್ಕೆ ಹತ್ತಿರವಿರುವ ಈ ಕ್ಷೇತ್ರ ಬಳ್ಳಾರಿ ಜಿಲ್ಲೆಯ ಗಡಿಯಲ್ಲಿದೆ. ಈ ಊರಿನಿಂದ ೫ ಕಿಲೋ ಮೀಟರ್ ದೂರದಲ್ಲಿ ಕಪ್ಪತಗುಡ್ಡದ ಶಾಖೆಗಳು ಪೂರ್ವ ಮತ್ತು ಆಗ್ನೇಯ ದಿಕ್ಕಿನಲ್ಲಿ ವ್ಯಾಪಿಸಿವೆ. ಇಲ್ಲಿ ತುಂಗಾಭದ್ರಾ ನದಿ ಉಂಗುರಾಕಾರವಾಗಿ ಸುತ್ತುವರಿದಿರುವುದರಿಂದ ಇದಕ್ಕೆ ಉಂಗ್ಲಾರ ಕ್ಷೇತ್ರ ಎಂಬ ಹೆಸರು ಬರಲು ಕಾರಣವಾಗಿದೆ. ಉಂಗುಲಾಲ ಕ್ಷೇತ್ರ ಎಂಬ ಹೆಸರು ಶಾಸನಗಳಲ್ಲಿ ಕೂಡ ಕಂಡುಬರುತ್ತದೆ. ಪುರಾಣದ ಆಧಾರದಲ್ಲಿ ಮೈಲಾರ ಶಬ್ದದ ಉತ್ಪತ್ತಿಯನ್ನು ಹೇಳುವುದಾದರೆ ಮಲ್ಲಾಸುರನ ಬಳಿಕ ಶಿವನು ಆ ಅಸುರನ ಕೋರಿಕೆಯಂತೆ ಮಲ್ಲಾರಿಯಾಗಿ ಈ ಪ್ರದೇಶದಲ್ಲಿ ನೆಲೆಸಿದನು. ಮಲ್ಲಾರಿ ಶಬ್ದವೇ ಆಡು ಭಾಷೆಯಲ್ಲಿ ಮೈಲಾರವಾಗಿರಬಹುದು. ಕಪಿಲ ಮುನಿಗಳು ಸ್ವಯಂಭೂಲಿಂಗದ ಮೇಲಿನ ಹುತ್ತದ ಮಣ್ಣಿನಿಂದ ವಿಗ್ರಹ ಮಾಡಿ ಪೂಜಿಸಿದ್ದರಿಂದ ಮಣ್ಣು ಮೈಲಾರವೆಂದು ಹೆಸರು ಬಂದಿದೆ.

"ಹಗರನೂರು ಶಾಸನದ ಪ್ರಕಾರ ಮೈಲಾರಕ್ಕೆ ಅಮರಗೇರಿ ಎಂಬ ಹೆಸರಿತ್ತಂತೆ. ಅಮರರು ಎಂದರೆ ದೇವತೆಗಳು ಎಂದರ್ಥ. ಹಿಂದೆ ಮಣಿಕಾಸುರನ ಸಂಹಾರಕ್ಕೆಂದು ಶಿವನು ಬಂದಾಗ ಅವನ ಹಿಂದೆ ಏಳುಕೋಟಿ ದೇವಗಣ ಬಂದಿದ್ದ ಉಲ್ಲೇಖ ಪುರಾಣಗಳಲ್ಲಿದೆ" *(ನಾಗರಾಜ ಹೊಸೂರಕರ್ ೨೦೦೮:೪೬)* ಹೀಗೆ ಮೈಲಾರ ಎಂಬ ಪದ ಬರಲು ಕಾರಣಗಳು ಅನೇಕ ಶಾಸನ ಮತ್ತು ಪುರಾಣಗಳು ತಿಳಿಸುತ್ತವೆ. ಪ್ರಸ್ತುತ ಈ ಮೈಲಾರಲಿಂಗ ದೇವಸ್ಥಾನವು ರಾಜ್ಯ ಸರ್ಕಾರದ ಧಾರ್ಮಿಕ ದತ್ತಿ ಇಲಾಖೆಗೆ ಸೇರಿದೆ. ಆದರೆ ಇಲ್ಲಿ ನಡೆಯುವ ಎಲ್ಲ ಕಾರ್ಯಕ್ರಮಗಳು ಒಡೆಯರ ನೇತೃತ್ವದಲ್ಲಿ ನಡೆಯುತ್ತವೆ. ಒಡೆಯರು ಕಪಿಲ ಮುನಿಯ ವಂಶಸ್ಥರೆಂಬ ನಂಬಿಕೆಯೂ ಪರಂಪರಾನುಗತವಾಗಿ ಬಂದಿದೆ. ಈ ಕ್ಷೇತ್ರಕ್ಕೆ ಬರುವ ಎಲ್ಲ ಭಕ್ತರ ಹರಕೆ ತೀರಿಸುವುದು, ಹೊರೆ ಹೊರಿಸುವುದು, ಜಾತ್ರೆ ಹಬ್ಬ–ಉತ್ಸವ ಮೊದಲಾದ ಎಲ್ಲಾ ಕಾರ್ಯಕ್ರಮಗಳಲ್ಲಿ ಒಡೆಯರು ಪ್ರಮುಖವಾಗಿ ಇರುತ್ತಾರೆ. ಇಲ್ಲಿ ಇವರ ಜೊತೆ ಬ್ರಾಹ್ಮಣ ಅರ್ಚಕರು ಈ ದೇವಸ್ಥಾನದ ಪುಜೆ ಪುನಸ್ಕಾರವನ್ನು ನೆರವೇರಿಸುತ್ತಾರೆ. ಅಲ್ಲದೇ ಇಲ್ಲಿ ಗೊರವರು, ಗೊರವಿಯರು, ಕಂಚಾದಿರರು ಸೇರಿದಂತೆ ಇನ್ನೂ ಮುಂತಾದವರು ಧಾರ್ಮಿಕ ವಿಧಿ ಆಚರಣೆಗಳಲ್ಲಿ ನಿಷ್ಟೆಯಿಂದ ಪಾಲ್ಗೊಳ್ಳುತ್ತಾರೆ.

ದಕ್ಷಿಣ ಭಾರತದ ದೇಶಿ ದೈವಗಳಲ್ಲಿ ಮೈಲಾರ ಲಿಂಗನು ಒಬ್ಬನಾಗಿದ್ದಾನೆ. ಸಾಂಸ್ಕೃತಿಕ ಪರಂಪರೆ ಹೊಂದಿರುವ ಮೈಲಾರನನ್ನು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶಗಳಲ್ಲಿ ವಿವಿಧ ಹೆಸರುಗಳಿಂದ ಕರೆಯುವ, ಆರಾಧಿಸುವ ಸಂಪ್ರದಾಯವಿದೆ. ಮಹಾರಾಷ್ಟ್ರದಲ್ಲಿ ಖಂಡೋಬಾ, ಖಂಡೇರಾಯ, ಮೈರಾಳ, ಮೈಳಾರ, ಮಾರ್ತಾಂಡ, ಭೈರವ, ಮಲ್ಹಾರಿ, ಮಲುದೇವ, ಮಲ್ಲೇಶ್ವರ, ಮಲ್ಲುಖಾನ, ಅಜಮತಖಾನ ಎಂಬಿ ಹೆಸರೇ ಹೆಚ್ಚು ಜನಪ್ರಿಯವಾಗಿವೆ. ಕರ್ನಾಟಕದಲ್ಲಿಯೂ ಕೂಡ ಅನೇಕ ಹೆಸರುಗಳಿಂದ ವಿವಿಧ ಪ್ರದೇಶಗಳಲ್ಲಿ ಕಂಡುಬರುತ್ತಾನೆ. ಮೈಲಾರಲಿಂಗ, ವರವಿನ ಮಲ್ಲಯ್ಯ, ಗುಡ್ಡದ ಮಲಯ್ಯ, ಮಲ್ಲಿಕಾರ್ಜುನ, ಮಾರ್ತಾಂಡೇಶ್ವರ, ಮುದಿಮಲ್ಲಯ್ಯ ಎಂಬುದಾಗಿ ಗುರುತಿಸುತ್ತಾರೆ. ಹಾಗೆಯೇ ಆಂಧ್ರ ಪ್ರದೇಶದಲ್ಲಿ ಮಲ್ಲನ್ನ, ಕಟ್ಟಮಲ್ಲನ್ನ, ಮಾಳಚಿ ಪ್ರಿಯಪತಿ, ಮಾಡ ಚಿರಮಣ, ಸಜ್ಜನ, ಪಾರಿಜಾತ, ಮಾಯಕಾರಿ ಮಲ್ಲಯ್ಯ, ಮಾಯವಿನೋದಿ, ಭೈರವ, ಮಲ್ಲಿಕಾರ್ಜುನ ಎಂಬ ಅನೇಕ ಹೆಸರುಗಳಿಂದ ಗುರುತಿಸುವರು.

ಹೀಗೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಟ ಹೆಸರುಗಳಿರುವಂತೆ ಈ ಮೈಲಾರನ ಚರಿತ್ರೆ ನಂಬಿಕೆ – ಆಚರಣೆಗಳ ವಿಷಯಗಳಲ್ಲಿಯೂ ಭಿನ್ನವಾದ ಮಾಹಿತಿಗಳು ದೊರೆಯುತ್ತವೆ. ಪ್ರಸ್ತುತ ಅಧ್ಯಯನದಲ್ಲಿಬಳ್ಳಾರಿ ಜಿಲ್ಲೆಯಲ್ಲಿ ಕಂಡು ಬರುವ ಆತನ ನೆಲೆಗಳಲ್ಲಿ ಕಂಡು ಬರುವ ದೇವರಿಗೆ ಬಿಟ್ಟ ದೇವದಾಸಿಯರನ್ನು ಮತ್ತು ಅಲ್ಲಿನ ನಂಬಿಕೆ, ಐತಿಹ್ಯ, ಧಾರ್ಮಿಕ ಆಚರಣೆಗಳ ವಿಷಯಗಳನ್ನು ಚರ್ಚಿಸಲಾಗಿದೆ.

"ಗೊರವರು ಎಂದರೆ ಮೈಲಾರಲಿಂಗ ದೇವರಿಗೆ ಬಿಟ್ಟವರು ಎಂದರ್ಥ, ಅಂದರೆ ಯಲ್ಲಮ್ಮ, ಹುಲಿಗೆಮ್ಮ ದೈವಗಳಿಗೆ ಜೋಗತಿ, ಜೋಗಪ್ಪಗಳನ್ನು ಬಿಟ್ಟಂತಯೇ ಮೈಲಾರಲಿಂಗನಿಗೆ ಬಿಟ್ಟವರು ಗೊರವರು. ಗೊರವರಾಗಲು ಯಾವುದೇ ನಿರ್ಬಂಧಗಳು ಇಲ್ಲ" *(ದಿವಾಕರ್ .ಆರ್:೨೦೧೪:೪೩)*

"ಗೊರವರನ್ನು ಮೇಲ್ವರ್ಗದಲ್ಲಿಯೂ ಕಾಣಬಹುದು. ಆದರೆ ಕೇವಲ ಕೆಳವರ್ಗದವರು ಮಾತ್ರ ಬಿಡುತ್ತಾರೆ. ಕಾರಣ ಇವರು ದೇವರ ಬಸವಿಯರೆಂದು (ದೇವದಾಸಿಯರಿದ್ದಂತೆ) ಗುರುತಿಸಲ್ಪಡುತ್ತಾರೆ. ಗೊರವಿ, ಗೊರವರನ್ನು ದೈವಕ್ಕೆ ಬಿಡುವುದನ್ನು ಹೊರೆ ಹೊರಿಸುವುದು ಎಂದು ಕರೆಯುತ್ತಾರೆ" *(ದಿವಾಕರ್ ಆರ್ ಬಿ:೨೦೧೪:೪೩).*

## ಮೈಲಾರಲಿಂಗನ ಭಕ್ತ ಪರಂಪರೆಯಲ್ಲಿ ಗೊರವ ಗೊರವಿ

ಯಾವುದೇ ದೇವಸ್ಥಾನ ಮತ್ತು ಧಾರ್ಮಿಕ ಕ್ಷೇತ್ರಗಳಿಗೆ ಹಿಂದಿನ ಕಾಲದಿಂದ ಪೂಜಾರಿಗಳು, ಪುರೋಹಿತರು, ಸೇವಕರು, ರಾಜರು ಅಥವಾ ಆಯಾ ಪ್ರದೇಶಗಳ ಮುಖಂಡರು ನೇಮಿಸುತ್ತಿದ್ದರು. ಇವರಿಗೆ ದೇವಾಲಯದಿಂದ ಬರುವ ಕಾಣಿಕೆ ಮೊದಲಾದವುಗಳನ್ನು ಜೀವನೋಪಾಯಕ್ಕೆ ಬೇಕಾಗುವ ರೀತಿಯಲ್ಲಿ ವ್ಯವಸ್ಥೆ ಮಾಡಿದ್ದರು. ಮೈಲಾರಲಿಂಗನಲ್ಲಿ ಪರಂಪರಾನುಗತವಾಗಿ ಬಂದ ಒಡೆಯರು ದೇವಸ್ಥಾನದ ಸಕಲ ಕಾರ್ಯಕ್ರಮಗಳನ್ನು ನೆರವೇರಿಸುತ್ತಿದ್ದರು. ಗೊರವರಿಗೆ ದೀಕ್ಷೆಯನ್ನು ನೀಡುವುದು, ಹೊರೆ ಹೊರೆಸುವುದು, ಭಗವಂತನಿಗೆ ಸಲ್ಲಿಸಬೇಕಾದ ಭಕ್ತಿಯನ್ನು ಸಲ್ಲಿಸುವುದು. ಭಂಡಾರ ಪೂಜೆ ಸಲ್ಲಿಸುವುದು. ಕಾರಣಿಕದ ಸಂದರ್ಭದಲ್ಲಿ ಗೊರವನಿಗೆ ಆದೇಶ ನೀಡುವುದು ಹಾಗೆಯೇ ಇತರೆ ವಿಧಿವಿಧಾನಗಳಿಗೆ ಮೂಲ ಕರ್ತರು ಒಡೆಯರಾಗಿದ್ದಾರೆ.

## ಗೊರವ ಗೊರವಿಯರು

ಮೈಲಾರಲಿಂಗನ ಭಕ್ತ ಪರಂಪರೆಯಲ್ಲಿ ಬರುವ ಮೊದಲ ಸ್ಥಾನ ಗೊರವರದಾಗಿದೆ. ಗಂಡಸರು ಮೈಲಾರನ ಸೇವೆಗೆಂದು ದೀಕ್ಷೆಯನ್ನು ಪಡೆದವರು ಗೊರವರಾದರೆ ಹೆಂಗಸರು, ದೇವರ ಸೇವೆಗೆಂದು ದೀಕ್ಷೆ ಪಡೆದು ಗೊರವಿಯರೆಂದು ಕರೆಸಿಕೊಳ್ಳುತ್ತಾರೆ. ಗೊರವರನ್ನು ಮೈಲಾರನ ಸೈನಿಕರೆಂದು ಹೇಳುವುದುಂಟು. ಮಣಿ, ಮಲ್ಲಾಸುರರ ಸಂಹಾರಕ್ಕೆಂದು ಬಂದ ಏಳು ಕೋಟಿ ಸೈನಿಕರೆ ಗೊರವರಾಗಿ ತಲೆತಲಾಂತರದಿಂದ ಮುಂದುವರಿದವರಾಗಿದ್ದಾರೆ ಎನ್ನಬಹುದು. ಗೊರವರಾಗಲು ಜಾತಿಯ ಯಾವ ಕಟ್ಟುಪಾಡುಗಳೂ ಇಲ್ಲ. ಉಪ್ಪಾರ, ಲಂಬಾಣಿ, ಹರಿಜನ ಗೊರವರಂತೆಯೇ ಬ್ರಾಹ್ಮಣ, ಮುಸಲ್ಮಾನ ಗೊರವರನ್ನು ಕಾಣಬಹುದು. ಆದರೆ ಹೆಚ್ಚಿನ ಸಂಖ್ಯೆಯಲ್ಲಿ ಕುರುಬ ಗೊರವರೇ ಇದ್ದಾರೆ ಎಂದು ಹೇಳಬಹುದು.

"ಗೊರವರಾಗಲು ಇಂತಹುದೇ ಜಾತಿ, ಜನಾಂಗಕ್ಕೆ ಸೇರಿದವರಾಗಿರಬೇಕೆಂಬ ನಿಯಮಾವಳಿಗಳೇನೂ ಇಲ್ಲ. ಆದರೆ ಗುರುಗಳಿಂದ ಕ್ರಮಬದ್ಧವಾಗಿ ದೀಕ್ಷೆ ತೆಗೆದು ಕೊಂಡರೆ ಮಾತ್ರ ಗೊರವರಾಗಲು ಸಾಧ್ಯ. ತಮ್ಮ ಮನೆತನಗಳ ಪರಂಪರೆಯನ್ನು ಮುಂದುವರೆಸುವ ಕಾರಣಕ್ಕೆ ದೀಕ್ಷೆ ತೆಗೆದುಕೊಳ್ಳುವ ಸಂಪ್ರದಾಯ ಒಂದೆಡೆಯಿದ್ದರೆ, ಹರಕೆ ಹೊತ್ತು ಅದರ ಕಾರಣದಿಂದ ಗೊರವರಾಗುವ ಸಂಪ್ರದಾಯ ಇನ್ನೊಂದೆಡೆ" *(ನಾಗರಾಜ ಹೊಸೂರುಕರ್:೨೦೦೮:೬೧).* ಅಲ್ಲದೆ ಮೈಲಾರದೇವರನ್ನು ಮತ್ತು ಭಕ್ತರ ಆಚರಣೆಗಳನ್ನು ನಿಂದಿಸಿದವರು ಕೂಡ ಅದರ ಪರಿಹಾರಕ್ಕಾಗಿ ಈ ದೀಕ್ಷೆಯನ್ನು ಪಡೆದು ನಿಯಮಗಳಿಗೆ ಅನುಗುಣವಾಗಿ ನಡೆದುಕೊಳ್ಳುತ್ತಾರೆ.

ಗೊರವ–ಗೊರವಿ ದೀಕ್ಷೆ ತೆಗೆದುಕೊಳ್ಳುವುದನ್ನು ಹೊರೆಹೊರುವುದು ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಈ ದೀಕ್ಷೆಯನ್ನು ಮದುವೆಯ ಮುಂಚಿತವಾಗಿಯೇ ಪಡೆಯುವುದೇ ಹೆಚ್ಚು. ಕೆಲವರು ಮದುವೆಯ ನಂತರವೂ ಈ ದೀಕ್ಷೆಯನ್ನು ಪಡೆಯುತ್ತಾರೆ. ಒಂದೊಂದು ಕುಟುಂಬಗಳಲ್ಲಿ ತಲೆಮಾರಿನಿಂದ ತಲೆಮಾರಿಗೆ ಈ ಕ್ರಮವನ್ನು ಪಾಲಿಸುವವರು ಇದ್ದಾರೆ. ಗೊರವ ಗೊರವಿಯ ದೀಕ್ಷೆಯನ್ನು ಪಡೆಯುವವರು ಅನೇಕ ಸಿದ್ಧತೆಗಳನ್ನು ಮಾಡಿಕೊಂಡಿರಬೇಕು. ಗೊರವರಾಗುವವರು ಕೆಟ್ಟ ಚಟಗಳಿಂದ ದೂರವಿರಬೇಕು, ಸಕಲ ಜೀವಿಗಳಲ್ಲಿ ದಯೆ ಇರಬೇಕು. ಸಂಸಾರಿಯಾಗಿದ್ದರೂ ನಿತ್ಯ ಕಾಯಕ ನಡೆಸುತ್ತಿದ್ದು, ದೇವರ ಸೇವೆಯಲ್ಲಿ ಭಾಗಿಯಾಗುವ ಅವಕಾಶ ಇವರಿಗಿರುತ್ತದೆ. ಜೊತೆಗೆ ಊರಾಡುವುದು ಇವರ ಮುಖ್ಯ ಕಾರ್ಯವಾಗಿರುತ್ತದೆ. ಆದ್ದರಿಂದ ಕನಿಷ್ಟ ನಾಲ್ಕು ಮನೆಗಳಲ್ಲಿಯಾದರೂ ಅವರು ಭಿಕ್ಷಾಟನೆ ಮಾಡಬೇಕು. ಈ ಎಲ್ಲಾ ನಿಯಮಗಳಿಗೆ ಬದ್ಧರಾಗಿರುವವರು ಮಾತ್ರ ಹೊರೆ ಹೊರಲು ಅರ್ಹರಾಗಿರುತ್ತಾರೆ.

ಗೊರವ–ಗೊರವಿಯರಲ್ಲಿ ಹೊರೆ ಹೊರುವ ಕ್ರಮಕ್ಕೆ ಅನುಗುಣವಾಗಿ ಅನೇಕ ಪ್ರಕಾಗಳಿವೆ. ಮುಖ್ಯವಾಗಿ ನೋಡುವುದಾದರೆ ನಾಯಿ ಗೊರವರು, ಕರಡಿ ಗೊರವರು, ಪಾರಿ ಗೊರವರು, ಮದ್ದಲಿ ಗೊರವರು, ಶಿವಗೊರವರು, ಕಿನ್ನರಿ ಗೊರವರು, ಕುದುರೆ ಗೊರವರು ಎಂದು ಹೆಸರಿಸಬಹುದು. ಇವರಲ್ಲದೆ ಬಿಲ್ಲನವರು, ನಿಶಾನೆಯವರು, ತ್ರಿಶೂಲದವರು, ಕಾಯಿಕೋಲು ಗೊರವರು ಹೀಗೆ ಭಿನ್ನವಾದ ಸೇವೆಗಳನ್ನು ಮಾಡುವ ಗೊರವರಿದ್ದಾರೆ. ಗೊರವಿಯರಲ್ಲಿ ಮುಖ್ಯವಾಗಿ ಮುದ್ರೆಯವರು, ಚವುರದವರು, ಎಲಿಚಂಚಿ ಚವುರದವರು, ಶಿಬಿರದಾಳಿಯವರು ಮತ್ತು ಕಲಾವಂತೆಯರು ಹೀಗೆ ಅನೇಕ ರೀತಿಯ ಗೊರವಿಯರಿದ್ದಾರೆ.

ಗೊರವಿಯರು ಗೊರವ ಸಂಪ್ರದಾಯದಂತೆಯೇ ಗೊರವಿಯರಾಗುವ ಸಂದಪ್ರದಾಯವೂ ಮೈಲಾರದಲ್ಲಿದೆ. ಮಹಾರಾಷ್ಟ್ರದಲ್ಲಿ ಇವರನ್ನು ಮುರಳಿಯರು ಎಂದು ಕರೆಯುತ್ತಾರೆ. ಗೊರವಿಯರೂ ಕೂಡ ಕ್ರಮಬದ್ಧವಾಗಿ ದೀಕ್ಷೆಗೆ ಒಳಪಟ್ಟು ತಮ್ಮನ್ನು ತಾವು ದೇವರ ಸೇವೆಯಲ್ಲಿ ತೊಡಗಿಸಿಕೊಳ್ಳುತ್ತಾರೆ. ಗೊರವರು ತಲೆಗೆ ಮುಂಡಾಸು ಧರಿಸುತ್ತಾರೆ. ಗೊರವಿಯರಲ್ಲಿ ಹೆಚ್ಚಾಗಿ ಕಂಬಳಿಯ ಕುಲಾವಿ ಧರಿಸುವರೇ ಇದ್ದಾರೆ. ಇದರಲ್ಲಿ ಅಷ್ಟೇನೂ ವ್ಯತ್ಯಾಸಗಳು ಕಂಡುಬರುವುದಿಲ್ಲ. ಗೊರವರು ಹೊಂದಿರುವ ಸಲಕರಣೆಗಳನ್ನು ಇವರು ಹೊಂದಿರುತ್ತಾರೆ. ಆದರೆ ಚವುರದ ಹಾಗೂ ಎಲಿಚೆಂಚಿ ಗೊರವಿಯರು ಸಾಮಾನ್ಯ ಸ್ತ್ರೀಯರಂತೆ ಇದ್ದು ಹಸಿರು ಸೀರೆ, ಹಸಿರು ರವಿಕೆ ಮತ್ತು ಹಸಿರು ಬಳೆಗಳನ್ನು ಹಾಕಿಕೊಂಡು ತಮ್ಮ ಸೇವೆಯಲ್ಲಿ ಮುಖ್ಯವಾದ ಎಲಿಚೆಂಚಿ(ಚೀಲ) ಹಾಗೂ ಚವುರಗಳನ್ನು ಹಿಡಿದಿರುತ್ತಾರೆ. ಇವರ ಬಗಲಲ್ಲಿ ಜೋಳಿಗೆಯು ಯಾವಾಗಲೂ ಇದ್ದೇ ಇರುತ್ತದೆ.

**ಗೊರವಿಯರ ದೀಕ್ಷೆ**

ಮೈಲಾರಲಿಂಗನ ಸೇವೆಯಲ್ಲಿ ತೊಡಗಿಕೊಳ್ಳಲು ದೀಕ್ಷೆಯನ್ನು ಪಡೆಯಬೇಕಾಗುತ್ತದೆ. ಇದನ್ನು ಹೊರೆ ಹೊರುವುದು ಎಂದು ಕರೆಯುತ್ತಾರೆ. ಈ ದೀಕ್ಷಾ ಕಾರ್ಯವನ್ನು ಮೈಲಾರದಲ್ಲಿ ಒಡೆಯರೇ

ನೆರವೇರಿಸಬೇಕಾಗುತ್ತದೆ. ಒಂದು ವೇಳೆ ಅವರು ಇಲ್ಲದ ಸಂದರ್ಭದಲ್ಲಿ ಗೊರವಪ್ಪ ಅಥವಾ ಗಣಾಚಾರಿ ಅಥವಾ ಭಂಡಾರಿಯವರು ಈ ಕಾರ್ಯವನ್ನು ನಿರ್ವಹಿಸುತ್ತಾರೆ.

ದೀಕ್ಷೆಯನ್ನು ಹೊಂದುವ ವ್ಯಕ್ತಿಯ ಮನೆಯನ್ನು ಶುದ್ಧಗೊಳಿಸುತ್ತಾರೆ. ನಂತರ ದೀಕ್ಷೆ ಪಡೆಯುವ ಮಹಿಳೆಗೆ ಮುತ್ತೈದೆಯರು ಸೇರಿ ಸ್ನಾನ ಮಾಡಿಸಿ ಹೊಸ ಬಟ್ಟೆ ಧರಿಸಿ ಸಿದ್ಧ ಮಾಡುತ್ತಾರೆ. ಅವಳಿಗೆ ಎಲೆ, ಅರಿಶಿಣ ಕೊಂಬುಗಳ ಕಂಕಣವನ್ನು ಕಟ್ಟುತ್ತಾರೆ. ಅದೇ ರೀತಿ ಈ ಕಾರ್ಯದಲ್ಲಿ ಭಾಗಿಯಾಗುವ ಗೊರವ ಗೊರವಿಯರು ಹಾಗೂ ಇತರರು ಕಂಕಣವನ್ನು ಕಟ್ಟಿಸಿಕೊಳ್ಳುತ್ತಾರೆ. ಅಲ್ಲಿ ಸೇರಿದವರು ಮೈಲಾರನ ಸ್ತುತಿ ಹಾಡುಗಳನ್ನು ಹಾಡುತ್ತಾರೆ. ಗೊರವಿಯ ಸಲಕರಣೆಗಳನ್ನು ತೆಗೆದುಕೊಂಡು ಕಳಸದೊಡನೆ ದೇವಸ್ಥಾನಕ್ಕೆ ಬರುತ್ತಾರೆ. ಎಲ್ಲರೂ ಸೇರಿ ದೇವಸ್ಥಾನಕ್ಕೆ ಪ್ರದಕ್ಷಿಣೆ ಹಾಕಿ ಬರುತ್ತಾರೆ. ದೀಕ್ಷೆ ತೆಗೆದುಕೊಳ್ಳುವರು ಮತ್ತು ನೀಡುವವರು ಒಡೆಯರಿಗೆ ಕಾಣಿಕೆ ನೀಡಿ ನಮಸ್ಕರಿಸಿ ಕುಳಿತುಕೊಳ್ಳುತ್ತಾರೆ. ಅವಳ ಜೊತೆಯಲ್ಲಿ ಎಲ್ಲಿ ಸಲಕರಣೆಗಳನ್ನು (ಚವುರ, ಎಲಿಚೆಂಚು ಇತರೆ) ಇಟ್ಟು ಪೂಜಿಸುತ್ತಾರೆ. ಅವರ ಕೊರಳಿಗೆ ಎರಡು ಕವಡೆಗಳನ್ನು ದಾರದಲ್ಲಿ ಪೋಣಿಸಿ ಕಟ್ಟುತ್ತಾರೆ. ಕಟ್ಟಿದ ನಂತರ ದೀಕ್ಷೆಯನ್ನು ಪಡೆದವರಿಗೆ ಒಡೆಯರು ಅವರು ಪಾಲಿಸಬೇಕಾದ ನಿಯಮ ಹೇಳಿಸಿ ಪ್ರತಿಜ್ಞೆ ಮಾಡಿಸುತ್ತಾರೆ. ಇವರಿಗೆ ದೀಕ್ಷೆ ಕೊಡುವ ಸಂದರ್ಭದಲ್ಲಿ ಚಾಮರ ಹೂವಿನಿಂದ ಮಾಡಿದುದಾಗಿರುತ್ತದೆ. ನಂತರದಲ್ಲಿ ನಮ್ಮ ಮನೆತನದಲ್ಲಿ ಬಂದಿರುವ ಹಳೆಯ ಚವರಿಯನ್ನು ಬಳಸುವರು. ಒಂದು ವೇಳೆ ಹೊಸದಾಗಿ ಅಂದರೆ ಈ ಮೊದಲು ಅವರ ಮನೆತನದಲ್ಲಿ ಯಾರು ಇಲ್ಲದಿದ್ದಲ್ಲಿ ಬೇರೆ ಇನ್ನೊಂದು ಚವರನ್ನು ಹೊಸದಾಗಿ ಮಾಡಿಸಿಕೊಳ್ಳುತ್ತಾರೆ.

**ಚಾವುರ ಗೊರವಿ**

ಚಾವುರ ಹೊತ್ತು ಗೊರವಿಯು ಕೆಲವೊಮ್ಮೆ ಮುಳ್ಳಾವಿಗೆ ಮೇಲೆ ನಿಂತು ಸೇವೆ ಸಲ್ಲಿಸುದಾಗಿ ಹರಕೆ ಹೊತ್ತಿದ್ದರೆ ಅವರು ಒಂದು ಜೊತೆ ಮುಳ್ಳಿನ ಆವುಗೆ(ಪಾದುಕೆ)ಯನ್ನು ತಮ್ಮ ಜೊತೆಯಲ್ಲಿ ಇಟ್ಟುಕೊಂಡಿರುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ದೇವರ ಪಕ್ಕದಲ್ಲಿ ಇವನ್ನು ಇಟ್ಟು ಅವುಗಳ ಮೇಲೆ ನಿಂತು ಚವುರ ಬೀಸಿ ತಮ್ಮ ತಮ್ಮ ಸೇವೆಯನ್ನು ಸಲ್ಲಿಸುತ್ತಾರೆ. ಅಲ್ಲದೆ ಮುಂದೆ ಹೊರಗೆ ಹೋಗುವಾಗಲೂ ಕೂಡ ತಮ್ಮ ಮುದ್ರೆಯೊಡನೆ ಮುಳ್ಳಾವಿಗೆಯನ್ನು ಕೂಡ ಕೊಂಡ್ಯೊಯ್ಯುತ್ತಾರೆ.

**ಎಲಿಚೆಂಚು ಗೊರವಿ**

ಜಾತ್ರೆ, ಹಬ್ಬ ಉತ್ಸವದ ಸಂದರ್ಭಗಳಲ್ಲಿ ಎಲಿಚೆಂಚಿ ಗೊರವಿಯರು "ದೇವರಿಗೆ ವೀಳ್ಯ(ಎಲಿ–ಅಡಿಕೆ) ಅರ್ಪಿಸುವ ಸೇವೆ ನಡೆಸುವರು. ದೇವರು ಪಲ್ಲಕ್ಕಿಯಲ್ಲಿ ಕುಳಿತು ದೇವಸ್ಥಾನಕ್ಕೆ ಹೋಗುವಾಗ ಅದರ ಜೊತೆ ಚಾಮರ ಬೀಸುತ್ತಾ ಇವರು ಹೋಗುತ್ತಾರೆ. ನಡು ನಡುವೆ ಕೊಬ್ಬರಿ, ಪತ್ರೆ ಜಾಜಿಕಾಯಿ ಮೊದಲಾದವುಗಳೊಡನೆ ಸೇರಿಸಿದ ಎಲೆ ಅಡಿಕೆಗಳನ್ನು ಈ ಎಲಿಚಂಚಿ ಗೊರವಿಯರು ಮೈಲಾರಲಿಂಗನಿಗೆ ಸಲ್ಲಿಸುತ್ತಾರೆ. ಈ ಗೊರವಿಯರು ಕೆಲವು ಸಂದರ್ಭಗಳಲ್ಲಿ "ದೇವರು ಗಂಗಿಮಾಳಮ್ಮನ ಶಯ್ಯಾಮಂಚ ಪ್ರವೇಶಿಸಿ ರಾತ್ರಿಯನ್ನು ಅಲ್ಲಿಯೇ ಕಳೆಯುತ್ತಾನೆ" (ನಾಗರಾಜ ಹೊಸೂರುಕರ್:೨೦೦೮:೭೨). ಆ ಸಂದರ್ಭದಲ್ಲಿ ಈ ಎಲಿಚೆಂಚಿ ಗೊರವಿಯರು ಬೀಡಾಗಳಂತೆ

ಅಲ್ಲಿರುವ ಎಲೆ–ಅಡಿಕೆ, ಪತ್ರಿ, ಸುಣ್ಣ, ಕೊಬ್ಬರಿಗಳನ್ನು ಸೇರಿಸಿ ಸುರುಳಿ ಸುತ್ತಿ ತಟ್ಟೆಯಲ್ಲಿ ಇಟ್ಟು ಅಲಂಕಾರ ಮಾಡುತ್ತಿದ್ದರು. ಅವುಗಳ ಮೇಲೆ ಸುಣ್ಣದ ನೀರನ್ನು ಚುಮುಕಿಸುತ್ತಿದ್ದರು. ಬೆಳಿಗ್ಗೆ ಬಂದು ನೋಡಿದಾಗ ಆ ಎಲ್ಲಾ ಸುರುಳಿ ಸುತ್ತಿರುವ ಬೀಡಾಗಳು ಎಂಜಲಾಗಿರುತ್ತವೆ. ಅವುಗಳನ್ನು ಈ ಎಲಿಚೆಂಚಿ ಗೊರವಿಯರು ಪ್ರಸಾದದಂತೆ ಸ್ವೀಕರಿಸುವರು. ಸಾಮಾನ್ಯವಾಗಿ ಹೊರೆ ಹೊತ್ತ ಗೊರವಿಯರು ಗೃಹಿಣಿಯರಾಗಿರುತ್ತಾರೆ. ಅವರ ಗಂಡ ಮರಣ ಹೊಂದಿದ ನಂತರ ಅವರು ಮೈಲಾರಲಿಂಗಪ್ಪನೇ ತಮ್ಮ ಗಂಡನೆಂದು ಭಾವಿಸಿಕೊಂಡು ಸೇವೆಯನ್ನು ಸಲ್ಲಿಸುವರು. ಇವರಲ್ಲಿ ಕೆಲವರು ಮೊದಲಿನ ತಾಳಿ ತೆಗೆದು ಶಿಬಿರದಾಳಿ ಕಟ್ಟಿಕೊಳ್ಳುತ್ತಾರೆ.

**ಗೊರವಿಯರ ನಿಯಮಗಳು**

- ಸುಳ್ಳಾಡದಿರುವುದು
- ಹಸಿವಾಗಿದೆ ಎಂದು ಹೇಳಿದ ಬೇರೆಯವರಿಗೆ ಊಟ ಹಾಕುವುದು
- ನ್ಯಾಯದಿಂದ ನಡೆಯುವುದು
- ಹೊಲದಲ್ಲಿ ಹಸು ಮೇಯುತ್ತಿದ್ದರೆ ಅದನ್ನು ಓಡಿಸದಿರುವುದು
- ಕರು ಹಾಲು ಕುಡಿಯುತ್ತಿದ್ದರೆ ಅದನ್ನು ಬಿಡಿಸದಿರುವುದು
- ಸರ್ಪವನ್ನು ಸಾಯಿಸದಿರುವುದು
- ರವಿವಾರ ಮತ್ತು ಗುರುವಾರಗಳಂದು ಉಪವಾಸವಿದ್ದು ದೇವರ ಸೇವೆ ಮಾಡುವುದು

ಆದರೆ ಇತ್ತೀಚೆಗೆ ಕೆಲವರು ತಮ್ಮ ಮನೆತನದ ಸಂಪ್ರದಾಯವನ್ನು ಮುಂದುವರೆಸುವ ದೃಷ್ಟಿಯಿಂದ ಮಾತ್ರ ಹೊರೆ ಹೊರುವ ಸಂಪ್ರದಾಯವನ್ನು ಪಾಲಿಸುವರೇ ವಿನಃ, ನಿಷ್ಠೆಯಿಂದ ಪಾಲಿಸುವ ಉದ್ದೇಶ ಹೊಂದಿರುವವರು ಕಡಿಮೆ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಹಾಗೆಯೇ ಮೈಲಾರ ದೇವರ ಸೇವೆಗೆ ಸಂಬಂಧಿಸಿದಂತೆ ಅನೇಕ ವೈವಿಧ್ಯಮಯವಾದ ಸೇವೆಗಳಿವೆ. ಆದರೆ ಕಾಲಾನಂತರದಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಜನರ ನಂಬಿಕೆಗಳೂ ಕೂಡ ಬದಲಾಗುತ್ತಿವೆ.

**ಆಂಜನೇಯ ಸ್ವಾಮಿ**

ಬಳ್ಳಾರಿ ಜಿಲ್ಲೆಯ ಅನೇಕ ಪ್ರದೇಶಗಳಲ್ಲಿ ಆಂಜನೇಯ ಸ್ವಾಮಿಯ ದೇವಾಲಗಳು ಕಂಡುಬರುತ್ತವೆ. ಬಳ್ಳಾರಿ, ಕಡಲಬಾಳು, ಕೂಡ್ಲಿಗಿ, ಮರಿಯಮ್ಮನಹಳ್ಳಿ, ಕಲ್ಲುಕಂಬ, ಮೊರಿಗೇರಿ, ಹರಗನೂರು ಮುಂತಾದ ಪ್ರದೇಶಗಳಲ್ಲಿ ಆಂಜನೇಯ ದೇವಾಲಯಗಳು ಕಂಡು ಬರುತ್ತವೆ. ಈ ದೇವರ ಹೆಸರಿನಲ್ಲಿ ಬಸವಿ ಬಿಡುವ ಸಂಪ್ರದಾಯ ಬಹಳ ಹಿಂದಿನ ಕಾಲದಿಂದ ಕಂಡುಬರುತ್ತದೆ. ವಿಜಯನಗರದ ಕಾಲದಿಂದಲೂ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಆಂಜನೇಯನ ಹೆಸರಿನಲ್ಲಿ ಹೆಣ್ಣುಮಕ್ಕಳನ್ನು ದೇವದಾಸಿಯರನ್ನಾಗಿ ಬಿಡುವುದುಂಟು. ಶಂಖ ಮತ್ತು ಚಕ್ರದ ಮುದ್ರೆ ಹಾಕುವ ಮುಖಾಂತರ ಹೆಣ್ಣುಮಕ್ಕಳನ್ನು ದೇವರಿಗೆಂದು ಮೀಸಲಿರಿಸುತ್ತಾರೆ.

ಹಡಗಲಿ ತಾಲೂಕಿನ ಆಂಜನೇಯ ಸ್ವಾಮಿಯ ಜಾತ್ರೆಯ ಸಂದರ್ಭದಲ್ಲಿ "ಆಂಜನೇಯ ಸ್ವಾಮಿ ಹೆಸರಿನಲ್ಲಿ ಭಕ್ತರಿಗೆ ಭುಜದ ಎಡಬಲ ಭಾಗಗಳಲ್ಲಿ ಶಂಖ ಮತ್ತು ಚಕ್ರದ ಮುದ್ರೆ ಹಾಕುತ್ತಾರೆ. ಇವರನ್ನು ದಾಸ ದಾಸಿಯರೆಂದು ಕರೆಯುತ್ತಾರೆ" (ಸಿದ್ಧೇಶ್ವರಿ ಎ.ಎಸ್:೨೦೧೪:೯೦). ಮರಿಯಮ್ಮನಹಳ್ಳಿಯಲ್ಲಿ ರಾಮನವಮಿಯಂದು ಆಂಜನೇಯನ ಜಾತ್ರೆ ನಡೆಯುತ್ತದೆ. ಅಲ್ಲಿ ಈ ಹಿಂದೆ ಹೆಣ್ಣು ಮಕ್ಕಳಿಗೆ ಮುದ್ರೆ ಹಾಕುವ ಮೂಲಕ ದೇವದಾಸಿಯರನ್ನಾಗಿ ಮಾಡುತ್ತಿದ್ದರು. ಪ್ರಸ್ತುತ ಈ ಆಚರಣೆಯು ಪ್ರತಿವರ್ಷ ಗಂಡುಮಕ್ಕಳಿಗೆ ಮುದ್ರೆ ಹಾಕುವದನ್ನು ಕಾಣುತ್ತೇವೆ. ಹೀಗೆ ಮುದ್ರೆ ಹಾಕಿಸಿಕೊಂಡ ಬಸವಿ ಹೆಣ್ಣುಮಕ್ಕಳನ್ನು ಓಕುಳಿ ಆಟಗಳಲ್ಲಿ ಬಳಸುತ್ತಿದ್ದರು. ಪ್ರಸ್ತುತ ಓಕುಳಿ ಆಟಗಳು ಕಂಡುಬರುವುದಿಲ್ಲ.

ವಿಜಯನಗರಕ್ಕೆ ಭೇಟಿ ನೀಡಿದ ಬಹುಪಾಲು ವಿದೇಶಿ ಪ್ರವಾಸಿಗರು ಅಲ್ಲಿರುವ ದೇವ ಸ್ತ್ರೀಯರ ಕುರಿತು ಉಲ್ಲೇಖಿಸುತ್ತಾರೆ. "ಹನುಮಂತ ದೇವರ ದೇವಾಲಯಕ್ಕೆ ಬಸವಿ ಬಿಡುವ ಸಂಪ್ರದಾಯಕ್ಕೆ ಸಾಂಸ್ಕೃತಿಕ ಚಹರೆಗಿಂತಲೂ ವ್ಯಾವಹಾರಿಕ ಚಹರೆ ಇದೆ. ಇದಕ್ಕೆ ಜೋಗತಿ ಸಂಪ್ರದಾಯಕ್ಕಿರುವ ಪ್ರಬಂಧ ಪೌರಾಣಿಕ ಹಿನ್ನೆಲೆಯಲ್ಲಿ"(ಶೈಲಜ ಹಿರೇಮಠ: ೨೦೦೩:೬೩). ಜೋಗತಿ ಸಂಪ್ರದಾಯಕ್ಕೆ ರೇಣುಕ ಎಲ್ಲಮ್ಮ ಮತ್ತು ಹುಲಿಗೆಮ್ಮ ದೇವತೆಗಳ ಪೌರಾಣಿಕ ಹಿನ್ನಲೆ ದೊರೆಯುತ್ತದೆ. ಆಂಜನೇಯ ಅಥವಾ ಹನುಮಂತ ದೇವರಿಗೆ ಹೆಣ್ಣುಮಕ್ಕಳನ್ನು ಈ ರೀತಿಯ ಮುದ್ರೆ ಹಾಕುವ ಮೂಲಕ ಬಿಡುತ್ತಾರೆ. ೧. ಗಟ್ಟಿಮುದ್ರೆ, ೨. ಹೂಮುದ್ರೆ. ಆಂಜನೇಯ ಅವರ ಮನೆ ದೇವರಾಗಿರುತ್ತಾನೆ. ಈ ದೇವರ ಮುದ್ರೆ ಹಾಕಿಸಿದರೆ ಹೆಣ್ಣು ಮಕ್ಕಳು ನಮ್ಮ ವಂಶಕ್ಕೆ ಸೇರಿದರೂ ಹಾಗಾಗಿ ಅವರಿಗೆ ವಿವಾಹ ಮಾಡಿ ಕಳುಹಿಸುವಂತಿಲ್ಲ. ಅವರು ಆಂಜನೇಯ ದೇವರನ್ನು ವಿವಾಹವಾದಂತೆ ಎಂಬ ನಂಬಿಕೆ ಇದೆ. ಮುದ್ರೆ ಹಾಕಲು ಬೇಕಾದ ಬೆಂಕಿಯನ್ನು ಹುಣಸೆ ಚಕ್ಕೆಗೆ ಬೆಂಕಿ ಹಚ್ಚಿ ಮುದ್ರೆಯನ್ನು ಬಿಸಿಮಾಡುತ್ತಾರೆ. ಕಾರಣ ಅದು ಹೆಚ್ಚಿನ ಶಾಖ ಹೊಂದಿರುತ್ತದೆ. ಮತ್ತೊಂದು ಕಾರಣ ಅದರಲ್ಲಿ ರೋಗ ನಿರೋಧಕ ಶಕ್ತಿ ಹೆಚ್ಚಿರುತ್ತದೆ ಎಂಬ ನಂಬಿಕೆಯೂ ಇದೆ. ಹೀಗೆ ಆಂಜನೇಯ ದೇವರಿಗೆ ಬಿಟ್ಟವರು ಪಾಲಿಸಬೇಕಾದ ಕೆಲವು ನಿಯಮಗಳನ್ನು ಬೋಧಿಸುತ್ತಾರೆ. ಅವುಗಳೆಂದರೆ,

- ಪ್ರತಿ ಶನಿವಾರ ಉಪವಾಸವಿರಬೇಕು
- ಸುಳ್ಳು ಹೇಳಬಾರದು
- ಹಸಿದು ಬಂದವರಿಗೆ ಅನ್ನ, ನೀರು ಕೊಡಬೇಕು
- ನಿರಾಶ್ರಿತರಾದವರಿಗೆ ಆಶ್ರಯ ನೀಡಬೇಕು
- ಯಾರಾದರೂ ಬೈದರೆ ಹೊಡೆದರೆ ತಿರುಗಿ ಉತ್ತರ ಕೊಡಬಾರದು
- ಬೇರೆಯವರ ಎಂಜಲನ್ನು ತಿನ್ನಬಾರದು
- ಸಾವಿನ ಸುದ್ದಿ ತಿಳಿದ ನಂತರ ಊಟ ಮಾಡಬಾರದು

ಹೀಗೆ ನಿಯಮಗಳನ್ನು ಬೋಧಿಸಿ ಜೀವನ ಪೂರ್ತಿ ಇವುಗಳನ್ನು ಪಾಲಿಸಿಕೊಂಡು ಹೋಗಬೇಕೆಂದು ಹೇಳುತ್ತಾರೆ. ಬ್ರಹ್ಮಚಾರಿಯಾದ ಹನುಮಂತನ ಹೆಸರಿಗೆ ಏಕೆ ಹೆಣ್ಣುಮಕ್ಕಳನ್ನು

ಬಿಡುತ್ತಾರೆ ಎಂಬ ಪ್ರಶ್ನೆ ಉಂಟಾಗುತ್ತದೆ. "ಹಂಪಿ ಪರಿಸರದಲ್ಲಿ ಹೆಚ್ಚಾಗಿ ಹನುಮಪ್ಪನ ಗುಡಿಗಳಲ್ಲಿ ಮುತ್ತು ಕಟ್ಟುತ್ತಿದ್ದರು. ಲಂಕೆಯನ್ನು ಸುಟ್ಟು ಸೀತೆಯನ್ನು ಕಾಪಾಡಿದವ ನಮ್ಮನ್ನು ಕಾಪಾಡುತ್ತಾನೆಂಬ ಆಶಯ ದೇವದಾಸಿ ಮಹಿಳೆಯರಲ್ಲಿತ್ತು. ಇಂತಹ ನಂಬಿಕೆಗಳು ಅಂದಿನ ಹನುಮಪ್ಪನ ಉತ್ಸವಗಳಲ್ಲಿ ಸೇವಕಿಯರಾಗಿ ಪಾಲ್ಗೊಳ್ಳಲು ಕಾರಣವಾಗಿವೆ. ಆಚರಣೆಯ ಮೂಲಕ ದೇವದಾಸಿಯರಿಗೆ ನೀಡಿದ ಮನ್ನಣೆ ಖಂಡನಾರ್ಹವಾದುದು. ಹಿಂದೆ ದೇವದಾಸಿ ಸಂಪ್ರದಾಯ ಧಾರ್ಮಿಕ ಶ್ರದ್ಧೆ ಮತ್ತು ಮಾತೃ ದೇವತಾರಾಧನೆಯ ಹಿನ್ನಲೆಯಲ್ಲಿ ಬೆಳೆದು ಬಂದಿತ್ತು. ಇಂದು ಇದು ಆರ್ಥಿಕ ದುಸ್ಥಿತಿ, ಮನೆತನದ ಪದ್ಧತಿ ಹಾಗೂ ಕಾಣದ ಕೈಗಳ ಒತ್ತಡಕ್ಕೆ ಸಿಲುಕಿ ಅನಿಷ್ಟ ಪದ್ಧತಿಯಾಗಿ ಪರಿಣಮಿಸಿದೆ" *(ಸಿದ್ಧೇಶ್ವರಿ ಎ. ಎಸ್: ೨೦೧೪:೧೩೪-೧೩೫).* ಪ್ರಸ್ತುತದಲ್ಲಿ ದೇವದಾಸಿಯರನ್ನು ಕೇಳಿದರೂ ಇದೇ ಉತ್ತರವನ್ನು ನೀಡುತ್ತಾರೆ. ಮತ್ತೊಂದು ಹನುಮಪ್ಪನಿಗೆ ಹೆಂಡತಿ ಇಲ್ಲ. ಹಾಗಾಗಿ ಚೆನ್ನಾಗಿ ನೋಡಿಕೊಳ್ಳುತ್ತಾನೆ ಎಂದು ಮುದ್ರೆ ಹಾಕಿಸಿಕೊಂಡು ದೇವದಾಸಿ ಮಹಿಳೆಯರು ಹೇಳಿದ್ದಾರೆ.

ಪ್ರಸ್ತುತದಲ್ಲಿ ಆಂಜನೇಯ ದೇವರಿಗೆ ಬಿಟ್ಟಿರುವ ದೇವದಾಸಿ ಮಹಿಳೆಯರನ್ನು ಬಳ್ಳಾರಿ ಜಿಲ್ಲೆಯ ಅನೇಕ ಪ್ರದೇಶಗಳಲ್ಲಿ ಕಾಣಲಾಗುವುದು. ಹೆಚ್ಚಿನ ಸಂಖ್ಯೆಯಲ್ಲಿ ಅಂದರೆ ಹೊಸಪೇಟೆ, ಕೂಡ್ಲಿಗಿ, ಮರಿಯಮ್ಮನಹಳ್ಳಿ, ಬೊಮ್ಮನಹಳ್ಳಿ, ಮಲಪನಗುಡಿ, ಕಮಲಾಪುರಗಳಲ್ಲಿ ಕಾಣಲಾಗುತ್ತದೆ. ಈ ದೇವರ ಹೆಸರಿನಲ್ಲಿ ದೇವದಾಸಿ ಬಿಟ್ಟಿರುವ ಸಮುದಾಯಗಳೆಂದರೆ ನಾಯಕರು ಮತ್ತು ಮಾದಿಗರು ಮುಂತಾದವರು. ಪರಿಶಿಷ್ಟ ಜಾತಿ ಮತ್ತು ಪಂಗಡದ ಸಮುದಾಯದವರೆ ಹೆಚ್ಚಾಗಿ ಆಂಜನೇಯನಿಗೆ ಮುದ್ರೆ ಹಾಕಿಸಿಕೊಂಡವರು ಕಂಡುಬರುತ್ತಾರೆ. ಹಿಂದುಳಿದ ವರ್ಗಗಳಲ್ಲಿ ಮುದ್ರೆ ಹಾಕಿಸಿಕೊಂಡವರನ್ನು ಕಡಿಮೆ ಸಂಖ್ಯೆಯಲ್ಲಿ ಕಾಣಬಹುದು. ಅದರಲ್ಲಿ ಗಂಗಾಮತಸ್ಥರಲ್ಲಿ ಈ ಆಂಜನೇಯ ಮುದ್ರೆ ಹಾಕಿಸಿಕೊಂಡವರು ಕಂಡುಬರುತ್ತಾರೆ.

ಆಂಜನೇಯ ದೇವರಿಗೆ ಒಂದು ನಿರ್ದಿಷ್ಟ ಸೀಮೆ ಅಥವಾ ನೆಲೆ ಎಂದು ಹೇಳಲಾಗದು. ಅಂದರೆ ಈಗ ಹುಲಿಗಿ ಕ್ಷೇತ್ರ ಹುಲಿಗೆಮ್ಮ ದೇವರ ನೆಲೆ, ಇಲ್ಲಿಯೇ ಆಕೆಯ ಭಕ್ತರು ಬಂದು ಸೇರುತ್ತಾರೆ. ಇಲ್ಲಿಯೇ ಎಲ್ಲಾ ಆಚರಣೆಗಳನ್ನು ಮಾಡುತ್ತಾರೆ.. ಹಾಗೆಯೇ ಸವದತ್ತಿ ಎಲ್ಲಮ್ಮ, ಮೈಲಾರದ ಮೈಲಾರಲಿಂಗ, ಪೆನ್ನೋಬಳದ ಪೆನ್ನೋಬಳೇಶ್ವರನನ್ನು ವಿವರಿಸಿದಂತೆ ಸೀಮಿತ ಪ್ರದೇಶಕ್ಕೆ ಆಂಜನೇಯ ದೇವರನ್ನು ಹೊಂದಿಸಲಾಗಿಲ್ಲ. ಪ್ರತಿ ಊರಿನಲ್ಲಿಯು ಆಂಜನೇಯನ ದೇವಸ್ಥಾನ ಇರುವುದು ಸಾಮಾನ್ಯ. ಆದರೆ ಕೆಲವು ಪ್ರದೇಶಗಳ ಆಂಜನೇಯ ದೇವಸ್ಥಾನದ ಆಚರಣೆಯಲ್ಲಿ ಮುದ್ರೆ ಹಾಕುವುದು ಸೇರುತ್ತದೆ. ದೇವರಿಗೆ ನಿರ್ದಿಷ್ಟವಾದ ನೆಲೆ ಅಥವಾ ಕ್ಷೇತ್ರವನ್ನಿಟ್ಟುಕೊಂಡು ವಿವರಣೆಯನ್ನು ನೀಡಲಾಗಿಲ್ಲ.

ದೇವರು ಮತ್ತು ಧರ್ಮದ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವುದು ದೇವದಾಸಿ ಪದ್ಧತಿಯಾಗಿದೆ. ದೇವದಾಸಿ ಎಂದರೆ ದೇವರ ಸೇವೆಗಾಗಿ ಮೀಸಲು ಬಿಟ್ಟಿರುವ ಅವಿವಾಹಿತ ಮಹಿಳೆ. ಹೀಗೆ ದೇವರಿಗೆ ಬಿಡಲು ಅನೇಕ ಸಾಮಾಜಿಕ ಮತ್ತು ಧಾರ್ಮಿಕ ಕಾರಣಗಳನ್ನು ಕಾಣುತ್ತೇವೆ. ದೇವದಾಸಿಯಾಗುವುದನ್ನು ಬೇರೆ ಬೇರೆ ಆಯಾಮಗಳಲ್ಲಿ ಕಾಣಬಹುದು. ಪುರುಷ ಸಮಾಜವು ಹೆಣ್ಣುಮಕ್ಕಳನ್ನು ಮಾನಸಿಕವಾಗಿ

ದೇವರ ಸೇವೆಗೆಂದು ಒಪ್ಪಿಕೊಳ್ಳುವಂತೆ ಮಾಡಿ ಅವರನ್ನು ದೈಹಿಕವಾಗಿ ಸೇವಕಿಯರನ್ನಾಗಿ ಮಾಡಿಕೊಂಡಿದೆ. ಹೀಗೆ ಬೇರೆ ಬೇರೆ ದೇವರ ಹೆಸರಿನಲ್ಲಿ ದೇವದಾಸಿಯರನ್ನಾಗಿಸಿ ಬಿಡುತ್ತಾರೆ. ವಿಶೇಷವಾಗಿ ಧಾರ್ಮಿಕ ಕೇಂದ್ರಗಳಲ್ಲಿಯೇ ಇಂತಹ ಪದ್ಧತಿಗಳು ನಡೆಯುತ್ತವೆ. ಇವು ಪ್ರಾದೇಶಿಕವಾಗಿ ಪ್ರಸಿದ್ಧವಾಗಿರುವ ದೇವರುಗಳ ಹೆಸರಿನಲ್ಲಿ ನಡೆಯುವ ಪದ್ಧತಿಯಾಗಿವೆ. ಕಾನೂನು ಬಂದ ನಂತರ ತಮ್ಮ ಮನೆ ಅಥವಾ ಪೂಜಾರಿಯ ಮನೆಯ ಹತ್ತಿರ ದೇವದಾಸಿಯಾಗಿ ಬಿಡುವ ಆಚರಣೆಯನ್ನು ಕಾಣಬಹುದು. ಇಲ್ಲಿ ಪ್ರಮುಖವಾಗಿ ಹೆಣ್ಣು ಮತ್ತು ಗಂಡು ದೇವರಿಗೆ ಬಿಟ್ಟಿರುವುದನ್ನು ಬಳ್ಳಾರಿ ಜಿಲ್ಲೆಯಲ್ಲಿ ಕಾಣಲಾಗುತ್ತದೆ.

ಧಾರ್ಮಿಕ ಕೇಂದ್ರದ ಮತ್ತು ದೇವರುಗಳಾದ ಹುಲಿಗಿಯ–ಹುಲಿಗೆಮ್ಮದೇವಿ, ಸವದತ್ತಿಯ–ಯಲ್ಲಮ್ಮದೇವಿ, ಉಚ್ಚಂಗಿದುರ್ಗದ–ಉಚ್ಚೆಂಗೆಮ್ಮದೇವಿ, ಉರುಕುಂದಿ–ಈರಣ್ಣ, ತೆಕ್ಕಲಕೋಟೆ–ಮಲ್ಲಯ್ಯ, ಕನಕಗಿರಿ–ಕನಕರಾಯ, ಪೆನ್ನೊಬಳಂ–ಪೆನ್ನೋಬಳೇಶ್ವರ, ಕೂಲಹಳ್ಳಿ–ಗೋಣಿಬಸಪ್ಪ, ಮೈಲಾರ–ಮೈಲಾರಲಿಂಗೇಶ್ವರ ಮತ್ತು ಆಂಜನೇಯ ದೇವರುಗಳಿಗೆ ದೇವದಾಸಿರನ್ನು ಬಿಡುತ್ತಾರೆ.

**ಆಚರಣೆಗಳಲ್ಲಿ ದೇವದಾಸಿಯರ ಪಾತ್ರ**

ಮತಧರ್ಮಗಳಿಗೆ ಸಂಬಂಧಿಸಿದಂತೆ ಅಗೋಚರ ದೈವ ಶಕ್ತಿಗಳನ್ನು ಮಾನವ ನಡೆಸುತ್ತಾ ಬಂದಿರುವ ಮತಾಚಾರ ಮತ್ತು ಕರ್ಮವಿಧಿಗಳನ್ನು ಆಚರಣೆ ಎಂದು ಕರೆಯಲಾಗಿದೆ. ಆಚರಣೆಗಳು ಜಗತ್ತಿನ ಎಲ್ಲಾ ಜನಾಂಗಗಳಲ್ಲಿ, ಧರ್ಮಗಳಲ್ಲಿ ವಿಭಿನ್ನ ರೂಪಗಳಲ್ಲಿ ಗೋಚರಿಸುತ್ತ ಬಂದಿದೆ. ಈ ಆಚಣೆರಗಳೇ ಆಯಾ ಪ್ರದೇಶದ ಜನರ ವೈಶಿಷ್ಟಗಳನ್ನು ತಿಳಿಸುವ ಪ್ರಮುಖ ಅಂಶವಾಗಿಯೂ ಕಂಡು ಬರುತ್ತವೆ. ಇಂತಹ ಆಚರಣೆಗಳು ಹೆಚ್ಚಾಗಿ ಧಾರ್ಮಿಕ ಕ್ಷೇತ್ರದಲ್ಲಿ ಕಂಡು ಬರುವಂತಹುಗಳಾಗಿವೆ. ಧಾರ್ಮಿಕ ಪಾವಿತ್ರದ ಜೊತೆಗೆ ಅತಿಮಾನುಷ ಶಕ್ತಿಗಳ ಭಯವೂ, ಮಿಗಿಲಾದುದೇ. ಆದುದರಿಂದ ಆಚಣೆಗಳನ್ನು ಅತ್ಯಂತ ಶ್ರದ್ದೆಯಿಂದ ನಡೆಸಲಾಗುತ್ತದೆ. ನುಡಿಯಲ್ಲಿ ನಡೆಯಲ್ಲಿ ಸಣ್ಣ ತಪ್ಪಾದರೂ ಅನರ್ಥವಾದೀತೆಂಬ ಅಂಜಿಕೆ ಪ್ರತಿಯೊಂದು ಆಚರಣೆಯ ಹಿನ್ನೆಲೆಯಲ್ಲೂ ಇದ್ದೆ ಇರುತ್ತದೆ. ಉಪವಾಸವಿರುವುದು, ಮೀಸಲುವಸ್ತುಗಳನ್ನು ತೆಗೆದಿಡುವುದು, ಹಿಂದಿನಿಂದ ನಡೆದು ಬಂದ ಪದ್ದತಿಯಲ್ಲಿ ಸ್ವಲ್ಪವೂ ಲೋಪಬರದಂತೆ ಎಚ್ಚರ ವಹಿಸುವುದು, ಸಂಬಂದ ಪಟ್ಟ ವ್ಯಕ್ತಿಯಿಂದಲೇ ಕ್ರಿಯೆಗಳನ್ನು ನಡೆಸುವುದು ಮೊದಲಾದ ಕ್ರಮಗಳನ್ನು ಗಮನಿಸಿದಾಗ ಧಾರ್ಮಿಕ ಬಾಹ್ಯಾಚರಣೆಗಳಾದ ಇವು ಬದುಕಿನಲ್ಲಿ ಎಷ್ಟು ಪ್ರಮುಖ ಪಾತ್ರ ವಹಿಸುತ್ತವೆ ಎಂಬುದು ತಿಳಿದು ಬರುತ್ತದೆ. ಹೀಗೆ ನಡೆಯುವ ಆನೇಕ ಆಚರಣೆಗಳಲ್ಲಿ ದೇವದಾಸಿಯರದ್ದೆ ಪ್ರಮುಖ ಪಾತ್ರ ಇರುವುದನ್ನು ಕಾಣಲಾಗಿದೆ. ದೇವದಾಸಿ ಎಂದರೆ ದೇವರ ಸೇವೆಗಾಗಿ ನೇಮಿಸಲ್ಪಟ್ಟ ಒಬ್ಬ ಅವಿವಾಹಿತ ಹೆಣ್ಣು ಎಂದು ಹೇಳಲಾಗಿದೆ. ದೇವರಿಗೆ ದಾಸಿಯದವಾಳು ಎಂದು ಅರ್ಥವಾಗುತ್ತದೆ. ಹೀಗೆ ಅರ್ಪಣೆಗೊಂಡ ದೇವದಾಸಿಯರ ರೂಪಗಳೆಂದರೆ ಪಾತ್ರದವರು, ಬಸವಿಯರು, ಜೋಗತಿಯರು, ದೇವದಾಸಿಯರೆಂದು ಕರೆಯುತ್ತಾರೆ. ಧಾರ್ಮಿಕ ಕಟ್ಟುಪಾಡುಗಳು ಮೂಡನಂಬಿಕೆ ದೈವಭಕ್ತಿ ಪರಂಪರೆಯ ಹಿನ್ನಲೆಯಲ್ಲಿ ಈ ದೇವದಾಸಿ ಪದ್ಧತಿಯು ಬೆಳೆದುಕೊಂಡು ಬಂದಿದೆ. ದೇವದಾಸಿಯರು ಧಾರ್ಮಿಕ ಆಚಾರಣೆಗಳಾದ ಊರ

ದೇವರ ಜಾತ್ರೆ, ಶಾಕಿ ಅರಿಯುವ ಕಾರ್ಯ, ಮನೆದೇವರು ಮಾಡುವಾಗ, ಜೋಗಪಣತಿ ನೀಡುವಾಗ ಇತರೆ ಅನೇಕ ಕಾರ್ಯಗಳ ಆಚಾರಣೆಗಳಲ್ಲಿ ಇವರ ಪಾತ್ರ ಮಹತ್ವದ್ದಾಗಿದೆ. ಹಿಂದೆ ದೇವದಾಸಿಯರಿಗೆ ಹೆಚ್ಚಿನ ಸ್ಥಾನಮಾನ ಸಾಮಾಜಿಕ ಮನ್ನಣೆಯು ಇತ್ತು. ಇಂದು ಸಾಮಾಜಿಕವಾಗಿ ಮನ್ನಣೆ ಗೌರವದ ಸ್ಥಾನಮಾನ ದೇವದಾಸಿಯರಿಗೆ ಸಿಗುತ್ತಿಲ್ಲ. ಆದರೆ ಅಲ್ಪಸ್ವಲ್ಪವಾಗಿ ಧಾರ್ಮಿಕ ಆಚರಣೆಗಳಲ್ಲಿ ಉಳಿದು ಕೊಂಡಿದೆ ಎಂದು ಹೇಳಬಹುದು.

೧ ಊರ ದೇವತೆಯ ಜಾತ್ರೆ, ೨ ಮನೆ ದೇವರು ಮಾಡುವ ಕಾರ್ಯ, ೩ ಜೋಗಪಣತಿ ನೀಡುವ ಕಾಯ, ೪ ಶಾಕಿ ಹರಿಯುವ ಕಾರ್ಯ, ೫ ಇತರೆ ಸಾಮಾಜಿಕ ಕಾರ್ಯ

ಗ್ರಾಮಿಣ ಪ್ರದೇಶಗಳಲ್ಲಿ ವಿಶೇಷವಾಗಿ ಈ ಆಚರಣೆಯನ್ನು ಮಾಡುತ್ತಾರೆ. ಅವುಗಳ ಕುರಿತಾಗಿ ಈ ಮುಂದಿನಂತೆ ವಿವರಿಸಲಾಗಿವೆ.

**ಊರ ದೇವತೆಯ ಜಾತ್ರೆ**

ಗ್ರಾಮೀಣ ಜೀವನದಲ್ಲಿ ಅನಾದಿ ಕಾಲದಿಂದಲೂ ಹಾಸುಹೂಕ್ಕಾಗಿ ಬೆಳೆದು ಬಂದಿರುವ ಗ್ರಾಮ ದೇವತೆಗಳು ಜನರ ಬದುಕಿನ ಒಂದು ಭಾಗವಾಗಿವೆ. ದೇವತೆಯಿಲ್ಲದೆ ಅವರು ಯಾವುದನ್ನೂ ಆರಂಭಿಸುವುದಿಲ್ಲ. ಗ್ರಾಮ ದೇವತೆಗೆ ಸಂಬಂಧಿಸಿದಂತೆ ಊರ ಎಲ್ಲಾ ಜಾತಿಯ ಜನಕ್ಕೂ ಒಂದೊಂದು ಜವಾಬ್ದಾರಿಯನ್ನು ನೀಡಲಾಗಿರುತ್ತದೆ. ಈ ಜವಾಬ್ದಾರಿಯನ್ನು ಸಂಬಂಧಪಟ್ಟವರು ಅನುವಂಶಿಕವಾಗಿ ನಿರ್ವಹಿಸುತ್ತಾ ಬಂದಿರುತ್ತಾರೆ. ಇಡೀ ಗ್ರಾಮದ ಐಕ್ಯತೆ ಸಾಮರಸ್ಯದ ಜೀವಾಳ ಈ ಗ್ರಾಮದೇವತೆಯಲ್ಲಿ ಆಗಿರುತ್ತದೆ. ಪ್ರತಿಯೊಂದು ಗ್ರಾಮಗಳಲ್ಲಿ ೫ ವರ್ಷಕ್ಕೆ ಅಥವಾ ೩ ವರ್ಷಕ್ಕೆ ಒಮ್ಮೆ ಊರಮ್ಮನ ಜಾತ್ರೆ ಮಾಡುತ್ತಾರೆ. ಇಡೀ ಊರಿಗೆ ಊರೇ ಸಂತೋಷ ಸಂಭ್ರಮದಿಂದ ಕೂಡಿರುತ್ತದೆ. ಊರ ದೇವಿಯ ದೇವಸ್ಥಾನವನ್ನು ಅಲಂಕರಿಸಿ ಹಸಿರು ತೋರಣಗಳಿಂದ ಶೃಂಗರಿಸಿರುತ್ತಾರೆ. ಜಾತ್ರೆಯ ದಿನದಂದು ಇಡೀ ಊರಿನ ಜನರೆಲ್ಲರೂ ಸಿಹಿ ಅಡುಗೆ ಮಾಡುವವರುವ ಮತ್ತು ಕುರಿ, ಕೋಳಿಗಳನ್ನು ಬಲಿ ನೀಡುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ಬೆಳಗ್ಗೆ ಎಲ್ಲಾರೂ ದೇವಿಗೆ ಎಡೆಯನ್ನು ಸಿದ್ಧಮಾಡಿ ಪೂಜೆಗೆ ಸಿದ್ಧರಾಗುತ್ತಾರೆ. ಊರ ದೇವತೆಯ ಜಾತ್ರೆಯಲ್ಲಿ ಮಾದಿಗ ಸಮುದಾಯದವಾರದ್ದು ಹೆಚ್ಚಿನ ಪಾತ್ರ ವಿರುತ್ತದೆ. ಅದರಲ್ಲೂ ವಿಶೇಷವಾಗಿ ಮಾತಂಗಿಯ ಮಕ್ಕಳಾದ ದೇವದಾಸಿಯರೇ ಪ್ರಾಮುಖ್ಯವಾಗಿ ಕಂಡುಬರುತ್ತಾರೆ.

ಊರಮ್ಮನ ಜಾತ್ರೆಯಲ್ಲಿ ಮಾದಿಗ ಸಮುದಾಯದ ದೇವದಾಸಿಯರೇ ಮುಂದಾಳಾಗಿರಲು ಒಂದು ಕಥೆಯನ್ನು ಹೇಳುತ್ತಾರೆ. ಅದೇನೆಂದರೆ- ಹುಲಿಗೆಮ್ಮ ಮತ್ತು ಎಲ್ಲಮ್ಮ ಚೊಚ್ಚಲ ಗರ್ಭಿಣಿಯಾಗಿರುತ್ತಾರೆ. ಅವರಿಗೆ ಉಳ್ಳಗಡ್ಡೆ ಬದನೆಕಾಯಿ ತಿನ್ನುವ ಬಯಕೆ ಇರುತ್ತದೆ. ಆಗ ಎಲ್ಲಕ್ಕೂ ಕಷ್ಟದ ಕಾಲವಾಗಿರುತ್ತದೆ. ಅಂತಹ ಸಂದರ್ಭದಲ್ಲಿ ಇವರು ಒಂದು ತೋಟದಲ್ಲಿ ಉಳ್ಳಗಡ್ಡೆ ಬದನೆಕಾಯಿ ಬೆಳೆದಿರುವುದನ್ನು ನೋಡಿ ತಿನ್ನುವ ಬಯಕೆಯಿಂದ ಇಬ್ಬರು ತೋಟಕ್ಕೆ ಹೋಗಿ ಉಳ್ಳಗಡ್ಡೆ ಬದನೆಕಾಯಿಯನ್ನು ಉಡಿಯಲ್ಲಿ ತುಂಬಿಕೂಂಡು ಬರುತ್ತಾರೆ. ಅವರು ತೋಟದಲ್ಲಿ ಕಳ್ಳತನ

ಮಾಡಿದ್ದಾರೆಂದು ರೈತ ಗಮನಿಸುತ್ತಾನೆ. ಆಗ ದಾರಿಯುದ್ದಕ್ಕೂ ಬಿದ್ದಿರುವುದನ್ನು ನೋಡಿ ಅದರ ಜೊತೆಗೆ ನಡೆದು ಸಾಗುತ್ತಾನೆ ಅವುಗಳ ಗುರುತಿನಿಂದ ಹುಲಿಗೆಮ್ಮ ಎಲ್ಲಮ್ಮ ಇವರೇ ಕದ್ದಿದ್ದಾರೆಂಬ ಸಂಗತಿ ತಿಳಿದ ಆ ರೈತ ಅವರನ್ನು ಶಿಕ್ಷೆಗೆ ಒಳಪಡಿಸುತ್ತಾನೆ. ಅಲ್ಲಿ ಎಲ್ಲಾ ಜಾತಿಯ ಜನರು ನೆರೆದಿರುತ್ತಾರೆ. ಆದರೆ ಯಾರು ಅವರನ್ನು ಬಿಡಿಸೋಕೆ ಬರಲಿಲ್ಲ. ಆಗ ಮಾದಿಗ ಜಾತಿಯ ಮಾತಂಗಿ ಎಂಬ ಹೆಣ್ಣು ಮಗಳು ಅವರ ಶಿಕ್ಷೆಯನ್ನು ತಪ್ಪಿಸಲು ಪ್ರಯತ್ನಿಸಿ ತಾನು ಶಿಕ್ಷೆಗೆ ಗುರಿಯಾಗುತ್ತಾಳೆ. ಅದಕ್ಕಾಗಿ ಅಂದಿನಿಂದ ಯಾವುದೇ ಹೆಣ್ಣು ದೇವತೆಗೆ ಪೂಜೆ ಮಾಡಲು ಮಾತಂಗಿಗೆ ಎಡೆ ಮಾಡಬೇಕು ನಂತರ ಉಳಿದ ದೇವತೆಗಳಿಗೆ ಮಾಡುತ್ತಾರೆ, ಮಾತಂಗಿ ಮಕ್ಕಳಿಲ್ಲದೆ ಪೂಜೆನೇ ನಡೆಯುವುದಿಲ್ಲ ಎಂದು ಹೇಳುತ್ತಾರೆ. ಹೀಗೆ ಇವರು ಕಾರಣಕ್ಕೆ ಊರ ದೇವಿಯ ಜಾತ್ರೆಯಲ್ಲಿ ಮಾಂತಗಿ ಮಕ್ಕಳಾದ ಮಾದಿಗರು ಇರಬೇಕು.

ಆ ದಿನ ಪ್ರತಿ ಮನೆಯಲ್ಲಿ ಸಿಹಿ ಅಡುಗೆ ಮಾಡಿ ಪ್ರತಿ ಮನೆಯಿಂದ ಕಳಸಗಳು, ಕಾಯಿ-ಕರ್ಪೂರ' ತೆಗೆದುಕೊಂಡು ಕೇರಿಯ ಮುಖ್ಯ ದಾರಿಗೆ ಸೇರುತ್ತಾರೆ. ನಂತರ ಅಲ್ಲಿರುವ ದೇವದಾಸಿಯರೆಲ್ಲ ಸೇರಿ ಮುಂದೆ ನಿಂತು ಊದೋ ಆಕಿ ಅವರ ಮೆರವಣಿಯನ್ನು ದೇವಿಯ ದೇವಸ್ಥಾನದಕಡೆಗೆ ನಡೆಸುತ್ತಾರೆ. ಇಲ್ಲಿ ತಮಟೆ ಡೋಳ್ಳು ಹಲಗೆ ಬಡೆಯುತ್ತ ಮೆರವಣಿಗೆ ಮುಂದುವರೆಸುತ್ತಾರೆ. ಇಲ್ಲಿ ದೇವದಾಸಿಯರಿಂದ ಹಾಡುಗಳು ಮತ್ತು ಉದೋ.. ಉದೋ...ಹಾಕುತ್ತಾ ಸಾಗುತ್ತಾರೆ. ಅಲ್ಲಿ ದೇವಸ್ಥಾನದ ಹತ್ತಿರ ಮಾತಂಗಿ ಮಕ್ಕಳ ದೇವದಾಸಿಯರ ಪಡ್ಲಿಗೆ ತೊಳೆದು ಕಂಬಳಿಯನ್ನು ಮದುವೆ ಕಾರ್ಯದಲ್ಲಿ ಹಾಸಿದಂತೆ ಹಾಸಿ ಹರಿಶಿಣ, ಕುಂಕುಮ, ಹೂ, ಹಣ್ಣು, ಕಾಯಿ, ಎಲೆಅಡಿಕೆ ಇಡುತ್ತಾರೆ. ನಂತರ ಅಕ್ಕಿ, ಜೋಳ, ಉಳ್ಳಗಡ್ಡೆ-ಬದಿನೆಕಾಯಿ ತಾರಕಾರಿ ಸೊಪ್ಪು ಇವುಗಳೆಲ್ಲವನ್ನು ಪಡ್ಲಿಗೆಗೆ ತುಂಬಿ ಪೂಜೆ ಮಾಡುತ್ತಾರೆ. ನಂತರ ಒಳಗೆ ಕುಂಭದ ಪೂಜೆ, ದೇವರ ಪೂಜೆ ಮಾಡುತ್ತಾರೆ. ಮಾತಂಗಿ ಮಕ್ಕಳಾದ ದೇವದಾಸಿಯರ ಪೂಜೆಯಾಗುವ ತನಕ ಯಾವ ಪೂಜೆಯನ್ನು ಅವರು ಮಾಡುದಿಲ್ಲ ಎಂಬ ಅಂಶವನ್ನು ವಿಶೇಷವಾಗಿ ಕ್ಷೇಯ್ರಕಾರ್ಯದಲ್ಲಿ ಕಾಣಬಹುದಾಗಿದೆ. ದಸರಾ ಸಂದರ್ಭದಲ್ಲಿಯೂ ಸಹ ಗ್ರಾಮಗಳಲ್ಲಿ ಗ್ರಾಮ ದೇವತೆಗಳಿಗೆ ಬಣ್ಣ ಹಾಕಿಸಿಕೊಂಡು ಪಲ್ಲಕ್ಕಿಯಲ್ಲಿ ಕೂಡಿಸಿ ಊರು ತುಂಬ ಮೆರವಣಿಗೆಯನ್ನು ಮಾಡುತ್ತಾರೆ. ಇಲ್ಲಿ ಕೂಡ ದೇವದಾಸಿಯರು ತಮ್ಮ ಪಡಲಿಗೆ ಜೊತೆಯಲ್ಲಿ ಪಲ್ಲಕ್ಕಿಯ ಹಿಂದೆ ಸಾಗುತ್ತಾರೆ. ಇಲ್ಲಿ ದೇವಿಯನ್ನು ಹಾಡುಗಳ ಮೂಲಕವಾಗಿ ಹಾಡಿ ಹೋಗಳುತ್ತಾರೆ. ಈ ರೀತಿಯಲ್ಲಿ ದೇವದಾಸಿಯರು ಸಂಭ್ರಮದಿಂದ ಪಲ್ಲಕ್ಕಿಯನ್ನು ಬೆಳಗ್ಗೆಯಿಂದ ಸಂಜೆಯವರೆಗೆ ಪಲ್ಲಕ್ಕಿಯಿಂದ ಮೆರವಣಿಗೆ ಮಾಡುವ ಮೂಲಕ ಮನೆ ಮನೆಗೆ ಹೋಗಿ ಭಂಡಾರ ಹಚ್ಚಿ ಬರುವ ಕಾರ್ಯವನ್ನು ಕಾಣುತ್ತೇವೆ. ಇದು ದಸರ ಹಬ್ಬದ ಸಂದರ್ಭದಲ್ಲಿ ನಡೆಯುವಂತಹ ಕಾರ್ಯವಾಗಿದೆ.

ಪಲ್ಲಕ್ಕಿಯ ಹಿಂದೆ ಹಾಡುವ ಹಾಡು

ಉದೋ ಎನ್ನಿರವ್ವ ಜನರೆಲ್ಲ ಉದೋ ಎನ್ನಿರಿ
ಉದೋ ಉದೋ ಎನ್ನಿರಿ ಉರಿಗಣ್ಣಿನೆಲ್ಲುಮ್ಮಗ (ಉದೋ)

ಆ ಕೈಲಿ ಹಡ್ಲಿಗೆ ಈ ಕೈ ಯಲ್ಲಿದೇ ಉಡಿಗೆ
ಲೋಕ ಬಾರೆಂಬ ಚೌವಡಿಗೆ ಉದೋಯದ್ವ
ಆ ಕೈಲಿ ಹಡ್ಲಿಗೆ ಮುಗೈಲಿದೆ ಉಡಿಗೆ
ಜಂಬೆ ಬಾರೆಂಬ ಚೌಡಡಿಕೆ ಉದೋಯದ್ವ

**ಮನೆ ದೇವರು ಮಾಡುವ ಕಾರ್ಯ**

ಪ್ರತಿಯೊಂದು ಜಾತಿಗಳಲ್ಲಿ ಅವದೇ ಆದ ಮನೆ ದೇವರುಗಳು ಇರುತ್ತವೆ. ಹಾಗೆಯೇ ವರ್ಷಕ್ಕೆ ಒಮ್ಮೆ ೩ ವರ್ಷಕ್ಕೆ ಒಮ್ಮೆ ಈ ಮನೆ ದೇವರು ಮಾಡುವ ಕಾರ್ಯವನ್ನು ಮಾಡುತ್ತಾರೆ. ವಿಶೇಷವಾಗಿ ಮಾದಿಗ ಸಮುದಾಯದ ಮನೆ ದೇವರು ಹುಲಿಗೆಮ್ಮಳಾಗಿರುತ್ತಾಳೆ. ಮನೆದೇವರು ಮಾಡುವಾಗ ಸಿಹಿ ಅಡುಗೆ ಮಾಡುತ್ತಾರೆ ಇನ್ನೊ ಕೆಲವರು ಪ್ರಾಣಿ, ಕೋಳಿ ಬಲಿಯನ್ನು ಮಾಡಿ ದೇವರಿಗೆ ಎಡೆ ಮಾಡಿ ಪೂಜೆ ಮಾಡುವ ಕಾರ್ಯವನ್ನು ಮಾಡುತ್ತಾರೆ. ಈ ಮನೆ ದೇವರು ಮಾಡುವಾಗ ಕುಂಟುಬದ ಸದಸ್ಯರೊಂದಿಗೆ ಬಂದು-ಮಿತ್ರರು ಕೂಡ ಸೇರಿ ಬರುತ್ತಾರೆ. ದೇವರು ಮಾಡುವ ಕಾರ್ಯದಲ್ಲಿ ಉದಾಹರಣೆಯಾಗಿ ಹುಲಿಗಿ ದೇವತೆಯಲ್ಲಿ ನಡೆಯುವ ಕಾರ್ಯವನ್ನು ತಿಳಿಸುವುದಾದರೆ, ಕುಂಟುಬದಲ್ಲಿ ಒಬ್ಬರು ಕುಂಭ ಹೊತ್ತುಕೊಳ್ಳುತ್ತಾರೆ, ಒಬ್ಬರು ಗಂಡದೀಪ ಹಿಡಿಯುತ್ತಾರೆ, ಇಬ್ಬರು ಮೂವರು ಕಳಸ ಹಿಡಿಯುತ್ತಾರೆ. ಈಎಲ್ಲಾ ಕಾರ್ಯಗಳು ನಡೆಯ ಬೇಕಾದಲ್ಲಿ ದೇವದಾಸಿಯರು ಪ್ರಮುಖವಾಗಿ ಬೇಕೆ ಬೇಕಾಗುತ್ತಾರೆ. ಹೊಳೆಯಲ್ಲಿ ಎಲ್ಲಾರು ಸ್ನಾನಮಾಡಿ ಹೊಸ ಬಟ್ಟೆ ಧರಿಸಿ ಕುಂಭಕ್ಕೆ ಅನ್ನ ತರಕಾರಿ ಪಲ್ಲೆ ಸಿದ್ದಪಡಿಸಿತ್ತಾರೆ. ದೊಡ್ಡ ಹಿತ್ತಾಳೆ ಪಾತ್ರೆಗೆ ಎಣ್ಣೆ ಹಾಕಿ ದೀಪಮಾಡುತ್ತಾರೆ. ಒಂದು ಕಂಬಳಿ ಹಾಸಿ ಅಕ್ಕಿಯಿಂದ ಚಿತ್ರ ಬರೆದು ಅದರ ಮೇಲೆ ಕುಂಭ ಗಂಡದೀಪ ಹಚ್ಚಿ ಕಳಸವನ್ನು ತುಂಬಿ ಪೂಜೆ ಮಾಡಿ ಕಾಯಿ ಹೊಡೆಯುತ್ತಾರೆ. ದೇವದಾಸಿ ನಂತರ ಎಲ್ಲಾರಿಗೂ ಕುಂಕುಮ ಭಂಢಾರವನ್ನು ಹಚ್ಚಿ ಉದೋ.. ಉದೋ.. ಎನ್ನುತ್ತಾಳೆ. ಕುಂಭವನ್ನು ಹೊರಿಸಿ ಗಂಡ ದೀಪವನ್ನು ತಲೆಯಮೇಲೆ ಹೊರಿಸಿ ಕಳಸಗಳನ್ನು ಹಿಡಿಯಲು ಹೇಳುತ್ತಾಳೆ. ಇದು ಹೊಳೆಯಿಂದ ದೇವಿಯ ದೇವಸ್ಥಾನದವರೆಗೂ ಸಾಗುತ್ತದೆ. ಇವರ ಮುಂದೆ ದೇವದಾಸಿ ತಂಬಿಗೆಯಲ್ಲಿ ಹೊಳೆಯ ನೀರುನ್ನು ಬೇವಿನ ಸೋಪ್ಪಿನಿಂದ ಹಾಕುತ್ತಾ ಸಾಗುತ್ತಾಳೆ. ಆಕೆಯ ಹಿಂದೆಯೆ ಎಲ್ಲರೂ ನಡೆಯುತ್ತಾರೆ ಹೀಗೆ ದೇವಿಯ ಗುಡಿಯನ್ನು ೫ ಬಾರಿ ಸುತ್ತಿ ಕುಳಿತು ಕೊಳ್ಳುತ್ತಾರೆ. ಆಗ ದೇವದಾಸಿಗೆ ಪಡಲಿಗೆಯನ್ನು ತುಂಬಿ ಅದಕ್ಕೆ ಹಣವನ್ನು ದಕ್ಷಣೆಯಾಗಿ ಪಡೆದುಕೂಳ್ಳುತ್ತಾಳೆ. ನಂತರ ಕುರಿ ಬಲಿ ಅಡುಗೆಯಾದ ನಂತರ ೫ ಮಂದಿ ದೇವದಾಸಿಯರನ್ನು ಕರೆದು ಅವರಿಗೆ ಮೊದಲು ಊಟಮಾಡಿಸುತ್ತಾರೆ. ನಂತರದಲ್ಲಿ ಬಂದಿರುವ ಎಲ್ಲಾ ಕುಟುಂಬದ ಸದಸ್ಯರು ಬಂಧು-ಮಿತ್ರರು ಊಟಮಾಡುತ್ತಾರೆ. ಹೀಗೆ ಇಲ್ಲಿ ಅನೇಕ ದೇವದಾಸಿಯರು ವಾಸಿಸುತ್ತಾರೆ. ಇಂತಹ ಕಾರ್ಯಗಳು ವಿಶೇಷವಾಗಿ ಕಾರುಣ್ಣೆವೆಗಳಲ್ಲಿ ಹೆಚ್ಚಾಗಿ ನಡೆಯುತ್ತವೆ. ಆಗ ದೇವದಾಸಿಯರಿಗೆ ಬಹಳ ಬೇಡಿಕೆ ಇರುತ್ತದೆ. ದೇವದಾಸಿಯರಿಂದಲೇ ಈ ಎಲ್ಲಾ ಕಾರ್ಯ ನಡೆಯದಿದ್ದರಿಂದ ಬೇರೆ ಬೇರೆ ಸ್ಥಳಗಳಿಂದ ಬಂದು ದೇವದಾಸಿಯರು ಅಲ್ಲೆ ೨-೩ ತಿಂಗಳು ತಂಗ್ಗಿದ್ದು, ನಂತರ ತಮ್ಮ ಊರಿಗೆ ಹೋಗುತ್ತಾರೆ. ಕೆಲವರು ಅಲ್ಲೆ ವಾಸಿಸುತ್ತಾರೆ.

## ಜೋಗ ಪಣತಿ ನೀಡುವ ಕಾರ್ಯ

ಜೋಗ ಪಣತಿ ನೀಡುವುದು ವರ್ಷಕ್ಕೊಮ್ಮೆ ನಡೆಸುವ ಕಾರ್ಯವಾಗಿದೆ. ಭರತ ಹುಣ್ಣಿಮೆಯಲ್ಲಿ ಈ ಕಾರ್ಯವನ್ನು ಮಾಡುತ್ತಾರೆ. ಈ ಹುಣ್ಣಿಮೆಯಲ್ಲಿ ಎಲ್ಲಾ ಕಡೆಯಿಂದಲೂ ದೇವದಾಸಿಯರು ಮತ್ತು ಭಕ್ತಾದಿಗಳು ದೇವಿಯ ಕ್ಷೇತ್ರಕ್ಕೆ ಧಾವಿಸಿ ಬರುತ್ತಾರೆ. ದೇವದಾಸಿಯರು ಹಳೆಯ ಪಡಲಿಗೆ ಬಳೆ, ಮುತ್ತುಗಲನ್ನು ಹೊಳೆಗೆ ಬಿಟ್ಟು ಹೊಸ ಪಡಲಿಗೆ ಬಳೆ ಮುತ್ತುಗಳನ್ನು ತಂದು ಪೂಜೆ ಮಾಡಿ ಧರಸಿಕೂಳುತ್ತಾರೆ. ಭಕ್ತಾದಿಗಳು ಬಂದು ಸಿಹಿ ಅಡುಗೆ ಮಾಡಿ, ೫-೯ ಮಂದಿ ದೇ'ವದಾಸಿಯರನ್ನು ಕರೆಸಿ ಕಂಬಳಿ ಹಾಸಿ ಪಡಲಿಗೆಗೆ ಜೋಳ, ಅಕ್ಕಿ ಒಣಮೆಣಸಿನ ಕಾಯಿ, ತರಕಾರಿ ಇತರೆ ಸೊಪ್ಪುಗಳನ್ನು ತುಂಬಿ, ಕುಂಕುಮ ಬಂಡಾರ ಹಚ್ಚಿ ಪೂಜೆ ಮಾಡಿ, ಮಾಡಿರುವ ಸಿಹಿ ಅಡುಗೆಯನ್ನು ಎಡೆ ಹಾಕಿ ಜೋಡುಕಾಯಿಗಳನ್ನು ಹೊಡೆಯುತ್ತಾರೆ. ಬಂದಿರುವ ದೇವದಾಸಿಯರಿಗೆ ಹೊಸ ಬಟ್ಟೆ ,ಬಳೆ ಕೊಟ್ಟು, ದಕ್ಷಣೆ ಇಟ್ಟು ಅವರಿಂದ ಆಶೀರ್ವಾದ ಪಡೆಯುತ್ತಾರೆ. ದೇವದಾಸಿಯರು ಊಟ ಮಾಡಿದ ನಂತರ ಎಲ್ಲಾರು ಊಟ ಮಾಡುತ್ತಾರೆ.ಈ ಹುಣ್ಣಿಮೆಯಲ್ಲಿ ಹೊಸದಾಗಿ ದೇವದಾಸಿಯಾಗಿ ಬಿಟ್ಟಿರುವ ದೇವದಾಸಿಯನ್ನು ಕರೆತಂದು ಅವರಿಗಾಗಿ ವಿಶೇಷವಾದ ಈ ಪೂಜೆ ಜೋಗ ಪಣತಿ ನಿಡುವ ಕಾರ್ಯವನ್ನು ನಡೆಸುತ್ತಾರೆ.

## ಶಾಕಿ ಹರಿಯುವ ಕಾರ್ಯ

ಶಾಕಿ ಹರಿಯುವ ಕಾರ್ಯವನ್ನು ಹಳ್ಳಿಗಳಲ್ಲಿ ಜಾತ್ರೆಯ ಸಂದರ್ಭಗಳಲ್ಲಿ ಅಥವಾ ಯಾವುದಾದರು ಒಂದು ಗೊತ್ತಾದ ಹುಣ್ಣಿಮೆ ದಿನದಂದು ಎಲ್ಲಮ್ಮ ಹುಲಿಗೆಮ್ಮ ದೇವಿಯ ಜಾತ್ರೆಯ ನಂತರ ನಡೆಸುವ ಕಾರ್ಯವಾಗಿದೆ. ಆ ದಿನ ಮನೆಯಲ್ಲಿ ಹಬ್ಬದ ಸಂಭ್ರಮ ಆಗಿರುತ್ತದೆ. ಹೊಳಿಗೆ ಮತ್ತು ಕರಿಗಡುಬು ಮಾಡುತ್ತಾರೆ. ಬದನೆಕಾಯಿ, ಅನ್ನ, ಕರಿದ ಮೇಣಸಿನಾಕಾಯಿ, ಹಪ್ಪಳ ಮತ್ತು ಸಂಡಿಗೆಯನ್ನು ಮಾಡುತ್ತಾರೆ. ೩ ರಿಂದ ೫ ಮಂದಿ ದೇವದಾಸಿಯರನ್ನು ಮನೆಗೆ ಕರೆಯಿಸಿ, ಕಂಬಳಿ ಹಾಸಿ ಹುಲಿಗೆಮ್ಮ ಎಲ್ಲಮ್ಮದೇವಿ ಎಂದು ಎರಡು ತುಂಬಿದ ತಂಬಿಗೆಗೆ ಕಾಯಿ ತುಂಬಿ, ಕುಂಕುಮ ಭಂಡಾರ ಹಚ್ಚಿ ಮುತ್ತು ಪೋಣಿಸಿದ ಸರ (ದೇವರಸರ)ವನ್ನು ಆ ತಂಬಿಗೆಗೆ ಹಾಕುತ್ತಾರೆ. ದೇವದಾಸಿಯರ ಪಡಲಿಗೆ ಜೋಳ, ಅಕ್ಕಿ ತುಂಬಿ ಅದಕ್ಕೆ ತರಕರಿಗಳನ್ನು ತುಂಬುತ್ತಾರೆ. ನಂತರ ಪಡಲಿಗೆಯಲ್ಲಿರುವ ಪರಶುರಾಮ(ಪಡಲಿಗೆಯಲ್ಲಿರುವ ಸಣ್ಣ ಬುಟ್ಟಿ)ಗಳಿಗೆ ಕುದಿಸಿದ ಗುಗ್ಗರಿ ಕಾಳುಗಳನ್ನು ತುಂಬುತ್ತಾರೆ. ನಂತರ ಕಾಯಿ ಹೊಡೆದು ಕರ್ಪೂರ ಬೆಳಗುವಾಗ ವಿಶೇಷವಾಗಿ ದೇವದಾಸಿಯರು ಎಲ್ಲಾ ದೇವಾನು ದೇವತೆಗಳಿಗೆ ಉಧೋ.. ಉಧೋ... ಎಂದು ಜೋಗ್ ಆಕುತ್ತಾ, ಹಾಡುಗಳನ್ನು ಹಾಡುತ್ತಾರೆ.

ಒಳಗೆ ಪೂಜೆ ಮಾಡಿದ ನಂತರ ಕುಟುಂಬದ ಎಲ್ಲಾ ಸದಸ್ಯರು ಮನೆಯ ಹೊರಗೆ ಸಾಲಗಿ ನಿಲ್ಲುತ್ತಾರೆ. ಅವರಲ್ಲಿ ಗಂಡು ಮಗನು ತುಂಬಿದ ತಂಬಿಗೆಯಿಂದ ನೀರುಹಾಕುತ್ತಾನೆ. ದೇವದಾಸಿ ಕುಕ್ಕರಗಾಲಿನಿಂದ ಕುಳಿತುಕೊಳ್ಳಬೇಕು. ಅವಳು ತಲೆಯ ಮೇಲೆ ಬೇವಿನ ಸೊಪ್ಪುಗಳನ್ನು ಇಡಿದಿರುತ್ತಾಳೆ. ತುಂಬಿದ ತಂಬಿಗೆಯಿಂದ ನೀರನ್ನು ಹುಡುಗ ಹಾಕುವಾಗ ಉಧೋ ಉಧೋ..... ಎಂದು ಮುಂದೆ

ಸರಿಯುತ್ತಾಳೆ. ಹೀಗೆ ಮಾಡಿದ ನಂತರ ದೇವದಾಸಿಯರು ಬೇವಿನ ಸೊಪ್ಪು ತೆಗೆದುಕೊಂಡು ಮನೆಮಂದಿಗೆಲ್ಲಾ ಸಾಲಾಗಿ ತಲೆಯಿಂದ ಕಾಲಿನ ವರಗೆ ನಿವಾಳಿಸುತ್ತಾ ಉಧೋ..ಉಧೋ... ಎಂದು ಜೊಗ್ ಆಕುತ್ತಾಳೆ. ನಂತರ ದೇವದಾಸಿಯರಿಗೆ ಊಟ ಬಡಿಸುತ್ತಾರೆ ಊಟಕ್ಕೆ ಮೊದಲು ದೇವದಾಸಿಯರು ಉದೋ ಉದೋ ಎಂದು ಸುಮಾರು ಬಾರಿ ಹೇಳಿ ಅಪ್ಪಣೆ ಎನಮ್ಮ ಎಂದು ಕೇಳುತ್ತಾರೆ. ಅದಕ್ಕೆ ಅಪ್ಪಣೆ ಎಂದು ಮನೆಯವರು ಹೇಳುತ್ತಾರೆ. ನಂತರ ಒಂದು ಮುದ್ದೆಮಾಡಿ ಪ್ರಸಾದದ ರೀತಿಯಲ್ಲಿ ಮನೆಯವರಿಗೆಲ್ಲ ಹಂಚಿ ಊಟ ಮಾಡಿ ಹೋಗುವಾಗ ಕಾಳುಗಳನ್ನು ಕೈಯಲ್ಲಿ ತೆಗೆದು ಕೊಂಡು ಮನೆಯೊಳಗೆ ಉಗ್ಗುತ್ತಾ ಹವಳ-ಮುತ್ತು ಇದ್ದಾವೆ, ಕೂಡು ಮಾಡಿಕೊಳ್ಳಿರಮ್ಮ ಎಂದು ೩ ಬಾರಿ ಹೇಳುತ್ತಾರೆ. ಆಗ ತುಂಬಿದ ಕೊಡದಿಂದ ನೀರನ್ನು ದೇವದಾಸಿಗೆ ಚುಮಿಕಿಸುತ್ತಾರೆ. ಮನೆಯವರು ಉದೋ.. ಎನ್ನುತ್ತಾ ದೇವದಾಸಿಯನ್ನು ಕಳುಹಿಸಿ ಕೊಡುತ್ತಾರೆ. ನಂತರ ಮನೆಮಂದಿ ಎಲ್ಲಾ ಊಟ ಮಾಡುತ್ತಾರೆ. ಈ ಕಾರ್ಯವನ್ನು ಮದುವೆ ಕಾರ್ಯ ಮುಂಚಿತವಾಗಿಯೂ ಕೆಲವು ಕಡೆಗಳಲ್ಲಿ ಮಾಡುತ್ತಾರೆ.

**ಇತರೆ ಸಾಮಾಜಿಕ ಕಾರ್ಯ**

ದೇವದಾಸಿಯರು ಸಾವಿಲ್ಲದ ದೇವರೊಂದಿಗೆ ವಿವಾಹ ಮಾಡಿಕೊಂಡುದ್ದರಿಂದ ಅವರನ್ನು ನಿತ್ಯ ಮುತ್ತೈದೆ ಎಂದು ಕರೆಯುತ್ತಾರೆ. ಅನೇಕ ಶುಭಕಾರ್ಯಗಳಲ್ಲಿ ಮುತ್ತೈದೆಯು ಪ್ರಮುಖವಾದ ಪಾತ್ರವಹಿಸುತ್ತಾರೆ. ಕೆಲವು ಮನೆಗಳಲ್ಲಿ ವಿಧವೆ ತಾಯಿ ಅಜ್ಜಿ ಇದ್ದಾಗ, ಇಂತಹ ಕಾರ್ಯಗಳು ನಡೆಯುವುದು ಕಷ್ಟವಾಗಿರುತ್ತದೆ. ಮದುವೆ, ನಿಶ್ಚಿತಾರ್ಥ, ಗೃಹಪ್ರವೇಶ ಕಾರ್ಯಗಳಲ್ಲಿ ದೇವದಾಸಿಯರು ಮುಂದಿರುತ್ತಾರೆ. ಹಾಗೆಯೆ ಮದುವೆ ನಾಮಕರಣ, ಋತುಮತಿ ಇತರೆ ಅನೇಕ ಕಾರ್ಯಗಳಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಹಾಡು ಆಡುವ ಪದ್ಧತಿ ಇದೆ. ಈ ಎಲ್ಲಾ ಕಾರ್ಯಗಳಲ್ಲಿ ದೇವದಾಸಿಯರು ಹಾಡು ಹಾಡಿ ಅವರಿಗೆ ಶುಭವನ್ನು ಹರಸುತ್ತಾರೆ. ಹೀಗೆ ದೇವದಾಸಿಯರು ಕೇವಲ ಧಾರ್ಮಿಕ ಕಾರ್ಯವಲ್ಲದೆಯೇ ಸಾಮಾಜಿಕ ಕಾರ್ಯಗಳಲ್ಲಿಯೂ ಪಾತ್ರವಹಿಸುತ್ತಾಳೆ.

ಪರಿಶಿಷ್ಟ ಜಾತಿಯ ಸಮುದಾಯಗಳಲ್ಲಿ ದೇವರು ಮತ್ತು ನಂಬಿಕೆಗಳು ಆಳವಾಗಿರುವುದು ಕಂಡುಬರುತ್ತದೆ. ಇವರಲ್ಲಿ ಹೆಚ್ಚಾಗಿ ಹುಲಿಗೆಮ್ಮ ದೇವರನ್ನು ಹೊತ್ತವರೇ ಕಂಡುಬಂದಿದ್ದಾರೆ. ಧಾರ್ಮಿಕವಾ'ಗಿ ಅಲ್ಪಸ್ವಲ್ಪ ಗೌರವವು ಇವರಿಗೆ ಸಮಾಜದಲ್ಲಿ ದೊರೆತಿದೆ ಎಂದು ಹೇಳಲಾಗುವುದು. ಊರ ದೇವರ ಜಾತ್ರೆಯ ಸಂದರ್ಭದಲ್ಲಿ ಎಲ್ಲಾ ದೇವದಾಸಿಯರು ಭಾಗವಹಿಸುತ್ತಾರೆ. ಪೂಜೆಯನ್ನು ಸಹ ಮಾಡುತ್ತಾರೆ. ಅಲ್ಲಿ ಮಾತಂಗಿಯ ಮಕ್ಕಳೆಂದು ಈ ಪರಿಶಿಷ್ಟ ಜಾತಿಯ ಮಾದಿಗ ಸಮುದಾಯವನ್ನು ಮುಂದೆ ಬಿಡುತ್ತಾರೆ. ಅಲ್ಲದೆ ದೇವರ ಕೋಣ ಕಡಿದ ಮೇಲೆ ಅದರ ಪೂಜೆಯನ್ನು ಮಾಡಿ ಪ್ರಸಾದವಾಗಿ ಕೋಣದ ಅಡುಗೆಯನ್ನು ಸೇವಿಸಬೇಕಾಗಿರುತ್ತದೆ. ಆದರೆ ಇತರೆ ಸಮುದಾಯದವರು ನಾಮಕಾವಸ್ಥೆಗೆ ಪಂಕ್ತಿಯಲ್ಲಿ ಕೂಡುತ್ತಾರಷ್ಟೇ, ಅದರಲ್ಲಿ ಅವರು ಊಟ ಮಾಡುವುದಿಲ್ಲ. ಪರಿಶಿಷ್ಟ ಜಾತಿಯ ಮಾದಿಗರು ಊಟ ಮಾಡುತ್ತಾರೆ. ನಂತರ ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರು ಬೇರೆ ಊಟ ಮಾಡುತ್ತಾರೆ.

ಹುಲಿಗೆಮ್ಮ, ಎಲ್ಲಮ್ಮ, ಇತರೇ ಹೆಣ್ಣು ದೇವರಿಗೆ ಸಾಮಾನ್ಯವಾಗಿ ಎಲ್ಲಾ ಸಮುದಾಯದ ಅಂದರೆ ಪರಿಶಿಷ್ಟರನ್ನು ಹಿಂದುಳಿದ ವರ್ಗದ ಹೆಣ್ಣುಮಕ್ಕಳನ್ನು ಬಿಟ್ಟಿರುವುದು ಕಂಡುಬರುತ್ತದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯಗಳಲ್ಲಿ ಹೆಚ್ಚಾಗಿ ಮುದ್ರೆ ಹಾಕಿಸಿಕೊಂಡ ಬಸವಿಯರನ್ನು ಕಾಣಲಾಗುತ್ತದೆ. ಹಿಂದುಳಿದ ವರ್ಗಗಳಲ್ಲಿ ಮುತ್ತುಕಟ್ಟುವ ಮತ್ತು ಚೌರಿ ಹೊತ್ತಿರುವ ದೇವದಾಸಿ ಮಹಿಳೆಯರನ್ನು ಕಾಣಲಾಗುತ್ತದೆ.

ಹುಲಿಗೆಮ್ಮ ಮತ್ತು ಉಚ್ಚೆಂಗೆಮ್ಮ ದೇವರನ್ನು ಹೊತ್ತು ದೇವದಾಸಿಯರು ಪ್ರಾಣಿ ಅಥವಾ ಕುರಿ(ಬ್ಯಾಟಿಮಾಡುವುದು) ಬಲಿ ಮಾಡುವ ಮೂಲಕ ಪ್ರತಿ ವರ್ಷ ದೇವರು ಮಾಡುತ್ತಾರೆ. ಜೊತೆಗೆ ಇವತ್ತಿಗೂ ಉಡುಗೆಯನ್ನು ಉಡುವುದು ಉಚ್ಚಂಗಿದುರ್ಗದಲ್ಲಿ ಕಾಣಲಾಗುತ್ತದೆ.

ಹುಲಿಗೆಮ್ಮ ಮತ್ತು ಉಚ್ಚಂಗಿಯ ಎಲ್ಲಮ್ಮನ ದೇವರೋತ್ತ ದೇವದಾಸಿಯರು ಪ್ರತಿ ವರ್ಷ ಜೋಗಪಂಕ್ತಿ ನೀಡಿಸುವ, ಬ್ಯಾಟಿ ಮಾಡುವ ಮುಂತಾದ ಕಾರ್ಯಗಳನ್ನು ಮಾಡುತ್ತಾರೆ. ಮೈಲಾರನಿಗೆ ಬಿಟ್ಟವರು ದೋಣಿ ತುಂಬಿಸುವುದನ್ನು ಮಾಡುತ್ತಾರೆ. ಈರಣ್ಣ ದೇವರನ್ನು ಹೊತ್ತವರು ಪರುವು ಮಾಡುತ್ತಾರೆ. ಹೀಗೆ ವಿವಿಧ ದೇವರುಗಳಿಗೆ ವಿವಿಧ ರೀತಿಯ ಆಚರಣೆ ಮತ್ತು ಸಾಂಪ್ರದಾಯಗಳು ಕಂಡುಬರುತ್ತವೆ.

ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗದ ದೇವದಾಸಿಯರು ಹೆಚ್ಚಾಗಿ ಆಚರಣೆಗಳಲ್ಲಿ ಪಡಲಿಗೆ ಹಿಡಿಯುವುದು ಕಂಡುಬರುತ್ತದೆ. ಇತರೆ ಆಚರಣೆ ಕಾರ್ಯಗಳಲ್ಲಿ ಪರಿಶಿಷ್ಟ ಜಾತಿಯ ದೇವದಾಸಿಯರೇ ಕಂಡುಬರುತ್ತಾರೆ.

**೫.೩ ಆರ್ಥಿಕ ಜೀವನ**

ಬಳ್ಳಾರಿ ಜಿಲ್ಲೆಯು ಹಿಂದುಳಿದ ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಲ್ಲಿ ಒಂದು. ಅನಕ್ಷರಸ್ಥರನ್ನು ಅಧಿಕ ಸಂಖ್ಯೆಯಲ್ಲಿ ಹೊಂದಿರುವ ಬಡಕುಟುಂಬಗಳು ಅಧಿಕ ಸಂಖ್ಯೆಯಲ್ಲಿರುವ ಹಾಗೂ ಒಣಭೂಮಿ ಪ್ರವೇಶ ಮತ್ತು ನೀರಾವರಿ ಪ್ರದೇಶವನ್ನು ಹೊಂದಿರುವ ಬಳ್ಳಾರಿ ಜಿಲ್ಲೆಯು ತನ್ನದೇ ಆದ ವ್ಯವಸ್ಥೆಯನ್ನು ಹೊಂದಿದೆ. ಬಳ್ಳಾರಿ ಜಿಲ್ಲೆಯು ಐತಿಹಾಸಿಕ ಮಹತ್ವವನ್ನು ಪಡೆದಿದೆ. ಅಲ್ಲದೇ ಅನೇಕ ಪ್ರದೇಶಗಳಿಗೆ ಭತ್ತವನ್ನು ರಫ್ತುಮಾಡಿ ಭತ್ತದ ಕಣಜ ಎಂಬ ಹೆಗ್ಗಳಿಕೆಯ ಜೊತೆಗೆ ಕೈಗಾರಿಕಾ ನಗರಿಯಾಗಿ ಬೆಳೆಯುತ್ತಿದೆ.

ಒಣ ಹಾಗೂ ನೀರಾವರಿ ಪ್ರದೇಶದಿಂದ ಕೂಡಿದ ಬಳ್ಳಾರಿ ಜಿಲ್ಲೆಯು ಅಧಿಕ ಸಂಖ್ಯೆಯ ಕೃಷಿ ಮತ್ತು ಕೈಗಾರಿಕಾ ಕಾರ್ಮಿಕರನ್ನು ಹೊಂದಿದ್ದು. ಇವರು ಗ್ರಾಮೀಣ ಪ್ರದೇಶ, ನೀರಾವರಿ ಪ್ರದೇಶ ಮತ್ತು ಕಾರ್ಖಾನೆ ಪ್ರದೇಶಗಳಲ್ಲಿ ಕೇಂದ್ರಿಕೃತವಾಗಿದ್ದಾರೆ. ನಗರ ಪ್ರದೇಶಗಳಲ್ಲಿ ಕಟ್ಟಡ ನಿರ್ಮಾಣ ಇತರೆ ಕೆಲಸಗಳಲ್ಲಿ ತೊಡಗಿರುವವರು ಗ್ರಾಮೀಣ ಪ್ರದೇಶಕ್ಕಿಂತ ಅಧಿಕ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ. ಈ ಕಾರ್ಮಿಕರಲ್ಲಿ ಅಧಿಕ ಸಂಖ್ಯೆಯ ಕಾರ್ಮಿಕರು ಮಹಿಳೆಯರಾಗಿದ್ದು ಅವರಲ್ಲಿ ದೇವದಾಸಿಯರನ್ನು ಸಾಕಷ್ಟು ಪ್ರಮಾಣದಲ್ಲಿ ಕಾಣಲಾಗುವುದು. ಇವರು ಕಾರ್ಮಿಕ ಸಂಘಟನೆಗೆ

ಸೇರಿದ ಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಈ ವೃತ್ತಿಗಳಲ್ಲಿ ದುಡಿಯುವ ದುಡಿಮೆಗಾರರಲ್ಲಿ ಅಧಿಕ ಸಂಖ್ಯೆಯ ದೇವದಾಸಿ ಮಹಿಳೆಯರು ತಳಸಮುದಾಯಕ್ಕೆ ಸೇರಿದ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ ಮತ್ತು ಇತರೆ ಹಿಂದುಳಿದ ಜಾತಿಗೆ ಸೇರಿದ ಮಹಿಳೆಯರೇ ಆಗಿದ್ದಾರೆ. ಸಮಾಜದಲ್ಲಿ ಕಡಿಮೆ ಸಾಮಾಜಿಕ ಸ್ಥಾನಮಾನವನ್ನು ಹೊಂದಿ ಇಂದಿಗೂ ಕೂಡ ಜಾತಿ ನಿಂದನೆ ಮತ್ತು ಅಸ್ಪೃಶ್ಯತೆ ಆಚರಣೆಯೊಂದಿಗೆ ದೇವದಾಸಿಯರನ್ನು ಕೀಳಾಗಿ ನೋಡುವ ಸಮಾಜದಲ್ಲಿ ಬದುಕುತ್ತಿದ್ದಾರೆ.

ದೇವದಾಸಿ ಕುಟುಂಬದಲ್ಲಿ ಮಹಿಳೆ ಮೂರು ವಿಧದ ದುಡಿಮೆಗೆ ಒಳಗಾಗುತ್ತಾಳೆ. ಪುರುಷನ ಆಸರೆ ಇಲ್ಲದ ಈ ದೇವದಾಸಿ ಮಹಿಳೆಯರು ಪ್ರತಿದಿನ ಆದಾಯದ ದುಡಿಮೆ, ಸಂತಾನೋತ್ಪತ್ತಿ ದುಡಿಮೆ, ಕೌಟುಂಬಿಕ ದುಡಿಮೆ ಎಂಬ ಮೂರು ವಿಧದ ದುಡಿಮೆಯಲ್ಲಿ ತೊಡಗಿದ್ದು ಆ ಮಕ್ಕಳ ಪಾಲನೆ ಪೋಷಣೆಯನ್ನು ತಂದೆ ತಾಯಿ ಎರಡು ರೂಪದಲ್ಲಿ ನಡೆಸಿಕೊಂಡು ಜೀವಿಸುತ್ತಾರೆ. ಬೆಳಗಿನಜಾವ ೪–೫ ಗಂಟೆಯಿಂದ ರಾತ್ರಿ ೧೦.೩೦ ಗಂಟೆಯವರೆಗೆ ಕೆಲಸದಲ್ಲಿ ತೊಡಗಿರುತ್ತಾಳೆ. ಶ್ರೀಮಂತರ ಮನೆಗಳಲ್ಲಿ ಮನೆ ಕೆಲಸಕ್ಕೆಂದೆ ಕೆಲಸಕ್ಕೆ ಆಳುಗಳನ್ನು ಇಟ್ಟುಕೊಳ್ಳುತ್ತಾರೆ. ಆದರೆ ದೇವದಾಸಿ ಮಹಿಳೆಯು ಮನೆಯ ಕೆಲಸ ಮತ್ತು ಹೊರಗೆ ಹೊಟ್ಟೆ ಪಾಡಿಗೆ, ಮಕ್ಕಳ ಪೋಷಣೆಗೆ ಎರಡು ಕಡೆಗಳಲ್ಲಿ ಜವಾಬ್ದಾರಿಯುತವಾಗಿ ದುಡಿದು ಜೀವನ ಸಾಗಿಸುತ್ತಾಳೆ.

ದೇವದಾಸಿ ಮಹಿಳೆಯರು ಕೃಷಿ ಕೂಲಿ ಅಥವಾ ಇತರೆ ಕೆಲಸಕ್ಕೆ ಹೋಗುವಾಗ ಅಧಿಕ ಸಂಖ್ಯೆಯ ದೇವದಾಸಿಯರು ಬೆಳಗಿನ ಊಟ ಮಾಡದೆ ಕೆಸಲಕ್ಕೆ ಹೋಗುತ್ತಿರುವುದು ಕಂಡು ಬರುತ್ತದೆ. ಇವರು ಬೆಳಗ್ಗೆ ಗೃಹಕೃತ್ಯದಲ್ಲಿ ತೊಡಗುತ್ತಿರುವುದರಿಂದ ಬೆಳಗಿನ ಊಟ ಮಾಡುವುದಕ್ಕೆ ಸಮಯವೇ ಸಿಗುವುದಿಲ್ಲ ಅಲ್ಲದೆ ಕೆಲವರು ಒಂದೊತ್ತಿನ ಊಟಕ್ಕೂ ಪರದಾಡುವ ಪರಿಸ್ಥಿತಿಯಲ್ಲಿದ್ದಾರೆ. ಹೀಗಾಗಿ ದೇವದಾಸಿ ಮಹಿಳೆಯರು ಬೆಳಗಿನ ಜಾವದ ಊಟವನ್ನು ಮಾಡದೆಯೇ ಕೆಲಸಕ್ಕೆ ಹೋಗುತ್ತಾರೆ.

**ಕೃಷಿ ಮತ್ತು ಕೃಷಿಕೂಲಿ**

ಪುರುಷರಿಗಿಂತ ಮಹಿಳೆಯರೇ ಹೆಚ್ಚಿನ ಪ್ರಮಾಣದಲ್ಲಿ ಕೃಷಿಯಲ್ಲಿ ಹಲವಾರು ಆಚರಣೆ, ಪದ್ಧತಿ ಮತ್ತು ವಿಧಿ ವಿಧಾನಗಳನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. "ಕೃಷಿಯಲ್ಲಿ ಮಹಿಳೆಗೆ ಮಹತ್ವವಾದಂತಹ ಸ್ಥಾನವಿದೆ. ಕೃಷಿಯಲ್ಲಿನ ಹಲವಾರು ಆಚರಣೆಗಳು, ಪದ್ಧತಿ, ವಿಧಾನ ಪ್ರಾರಂಭವಾಗುವುದು ಮಹಿಳೆಯಿಂದ ಬೀಜ ಸಂಗ್ರಹಣೆಯಿಂದ ಹಿಡಿದು ಬಿತ್ತಿ ಫಲ ನೀಡುವವರೆಗೂ ಮಹಿಳೆಯರ ಪಾತ್ರ ಹೆಚ್ಚು. ಬದುಕು ಅವಲಂಬಿತವಾದದ್ದೇ ಕೃಷಿಯ ಮೇಲೆ. ಇದರ ಆಧಾರದಲ್ಲಿಯೇ ಸಮುದಾಯದ ಸಂಪ್ರದಾಯ ಆಚರಣೆಗಳು ಪ್ರಾರಂಭವಾಗುತ್ತವೆ. ಅನ್ನ ನೀಡುವ ಭೂಮಿ ತಾಯಿಯನ್ನು ನೆಚ್ಚಿಕೊಂಡೆ ಕೃಷಿಕ ಆಯಗಾರ ಕೂಲಿಕಾರ ಎಲ್ಲರೂ ಒಕ್ಕಲುತನಕ್ಕೆ ಸಂಬಂಧಿಸಿದಂತೆ ಹಲವಾರು ಆಚರಣೆಗಳನ್ನು, ರೀತಿ ನೀತಿಗಳನ್ನು, ಸಂಪ್ರದಾಯಗಳನ್ನು ಆಚರಿಸಿಕೊಂಡು ಬಂದಿದ್ದಾರೆ. ಬರುತ್ತಲಿದ್ದಾರೆ ಇವು ಕಂದಾಚಾರದ ಆಚರಣೆಗಳಲ್ಲಿ ಇವುಗಳಲ್ಲಿ ಮುಗ್ಧತೆ ಭಕ್ತಿ ಗೌರವ ಸಹಬಾಳ್ವೆ ಇದೆ" *(ವೀರೇಂದ್ರ*

*ಶೀಲವಂತ:೨೦೧೦:೨).* ಪ್ರತಿಯೊಂದು ಕುಟುಂಬಕ್ಕೂ ಒಂದು ಕಾಲದಲ್ಲಿ ಪೂರ್ವಜರಿಂದ ಒಂದು ಕೃಷಿಭೂಮಿ ಇತ್ತು ಅದನ್ನು ಮೇಲ್ವರ್ಗದ ಸಮುದಾಯದವರಿಗೆ ಕಡಿಮೆ ದರದಲ್ಲಿ ನೀಡಿ ಇಂದು ಅವರ ಗದ್ದೆಗಳಲ್ಲಿ ಜೀತದಾಳುಗಳಾಗಿ ದುಡಿಯುತ್ತಿದ್ದಾರೆಂಬುದು ತಿಳಿದು ಬಂದಿದೆ. ಕೆಲವರಿಗೆ ಭೂಮಿ ಇದ್ದರೂ ಕೂಡ ದೇವದಾಸಿ ಮಹಿಳೆಯರಿಗೆ ಸಿಗದಿರುವುದು ದುರಂತವಾಗಿದೆ. ಕಾರಣ ಆ ಕುಟುಂಬದಲ್ಲಿರುವ ಅಣ್ಣ ತಮ್ಮಂದಿರ ದೌರ್ಜನ್ಯದಿಂದಾಗಿ ಶೋಷಣೆಯಾಗಿರುತ್ತದೆ. ಗಂಡು ಮಕ್ಕಳಷ್ಟೆ ಆಸ್ತಿಯ ಹಕ್ಕನ್ನು ಆ ಕುಟುಂಬದ ದೇವದಾಸಿ ಮಹಿಳೆಯು ಹೊಂದಿರುತ್ತಾಳೆ. ಆದರೆ ಅವರ ಸಹೋದರರು ಅವಳ ಪಾಲಿಗೆ ಬರುವ ಭೂಮಿಯನ್ನು ಕೊಡುವುದಿಲ್ಲ. ಕೊನೆಯಲ್ಲಿ ಅದೇ ಭೂಮಿಯಲ್ಲಿ ಕೃಷಿಕೂಲಿಗಳಾಗಿ ದುಡಿಯುತ್ತಾರೆ. ಇನ್ನು ಕೆಲವು ಭೂಮಿಗಳೇ ಇಲ್ಲದಿರುವ ದೇವಾದಾಸಿ ಕುಟುಂಬಗಳು ಬಳ್ಳಾರಿ ಜಿಲ್ಲೆಯಲ್ಲಿ ಸಾಕಷ್ಟು ಕಂಡುಬರುತ್ತವೆ. ಅದಕ್ಕಾಗಿಯೇ ದೇವದಾಸಿಯರ ಮಹಿಳಾ ವಿಮೋಚನ ಸಂಘಟನೆಯು ನಿರಂತರವಾಗಿ ಹೋರಾಟ ಮಾಡುತ್ತಲೇ ಬಂದಿದೆ. ಆದರೆ ಇದು ದೇವದಾಸಿ ಮಹಿಳೆಯರಿಗೆ ಆರ್ಥಿಕವಾಗಿ ನೆರವಾಗಲು ಕೃಷಿ ಭೂಮಿಯನ್ನು ನೀಡಿರುವ ಉದಾಹರಣೆಗಳು ಸಿಗುವುದು ಕಷ್ಟವಾಗಿದೆ. ಅಲ್ಲದೆ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಆಗಿರುವ ಕಾರ್ಖಾನೆಗಳು ಕೆಲವರ ಭೂಮಿಯನ್ನು ನುಂಗಿ ಬಿಟ್ಟಿದೆ. ಕೆಲಸ ನೀಡುವ ಭರವಸೆ ನೀಡಿರುವ ಕಾರ್ಖಾನೆಗಳು ಅಲ್ಪಸ್ವಲ್ಪ ಓದಿರುವ ದೇವದಾಸಿ ಮಹಿಳೆಯರಿಗೆ ಕಡಿಮೆ ಕೂಲಿ ಕೆಲಸವನ್ನು ನೀಡಿರುವುದು ಕಂಡುಬರುತ್ತದೆ.

ಕೃಷಿ ಭೂಮಿಯನ್ನು ಹೊಂದದೆ ಇರುವ ಮತ್ತು ಇದ್ದು ಅದನ್ನು ಮಾರಿರುವ ದೇವದಾಸಿ ಮಹಿಳೆಯರು ಕುಟುಂಬದ ಆರ್ಥಿಕ ಜೀವನದ ನಿರ್ವಹಣೆಗಾಗಿಯೇ ಕೃಷಿಕೂಲಿ ಕೆಲಸದಲ್ಲಿ ತೊಡಗಿಕೊಂಡಿದ್ದಾರೆ. ಕಾರಣ ಧಣಿಗಳು, ಜಮೀನ್ದಾರರು, ಬ್ರಾಹ್ಮಣರು ಇವರ ಕೃಷಿ ಭೂಮಿಯನ್ನು ಒತ್ತೆ ಇಟ್ಟುಕೊಂಡು ಇವರನ್ನು ಗುಲಾಮರಂತೆ ಇಂದಿನವರೆಗೂ ದುಡಿಸಿಕೊಂಡು ಬರುತ್ತಿರುವುದನ್ನು ನಾವು ನೋಡಬಹುದು. ಈಗಲೂ ಶ್ರೀಮಂತರ ಮನೆಯ ಕಟ್ಟೆಯ ಮುಂದೆ ಕುಳಿತು ಮೇಲ್ವರ್ಗದವರು ಹೇಳಿದ ಹಾಗೆ ಕೆಲಸ ಮಾಡುವ ಸಂಸ್ಕೃತಿ ಇನ್ನು ಜೀವಂತವಾಗಿದೆ. ಇಂಥದರಲ್ಲಿ ಇವರ ಆರ್ಥಿಕತೆ ಸಾಲದ ಮೇಲೆ ನಿಂತಿದೆ. ಇಲ್ಲಿ ದೇವದಾಸಿಯರು ಕೃಷಿಕೂಲಿಯಲ್ಲಿ ತೊಡಗಿರುವುದನ್ನು ಗಮನಿಸಿದಾಗ ಕೃಷಿ ಕೆಲಸಕ್ಕೆ ಹೋಗುವಾಗ ದಿನ ಬೆಳಗಿನ ಜಾವದಲ್ಲಿ ರಾತ್ರಿಯಲ್ಲಿ ಉಳಿದ ಅನ್ನ ಕಾರದ ಪುಡಿ ಚಟ್ನಿಗಳನ್ನು ಕಟ್ಟಿಕೊಂಡು ಬೆಳಗ್ಗೆ ಹೊರಟು ಬಿಸಿಲು ಚಳಿ ಎನ್ನದೆ ಕೆಲಸ ಮಾಡುತ್ತಾರೆ. ಅಲ್ಲಿಂದ ಬಂದ ನಂತರ ಇತರೆ ಬೇರೆ ಕೆಲಸ ಕಾರ್ಯದಲ್ಲಿ ತೊಡಗಿಕೊಳ್ಳುತ್ತಾರೆ. ಕೃಷಿ, ಮನೆಗೆಲಸ, ಗಾರೆಕೆಲಸ, ತೋಟಗಳಲ್ಲಿ ಕೂಲಿಯನ್ನು ಮಾಡುತ್ತಾರೆ. ಕೃಷಿಕೂಲಿಯಲ್ಲಿ ಇವರು ಮಾಡುವ ಕೆಲಸಗಳೆಂದರೆ ಕಬ್ಬು ಕಡಿಯುವುದು, ಕಳೆ ತೆಗೆಯುವುದು, ಬೀಜ ಬಿತ್ತುವುದು, (ಕೆಸರು ಗದ್ದೆಯಲ್ಲಿ) ಭತ್ತ ಕೊಯ್ಯುವುದು, ಸಸಿ ನಾಟಿ ಮಾಡುವುದು ರಾಶಿ ಮಾಡಲು ಸಹಾಯ ಮಾಡುವುದು, ತೆನೆ ಕೊಯ್ಯುವುದು ಹೀಗೆ ಇಡೀ ಕೃಷಿ ಕೆಲಸದಲ್ಲಿ ಬರುವ ಪ್ರತಿ ಹಂತ ಹಂತದ ಕೆಲಸದಲ್ಲಿ ಪರಿಣತಿಯನ್ನು ಹೊಂದಿದ್ದಾರೆ. ಧಣಿವು, ಹಸಿವು ಎನ್ನದೆಯೇ ಇಡೀ ದಿನ ಕೆಲಸ ಮಾಡಿ, ಬೆಳಗ್ಗಿನಿಂದ ಸಂಜೆಯವರೆಗೆ ದುಡಿದು ಧಣಿಯುತ್ತಾರೆ.

ಆರ್ಥಿಕ ಚಟುವಟಿಕಗಳು ವ್ಯಕ್ತಿಯ ಅಥವಾ ಸಮುದಾಯದ ಸ್ಥಾನಮಾನವನ್ನು ನಿರ್ಧರಿಸುತ್ತವೆ. ಕೂಲಿ ಎಂದರೆ ಬೇರೆಯವರ ಜಮೀನಿನಲ್ಲಿ ಹೊಲ ಗದ್ದೆಗಳಲ್ಲಿ ಗೊತ್ತುಪಡಿಸಿದ ಕೆಲಸಕ್ಕಾಗಿ ಸಂಬಳದ ರೂಪದಲ್ಲಿ ಹಣವಿಲ್ಲದೆ ಧಾನ್ಯಗಳನ್ನು ಪಡೆಯುವುದು. ಶ್ರಮಕ್ಕೆ ಸಿಗುವ ಪ್ರತಿಫಲವೂ ಕೂಲಿಯಾಗಿದ್ದು, ಇದು ಅವರ ಆರ್ಥಿಕ ಸ್ಥಿತಿಯ ಜೊತೆಗೆ ಸಾಮಾಜಿಕ ಜೀವನ ವಿಧಾನವನ್ನು ಸಹ ತೋರಿಸುತ್ತದೆ. ಕೃಷಿಕೂಲಿ ಮಾಡಲು ಗ್ರಾಮಗಳಲ್ಲಿರುವ ದೇವದಾಸಿಯರು ಶ್ರೀಮಂತರ ಹೊಲಗಳಿಗೆ ಅಥವಾ ಇತರೆ ಹೊಲಗಳಿಗೆ ಹೋಗುವ ಹಾಗೆಯೇ ನಗರದಲ್ಲಿರುವ ಕೆಲವು ದೇವದಾಸಿಯರು ಗ್ರಾಮೀಣ ಪ್ರದೇಶಗಳಿಗೆ ಕೃಷಿ ಕೂಲಿಗಾಗಿ ಆಟೋ ಟ್ರಾಕ್ಸ್‌ಗಳಲ್ಲಿ ಹತ್ತಿರದ ಗ್ರಾಮಗಳಿಗೆ ಹೋಗಿ ಬರುತ್ತಾರೆ. ಕೆಲವು ಗ್ರಾಮಗಳಲ್ಲಿ ಕೃಷಿಕೂಲಿ ಮಾಡಿ ಮನೆಗೆ ಬಂದು ಸಣ್ಣ ಪುಟ್ಟ ಆರ್ಥಿಕ ಚಟುವಟಿಕೆಯಲ್ಲಿ ತೊಡಗಿದರೆ ಇನ್ನು ನೀರಾವರಿ ಹೊಂದಿರುವ ಪ್ರದೇಶಗಳಲ್ಲಿ ಒಂದು ದಿನಕ್ಕೆ ಎರಡು ಭಾರಿ ಕೃಷಿಕೂಲಿಗೆ ಹೋಗುತ್ತಾರೆ. "ಬೆಳಗಿನ ಜಾವ ೪.೩೦ ಕ್ಕೆ ಪ್ರಾರಂಭವಾಗಿ ೧.೩೦ ರ ವರೆಗೆ ಕಬ್ಬು ಕಡಿದು ಬಂದ ನಂತರ ಮನೆಯಲ್ಲಿ ಸ್ವಲ್ಪ ವಿಶ್ರಾಂತಿ ಪಡೆದು ಊಟ ಮಾಡಿ ಮತ್ತೆ ೨.೩೦ ರಿಂದ ೪.೦೦ ರವರೆಗೆ ಕಬ್ಬು ಕಡಿಯಲು ಹೋಗುವ ಸಂಪ್ರದಾಯ ಜೀವಂತವಾಗಿದ್ದು ಅಧ್ಯಯನದ ಸಂಧರ್ಭದಲ್ಲಿ ಈ ಮಾಹಿತಿಯನ್ನು ಕಲೆ ಹಾಕಲಾಗಿದೆ. ಸಾಮಾನ್ಯವಾಗಿ ಇವರಿಗೆ ದಿನಕ್ಕೆ ೩೦೦ ರೂಗಳು ಸಿಗುತ್ತವೆ". *(ಸಣ್ಣವಿರೇಶ ಪಿ:೨೦೧೬:೨೮).* ಈ ರೀತಿ ಎರಡು ಒತ್ತು ದುಡಿದರು ೩೦೦ ರೂ ಗಳಿಸುತ್ತಾರೆ. ಅಂದರೆ ಇವರ ಕೂಲಿ ೧೫೦ ಒಂದು ದಿನಕ್ಕೆ ಎಂಬ ಅಂಶವನ್ನು ಗಮನಿಸಬೇಕಾಗುತ್ತದೆ. ಇವರು ವಾರದ ೭ ದಿನಗಳಲ್ಲಿ ನಿರಂತರವಾಗಿ ಸರ್ಕಾರಿ ನೌಕಾರಿಯಂತೆ ಕೃಷಿ ಕೂಲಿ ಮಾಡುತ್ತಾರೆ. ಕೂಲಿಗೆ ಹೋಗದೆ ಮನೆಯಲ್ಲಿಯೇ ಉಳಿದರೆ ಮಕ್ಕಳ ಊಟದ ಗತಿ ಏನು? ಶಿಕ್ಷಣದ ಗತಿ ಏನು? ಆರೋಗ್ಯ ಅನಾರೋಗ್ಯ ಪರಿಸ್ಥಿತಿ ಎದುರಿಸುವುದು ಹೇಗೆ ಎಂಬೆಲ್ಲಾ ಪ್ರಶ್ನೆಗಳು ಕಾಡುವುದು ಇವರ ಕೂಲಿ ಬದುಕಿನ ಸಾವಾಲುಗಳಾಗಿವೆ. ಇವುಗಳ ಮಧ್ಯದಲ್ಲಿಯೇ ಸಾಲದ ಬಾಧೆಯೂ ದೇವದಾಸಿ ಮಹಿಳೆಯರನ್ನು ಕಾಡುವುದುಂಟು. ಕೃಷಿ ಕೂಲಿಯೂ ಸಹ ಋತುಮಾನಗಳಿಗನುಸಾರವಾಗಿ ಬದಲಾಗುತ್ತದೆ. ಕೃಷಿಗೆ ಸಂಬಂಧಿಸಿದ ಕೂಲಿಯನ್ನು ಮಹಿಳೆಯರು ನಾಟಿ ಸಮಯದಿಂದ ಹಿಡಿದು ಬೆಳೆಯ ಕೋಯ್ಲು ಬರುವವರೆಗೂ ಮಾಡುತ್ತಿರುವುದು ಕಂಡು ಬರುತ್ತದೆ. ತರಕಾರಿ ಇತರೆ ವಸ್ತುಗಳನ್ನು ಮನೆಗೆ ಬರುವಾಗ ಉಡಿಯಲ್ಲಿ ಕಟ್ಟಿಕೊಂಡು ಬರುತ್ತಾರೆ. ಅದು ಒಂದು ಹೊತ್ತಿನ ಆಹಾರಕ್ಕೆ ನೇರವಾಗುವುದು ಎಂಬುದು ಅವರ ಹಂಬಲವಾಗಿದೆ. ಕೃಷಿ ಚಟುವಟಿಕೆಯಲ್ಲಿ ಹೆಚ್ಚಾಗಿ ಮಹಿಳೆಯರೆ ಭಾಗವಹಿಸುವುದರಿಂದ ಇಲ್ಲಿ ಮಹಿಳೆಯರ ಮತ್ತು ಪುರುಷರ ಕೂಲಿಗಳಿಗೆ ಅಷ್ಟೇನು ವ್ಯತ್ಯಾಸ ರೂಪಗಳು ಕಂಡುಬರುವುದಿಲ್ಲ.

**ಪಶುಪಾಲನೆ**

ಬಳ್ಳಾರಿ ಜಿಲ್ಲೆಯ ಕೆಲವು ತಾಲೂಕುಗಳ ಸುತ್ತಮುತ್ತಲಿನ ಪರಿಸರದಲ್ಲಿ ಸಾಧಾರಣ ಮಟ್ಟದ ಕಾಡುಗಳು ಕಂಡುಬರುತ್ತವೆ. ಇನ್ನು ಕೆಲವು ತಾಲೂಕುಗಳಲ್ಲಿ ಕಾಡು ಪ್ರದೇಶಗಳನ್ನೇ ಕಾಣಲು ಸಾಧ್ಯವಿಲ್ಲ. ಹಾಗಾಗ ಬರಗಾಲ ಬಂದು ಒಣಗುತ್ತಿರುವುದು ಉಂಟು. ಹಿಂದಿನ ಕಾಲದಿಂದಲೂ ಧನ, ಕರು, ಎತ್ತುಗಳ ಜೊತೆಗೆ ಕುರಿ, ಮೇಕೆ, ಎಮ್ಮೆ ಇತ್ಯಾದಿ ಸಾಕು ಪ್ರಾಣಿಗಳನ್ನು ಸಾಕುತ್ತಿದ್ದರು.

ಅಲ್ಲದೇ ಕೆಲವರು ಹೈನುಗಾರಿಕೆಯನ್ನು ರೂಢಿಸಿಕೊಂಡಿದ್ದರು. ವಿವಿಧ ರೀತಿಯ ಪ್ರಾಣಿಗಳನ್ನು ಸಾಕುವ ಅಥವಾ ಪಾಲನೆ ಮಾಡುವ ಕೆಲಸಕ್ಕೆ ಪಶುಸಂಗೋಪನೆ ಎಂದು ಹೆಸರು. ಪಶುಸಂಗೋಪನೆಯು ಆರ್ಥಿಕತೆಯನ್ನು ಹೆಚ್ಚಿಸುವ ಅತಿ ಮುಖ್ಯ ಚಟುವಟಿಕೆಯಾಗಿದೆ. ಇವುಗಳಿಗಾಗಿಯೇ ಪ್ರತ್ಯೇಕ ಕೊಟ್ಟಿಗೆಗಳೂ ಸಹ ಇರುತ್ತಿದ್ದವು. ಇಂದಿಗೂ ಹಲವಾರು ಕುಟುಂಬಗಳು ಇದನ್ನು ಅವಲಂಬಿಸಿವೆ. ಆದರೆ ಆಗಾಗ ಬರುವ ಬರಗಾಲದಿಂದಾಗಿ ಊರುಗಳಲ್ಲಿರುವ ದನಕರುಗಳ ಸಂಖ್ಯೆ ಕ್ಷೀಣಿಸುತ್ತಾ ಬಂದಿದೆ. ಕುಟುಂಬದ ಸದಸ್ಯರ ಜೊತೆಯಲ್ಲಿ ದನಕರುಗಳನ್ನು ಸಾಕುವುದು ಬಹಳ ಕಷ್ಟಕರವಾಗಿದೆ. ಹೆಚ್ಚು ಲಾಭ ಗಳಿಸಬಹುದೆಂಬ ಕಾರಣದಿಂದ ಕುರಿ, ಮೇಕೆಗಳನ್ನು ಸಾಕುವುದು ಹೆಚ್ಚಾಗಿದೆ. ಮನೆಯಲ್ಲಿ ಸುಮ್ಮನೇ ಕುಳಿತರೆ ದುಡಿಮೆ ಸಾಧ್ಯವಿಲ್ಲ. ಅಲ್ಲದೆ ಹೆಚ್ಚುತ್ತಿರುವ ಅರ್ಥಿಕ ಹೊಣೆಯನ್ನು ನಿಭಾಯಿಸಲು ತಾವು ಮಾಡುವ ಕೆಲಸದೊಂದಿಗೆ ದೇವದಾಸಿ ಮಹಿಳೆಯರು ಉಪಕಸುಬಾಗಿ ಪಶುಪಾಲನೆ ಮಾಡುವುದನ್ನು ಕಾಣಬಹುದು. ಪ್ರಸ್ತುತ ಅಧ್ಯಯನದಲ್ಲಿ ದೇವದಾಸಿಯರ ಕುಟುಂಬಗಳಲ್ಲಿ ಮೇಕೆ, ಆಕಳು ಮತ್ತು ಕುರಿಗಳನ್ನು ಸಾಕುವುದುಂಟು. ಮೇಕೆ ಮತ್ತು ಕುರಿಗಳ ಸಾಕಾಣೆ ಹೆಚ್ಚು ಶ್ರಮವಿಲ್ಲದ್ದು ಆಗಿರುವುದರಿಂದ ಅವುಗಳನ್ನು ಹೆಚ್ಚಾಗಿ ಸಾಕುತ್ತಾರೆ. ತಾವು ಕೂಲಿಗೆ ಹೋಗುವಾಗ ಜೊತೆ ಜೊತೆಯಲ್ಲಿ ಒಯ್ಯುವರು. ಅಲ್ಲೆ ಮೇಯಲು ಬಿಡುತ್ತಾರೆ. ಕೂಲಿ ಮಾಡಿ ಮುಗಿದ ನಂತರ ಸ್ವಲ್ಪ ಮೇವನ್ನು ತರುತ್ತಾರೆ. ಇದು ಎರಡು ರೀತಿಯಲ್ಲಿ ಅನುಕೂಲವಾಗುತ್ತದೆ. ಒಂದು ಕಡೆ ಕುರಿ, ಮೇಕೆ ಮೇಯುತ್ತವೆ. ತಾನು ಕೂಲಿಯೂ ಮಾಡುತ್ತಾಳೆ. ಕುರಿ, ಮೇಕೆಗಳ ಸಾಕಾಣಿಕೆಯಿಂದ ಆದಾಯ ಜಾಸ್ತಿ ಬರುತ್ತದೆ ಎಂದೂ ಕ್ಷೇತ್ರಕಾರ್ಯದಿಂದ ತಿಳಿಯಲಾಯಿತು. ದೇವದಾಸಿ ಮಹಿಳೆಯರು ಕುರಿ ಮೇಕೆಗಳನ್ನು ಹಿಂಡಾಗಿ ಸಾಕುವುದಿಲ್ಲ ೨-೩ ಕುರಿ ಮೇಕೆಗಳಷ್ಟೇ ಸಾಕುತ್ತಾರೆ. ತನ್ನೊಂದಿಗೆ ಕರೆದ್ಯೊಯ್ದು ಕೂಲಿ ಮಾಡುವ ಜೊತೆಗೆ ಮೇಯಿಸಿಕೊಂಡು ಬರುವಾಗ ಬೇಕಾದ ಮೇವನ್ನು ಗದ್ದೆಯಲ್ಲಿ ತಂದು ಸಾಕುತ್ತಾರೆ ಸ್ವಲ್ಪ ದೊಡ್ಡದಾದ ನಂತರ ೭೦೦೦ ರಿಂದ ೮೦೦೦ ರೂಗಳ ವರೆಗೆ ಮಾರಿ ಬಂದ ಹಣದಲ್ಲಿ ಮತ್ತೆರಡು ಕುರಿ ಮೇಕೆಗಳನ್ನು ತಂದು ಉಳಿದ ಹಣವನ್ನು ಕುಟುಂಬದ ಆರ್ಥಿಕ ಜೀವನಕ್ಕೆ ಬಳಸಿಕೊಳ್ಳುತ್ತಾರೆ.

ದೇವದಾಸಿ ಮಹಿಳೆಯರಿಗೆ ದನ, ಎಮ್ಮೆ ಲೋನ್‌ಗಳನ್ನು ನೀಡುತ್ತಾರೆ. ಅದರಲ್ಲಿ ಎಮ್ಮೆಯನ್ನು ಕೊಂಡುಕೊಂಡು ಬಂದು ಸಾಕುತ್ತಾರೆ. ಪಶುಪಾಲನೆಯ ಆರ್ಥಿಕ ಚಟುವಟಿಕೆಗೆ ತೊಡಗಿಕೊಂಡು ದೇವದಾಸಿ ಮಹಿಳೆ ಸ್ವಾವಲಂಬಿ ಜೀವನವನ್ನು ನಿರ್ವಹಿಸಲು ಸರಕಾರ ಧನಸಹಾಯವು ಸಹಕಾರಿಯಾಗಿದೆ. ಕ್ಷೇತ್ರಕಾರ್ಯದಲ್ಲಿ ಕಂಡಿರುವ ಸಂಗತಿ ಲೋನ್ ಮೂಲಕ ಎಮ್ಮೆಯನ್ನು ಖರೀದಿಸಿ ಹಾಲು ಮೊಸರು ಗೊಬ್ಬರವನ್ನು ಮಾರಿ ಜೀವನ ಸಾಗಿಸುತ್ತಾರೆ.. ದೇವದಾಸಿ ಮಹಿಳೆಯರಲ್ಲಿ ಅದೆಷ್ಟೋ ಮಹಿಳೆಯರು ಒಬ್ಬ ವ್ಯಕ್ತಿಗೆ ನಿಷ್ಠರಾಗಿದ್ದು ಆತ ಕೊಡುವ ಅಲ್ಪಸ್ವಲ್ಪ ಹಣದಿಂದ ಜೀವನ ನಿಭಾಯಿಸುವುದು ಬಹುಕಷ್ಟವಾಗಿ ಕೆಲವರು ಕೂಲಿಕೆಲಸಕ್ಕೆ ಹೋಗುವ ಜೊತೆ ಪಶುಪಾಲನೆ ಮಾಡುತ್ತಾರೆ. ಕೆಲವು ಪುರುಷರಿಗೆ ದೇವದಾಸಿ ಕುಟುಂಬದ ಕಡೆಗೆ ಯಾವ ಕಾಳಜಿಯೂ ಇರುವುದಿಲ್ಲ. ದೇವದಾಸಿ ಮಹಿಳೆಯೇ ಹೆಸರಿಗೆ ಒಬ್ಬ ಗಂಡನಂತೆ ಇರಲಿ ಬಿಡು ಎಂದು ಅವಳೇ ಅವರ ಎಲ್ಲ ಖರ್ಚನ್ನು ನೋಡಿಕೊಳ್ಳುತ್ತಾಳೆ. ಅಲ್ಲದೇ ಅವರು ಬರುವ ದಿನದಂದು ಮನೆಯಲ್ಲಿ ಮಾಂಸದ ಅಡುಗೆ ಮಾಡಿ

ಅವರಿಗೆ ಕುಡಿಯಲು ಸಾರಾಯಿಯನ್ನು ತಂದುಕೊಟ್ಟು ನೋಡಿಕೊಳ್ಳುತ್ತಾಳೆ. ಇದರ ಜೊತೆ ಒಮ್ಮೊಮ್ಮೆ ಅವನ ಕುಟುಂಬದ ಕಷ್ಟದಲ್ಲೂ ಆರ್ಥಿಕವಾಗಿ ಭಾಗಿಯಾಗುವುದುಂಟು.

ಹೀಗೆ ತಮ್ಮೊಂದಿಗೆ ಇರುವ ಪುರುಷನನ್ನು ನೋಡಿಕೊಂಡು ಇಡೀ ಕುಟುಂಬವನ್ನು ನಿಭಾಯಿಸುವ ದೇವದಾಸಿ ಮಹಿಳೆಯನ್ನು ಸಹಿಸದ ಇತರರು ದೇವದಾಸಿಯಾಗಿ ಗಂಡು ದಿಕ್ಕಿಲ್ಲದೆ ಇಷ್ಟರ ಮಟ್ಟಿಗೆ ಜೀವನ ಮಾಡುತ್ತಾಳೆ ಎಂದು ದ್ವೇಷದಿಂದ ಅವಳ ಪಶುಗಳು ತಿನ್ನುವ ಆಹಾರದಲ್ಲಿ ವಿಷ ಬೆರೆಸಿ ಸಾಯಿಸುವ ಸಂಗತಿಯೂ ಕ್ಷೇತ್ರಕಾರ್ಯದಲ್ಲಿ ಕಂಡು ಬಂದಿದೆ. ಮತ್ತೊಬ್ಬ ದೇವದಾಸಿಯ ಬಳಿಯಲ್ಲಿರುವ ಪುರುಷನು ರಾತ್ರೋರಾತ್ರಿ ಎಮ್ಮೆಯನ್ನು ಒಡೆದುಕೊಂಡು ಹೋಗಿ ಸಂತೆಯಲ್ಲಿ ಮಾರಿಬಿಟ್ಟಿರುವ ಮಾಹಿತಿಯನ್ನು ತಿಳಿಸಿದರು. ಹೀಗೆ ದೇವದಾಸಿ ಮಹಿಳೆಯೂ ಪಶುಪಾಲನೆಯಲ್ಲಿ ತನ್ನ ಆರ್ಥಿಕ ಭದ್ರತೆ ಕಾಣುವುದಕ್ಕೆ ಸಮಾಜದ ಜನತೆ ಅಡ್ಡಿ ಪಡಿಸುತ್ತಿರುವುದನ್ನು ನೋಡಬಹುದಾಗಿದೆ.

**ವ್ಯಾಪಾರ**

ಬಳ್ಳಾರಿ ಜಿಲ್ಲೆಯ ಅನೇಕ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ದೇವದಾಸಿಯರು ವ್ಯಾಪಾರ ಮಾಡುವುದನ್ನು ಕಾಣಬಹುದು. ಇದೊಂದು ಆರ್ಥಿಕ ಚಟುವಟಿಕೆಯಾಗಿ ಕಂಡು ಬಂದಿದ್ದು ಕಡಿಮೆ ಆದಾಯದಲ್ಲಿ ಬರುವ ವಸ್ತುಗಳನ್ನು ತಂದು ವ್ಯಾಪಾರ ಮಾಡುವ ಮೂಲಕ ಅಲ್ಪ ಪ್ರಮಾಣ ಲಾಭ ಪಡೆದು ಕಡಿಮೆ ಪ್ರಮಾಣದ ದುಡಿಮೆ ಮಾಡುವುದಾಗಿದೆ. ಇಲ್ಲಿ ಮಹಿಳೆಯರು ತರಕಾರಿ ಮಾರುವ, ಕಾಲಮಾನಕ್ಕೆ ತಕ್ಕಂತೆ ಹಣ್ಣುಗಳನ್ನು, ಒಣಮೆಣಸಿನಕಾಯಿ, ಬೆಳ್ಳುಳ್ಳಿ ಇತರೆ ವಸ್ತುಗಳನ್ನು ಮಾರುವ ಸಣ್ಣ ವ್ಯಾಪಾರದಲ್ಲಿ ತೊಡಗಿಕೊಂಡಿದ್ದಾರೆ. ದೇವದಾಸಿಯರು ಹೆಚ್ಚಾಗಿ ತರಕಾರಿ ವ್ಯಾಪಾರದಲ್ಲಿ ತೊಡಗಿರುವುದನ್ನು ಕಾಣಲಾಗಿದೆ. ಇಲ್ಲಿ ಮನೆಯ ತರಕಾರಿ ಅವಶ್ಯಕತೆ ನೀಗಿಸುವ ಜೊತೆಗೆ ಉತ್ತಮ ವ್ಯಾಪಾರ ಮಾಡಬಹುದೆಂದು ಈ ತರಕಾರಿ ವ್ಯಾಪಾರವನ್ನು ಹೆಚ್ಚಾಗಿ ಮಾಡುತ್ತಾರೆ. ಟೊಮ್ಯಟೊ, ಮೂಲಂಗಿ, ಹಾಗಲಕಾಯಿ, ನುಗ್ಗೆಕಾಯಿ, ಹಸಿಮೆಣಸಿನಕಾಯಿ, ಸೌತೆಕಾಯಿ, ಕೊತ್ತಂಬರಿ ಸೊಪ್ಪು, ಪಲ್ಲೆಗಳು ಮುಂತಾದ ತರಕಾರಿಗಳನ್ನು ಮಾರುತ್ತಿರುವುದು ಕಂಡುಬರುತ್ತದೆ. ಬೆಳಗಿನ ಜಾವದಲ್ಲಿ ಹೊಲಗಳಲ್ಲಿ ಅಥವಾ ಎ.ಪಿ.ಎಂ.ಸಿ ಮಾರುಕಟ್ಟೆಗೆ ಭೇಟಿ ನೀಡಿ ತರಕಾರಿಗಳನ್ನು ತೆಗೆದುಕೊಂಡು ಬರುತ್ತಾರೆ. ಕಾರಣ ಇವರಿಗೆ ಲಾಭ ಹೆಚ್ಚು ಬರುತ್ತದೆ. ಲಾಭದ ದೃಷ್ಟಿಯಿಂದ ಪ್ರತಿ ತರಕಾರಿಗೂ ಚೌಕಾಸಿ ಮಾಡಿ ತಂದು ಮಾರಾಟ ಮಾಡುತ್ತಾರೆ. ಆದರೆ ಕೆಲವೊಮ್ಮೆ ಬಾರಿ ಲಾಭ ಆಗಲಾರದೆ ನಷ್ಟವು ಉಂಟಾಗುತ್ತದೆ. ಕಾರಣ ವಸ್ತುವಿಗೆ ಬೇಡಿಕೆ ಕಡಿಮೆಯಿದ್ದಾಗ ಇಂತಹ ಪರಿಣಾಮ ಬೀರುವುದು.

ದೇವದಾಸಿ ಮಹಿಳೆಯರಿಗೆ ವಾರದ ಪೂರ್ತಿ ದಿನಗಳು ಇದೇ ಆದಾಯದ ಮೂಲವಾದದ್ದರಿಂದ ಕೆಲವೊಮ್ಮೆ ಬಂಡಿಯನ್ನು ಬಾಡಿಗೆಗೆ ಪಡೆದು ಅದರಲ್ಲಿ ವಿವಿಧ ರೀತಿಯ ತರಕಾರಿಗಳನ್ನು ಹಾಕಿಕೊಂಡು ಅಥವಾ ಹಣ್ಣುಗಳನ್ನು ಇತರೆ ವಸ್ತುಗಳನ್ನು ಬಂಡಿಯಲ್ಲಿ ಮಾರಾಟ ಮಾಡುವವರು ಇದ್ದಾರೆ. ಇನ್ನೂ ಕೆಲವರು ಮನೆಯ ಕೆಲಸದ ಜೊತೆಯಲ್ಲಿ ಮನೆಯಲ್ಲಿಯೆ ಸೊಪ್ಪು, ತರಕಾರಿ ಪಲ್ಲೆಯ ವ್ಯಾಪಾರವನ್ನು ಮಾಡುತ್ತಾರೆ. ಕಡಿಮೆ ಪ್ರಮಾಣದ ಆದಾಯವನ್ನು ಪಡೆಯುತ್ತಾರೆ. ಕಾರಣ ಹೆಚ್ಚಿನ

ಬಂಡವಾಳ ಹೂಡಿ ತರಕಾರಿ ತಂದರೆ ಅವು ಕೆಟ್ಟು ಹೋದರೆ ನಷ್ಟ ಉಂಟಾಗುತ್ತದೆ ಎಂದು ಇಲ್ಲಿ ಅಭಿಪ್ರಾಯ ಪಡಲಾಗಿದೆ. ಅಲ್ಲದೇ ಕೆಲವೊಮ್ಮೆ ನಷ್ಟವನ್ನು ಕೂಡ ಅನುಭವಿಸಿದ್ದಾರೆ.

ಸಂತೆ ನಡೆಯುವ ಊರುಗಳಿಗೆ ಸಂತೆಗೆ ತರಕಾರಿಗಳನ್ನು ಕೊಂಡ್ಯೊದು ಮಾರಾಟ ಮಾಡುತ್ತಾರೆ. ಕಾರಣ ಸಂತೆಯ ದಿನದಂದು ಹೆಚ್ಚು ವ್ಯಾಪಾರ ಆಗುತ್ತದೆ. ಆ ದಿನ ಹೆಚ್ಚಿನ ಆದಾಯ ಬರಬಹುದೆಂಬ ಆಶಾದಾಯಿ ಮನಸ್ಸಿನಿಂದ ಸಂತೆಯ ವ್ಯಾಪಾರದಲ್ಲಿ ತೊಡಗಿರುವುದನ್ನು ಕಾಣಲಾಗುವುದು. ಕಿರಾಣಿ ವ್ಯಾಪಾರದಲ್ಲಿ ದೇವದಾಸಿ ಮಹಿಳೆಯರು ಕೆಲವು ಕಡೆಗಳಲ್ಲಿ ಕಂಡುಬರುತ್ತಾರೆ. ಸಣ್ಣ ಪ್ರಮಾಣದ ತಿನಿಸು ವಸ್ತುಗಳನ್ನು ಡಬ್ಬಿಯ ರೀತಿಯಲ್ಲಿ ಅಂಗಡಿಯನ್ನು ಮಾಡಿಕೊಂಡು ಅದರಲ್ಲಿ ವಸ್ತುಗಳನ್ನಿಟ್ಟು ವ್ಯಾಪಾರ ನಡೆಸಿ ಆದಾಯ ಪಡೆಯುವುದನ್ನು ಕ್ಷೇತ್ರಕಾರ್ಯದಲ್ಲಿ ಕಾಣಲಾಗಿದೆ. ದಿನಕ್ಕೆ ೧೦೦ ರಿಂದ ೧೫೦ ರೂ ಆದಾಯ ಬರುತ್ತದೆ ಎಂದು ತಿಳಿದು ಬಂದಿದೆ. ವ್ಯಾಪಾರದ ಸಂದರ್ಭದಲ್ಲಿ ದೇವದಾಸಿ ಎಂದು ತಿಳಿದಾಗ ಸಮಾಜವು ಅನೇಕ ಶೋಷಣೆ ಮತ್ತು ದೌರ್ಜನ್ಯಗಳಿಗೆ ಬಳಸಿಕೊಂಡಿರುವ ಸಂಗತಿಯನ್ನು ತಿಳಿಸಿದರು.

ದೇವದಾಸಿ ಮಹಿಳೆಯರ ವ್ಯಾಪಾರ ದೊಡ್ಡ ಮಟ್ಟದಾಗಿರುವುದಿಲ್ಲ. ಏಕೆಂದರೆ ದೊಡ್ಡ ಮಟ್ಟದ ಬಂಡವಾಳವನ್ನು ಹಾಕುವ ಶಕ್ತಿಯೂ ಇವರಿಗೆ ಇರುವುದಿಲ್ಲ. ಮನೆಯ ನಿರ್ವಹಣೆಗಾಗಿ ಅಂಗಡಿ ವ್ಯಾಪಾರ, ತರಕಾರಿ ವ್ಯಾಪಾರ ಇಂತಹ ಸಣ್ಣ ವ್ಯಾಪಾರ ಮಾಡಿದರೂ ಇವರಿಗೆ ಸರಿಯಾದ ರೀತಿಯ ವ್ಯಾಪಾರದ ಕೌಶಲ್ಯಗಳು ಅಷ್ಟಾಗಿ ಇಲ್ಲದಿರುವುದು ಮತ್ತು ಅವುಗಳ ಉತ್ತಮ ಸಂರಕ್ಷಣೆಯ ಸೌಲಭ್ಯ ಇಲ್ಲದಿರುವುದು ಕಂಡುಬರುತ್ತದೆ. ಆದ್ದರಿಂದ ದೊಡ್ಡ ಮಟ್ಟದ ವ್ಯಾಪಾರ ಮಾಡಲಾಗದೆ ತಮ್ಮ ಮನೆಯ ಮುಂದೆ ಅಂಗಡಿ ತರಕಾರಿ ವ್ಯಾಪಾರ ಮಾಡಲಾಗಿದೆ. ತಮ್ಮ ಮನೆಯ ಮುಂದೆ ಅಂಗಡಿ ತರಕಾರಿ ವ್ಯಾಪಾರ ಮಾಡುತ್ತಾ ದಿನಕ್ಕೆ ೧೦೦ ರಿಂದ ೧೫೦ ರೂಗಳನ್ನು ದುಡಿದು ತಮ್ಮ ಮನೆಯ ನಿರ್ವಹಣೆ ಮಾಡುತ್ತಾರೆ.

ದೇವದಾಸಿ ಮಹಿಳೆಯರು ಆರ್ಥಿಕ ಮೂಲಕ್ಕಾಗಿ ಇಷ್ಟೇಲ್ಲ ಕಷ್ಟಪಟ್ಟು ತಾವು ನಾಲ್ಕು ಜನರಂತೆ ಬದುಕಬೇಕು ಎಂಬ ಎಚ್ಚರಿಕೆಯಿಂದ ಬದುಕು ಸಾಗಿಸುತ್ತಾ ಒಂದಷ್ಟು ಹಣ ಗಳಿಸಿ ಒಂದಿಷ್ಟು ಉತ್ತಮ ಸ್ಥಿತಿಯಲ್ಲಿದ್ದಾರೆ. ಆದರೆ ದುಷ್ಟರ ಕಣ್ಣಿಗೆ ಅವರು ಕೆಟ್ಟ ಕೆಲಸದಿಂದಲೇ ಹಣ ಸಂಪಾದನೆ ಮಾಡುತ್ತಾರೆ ಎಂಬಂತೆ ಕಂಡು ದೇವದಾಸಿಯರನ್ನು ಇಂದಿಗೂ ಸಮಾಜ ಗೌರವದಿಂದ ಕಾಣುವುದಿಲ್ಲ. ಹೊಸಪೇಟೆಯ ಒಬ್ಬ ದೇವದಾಸಿಯ ಮನೆಯ ಮೇಲೆ ಕಳ್ಳತನವನ್ನು ಹೊರಿಸಿ ಪೋಲಿಸ್ ದಾಳಿ ಮಾಡಿಸಿ ದೇವದಾಸಿಯ ಮಗಳನ್ನು ಜೈಲಿನಲ್ಲಿರಿಸಿದರು. ಅಲ್ಲಿಂದ ಹೊರ ಬಂದ ಮೇಲೆ ಅವಳು ದೇವದಾಸಿಯ ಮಗಳು ಎಂಬುದು ತಿಳಿದ ಸಮಾಜ ಮದುವೆಗೆ ಮುಂದಾಗದ ಸ್ಥಿತಿ ಇರುವಾಗ ಹೀಗೆ ಬಂದಿರುವ ಮತ್ತೊಂದು ಅಪಮಾನದಲ್ಲಿ ಅವಳಿಗೆ ಮದುವೆಯಾಗದೆ ಮತ್ತೆ ದೇವದಾಸಿ ಪದ್ಧತಿಗೆ ಒಳಪಡಿಸುವ ಸಂಗತಿ ಕಂಡು ಬಂದಿದೆ. ಇದು ದೇವದಾಸಿಯರಿಗೆ ಒದಗಿರುವ ಮತ್ತೊಂದು ಸಮಸ್ಯೆಯಾಗಿದೆ. ದೇವದಾಸಿಯ ಸಾಮಾಜಿಕ ಬದುಕೇ ಹಸನಾಗಿಲ್ಲದಿರುವಾಗ ಅವಳ ಆರ್ಥಿಕ ಸ್ಥಿತಿ ಸುಧಾರಣೆಯಾಗಿ ಇರಲು ಸಾಧ್ಯವೇ? ಎಂಬ ಪ್ರಶ್ನೆಗಳು ಕಾಡುತ್ತವೆ. ಆರದ ಗಾಯದ ಮೇಲೆ

ಬರೆ ಹಾಕಿದಂತೆ ನೊಂದು ಬೆಂದಿರುವ ದೇವದಾಸಿ ಮಹಿಳೆಯ ಮೇಲೆ ಸಮಾಜದ ನಾನಾ ದುಷ್ಟ ಕಣ್ಣುಗಳು ಒಂದಲ್ಲ ಒಂದು ರೀತಿಯಲ್ಲಿ ನೆಮ್ಮದಿಯನ್ನು ಹಾಳು ಮಾಡುತ್ತಿವೆ.

**ರಂಗ ಕಲಾವಿದೆ ದುಡಿಮೆ**

ದೇವದಾಸಿ ಮಹಿಳೆಯರಲ್ಲಿ ಕೆಲವರು ರಂಗಭೂಮಿಯಲ್ಲಿ ದುಡಿದು ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ. ಮನೆಯ ಯಜಮಾನಿಯರಾಗಿ ಕುಟುಂಬದ ಹೊಣೆಯನ್ನು ಹೊತ್ತಿರುವ ದೇವದಾಸಿಯರು ತಮ್ಮನ್ನು ಅವಲಂಬಿಸಿದ ಕುಟುಂಬದ ಅಪ್ಪ, ಅಮ್ಮ ತಂಗಿ ತಮ್ಮ ಇತರೆ ಸದಸ್ಯರನ್ನು ಸಾಕುವ ಸಲುವಾಗಿ ಕೆಲವರು ಕೂಲಿ ಮತ್ತು ಇತರೆ ಕೆಲಸದೊಂದಿಗೆ ನಾಟಕದ ಸಿಜನ್‌ಗಳಲ್ಲಿ ಹಣವನ್ನು ಗಳಿಸಿಕೊಳ್ಳುತ್ತಾರೆ. ಬಾಲ್ಯದಿಂದಲೇ ನಾಟಕದಲ್ಲಿ ದುಡಿಯಲು ಮತ್ತು ನಾಟಕದ ಕಲೆಯನ್ನು ಕರಗತ ಗೊಳಿಸಿಕೊಳ್ಳುವಲ್ಲಿ ಶ್ರಮಿಸುತ್ತಾರೆ. ಮೊದ ಮೊದಲ ಬಾಲನಟಿಯಾಗಿ ಮತ್ತು ಹಿರಿಯ ಕಲಾವಿದೆಯರೊಂದಿಗೆ ಹೋಗಿ ನಾಟಕದ ಮಧ್ಯದಲ್ಲಿ ನೃತ್ಯ ಮಾಡುವ ಮೂಲಕ ರಂಗಭೂಮಿಯ ಪ್ರವೇಶ ಪಡೆದು ನಂತರದಲ್ಲಿ ಕಲೆಯನ್ನು ತಮ್ಮ ಬದುಕಿನಲ್ಲಿ ರೂಢಿಸಿಕೊಂಡು ನಾಟಕದ ನಟಿಯರಾಗಿದ್ದು ಹೆಚ್ಚಿನ ಹಣ ಗಳಿಸಿದ್ದಾರೆ. ಕೆಲವೊಂದಿಷ್ಟು ನಟಿಯರನ್ನು ಬಿಟ್ಟರೆ ಯಾವ ನಟಿಯರ ಆರ್ಥಿಕ ಪರಿಸ್ಥಿತಿ ಸುಧಾರಣೆಯಲಿಲ್ಲ ಹಾಗೂ ಉತ್ತಮವಾಗಿಯಂತೂ ಇಲ್ಲ. ದೇವದಾಸಿ ರಂಗಕಲಾವಿದೆಯರಿಗೆ ಮನೆಇಲ್ಲ, ನೆಲೆಇಲ್ಲ, ಸಮಾಜದಲ್ಲಿ ಬೆಲೆಯಂತೂ ಇಲ್ಲವೆ ಇಲ್ಲ. ಈ ದೇವದಾಸಿಯರ ದಿನ ನಿತ್ಯದ ಬದುಕು ತುಂಬಾ ದುರಂತವಾಗಿದೆ. "ಮೊದಲು ರಂಗ ಪ್ರವೇಶ ಹಿರಿಯ ಕಲಾವಿದೆಯರ ಜೊತೆಯಲ್ಲಿ ಹೋಗಿ ಬರಿ ೧೦ ಅಥವಾ ೨೦ ರೂಪಾಯಿಗಳಿಗೆ ನಾಟಕದ ಮಧ್ಯದಲ್ಲಿ ನೃತ್ಯ ಮಾಡುವ ಅವಕಾಶಗಳನ್ನು ಪಡೆಯುವವರು" *(ಕೊಟ್ರಮ್ಮ:೨೦೦೮:೨೦೯).* ಹೀಗೆ ಚಿಕ್ಕ ವಯಸ್ಸಿನಲ್ಲಿಯೇ ದುಡಿಯುವ ದೇವದಾಸಿಯರು ತಮ್ಮ ಬದುಕನ್ನು ದುಡಿಮೆಯ ಯಂತ್ರವನ್ನು ಮಾಡಿಕೊಂಡಿದ್ದಾರೆ. ಆಡುವ ವಯಸ್ಸಿನಲ್ಲಿ ದುಡಿಮೆಯಲ್ಲಿ ತೊಡಗಿಕೊಂಡು ನಿರಂತರವಾಗಿ ದುಡಿದರು ಕೂಡ ಅವರ ಜೀವನ ಆರ್ಥಿಕವಾಗಿ ಭದ್ರವಾಗಿಲ್ಲವಾಗಿದೆ. ಕೆಲವು ನಟಿಯರು ಸರಕಾರದ ಆಶ್ರಯ ಮನೆಗಳಲ್ಲಿ ವಾಸಿಸುತ್ತಿದ್ದಾರೆ. ರಂಗಕಲಾವಿದೆಯರಾದ ದೇವದಾಸಿಯರು ಹಿರಿಯರು ಮಾಡಿರುವ ಮನೆಗಳಲ್ಲಿ ಗುಡಿಸಲುಗಳಲ್ಲಿ ಮತ್ತು ಬಾಡಿಗೆ ಮನೆಗಳಲ್ಲಿ ವಾಸವಾಗಿದ್ದಾರೆ. ಈ ದೇವದಾಸಿ ಮಹಿಳೆಯರು ನಾಟಕಗಳಲ್ಲಿ ಅಷ್ಟೇ ಒಳ್ಳೆಯ ಬಟ್ಟೆಗಳನ್ನು ತೊಡುತ್ತಾರೆ. ನಾಟಕಗಳಿಗಾಗಿ ಇರುವ ಆಭರಣಗಳನ್ನು ತೊಟ್ಟು ಸುಂದರವಾಗಿ ಕಂಡು ಎಲ್ಲಾರ ಕಣ್‌ಮನಗಳನ್ನು ರಂಜಿಸುತ್ತಾರೆ. ಆದರೆ ಅವರ ನಿಜ ಜೀವನದಲ್ಲಿ ಒಂದು ಹೊತ್ತಿನ ಊಟಕ್ಕೂ ಪರದಾಡುವ ಸ್ಥಿತಿಯಲ್ಲಿದ್ದಾರೆ.

ನಾಟಕಕ್ಕೆ ಬೇಕಾದ ಬಟ್ಟೆ ಅಲಂಕಾರಿಕ ಆಭರಣ ಹಾಗೂ ಮೇಕಪ್ ಸಾಮಾನುಗಳನ್ನು ನಾಟಕದಿಂದ ಸಿಗುವ ಸಂಭಾವನೆಯಲ್ಲಿಯೇ ಕೊಂಡುಕೊಳ್ಳಬೇಕು ಉಳಿದದ್ದರಲ್ಲಿ ನಿತ್ಯ ಜೀವನದ ನಿರ್ವಹಣೆ ಮಾಡುವುದು ಈ ದೇವದಾಸಿ ಕಲಾವಿದೆಯರಿಗೆ ಕಷ್ಟವಾಗಿದೆ. ರಂಗಭೂಮಿಯ ಕಲಾವಿದರಾಗಿ ರಂಗವೃತ್ತಿಯಲ್ಲಿ ತೊಡಗಿಕೊಂಡು ಅಲ್ಲಿ ಸಿಗುವ ಹಣದಿಂದ ಜೀವನ ನಿರ್ವಹಿಸುವ ದೇವದಾಸಿ ಮಹಿಳೆಯರು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ; ವಿರೂಪಾಪುರ, ಬಳ್ಳಾರಿ, ಮರಿಯಮ್ಮನಹಳ್ಳಿ,

ಕಪ್ಪಗಲ್ಲು, ಪಗರಿ ಬೊಮ್ಮನಹಳ್ಳಿ ಮುಂತಾದ ಪ್ರದೇಶಗಳಲ್ಲಿರುವುದನ್ನು ಕಾಣಬಹುದಾಗಿದೆ. ದೇವದಾಸಿ ಮಹಿಳೆಯರು ಮೊದಲು ರಂಗಭೂಮಿಯಲ್ಲಿ ೧೦ ರೂಪಾಯಿಗಳಿಂದ ದುಡಿದಿದ್ದಾರೆ. ನಂತರ ೨೫, ೫೦, ೭೦, ೮೦, ೨೦೦, ೩೦೦, ೫೦೦ ಗಳವರೆಗೆ ಗಳಿಸುತ್ತಿದ್ದರು. ಆದರೆ ವರ್ಷದಲ್ಲಿ ಮೂರರಿಂದ ಆರು ತಿಂಗಳುಗಳು ಮಾತ್ರ ಈ ದುಡಿಮೆ ಇರುತ್ತಿತ್ತು. ಇಡೀ ಆರು ತಿಂಗಳು ತುಂಬ ಕಷ್ಟಪಟ್ಟು ದುಡಿಯುವರು. ರಾತ್ರಿ ಪೂರ್ತಿ ನಿದ್ದೆಗೆಟ್ಟು ಸರಿಯಾದ ಊಟವಿಲ್ಲದೆ ಒಂದೊಂದು ದಿನ ಕಾರದಪುಡಿ ಅನ್ನ ತಿಂದು ಇಡೀ ರಾತ್ರಿ ನಾಟಕ ಮಾಡಿರುವ ಕುರಿತು ದೇವದಾಸಿ ಮಹಿಳೆ ತಿಳಿಸಿದ್ದಾಳೆ. ಹೀಗೆ ಊಟ ಮತ್ತು ಕುಡಿಯುವ ನೀರಿನ ಸಮಸ್ಯೆ ಒಬ್ಬ ದೇವದಾಸಿ ಹೀಗೆ ಹೇಳಿದ್ದಾರೆ 'ಒಂದು ಸಾರಿ ನಾಟಕಕ್ಕೆ ಹೋಗುವಾಗ ಆಗ ಬಸ್ಸಿನ ವ್ಯವಸ್ಥೆ ಇರಲಿಲ್ಲ. ಹಾಗಾಗಿ ಬಂಡಿಯ ಗಾಡಿಯಲ್ಲಿ ಹೋಗುವಾಗ ನೀರಿನ ದಾಹ ಹೆಚ್ಚಾಗಿ ಅಲ್ಲಿ ಗುಂಡಿಯಲ್ಲಿ ನಿಂತಿರುವ ನೀರು ಕುಡಿದು ಹೋಗಿ ನಾಟಕ ಆಡಿದ್ದೇನೆ'. ಹೀಗೆ ಊಟ ಮತ್ತು ನೀರಿನ ಸಮಸ್ಯೆಯಿಂದ ಅನಾರೋಗ್ಯಕ್ಕೆ ತುತ್ತಾಗಿ 'ಒಂದೆರಡು ನಾಟಕದಲ್ಲಿ ಅನಾರೋಗ್ಯದಲ್ಲೇ ನಾಟಕ ಮಾಡಿ ಆ ದಿನದ ಸಂಭಾವನೆ ಪಡೆದು ಕುಟುಂಬ ನಡೆಸಿದ್ದೇನೆ'. ಎಂದು ಕ್ಷೇತ್ರಕಾರ್ಯದಲ್ಲಿ ತಮ್ಮ ಅನುಭವವನ್ನು ಹೇಳಿಕೊಂಡಿದ್ದಾರೆ. ಹೀಗೆ ಎಷ್ಟು ಕಷ್ಟವಾದರೂ ಆಟಗಳನ್ನು ಆಡುವುದು ಬಿಡುತ್ತಿರಲಿಲ್ಲ. ಕಾರಣ ಒಂದು ಸಾರಿ ನಾಟಕಕ್ಕೆ ಬರದೆಕೈಕೊಟ್ಟು ನಟಿಯರು ಹೆಸರು ಕೆಡಿಸಿಕೊಂಡರೆ ಪುನಃ ನಾಟಕಗಳಿಗೆ ಕರೆಯುತ್ತಿರಲಿಲ್ಲ. ಹಾಗಾಗಿಯೇ ಎಷ್ಟೇ ಆರೋಗ್ಯ ಕೆಟ್ಟರು ಎಂತಹ ಪರಿಸ್ಥಿತಿ ಇದ್ದರೂ ಸರಿಯೇ ಅವರು ಒಳ್ಳೆಯ ಕಂಠದಿಂದ ಹಾವಭಾವ ಮಾಡುತ್ತಾ ಪಾತ್ರಗಳಿಗೆ ಜೀವ ತುಂಬಿ ಆಡುತ್ತಿದ್ದರು. ಇದನ್ನು ಒಂದು ಕಡೆ ರಂಗ ಸೇವೆ ಎಂದರೂ ಕೂಡ ಇಲ್ಲಿ ಅವರಿಗೆ ಸೇವೆಗಿಂತ ಹಸಿವು, ಅರ್ಥಿಕ ಭದ್ರತೆಯೇ ಮುಖ್ಯವಾಗಿರುವುದರಿಂದ ಕಲಾ ಆಸಕ್ತಿಗಿಂತ ಹಣವೇ ಮುಖ್ಯವಾಗುತಿತ್ತು.

ನಾಟಕಗಳನ್ನು ನಡೆಸುವವರು ಸಾಮಾಜಿಕ ನಾಟಕಗಳನ್ನು ಆಯ್ಕೆ ಮಾಡಿಕೊಳ್ಳುವುದಕ್ಕಿಂತ ಬಯಲಾಟಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಬಳ್ಳಾರಿ ವಿರುಪಾಪುರ ಕೂಡ್ಲಿಗಿ ಮತ್ತು ಕಪ್ಪ'ಗಲ್ಲು ಈ ಊರುಗಳಲ್ಲಿ ಹೆಚ್ಚಾಗಿ ಎಲ್ಲರು ಬಯಲಾಟಗಳಿಗೆ ಪಾತ್ರ ಮಾಡಲು ಬಯಸುತ್ತಾರೆ. "ಮರಿಯಮ್ಮನಹಳ್ಳಿ ಕಲಾವಿದೆಯರೆಲ್ಲರೂ ಸಾಮಾಜಿಕ, ಸೃಜನ ನಾಟಕಗಳನ್ನು ಮಾಡುತ್ತಿದ್ದಾರೆ." *(ಸುಜಾತ ಅಕ್ಕಿ:೨೦೦೪:೨೫೩).* ಹೆಚ್ಚಾಗಿ ಬಯಲಾಟವನ್ನು ಆಯ್ಕೆ ಮಾಡಲು ಕಾರಣವೆಂದರೆ ಸಾಮಾಜಿಕ ನಾಟಕಗಳಲ್ಲಿ ಕುಣಿಯಬೇಕು ಮತ್ತು ಅಲ್ಲಿ ಸಂಭಾವನೆಯೂ ಕೂಡ ಕಡಿಮೆ ನೀಡುವುದರಿಂದಾಗಿ ಹೆಚ್ಚು ಕಲಾವಿದೆಯರು ಬಯಲಾಟವನ್ನು ಆಯ್ಕೆ ಮಾಡಿಕೊಂಡಿದ್ದಾರೆ. "ಬಯಲಾಟದಲ್ಲಿ ಕಂಠ ಸರಿಯಾಗಿದ್ದರೆ ಸಾಕು ನಿಂತಲ್ಲೇ ಹಾವಭಾವ ಮಾಡುತ್ತಾ ಮಾತನ್ನು ಸರಿಯಾಗಿ ಹೇಳಿ ಹಾಡಿಬಿಟ್ಟರೆ ಬಯಲಾಟದ ಜನರು ನಮ್ಮನ್ನು ಬಿಡುವುದೇ ಇಲ್ಲ ಎನ್ನುತ್ತಾರೆ." *(ಸುಜಾತ ಅಕ್ಕಿ: ೨೦೦೪:೨೫೨).* ಸಾಮಾಜಿಕ ನಾಟಕಗಳಲ್ಲಿ ಪ್ರಾರಂಭದಲ್ಲಿ ೧೫೦, ೨೦೦, ೩೦೦, ಇತ್ತೀಚೆಗೆ ೧೦೦೦–೧೫೦೦ ಮೇಲ್ಪಟ್ಟು ಸಂಭಾವನೆ ನೀಡುತ್ತಾರೆ. ಆದರೆ ಬಯಲಾಟಗಳಲ್ಲಿ ಪ್ರಸ್ತುತ ೧೨೦೦ ರಿಂದ ಹಿಡಿದು ೩೦೦೦ ಮೇಲ್ಪಟ್ಟು ಸಂಭಾವನೆಯನ್ನು ನೀಡುತ್ತಾರೆ. ಪ್ರತಿವರ್ಷ

ದೇವದಾಸಿ ಕಲಾವಿದೆಯರ ನಾಟಕ ಬೇಡಿಕೆಗೆ ತಕ್ಕಂತೆ, ವರ್ಚಸ್ಸಿಗೆ ತಕ್ಕಂತೆ ಸಂಭಾವನೆಯನ್ನು ಹೆಚ್ಚಿಸಿ ನಾಟಕವನ್ನು ಆಡುತ್ತಾರೆ. ಸಂಭಾವನೆಯನ್ನು ಹಲವಾರು ದೃಷ್ಟಿಯಿಂದ ನೋಡಲಾಗಿದ್ದು ಅವರ ನಟನಾತಂತ್ರತೆಯ ಕೌಶಲ್ಯತೆ, ಗಾಯನ ಹೀಗೆ ಹಲವಾರು ನಿಟ್ಟಿನಿಂದ ನಟಿಯರು ವರ್ಚಸ್ಸನ್ನು ಮೂಡಿಸಿಕೊಂಡು ತಮ್ಮ ನಟನೆಯನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಎಷ್ಟೇ ಸಂಭಾವನೆ ಹೆಚ್ಚಿಸಿದರೂ ಆಧುನಿಕ ಕಾಲದ ಬೆಲೆ ಹೇರಿಕೆಯ ದಿನಮಾನಗಳಲ್ಲಿ ಕೇವಲ ಆರು ತಿಂಗಳು ಕಲಾವಿದೆಯರಾಗಿ ದುಡಿಯುವ ದೇವದಾಸಿ ಮಹಿಳೆಯರು ಇನ್ನು ಬರುವ ಆರು ತಿಂಗಳ ಬದುಕಿನ ಜೀವನಕ್ಕಾಗಿ ಹೊಲಗದ್ದೆ ಇತರೆ ಕೆಲಸದಲ್ಲಿ ದುಡಿಮೆಯಲ್ಲಿ ತೊಡಗಿಕೊಂಡು ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ.

**ಗಣಿಗಾರಿಕೆ**

ಇತ್ತೀಚಿನ ವರ್ಷಗಳಲ್ಲಿ ಅತ್ಯಂತ ಹೆಚ್ಚು ವಿವಾದಕ್ಕೆ ಹಾಗೂ ನಿಷೇಧಕ್ಕೆ ಒಳಗಾಗಿರುವ ಉದ್ಯಮವೆಂದರೆ ಗಣಿಗಾರಿಕೆ. ಬಳ್ಳಾರಿ, ಹೊಸಪೇಟೆ, ಸಂಡೂರು ಸುತ್ತಮುತ್ತಲಿನ ಪ್ರದೇಶವು ದೇಶದಲ್ಲೇ ಅತ್ಯಂತ ಶ್ರೇಷ್ಠ ಗುಣಮಟ್ಟದ ಕಬ್ಬಿಣದ ಅದಿರನ್ನು ಹೊಂದಿದೆ. "ಅಂತರ್‌ರಾಷ್ಟ್ರಿಯ ಮಟ್ಟದಲ್ಲಿ ಇಲ್ಲಿನ ಅದಿರಿಗೆ ಬೇಡಿಕೆ ಇದ್ದು ಚೀನಾ, ಜಪಾನ್, ಕೋರಿಯಾ ಮುಂತಾದ ದೇಶಗಳಿಗೆ ರಫ್ತಾಗುತ್ತಿದೆ." *(ಸಂತೋಷ್‌ಕುಮಾರ್ ಎಚ್:೨೦೧೨:೨೬೬).* ಇಲ್ಲಿ ನಡೆಯುವ ಈ ಗಣಿಗಾರಿಕೆಯಿಂದ ಇಲ್ಲಿರುವ ಗಣಿಮಾಲಿಕರು ರಫ್ತುದಾರರು, ಸಾರಿಗೆ ಮಾಲಿಕರು ಕೋಟ್ಯಾಂತರ ರೂಪಾಯಿ ಹಣಗಳಿಸಿದ್ದಾರೆ. ಅದರಿಂದಾಗಿ ಬಳ್ಳಾರಿಯಲ್ಲಿ ಗಣಿದಣಿಗಳು ಎನ್ನುವ ಹೊಸ ವರ್ಗವೇ ಸೃಷ್ಟಿಯಾಗಿದೆ. ಈ ಗಣಿಗಾರಿಕೆಯಿಂದಾಗಿ ಆಗಾಗ ಏರುಪೇರಾಗುತ್ತಾ ಅನೇಕ ಸಮಸ್ಯೆಗಳನ್ನು ಹುಟ್ಟು ಹಾಕಿದೆ. ಗಣಿಯಲ್ಲಿ ಕೆಲಸ ಮಾಡುವ ಕೂಲಿಕಾರರು ಅದರಲ್ಲೂ ಮಹಿಳೆ, ದೇವದಾಸಿ ಮಹಿಳಾ ಕೂಲಿ ಕಾರ್ಮಿಕರ ಜೀವನ ಅಭದ್ರವಾಗಿದ್ದು, ಅವರ ಸ್ಥಿತಿ ಚಿಂತಾಜನಕವಾಗಿದೆ.

ಕಳೆದ ದಶಕದಲ್ಲಿ ಕಬ್ಬಿಣದ ಅದಿರಿಗೆ ಬಾರಿ ಬೇಡಿಕೆ ಮತ್ತು ಬೆಲೆ ಏರಿಕೆಯಿಂದಾಗಿ ಗಣಿಗಾರಿಕೆಯ ವೈಭವದ ಕಾಲ ಆರಂಭವಾಯಿತು. ಹಾಗಾಗೀ ಜನರಿಗೆ ಮೊದಲನೆ ಆಯ್ಕೆ ಗಣಿ ಕೂಲಿ ಆಗಿ ಎರಡನೇ ಆಯ್ಕೆ ಕೃಷಿಕೂಲಿ ಆಯಿತು. ಹೆಚ್ಚಿನ ಕೂಲಿ ಮತ್ತು ಸಂಬಳಕ್ಕೆ ಆಕರ್ಷಿತರಾಗಿ ಬೇರೆ ಪ್ರದೇಶ ಮತ್ತು ರಾಜ್ಯಗಳಿಂದ ವಲಸೆ ಬಂದು ಇಲ್ಲಿ ನೆಲೆಸಿದ್ದಾರೆ. ಹೀಗಾಗಿ ಹೊಸದಾಗಿ ಗಣಿ ಕಾರ್ಮಿಕರ ಕ್ಯಾಂಪ್‌ಗಳು ತಲೆ ಎತ್ತಿದ್ದವು. ಆದರೆ ವಸತಿ, ಕಲುಷಿತನೀರು,ಧೂಳಿನ ಪರಿಸರ ಇತ್ಯಾದಿಗಳಲ್ಲಿ ಕಡಿಮೆ ಕೂಲಿಗಾಗಿ ಕೂಲಿ ಕುಟುಂಬಗಳು ದುಡಿಯ ತೊಡಗಿದರು.

ಕಬ್ಬಿಣ ಗಣಿಗಾರಿಕೆಯಲ್ಲಿ ಅದಿರು ಬಗೆದು ಕಲ್ಲು ಒಡೆಯುವುದು, ಕಲ್ಲು ಪುಡಿಮಾಡುವುದು ಜರಡಿ ಹಿಡಿಯುವುದು, ಕಲ್ಲು ಗ್ರೈಡ್ ಮಾಡುವುದು, ಕಲ್ಲು ಆರಿಸುವುದು, ಕಲ್ಲು ಹೊರುವುದು ಕಸ ಗುಡಿಸುವುದು, ಕಿಡ್ ಆಕ್ಸೈಡ್ ಪುಡಿಯನ್ನು ಚೀಲಗಳಿಗೆ ತುಂಬುವುದು ಮುಂತಾದ ತಳಹಂತದ ಕೆಲಸಗಳಲ್ಲಿ ಮಹಿಳಾ ಕೂಲಿಕಾರ್ಮಿಕರು ದುಡಿಯುವುದನ್ನು ಕಾಣಬಹುದು. ಗಣಿಗಳಲ್ಲಿ ಕೆಲಸ ಮಾಡುವ ಶಾಶ್ವತ ಕಾರ್ಮಿಕರಿಗೆ ಮಾತ್ರ ವಾರದಲ್ಲಿ ಒಂದು ದಿನ ರಜೆ ಇದ್ದರೆ, ಗುತ್ತಿಗೆ ಮತ್ತು ದಿನ

ಕೂಲಿ ಮಾಡುವವರಿಗೆ ಈ ರೀತಿಯ ಯಾವುದೇ ಸೌಲಭ್ಯಗಳಿರುವುದಿಲ್ಲ. ಇವರು ಬೆಳಗ್ಗೆ ೮ ರಿಂದ ಸಂಜೆ ೬ ರ ವರೆಗೆ ಅನೇಕ ತಾಸುಗಳ ಕಾಲ ಕೆಲಸ ನಿರ್ವಹಿಸುತ್ತಾರೆ. ಮಹಿಳೆಯರು ರಾತ್ರಿ ವೇಳೆಯಲ್ಲಿ ಕೆಲಸ ಮಾಡಬಾರದೆಂಬ ನಿರ್ಬಂಧವಿದೆಯಾದರೂ ರಾತ್ರಿ ಹೊತ್ತು ಕೆಲವೆಡೆ ಲೋಡಿಂಗ್ ನಡೆಯುವಲ್ಲಿ ಮಹಿಳೆಯರು ಮತ್ತು ಬಾಲ ಕಾರ್ಮಿಕರನ್ನು ಕೆಲಸಕ್ಕೆ ಬಳಸುತ್ತಿರುವ ಸಂಗತಿಗಳು ಕಂಡು ಬರುತ್ತಿವೆ. ಇವರುಗಳಲ್ಲಿ ಅನೇಕ ದೇವದಾಸಿ ಮಹಿಳೆಯರು ಕಂಡುಬರುತ್ತಾರೆ. ಅಲ್ಲದೆ ಇವರ ಮಕ್ಕಳು ಸಹ ತಾಯಿಯ ಆರ್ಥಿಕ ಸಹಾಯಕ್ಕಾಗಿ ಬಾಲಕಾರ್ಮಿರಾಗಿರುವ ಸಂಗತಿಯನ್ನು ಕ್ಷೇತ್ರದಲ್ಲಿ ಕಂಡುಬರುತ್ತಿದೆ.

ಗಣಿಗಾರಿಕೆ ನಡೆಯುವ ಪ್ರದೇಶಗಳಲ್ಲಿ ಗಣಿ ಮಾಲಿಕರಿಗೆ ಹಾಗೂ ಕೂಲಿ ಕಾರ್ಮಿಕರಿಗೂ ಯಾವುದೇ ನೇರ ಸಂಬಂಧವಿರುವುದಿಲ್ಲ. ಮಾಲೀಕರಿಗೆ ದಿನನಿತ್ಯ ಬೇಕಾಗುವ ಕೂಲಿಗಳನ್ನು ಸರಬರಾಜು ಮಾಡುವ ಮೇಸ್ತ್ರೀಗಳು, ಲೇಬರ್ ಕಂಟ್ರ್ಯಾಕ್ಟರ್ ಎನ್ನುವ ಒಂದು ವರ್ಗ ಸೃಷ್ಟಿಯಾಗಿದ್ದು ಕೂಲಿ ಕಾರ್ಮಿಕರು ಅವರವರ ಮೇಸ್ತ್ರಿಗಳ, ಗುತ್ತಿಗೆದಾರರ ಹಿಡಿತದಲ್ಲಿರುತ್ತಾರೆ. ಹೀಗಾಗಿ ಮೇಸ್ತ್ರಿಗಳು ಹೇಳುವ ಎಂತಹ ಶ್ರಮದಾಯಕ ಕೆಲಸವಾದರು ಹೊಟ್ಟೆ ಪಾಡಿನ ಕಾರಣಕ್ಕಾಗಿ ಎಂತಹ ನೋವನ್ನಾದರೂ ಸಹಿಸಿಕೊಂಡು ಕೆಲಸ ಮಾಡುತ್ತಾರೆ.

"ಮಹಿಳೆಯರು ಮತ್ತು ದೇವದಾಸಿ ಮಹಿಳೆಯರ ಬಡತನ ಅಸಹಾಯಕತೆಯನ್ನು ಮಧ್ಯವರ್ತಿಗಳು ದುರುಪಯೋಗ ಪಡಿಸಿಕೊಂಡು ಶೋಷಿಸುತ್ತಿದ್ದಾರೆ. ಕೆಲವೊಮ್ಮೆ ಇದು ಲೈಂಗಿಕ ಶೋಷಣೆಯ ಹಂತಕ್ಕೂ ಹೋಗಿರುವುದು ಕಂಡುಬರುತ್ತದೆ"*(ಸಂತೋಷ್‌ಕುಮಾರ್ ಎಚ್ ಬಿ:೨೦೧೨:೧೬೭).* ಇವರು ಕೆಲಸ ಮಾಡುವ ಪರಿಸರ ಕಲುಷಿತ ಧೂಳಿನಿಂದ ಕೂಡಿರುವುದರಿಂದ ಕಣ್ಣಿನ ಚರ್ಮಕ್ಕೆ ಸಂಬಂಧಿಸಿದ ಕಾಯಿಲೆಗಳು ಕಂಡುಬರುವುದು ಸಾಮಾನ್ಯವಾಗಿದೆ. ಪ್ರಸ್ತುತದಲ್ಲಿ ಇಲ್ಲಿ ಕೆಲಸ ಮಾಡುವವರಿಗೆ ಕ್ಷಯ, ಶ್ವಾಸಕೋಶ ಸಂಬಂಧಿ ಕಾಯಿಲೆ, ಕ್ಯಾನ್ಸರ್, ಎದೆನೋವು, ಅಲರ್ಜಿಗಳಾಗಿವೆ. ಗಣಿಕೂಲಿಕಾರರಿಗೆ ಗಣಿ ಮಾಲಿಕರಿಂದಾಗಲಿ ಮತ್ತು ಸರ್ಕಾರದಿಂದಾಗಲೀ ಯಾವುದೇ ವೈದ್ಯಕೀಯ ಸೌಲಭ್ಯಗಳು ವಿಶೇಷವಾಗಿ ದೇವದಾಸಿ ಮಹಿಳೆಯರಿಗೆ ಸರಿಯಾಗಿ ಸಿಗುತ್ತಿಲ್ಲ.

ಇತ್ತೀಚೆಗೆ ಗಣಿಗಾರಿಕೆಯು ಯಾಂತ್ರೀಕರಣಕ್ಕೆ ಒಳಗಾಗುತ್ತಿರುವುದರಿಂದಾಗಿ ಇವರಿಗೆ ದುಡಿಮೆಯ ಅವಕಾಶಗಳು ಕಡಿಮೆಯಾಗಿವೆ. ಇಡೀ ಕುಟುಂಬದ ಜವಾಬ್ದಾರಿಗಳ ಜೊತೆ ಜೊತೆಗೆ ಉತ್ಪದನಾ ದುಡಿಮೆಯನ್ನು ದೇವದಾಸಿ ಮಹಿಳೆ ನಿರ್ವಹಿಸುತ್ತಿದ್ದರು ಇವರ ಬದುಕು ಮಾತ್ರ ಕಗ್ಗತ್ತಲೆಯಿಂದ ಕೂಡಿದೆ. ಒಂದು ಕಡೆ ಬಂಡವಾಳಶಾಹಿಗಳ ಶೋಷಣೆಗೆ, ಇನ್ನೊಂದು ಕಡೆ ಕೌಟುಂಬಿಕ, ಪುರುಷಾಶಾಯಿ ಶೋಷಣೆಯ ಸಂಕೋಲೆಯಲ್ಲಿ ದೇವದಾಸಿ ಮಹಿಳಾ ಕಾರ್ಮಿಕರು ನಲಗುತ್ತಿದ್ದಾರೆ.

ಇತ್ತೀಚೆಗೆ ಸುಪ್ರೀಂಕೋರ್ಟ್ ಗಣಿಗಾರಿಕೆಯ ಮೇಲೆ ನಿಷೇಧ ಹೇರಿರುವುದರಿಂದಾಗಿ ಇದೇ ಭಾಗದ ಗಣಿಗಾರಿಕೆಯು ಕುಂಠಿತಗೊಂಡಿದೆ. ದಿನನಿತ್ಯ ಸಾವಿರಾರು ಲಾರಿಗಳಿಗೆ, ಕಾರ್ಮಿಕರಿಗೆ ಉದ್ಯೋಗ ಒದಗಿಸುತ್ತಿದ್ದ ಗಣಿಗಾರಿಕೆ ನಿಂತು ಹೋಗಿದೆ. ಆ ಅದಿರಿಗೆ ಬೆಲೆ ಹೆಚ್ಚಿದ್ದ ಸಮಯದಲ್ಲಿ ಕೃಷಿ ಭೂಮಿಯಲ್ಲಿ ಡಿಗ್ಗಿಂಗ್ ಮಾಡಿದ ಕಾರಣ ಕೃಷಿ ಭೂಮಿಯು ಹಾಳಾಗಿ ಹೋಗಿದೆ. ಇದರಿಂದ

ದೇವದಾಸಿ ಮಹಿಳಾ ಕಾರ್ಮಿಕರಿಗೆ ಗಣಿಯಲ್ಲೂ ಕೆಲಸವಿಲ್ಲದೆ ಕೃಷಿಕೂಲಿಯೂ ಸಿಗದೆ ಬೇರೆ ಉದ್ಯೋಗ ಅರಸಿಕೊಂಡು ಬೇರೆ ಪ್ರದೇಶಕ್ಕೆ ವಲಸೆ ಹೋಗತೊಡಗಿದ್ದಾರೆ. ದೇವದಾಸಿ ಮಹಿಳೆಯರು ಮನೆಗೆಲಸ ಅರಸಿ ಮನೆ ಕೆಲಸಕ್ಕೆ ಇಟ್ಟುಕೊಳ್ಳಿ ಎಂದು ಅಂಗಲಾಚುವ ಸ್ಥಿತಿ ಬಂದಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಇತ್ತೀಚೆಗೆ ಹೆಚ್ಚು ಕೈಗಾರಿಕೆಗಳು ಸ್ಥಾಪನೆಯಾಗುತ್ತಿರುವುದು ಕಂಡುಬರುತ್ತದೆ. ಅದರಲ್ಲಿ ತೋರಣಗಲ್ ಬಳಿಯ ಜಿಂದಾಲ್ ಉಕ್ಕಿನಕಾರ್ಖಾನೆ ಹಾಗೂ ಸರಕಾರಿ ಸ್ವಾಮ್ಯದ ಎನ್.ಎಂ.ಡಿ.ಸಿ.ಜೊತೆಗೆ ಕುಡುತಿನಿ ಬಳಿಯ ಶಾಖೋತ್ಪನ್ನ ವಿದ್ಯುತ್ ಕೇಂದ್ರ, ಡಾಣಾಪುರದ ಬಳಿ ಬಿ.ಎಂ.ಎಂ ಕಾರ್ಖಾನೆ ಹೀಗೆ ಅನೇಕ ಕೈಗಾರಿಕೆಗಳು ಸ್ಥಾಪನೆ ಆಗಿವೆ. ಇತ್ತೀಚಿನ ಹತ್ತು ವರ್ಷಗಳಲ್ಲಿ ಜಿಲ್ಲೆಯಲ್ಲಿ ಗಣಿಗಾರಿಕೆ ಮತ್ತು ಗಣಿ ಉದ್ದಿಮೆ ಗಣನೀಯವಾಗಿ ಬೆಳವಣಿಗೆಯಾಗಿತ್ತು. ಹಲವಾರು ಕ್ಷೇತ್ರಗಳ ಮೇಲೆ ಇದರ ಪರಿಣಾಮ ಉಂಟಾಗಿರುವುದರ ಜೊತೆಗೆ ಹಲವಾರು ಸಮಸ್ಯೆಗಳಿಗೆ ಎಡೆಮಾಡಿ ಕೊಟ್ಟಿರುವುದನ್ನು ವಿಶೇಷವಾಗಿ ಗಮನಿಸಬಹುದಾಗಿದೆ.

**ಇತರೆ**

ದೇವದಾಸಿ ಮಹಿಳೆಯರು ಕೃಷಿಯನ್ನು ಮತ್ತು ವ್ಯಾಪಾರವನ್ನು ಹೊರತುಪಡಿಸಿ ಇನ್ನು ಹಲವಾರು ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. ಅವುಗಳನ್ನು ನೋಡುವುದಾದರೆ ಗಾರೆಕೆಲಸ, ಕಾರ್ಖಾನೆಗಳಲ್ಲಿ, ಮನೆಕೆಲಸ, ರಾಟೆ ಹೊಲೆಯುವುದು ಮುಂತಾದ ಕೆಲಸಗಳನ್ನು ಮಾಡುತ್ತಾ ಕುಟುಂಬದ ಆರ್ಥಿಕತೆಯನ್ನು ನಿಭಾಯಿಸುತ್ತಿದ್ದಾರೆ.

ದೇವದಾಸಿ ಮಹಿಳೆಯರನ್ನು ಕೃಷಿಕೂಲಿ ಮತ್ತು ವ್ಯಾಪಾರವನ್ನು ಹೊರತು ಪಡಿಸಿ ನೋಡಿದರೆ ಈ ಕಟ್ಟಡ ನಿರ್ಮಾಣ (ಗಾರೆ ಕೆಲಸ) ಕೆಲಸದಲ್ಲಿಯೂ ಕಂಡುಬರುತ್ತಾರೆ. ಕಾರಣವೆಂದರೆ ಇಲ್ಲಿ ಹೆಚ್ಚು ಕೂಲಿ ದೊರೆಯುವುದು. ಆದರೆ ಇಲ್ಲಿ ಪುರುಷರಿಗಿಂತ ಮಹಿಳೆಯರಿಗೆ ಕಡಿಮೆ ಕೂಲಿ ನೀಡುತ್ತಾರೆ. ಇತರೆ ಕೂಲಿಗಳಿಗಿಂತ ಗಾರೆ ಕೆಲಸದಲ್ಲಿ ಅಧಿಕ ಕೂಲಿ ಸಿಗುವುದರಿಂದ ಮತ್ತು ಕೃಷಿಗಳಲ್ಲಿ ಆಧುನಿಕ ವಸ್ತುಗಳ ಬಳಕೆಯಿಂದ ಅಲ್ಲಿಯೂ ಕೆಲಸಗಳು ಇಲ್ಲದ ಕಾರಣವನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿಸಿದ್ದಾರೆ.

**ಕಟ್ಟಡ ನಿರ್ಮಾಣದ ಕೆಲಸ**

ಕಟ್ಟಡ ನಿರ್ಮಾಣದ ಕೆಲಸವು ಕೃಷಿ ಹಾಗೂ ಇತರೆ ಕೆಲಸದ ಸ್ವರೂಪಕ್ಕಿಂತ ಭಿನ್ನವಾಗಿರುವುದು ಕಂಡು ಬರುತ್ತದೆ. ೨೦೦೦ ರಲ್ಲಿ ಸೇವಾ ಸಂಸ್ಥೆಯವರು (ಎಸ್.ಇ) ನಡೆಸಿದ ಗುಜರಾತ್‌ನ ಕಟ್ಟಡ ನಿರ್ಮಾಣ ಕಾರ್ಮಿಕರ ಒಂದು ಅಧ್ಯಯನ, ದೆಹಲಿ ಕಟ್ಟಡ ನಿರ್ಮಾಣ ಕಾರ್ಮಿಕರ ಕುರಿತು ಎಸ್.ಎನ್.ರಾನಡೆ ಅಧ್ಯಯನ ಬಿಹಾರದ ಕಟ್ಟಡ ನಿರ್ಮಾಣ ಕಾರ್ಯದ ಸ್ವರೂಪದ ಕುರಿತು ತಿಳಿಸುತ್ತದೆ. ಕಟ್ಟಡದ ನಿರ್ಮಾಣ ಕೆಲಸವು ಕೃಷಿಯ ನಂತರ ಅಧಿಕ ಜನ ಕೃಷಿ ಮಹಿಳಾ ಕಾರ್ಮಿಕರಿಗೆ ಹಾಗೂ ಪುರುಷ ಕಾರ್ಮಿಕರಿಗೆ ಉದ್ಯೋಗ ನೀಡುತ್ತಿರುವ ಉದ್ಯಮವಾಗಿದೆ. ಈ ಉದ್ಯಮವು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದು ಇಂದು ನಗರೀಕರಣದ ಪ್ರಭಾವದಿಂದಾಗಿ ತೀವ್ರಗತಿಯಲ್ಲಿ

ಬೆಳೆಯುತ್ತಿರುವ ಉದ್ಯಮವಾಗಿದೆ. ಈ ಕೆಲಸವು ನಗರ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿದ್ದು ಗ್ರಾಮೀಣ ಜನರನ್ನೂ ಮತ್ತು ಕೃಷಿ ಕಾರ್ಮಿಕರನ್ನು ತನ್ನ ಕಡೆ ಆಕರ್ಷಿಸುವ ಒಂದು ಉದ್ಯಮವಾಗಿ ಬೆಳೆಯುತ್ತಿವೆ.

ಕಟ್ಟಡ ನಿರ್ಮಾಣದ ಕೆಲಸದ ಸ್ವರೂಪವು ದಿನಕೂಲಿ ಸ್ವರೂಪದ ಉದ್ಯೋಗವಾಗಿದೆ. ಇಲ್ಲಿ ಕೌಶಲ್ಯ ಹೊಂದಿದ, ಅರೆ ಕೌಶಲ್ಯ ಹೊಂದಿದ ಮತ್ತು ಕೌಶಲ್ಯ ರಹಿತ ಕಾರ್ಮಿಕರು ಉದ್ಯೋಗದಲ್ಲಿ ನಿರತರಾಗಿರುತ್ತಾರೆ. ಕೌಶಲ್ಯರಹಿತ ಕಾರ್ಮಿಕರು ದೇವದಾಸಿ ಮಹಿಳೆಯರಾಗಿದ್ದರೆ. ಈ ಉದ್ಯಮದಲ್ಲಿ ಕಾರ್ಮಿಕರಾಗಿ ದುಡಿಯುವವರಲ್ಲಿ ಅಧಿಕ ಸಂಖ್ಯೆಯ ಜನರು ಮಹಿಳೆಯರೇ ಆಗಿದ್ದಾರೆ. ಹಾಗೂ ಎಸ್.ಸಿ, ಎಸ್.ಟಿ. ಗೆ ಸೇರಿದವರು ಆಗಿದ್ದಾರೆ. ಕಟ್ಟಡ ನಿರ್ಮಾಣ ಕೆಲಸವು ಒಂದು ಕಟ್ಟದ ನಿರ್ಮಾಣಕ್ಕೆ ಬೇಕಾದ ಎಲ್ಲ ಹಂತದ ಎಲ್ಲ ಕಾರ್ಮಿಕರನ್ನು ಒಳಗೊಂಡಿದೆ. ಈ ಉದ್ಯೋಗದ ಅವಧಿಯು ಸೀಮಿತ ಅವಧಿಯದ್ದಾಗಿರುತ್ತದೆ. ಒಂದು ಸೈಟ್ (ಸ್ಥಳ) ನಲ್ಲಿ ಉದ್ಯೋಗ ಪೂರ್ಣಗೊಂಡರೆ ಮತ್ತೊಂದು ಸೈಟ್ ಹುಡುಕಿ ಕೆಲಸ ಮಾಡಬೇಕಾದ್ದರಿಂದ ಇದೊಂದು ಸರಾಸರಿ ಸ್ವರೂಪದ ಉದ್ಯೋಗವಾಗಿದೆ. ಕೆಲಸದ ಅವಧಿ ಸೀಮಿತವಾಗಿರುವುದರಿಂದ ವಾರದಲ್ಲಿ ಕೆಲವು ದಿನಗಳು ಅಥವಾ ತಿಂಗಳುಗಳಲ್ಲಿ ಕೆಲವು ವಾರಗಳವರೆಗೆ ಮಾತ್ರ ದೇವದಾಸಿಯರಿಗೆ ಕೆಲಸ ದೊರೆಯುತ್ತದೆ. ಕಟ್ಟಡ ನಿರ್ಮಾಣ ಕಾರ್ಯಗಳು ನಗರ ಪ್ರದೇಶಗಳಲ್ಲಿ ಅಥವಾ ನಗರದಿಂದ ದೂರದ ಪ್ರದೇಶಗಳಲ್ಲಿ ನಡೆಯುತ್ತಿರುವುದರಿಂದ ದೇವದಾಸಿಯರು ಕೆಲಸದ ಸ್ಥಳಗಳಿಗೆ ಪ್ರಯಾಣ ಮಾಡಬೇಕಾಗುತ್ತದೆ. ಕಟ್ಟಡ ನಿರ್ಮಾಣದ ಕಾರ್ಯದಲ್ಲಿ ಕೃಷಿಯ ಕೂಲಿಗಿಂತಲೂ ಅಧಿಕ ಕೂಲಿ ಸಿಗುವುದರಿಂದ ಕೃಷಿ ಕೆಲಸದಲ್ಲಿ ತೊಡಗಿರುವ ಕೆಲವು ದೇವದಾಸಿ ಮಹಿಳೆಯರು ಕಟ್ಟಡ ನಿರ್ಮಾಣದ ಕಾರ್ಯದಲ್ಲಿ ವಲಸೆ ಬರುತ್ತಿರುವುದು ಕಂಡುಬರುತ್ತದೆ. ಕೆಲಸದಲ್ಲಿ ಕೌಶಲ್ಯ ಪಡೆದ ಪುರುಷರ ಕೆಲಸ ಅರಾಮದಾಯಕ ಮತ್ತು ಕೈಚಳಕದಿಂದ ಕೂಡಿದ್ದರೆ, ದೇವದಾಸಿ ಮಹಿಳೆಯರ ಕೆಲಸವು ಶ್ರಮದಾಯಕ ಮತ್ತು ಕೌಶಲ್ಯರಹಿತವಾಗಿರುತ್ತದೆ.

**ಕಟ್ಟಡ ನಿರ್ಮಾಣದಲ್ಲಿ ಮಹಿಳೆಯರ ಕೆಲಸ**

೧. ಕಲ್ಲು ಹೊರುವುದು, ಇಟ್ಟಿಗೆ ಹೊರುವುದು

೨. ಮಣ್ಣು ಹೊರುವುದು

೩. ಉಸುಕು ಹೊರುವುದು

೪. ಮಾಲ್ ಕೊಡುವುದು(ಸಿಮೆಂಟ್ ಉಸುಕು ಮಿಶ್ರಿತ)

೫. ಕಾಂಕ್ರೆಟ್ ಕೊಡುವುದು (ಸಿಮೆಂಟ್ ಸಣ್ಣಕಲ್ಲು ಮಿಶ್ರಿತ)

೬. ನೀರು ಹೊರುವುದು

೭. ಕಟ್ಟಡಕ್ಕೆ ನೀರು ಹಾಯಿಸುವುದು

೮. ಉಸುಕನ್ನು ಜರಡಿ ಹಿಡಿಯುವುದು

೯. ರಬ್ಬರ್ ಹೊರುವುದು ಮತ್ತು ಹಾಕುವುದು

೧೦. ಯಂತ್ರ ತಿರುಗಿಸುವುದು

ಮುಂತಾದವುಗಳು. ಕಟ್ಟಡ ನಿರ್ಮಾಣ ಕಾರ್ಯದ ವಿವಿಧ ಹಂತಗಳಲ್ಲಿ ದುಡಿಯುವ ದೇವದಾಸಿ ಮಹಿಳೆ ಮತ್ತು ಪುರುಷರು ಮಾಡುವ ಕಾರ್ಯಗಳನ್ನು ಗಮನಿಸಿದರೆ ಇಬ್ಬರು ಮಾಡುವ ಕಾರ್ಯಗಳಲ್ಲಿ ವ್ಯಾತ್ಯಾಸವಿರುವುದು ಕಂಡು ಬರುತ್ತದೆ. ಮಹಿಳೆಯರು ಇಟ್ಟಿಗೆ ಸುಡುವ, ಕಲ್ಲು ಹೊರುವ, ಸಿಮೆಂಟ್ ಹೊರುವ, ಉಸುಕು ಮಣ್ಣು ಹೊರುವ, ಮಲ್ ಕೊಡುವ, ನೀರು ಹೊರುವ, ಕಾಂಕ್ರಿಟ್ ಕೊಡುವ ಕಟ್ಟಡಕ್ಕೆ ನೀರು ಹಾಯಿಸುವ ಮತ್ತು ಉಸುಕನ್ನು ಜರಡಿ ಹಿಡಿಯುವ ಇತ್ಯಾದಿ ಕೆಲಸಗಳನ್ನು ಮಾಡುತ್ತಿರುವುದು ಕಂಡು ಬರುತ್ತಿದೆ. ಈ ಕೆಲಸಗಳು ಭಾರವಾಗಿದ್ದು ಬಗ್ಗಿ ಎದ್ದು ಮಾಡುವ ಕೆಲಸಗಳಾಗಿವೆ. ಆದರೆ ಪುರುಷರು ಮಾಡುವ ಕೆಲಸಗಳಾದ ಬುನಾದಿ ಕಡಿಯುವುದನ್ನು ಹೊರತುಪಡಿಸಿ ರಬ್ಬಲ್ ಹಾಕುವುದು, ಸಿಮೆಂಟ್ ಕಲಿಸುವುದು, ಮೇಸ್ತ್ರಿ ಕೆಲಸ, ಕಾಂಟ್ರಕ್ಟರ್ ಕೆಲಸಗಳು ಮತ್ತು ಮನೆಯ ನಿರ್ಮಾಣಕ್ಕೆ ಅಗತ್ಯವಾದ ಕಿಟಕಿ ಬಾಗಿಲು ತಯಾರಿಸುವ ಕಾರ್‌ಪೆಂಟರ್ ಅಥವಾ ಬಡಗಿ ಕೆಲಸ ಅಥವಾ ಎಲೆಕ್ಟ್ರಿಷಿಯನ್ ಕೆಲಸಗಳು ಕುಳಿತು ಮಾಡುವ ಹಾಗೂ ಕಡಿಮೆ ದೈಹಿಕ ಶ್ರಮ ಹೊಂದಿರುವ ಕೆಲಸಗಳಾಗಿವೆ. ಪುರುಷರು ಮಾಡುವ ಈ ಕೆಲಸಗಳು ಕೈಚಳಕಕ್ಕೆ ಸಂಬಂಧಿಸಿದ ಕೌಶಲ್ಯದಿಂದ ಕೂಡಿದ ಕೆಲಸಗಳಾಗಿದ್ದು ಇವು ಪುರುಷರಿಗೆ ಅಧಿಕ ಕೂಲಿಯನ್ನು ಒದಗಿಸುತ್ತವೆ. ಆದರೆ ಮಹಿಳೆಯರು ಮಾಡುವ ಕೆಲಸಗಳು ಶ್ರಮವಹಿಸಿ ಮಾಡುವ ಕೆಲಸಗಳಾಗಿದ್ದು ಇವು ಅವರಿಗೆ ಕಡಿಮೆ ಕೂಲಿಯನ್ನು ನೀಡುವಂತೆ ಮಾಡಿವೆ. ಆದ್ದರಿಂದಾಗಿ ಅವರು ಕಡಿಮೆ ಅಂದರೆ ಪುರುಷರಿಗಿಂತ ಕಡಿಮೆ ಕೂಲಿ ಪಡೆಯುತ್ತಾರೆ. ಹೀಗೆ ದುಡಿದ ದೇವದಾಸಿ ಮಹಿಳೆಯರಿಗೆ ವಾರದಲ್ಲಿ ಒಂದು ಗೊತ್ತಾದ ವಾರದಂದು ಇಡೀ ವಾರದ ಕೂಲಿಯನ್ನು ಪಾವತಿಸುತ್ತಾರೆ.

ಕೆಲಸದ ಸಂದರ್ಭದಲ್ಲಿ ದೇವದಾಸಿ ಮಹಿಳೆಯರ ಮೇಲೆ ದಬ್ಬಾಳಿಕೆ ದೌರ್ಜನ್ಯಗಳು ನಡೆಯುತ್ತಿರುವುದು ಕಂಡುಬರುತ್ತದೆ. ಗ್ರಾಮೀಣ ಭಾಗದಲ್ಲಿ ಇಂದಿಗೂ ಕೂಡ ಗೌಡಿಕೆ ಪದ್ಧತಿ, ಜಮಿನ್ದಾರಿ ಪದ್ಧತಿಗಳು ಆಚರಣೆಯಲ್ಲಿರುವುದು ಕಂಡುಬರುತ್ತದೆ. ಇಂತಹ ಅಧಿಕಾರಶಾಹಿ ಮತ್ತು ಶ್ರೀಮಂತರ ಜಮೀನಿನಲ್ಲಿ ಕೆಲಸಕ್ಕೆ ಹೋದ ಕೃಷಿ ಅಥವಾ ಇತರೆ ಕೆಲಸದಲ್ಲಿ ಅವರಿಂದ ನಾನಾ ರೀತಿಯ ದಬ್ಬಾಳಿಕೆಗೆ ಒಳಗಾಗುತ್ತಿರುವುದು ಕಂಡುಬರುತ್ತದೆ. ಇವರುಗಳು ಅವಧಿಗಿಂತ ಹೆಚ್ಚಾಗಿ ದುಡಿಸಿಕೊಂಡು ಕಡಿಮೆ ಕೂಲಿ ನೀಡುವುದು, ಸಣ್ಣತಪ್ಪಿಗೂ ದೇವದಾಸಿ ಮಹಿಳೆಯರಿಗೆ ಅವಾಚ್ಯ ಶಬ್ದಗಳಿಂದ ಬೈಯುವುದು ಅಲ್ಲದೆ ದೇವದಾಸಿ ಮಹಿಳೆಯರನ್ನು ಲೈಂಗಿಕವಾಗಿ ಬಳಸಿಕೊಳ್ಳುತ್ತಾರೆ. ಆಸರೆ ಅಥವಾ ಗಂಡು ದಿಕ್ಕಿಲ್ಲದ ದೇವದಾಸಿ ಮಹಿಳೆಯರಿಗೆ ಕೂಲಿ ಅಥವಾ ಇತರೆ ಆಸೆಗಳನ್ನು ಹುಟ್ಟಿಸಿ ಲೈಂಗಿಕವಾಗಿ ಬಳಸಿಕೊಳ್ಳುತ್ತಾರೆ. ಹೀಗಿರುವುದರಿಂದ ಕೆಲವು ದೇವದಾಸಿ ಮಹಿಳೆಯರಿಗೆ ಏಡ್ಸ್ ರೋಗವು ಕಂಡುಬಂದಿರುವುದು ತಿಳಿದು ಬಂದಿದೆ.

ದೇವದಾಸಿ ಮಹಿಳೆಯರು ಗಾಣದ ಎತ್ತಿನಂತೆ ಮನೆ ಕೆಲಸ ಮಾಡಿ, ಮಕ್ಕಳ ಪಾಲನೆ ಪೋಷಣೆ ಹಾಗೂ ಹೆಚ್ಚಿನ ದೈಹಿಕ ಶ್ರಮವಹಿಸಿ ದುಡಿವ ಕೆಲಸಗಳನ್ನು ಮಾಡುವುದರಿಂದ ದುಶ್ಚಟಗಳಿಗೆ

ಬಲಿಯಾಗಿದ್ದಾರೆ. ನಶ್ಯ ತಿಕ್ಕುವುದು, ರಾತ್ರಿಯ ಸಮಯದಲ್ಲಿ ಮಾದಕ ವಸ್ತುಗಳನ್ನು ಕೆಲವು ದೇವದಾಸಿ ಮಹಿಳೆಯರು ಸೇವಿಸುತ್ತಾರೆ. ಇವುಗಳು ಹೆಚ್ಚಾಗಿ ಪರಿಶಿಷ್ಟ ಜಾತಿಯ ದೇವದಾಸಿಯರಲ್ಲಿ ಕಂಡುಬರುತ್ತವೆ. ಇದರಿಂದ ತಮ್ಮ ಹಣ ಮತ್ತು ಆರೋಗ್ಯವನ್ನು ಕಳೆದುಕೊಳ್ಳುತ್ತಿರುವುದು ಕಂಡುಬರುತ್ತದೆ. ಇದರಿಂದಾಗಿ ಅವರ ಆರೋಗ್ಯ ಹಾಳಾಗುವುದರ ಜೊತೆಗೆ ಆರ್ಥಿಕವಾಗಿ ಸಹ ದುರ್ಬಲರಾಗುತ್ತಾರೆ.

**ದೈವ ಸಂಬಂಧಿ ಆಚರಣೆಯಲ್ಲಿ ದೇವದಾಸಿ ಮಹಿಳೆಯರ ಆರ್ಥಿಕತೆ**

ಮಾನವರು ಪ್ರಕೃತಿಯಲ್ಲಿನ ಶಕ್ತಿಯಲ್ಲಿ ಅಪಾರವಾದ ನಂಬಿಕೆಯನ್ನು ಇಟ್ಟುಕೊಂಡು ಆರಾಧನೆ ಮಾಡುತ್ತಾರೆ. ಈ ಹಿನ್ನೆಲೆಯಲ್ಲಿ ದೈವರಾಧನೆಯು ಮನುಷ್ಯ ಬದುಕಿನ ಅವಿಭಾಜ್ಯ ಅಂಗವಾಗಿ ಬೆಳೆಯಿತು. ಪ್ರಕೃತಿಯಲ್ಲಿನ ಅತಿವೃಷ್ಟಿ, ಅನಾವೃಷ್ಟಿ, ಕ್ಷಾಮ, ಬರಗಾಲಗಳಿಗೆ ದೇವರುಗಳು ಮುನಿಸಿಕೊಂಡಿವೆ ಅಥವಾ ಕೋಪಗೊಂಡಿವೆ ಎಂದು ನಂಬಿದರು. ದೇವರನ್ನು ಒಲಿಸಿಕೊಳ್ಳಲು ಅಥವಾ ಕೋಪವನ್ನು ಶಾಂತಗೊಳಿಸಲು ಅಥವಾ ದೇವರ ಸೇವೆ ಮಾಡುವಲ್ಲಿ ಅನೇಕ ಧಾರ್ಮಿಕ ಸಂಪ್ರದಾಯದ ಆಚರಣೆಗಳನ್ನು ತಂದರು. ಅಲ್ಲದೆ ಸಮುದಾಯಗಳಿಗೆ ಆಂತರಿಕವಾಗಿ ಬಾಹ್ಯವಾಗಿ ಅಥವಾ ವೈಯಕ್ತಿಕವಾಗಿ ತೊಂದರೆ ಸಮಸ್ಯೆಗಳು ದುಃಖ ದುಮ್ಮಾನಗಳು ನೋವುಗಳು ದನಕರುಗಳಿಗೆ ರೋಗ ಕಾಣಿಸಕೊಂಡು ಅನಾರೋಗ್ಯಕ್ಕೆ ತುತ್ತಾದಾಗ ಭೂತ ಪ್ರೇತಗಳ ಹಾವಳಿ ಉಂಟಾದ ಸಂದರ್ಭದಲ್ಲಿ ಅದರ ನಿವಾರಣೆಗಾಗಿ ಮನೆ ದೇವರುಗಳಲ್ಲಿ ಹರಿಕೆ ಮಾಡಿಕೊಳ್ಳುವುದು ಸಾಮಾನ್ಯವಾಗಿದೆ.ನೈವೇದ್ಯ, ಪೂಜೆ, ಅಭಿಷೇಕ, ಇತರೆ ಕಾಣಿಕೆಗಳು ವಸ್ತುರೂಪದಲ್ಲಿ ಅಥವಾ ಹಣದ ರೂಪದಲ್ಲಿ ಹಾಗೆ ಪ್ರಾಣಿಬಲಿ ನೀಡುವುದು ಬೆತ್ತಲೆ ಸೇವೆ ಮಾಡುವ, ಉಟಿಗೆ ಉಡಿಸುವುದು ದೇವರಿಗೆ ಸ್ತ್ರೀಯರನ್ನು ಬಿಡುವುದು ಮನೆಯ ಆಕಳು ಕೋಣಗಳನ್ನು ದೇವರಿಗೆ ಬಿಡುವುದು, ಸಾಮಾನ್ಯವಾಗಿ ಕಂಡುಬರುತ್ತದೆ.ಹೀಗೆ ಧಾರ್ಮಿಕ ಆಚರಣೆಗಳ ಹಿನ್ನೆಲೆಯಲ್ಲಿ ದೇವದಾಸಿ ಸಂಪ್ರದಾಯ ಬೆಳೆದುಕೊಂಡು ಬಂದಿದೆ. ಅಲ್ಲದೆ ಇದಕ್ಕೆ ಅನೇಕ ಕಾರಣಗಳು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿವೆ. ಮನೆಯಲ್ಲಿ ಗಂಡು ಮಕ್ಕಳಿಲ್ಲದೆ ತಂದೆ ತಾಯಿಯ ಪೋಷಣೆ ಮತ್ತು ವಂಶಬೆಳವಣಿಗೆ, ಮೈಮೆಲೆ ದೇವರು ಬರುವುದು, ಕೂದಲು ಗಂಟುಕಟ್ಟುವುದು, ಕುಟುಂಬದ ಆರ್ಥಿಕ ಪರಿಸ್ಥಿತಿ ಸುಧಾರಿಸಲು ಅಥವಾ ಆರ್ಥಿಕತೆಯ ಕೊರತೆಯಿಂದಾಗಿಯೂ ಈ ದೇವದಾಸಿ ಪದ್ಧತಿ ಹುಟ್ಟಿಕೊಂಡಿದೆ.

ದೇವರ ಹೆಸರಿನಲ್ಲಿ ಬಿಟ್ಟಿರುವ ಮಹಿಳೆ ವಿವಾಹವಾಗುವಂತಿಲ್ಲ. ಆಕೆಯೂ ದೇವರನ್ನೆ ಗಂಡನೆಂದು ಭಾವಿಸಿ ಬದುಕಬೇಕಾಗುತ್ತದೆ. ಅಲ್ಲದೆ ಅವರು ನಂಬಿರುವ ದೇವಾನುದೇವತೆಗಳನ್ನು ಕುರಿತು ಕಟ್ಟಿದ ಹಾಡು, ಕಥೆಗಳು, ಅದ್ಭುತಾ ಕಲ್ಪನಾ ವೈಕರಿಯಿಂದ ಜನಪದ ಸಾಹಿತ್ಯವನ್ನು ಸಮೃದ್ಧಗೊಳಿಸಿವೆ. ಉದಾಹರಣೆಗೆ:– ಎಲ್ಲಮ್ಮನ ಹೆಸರಿನಲ್ಲಿ ಬಿಟ್ಟಿರುವ ಮಹಿಳೆಯೂ ಎಲ್ಲಮ್ಮನ ಕಥೆಯನ್ನು ಹೇಳುತ್ತಾ ಹಾಡುಗಳನ್ನು ಹಾಡುತ್ತಾ ಧರ್ಮ ಪ್ರಸಾರದ ಕಾರ್ಯ ಮಾಡುವ ಮೂಲಕ ಆರ್ಥಿಕ ಸಹಾಯ ಪಡೆಯುತ್ತಾಳೆ.

ದೇವದಾಸಿ ಮಹಿಳೆಯರ ಆರ್ಥಿಕತೆಗೆ ದೇವ ದೇವತೆಗಳು ಸಹಕಾರಿಯಾಗಿವೆ. ಇವರು ಧಾರ್ಮಿಕ ಆಚರಣೆಗಳಲ್ಲಿ ಅಲ್ಪಸ್ವಲ್ಪ ಹಣ ಸಂಪಾದನೆ ಮಾಡುತ್ತಿರುವ ಮಾಹಿತಿಯೂ ಕ್ಷೇತ್ರಕಾರ್ಯದ

ಸಂದರ್ಭದಲ್ಲಿ ತಿಳಿದು ಬಂದಿದೆ. ಬಳ್ಳಾರಿ ಜಿಲ್ಲೆಯಲ್ಲಿರುವ ಅದೆಷ್ಟೋ ದೇವದಾಸಿಯರು ದೇವಾಲಯಗಳ ಮುಂದೆ ಭಿಕ್ಷೆ ಬೇಡಿ ಬಂದ ಹಣದಿಂದ ಆರ್ಥಿಕ ಜೀವನ ನಡೆಸುತ್ತಿದ್ದಾರೆ.ಇದ್ಕಕೆ ಉದಾಹರಣೆ ಎಂದರೆ ಪ್ರತಿ ಊರು ಪಟ್ಟಣಗಳ ದೇವಸ್ಥಾನಗಳ ಮುಂದೆ ಒಂದೆರಡು ದೇವದಾಸಿಯರನ್ನು ಕಾಣಲಾಗುತ್ತದೆ. ವಿಶೇಷವಾಗಿ ಆಯಾ ದೇವ ದೇವತೆಗಳ ಜಾತ್ರೆ ಉತ್ಸವಗಳ ಸಂದರ್ಭಗಳಲ್ಲಿ ಎಲ್ಲಿಂದಲೋ ದೇವದಾಸಿ ಮಹಿಳೆಯರು ಅಲ್ಲಿದೆ ಬಂದು ಸೇರುತ್ತಾರೆ.ಜಾತ್ರೆ ಮುಗಿಯುವ ತನಕ ೨-೩ ದಿನಗಳವರೆಗೆ ಅಲ್ಲಿಯೇ ತಂಗಿದ್ದು ಹಣ, ಕಾಳು, ವಸ್ತುಗಳನ್ನು ಪಡೆದು ಜಾತ್ರೆ ಉತ್ಸವ ಮುಗಿದ ನಂತರ ತಮ್ಮ ಊರಿಗೆ ತಾವು ಪ್ರಯಾಣಿಸುತ್ತಾರೆ. ಇಂತಹ ದೇವದಾಸಿಯರಿಗೆ ಮಂಗಳವಾರ, ಶುಕ್ರವಾರ, ಹುಣ್ಣಿಮೆ, ಅಮಾವಾಸ್ಯೆ, ಜಾತ್ರೆ, ಉತ್ಸವಗಳಂತಹ ದಿನಗಳು ವಿಶೇಷವಾಗಿ ಹಣ, ಧವಸ-ಧಾನ್ಯಗಳನ್ನು ಸಂಪಾದಿಸುವ ವಿಶೇಷ ದಿನಗಳಾಗಿದೆ.

ದೇವದಾಸಿ ಮಹಿಳೆಯರು ದೇವರ ಹೆಸರಿನಲ್ಲಿ ಬಿಟ್ಟಿರುವವರು ವಾರಗಳನ್ನು ಚಾಚುತಪ್ಪದೇ ಮಾಡುತ್ತಾರೆ. ಈ ಮೇಲೆ ತಿಳಿಸಿದ ವಿಶೇಷ ದಿನಗಳಂದು ಬೆಳಗಿನ ಹೊತ್ತು ದೇವರ ಪೂಜೆ ಮಾಡಿ ಗುಡಿಗೆ ಹೋಗಿ ಬಂದು ಪಡಲಿಗೆ ಅಥವಾ ಇತರೆ ದೈವದ ಸಂಕೇತವನ್ನು ಹಿಡಿದುಕೊಂಡು ಮನೆ ಮನೆಗೆ ಹೋಗುವ ಪದ್ಧತಿಯನ್ನು ಮಾಡುತ್ತಾ ಬಂದಿದ್ದಾರೆ. ಕನಿಷ್ಟವೆಂದರೆ ೫-೯ ಮನೆಗಳಿಗಾದರು ಹೋಗಿ ಅವರಿಂದ ದವಸ ಧಾನ್ಯಗಳನ್ನು ಮತ್ತು ಹಣವನ್ನು ಪಡೆದು ಅವರಿಗೆ ದೇವರ ಹೆಸರಿನಲ್ಲಿ ಕುಂಕುಮ ಭಂಡರ ಹಚ್ಚಿ ಆರ್ಶೀವಾದ ಮಾಡುತ್ತಾರೆ. ಕೆಲವು ದೇವರಿಗೆ ಬಿಟ್ಟಿರುವ ಮಹಿಳೆಯರು ಉದೋ...ಉದೋ....ಎಂದು ಹೇಳಿದರೆ ಇನ್ನು ಕೆಲವರು ಯಕ್ಕಲ್ದೋ....ಜೋಕ್ಕಾಲ್ದೋ.....ಜೋಗ ಉದೋ...ಉದೋ.... ಎಂದು ಉಚ್ಚರಿಸುತ್ತಾರೆ. ಮನೆಯವರು ಇವರ ಈ ಶಬ್ದವನ್ನು ಕೇಳಿ ಮನೆಯಲ್ಲಿರುವ ಹಿರಿಯರು ಅಮ್ಮ ಬಂದಿದ್ದಾಳೆ ಎಂದು ಹೇಳಿ ಕಾಳು ಅಥವಾ ಹಣವನ್ನು ನೀಡುತ್ತಾರೆ. ಕೆಲವು ಹಳ್ಳಿಯವರು ಅವರ ಊರುಗಳಲ್ಲಿ ಅಷ್ಟೆ ಊರಾಡುತ್ತಾರೆ. ಇನ್ನು ಕೆಲವು ಮಹಿಳೆಯರು ನಗರ ಪ್ರದೇಶಗಳಿಗೆ ಬಂದು ಮನೆಗಳಲ್ಲಿ, ಅಂಗಡಿಗಳಲ್ಲಿ, ಬಸ್ ನಿಲ್ದಾಣಗಳಲ್ಲಿ, ತರಕಾರಿ ಮಾರುಕಟ್ಟೆಯಲ್ಲಿ, ಹೋಟೆಲ್‌ಗಳಲ್ಲಿ ಭಿಕ್ಷೆ ಬೇಡುತ್ತಾರೆ, ಅಲ್ಲಿ ಕೆಲವರು ಹಣ ನೀಡುತ್ತಾರೆ. ಕೆಲವರು ವಸ್ತುಗಳನ್ನು ನೀಡುತ್ತಾರೆ, ಇನ್ನು ಕೆಲವರು ತರಕಾರಿಗಳನ್ನು ಕೋಡುತ್ತಾರೆ, ಹೋಟೆಲ್‌ಗಳಲ್ಲಿ ಒಂದೊತ್ತಿನ ಊಟ ನೀಡುತ್ತಾರೆ. ಈ ರೀತಿ ಸಂಪಾದಿಸಿದ್ದು ಕೆಲವು ೨-೩ ದಿನಗಳಲ್ಲಿ ಮುಗಿದು ಹೋಗುತ್ತದೆ. ಅಲ್ಲದೆ ವಾರದಲ್ಲಿದ ದಿನ ಅಂದರೆ ಅಮಾವಸೆ ಹುಣ್ಣಿಮೆ ಮಂಗಳವಾರ, ಶುಕ್ರವಾರ ದಿನವಲ್ಲದ ದಿನಗಳಲ್ಲಿ ಭಿಕ್ಷೆಗೆ ಹೋರಟಾಗ 'ವಾರಲ್ಲ ವಜ್ರಲ್ಲ ಇವತ್ತು ಬಂದಿಯಾಲ್ಲಮ್ಮ ನಾಚಿಕೆಯಿಲ್ಲ ಹೋಗಮ್ಮ ಮುಂದಕ್ಕಾ' ಎಂದು ಜನರು ಹೇಳಿದ ಮಾತು ಕ್ಷೇತ್ರ ಅವಲೋಕನದ ಸಂದರ್ಭದಲ್ಲಿ ಕಂಡುಬಂದಿದೆ. ಇಲ್ಲಿ ಹೆಚ್ಚಾಗಿ ದೇವರ ಮೇಲೆ ನಂಬಿಕೆ ಇರುವವರು ಮತ್ತು ಆರ್ಥಿಕ ಜೀವನಕ್ಕೆ ಬೇರೆ ದಾರಿ ಕಾಣದವರು ಕೊನೆಗೆ ಈ ವೃತ್ತಿಯನ್ನು ಮಾಡುತ್ತಾರೆ. ಇಲ್ಲಿ ೪೫ ವಯಸ್ಸಿನ ಮೇಲ್ಪಟ್ಟವರು ಹೆಚ್ಚಾಗಿ ಈ ದೇವರ ಹೆಸರಿನಲ್ಲಿ ಭಿಕ್ಷಾಟನೆ ಮಾಡುವುದು ಗಮನಿಸಬೇಕಾದ ಅಂಶವಾಗಿದೆ. ಈ ಕೆಲಸವನ್ನು ಸಾಮಾನ್ಯವಾಗಿ ಪರಿಶಿಷ್ಟ ಜಾತಿಯ ಸಮುದಾಯಗಳಲ್ಲಿ ದೇವದಾಸಿಯರು ಮಾಡುವುದು ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತದೆ.

ಈ ಭಿಕ್ಷಾಟನೆಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಒಂದು ಘಟನೆಯನ್ನು ದಾಖಲಿಸುವುದಾದರೆ, ಹೊಸಪೇಟೆ ಬಸ್‌ನಿಲ್ದಾಣದಲ್ಲಿ ಬರುವ ಪ್ರತಿಯೊಂದು ಬಸ್‌ಗಳಲ್ಲಿ ಹತ್ತಿ 'ಅಣ್ಣ, ಅಕ್ಕ ನಮ್ಮಮ್ಮನಿಗೆ ಅಪರೇಷನ್ ಮಾಡಿಸ್‌ಬೇಕು ಏನಾದ್ರು ಕೊಡಿ ಅಣ್ಣ, ಕೊಡಿ ಅಕ್ಕ' ಎಂದು ಕೇಳುತ್ತಿದ್ದಳು. ನಾನು ಬಸ್ ನಿಲ್ದಾಣದಲ್ಲಿ ನಿಂತಿದ್ದೆ ನನ್ನನ್ನು ಕೇಳಿದಳು. ನಾನು ಒಂದೆರಡು ಬಾರಿ ೫-೧೦ ರೂ ಕೊಟ್ಟಿದ್ದೇನೆ. ಕಾಲಾಂತರದಲ್ಲಿ ಮತ್ತೆ ಬಂದು ಅದೇ ಬಸ್ ನಿಲ್ದಾಣದಲ್ಲಿ ಕೇಳಿದಳು ನಾನು ಗಮನಿಸಿದಾಗ ಆಕೆ ದೇವದಾಸಿ ಮಹಿಳೆ ಎಂದು ತಿಳಿಯಿತು. ಹಣ ಸಂಪಾದನೆ ದೃಷ್ಟಿಯಿಂದ ಈ ಕೆಲಸ ಮಾಡುವುದು ಕಂಡುಬಂದಿತು. ಹೀಗೆ ಆರ್ಥಿಕ ಬದುಕಿನ ನಿರ್ವಹಣೆಗೆಂದು ದೇವದಾಸಿ ಮಹಿಳೆಯು ಭಿಕ್ಷಾಟನೆಗೆ ತೊಡಗಿದ್ದಾರೆ. ಈ ದೇವದಾಸಿ ಮಹಿಳೆಯರು ಶೇ.೫೦ ರಷ್ಟು ಮಧ್ಯವೇಸನಿಗಳಾಗಿರುವುದು ಗಮನಿಸಬೇಕಾದ ಅಂಶವಾಗಿದೆ.

ದೇವ ದೇವತೆಗಳ ಜಾತ್ರೆ ಉತ್ಸವಗಳಲ್ಲಿ ನಡೆಸುವ ವಿಶೇಷವಾದ ಆಚರಣೆಗಳಲ್ಲಿಯೂ ದೇವದಾಸಿಯರ ಪಾತ್ರ ಮಹತ್ವದ್ದಾಗಿದೆ. ಇಲ್ಲಿ ದೇವದಾಸಿಯರಿಲ್ಲದೆ ಯಾವ ಆಚರಣೆಗಳು ನಡೆಯುವುದಿಲ್ಲ. ಮನೆದೇವರು ಬ್ಯಾಟಿ ಬಲಿ ಆಚರಣೆ, ಜೊಗಪಣತಿ ನೀಡುವುದು ದೇವರನ್ನು ಹಿಂದಕ್ಕೆ ಕಳುಹಿಸುವ ಕಾರ್ಯಗಳಲ್ಲಿ ದೇವದಾಸಿಯರು ಪ್ರಮುಖವಾಗುತ್ತಾರೆ. ವಿಶೇಷವಾಗಿ ಹುಲಿಗಿ, ಸವದತ್ತಿ, ಉಚ್ಚಂಗಿದುರ್ಗ ಅಂಭಮ್ಮಮಠ, ಮೈಲಾರ ಇತರೆ ಪ್ರದೇಶಗಳಲ್ಲಿ ಇರುವ ದೇವರುಗಳಿಗೆ ಮಾಡುವ ಆಚರಣೆಗಳು ದೇವದಾಸಿ ಅಥವಾ ಜೋಗುತಿಯರು ಮುಂದಿರಬೇಕು. ದೀಡನಮಸ್ಕಾರ, ಗಂಡದೀಪ, ಜೋಗಪಣತಿ ನೀಡುವಾಗ ದೇವದಾಸಿಯಾದ ಮಹಿಳೆ ಮುಂದೆ ನಿಂತು ಈ ಎಲ್ಲ ಕಾರ್ಯವನ್ನು ನಡೆಸಿಕೊಡುತ್ತಾಳೆ. ಅವರಿಗೆ ಇಂತಿಷ್ಟು ಹಣ ಎಂದು ಕೊನೆಯಲ್ಲಿ ಭಕ್ತಾದಿಗಳು ನೀಡುತ್ತಾರೆ. ಈ ಕೆಲಸ ಕಾರ್ಯಗಳನ್ನು ಮಾಡಲು ದೇವದಾಸಿ ಅಥವಾ ಜೋಗುತಿಯರು ಬೇರೆ ಬೇರೆ ಊರುಗಳಿಂದ ಬಂದು ೫-೯ ದಿನಗಳು ಇಲ್ಲಯೇ ತಂಗಿದ್ದು ಹಣ, ವಸ್ತ್ರ, ಕಾಳು ಕಡ್ಡಿಗಳನ್ನು ಸಾಂಪಾದಿಸಿಕೊಂಡು ಅವರ ಊರುಗಳಿಗೆ ಮರಳಿ ಹೋಗುತ್ತಾರೆ. ಇವುಗಳಿಗೆ ವಿಶೇಷವಾದ ನಿದರ್ಶನಗಳೆಂದರೆ ಹುಲಿಗಿ, ಸವದತ್ತಿ, ಉಚ್ಚಂಗಿ ದುರ್ಗ ಮುಂತಾದವುಗಳು ಅಲ್ಲದೆಯೇ ಸಂಕ್ರಾಂತಿ ಇತರೆ ಸುಗ್ಗಿಯ ಕಾಲದಲ್ಲಿ ಫಲ ಚೆನ್ನಾಗಿ ಬಂದಿದೆ ಎಂಬ ಕಾರಣಕ್ಕೆ ದೇವದಾಸಿ ಅಥವಾ ಜೋಗತಿಯರನ್ನು ಕರೆಸಿ ಮರದಲ್ಲಿ ಕಾಳು ತುಂಬಿ ಅವರ ಪಡಲಿಗೆಯನ್ನು ತುಂಬಿಸಿ ಕಳುಹಿಸುತ್ತಾರೆ. ಕೆಲವರು ಹೀಗೆ ಮಾಡುವುದರಿಂದ ಒಳ್ಳೆದಾಗುತ್ತದೆ ಎಂಬ ನಂಬಿಕೆಯೂ ಜೋಗತಿಯರು ಅಥವಾ ದೇವದಾಸಿಯರ ಅಲ್ಪ ದಿನಗಳವರೆಗೆ ಹೊಟ್ಟೆ ತುಂಬಿಸುತ್ತವೆ.

ಅಲ್ಲದೆಯೇ ಕೇವಲ ಧಾರ್ಮಿಕ ವಿಧಿ ಆಚರಣೆಯಲ್ಲಿ ಅಷ್ಟಲ್ಲದೆಯೇ ವಿವಾಹ ಇತರೆ ಶುಭ ಸಮಾರಂಭಗಳಲ್ಲಿಯೂ ದೇವದಾಸಿ ಮಹಿಳೆಗೆ ಒಂದಿಷ್ಟು ಆರ್ಥಿಕ ನೆರವು ದೊರೆಯುತ್ತದೆ. ವಿವಾಹದ ಸಂದರ್ಭದಲ್ಲಿ, ನಾಮಕರಣ, ಋತುಮತಿ ಇತರೆ ಸಾಮಾಜಿಕ ಜೀವನ ಕಾರ್ಯಗಳಲ್ಲಿ ದೇವದಾಸಿ ಮಹಿಳೆಯರು ಶುಭ ಅರಸಿ ಹಾಡುತ್ತಾರೆ. ವಿಶೇಷವಾಗಿ ದೇವದಾಸಿಯರು ತುಂಬ ಚೆನ್ನಾಗಿ ಹಾಡುತ್ತಾರೆ. ಹಾಗಾಗಿ ಇವರು ಸೋಭಾನೆ ಇತರೆ ಪದಗಳನ್ನು ಹಾಡಿ ಸಮಾರಂಭವನ್ನು ಮತ್ತಷ್ಟು

ವಿಜೃಂಭಣೆಗೊಳಿಸುತ್ತಾರೆ. ಏಕೆಂದರೆ ಕೆಲವು ಸಂದರ್ಭಗಳಲ್ಲಿ ಬ್ಯಾಂಡ್ ಬಾಜನೆಗಳಿಲ್ಲದೆ ಇರುವ ಕಾರ್ಯಕ್ರಮಗಳಲ್ಲಿ ಇವರ ಹಾಡುಗಾರಿಕೆಯೂ ಮೇರುಗನ್ನು ನೀಡುತ್ತದೆ. ಅಲ್ಲದೆ ಇವರು ಹಾಡುಗಳು ಬಹಳ ಮಹತ್ವ ಹೊಂದಿರುವ ಜೀವನ ಸಾಲುಗಳನ್ನು ಪ್ರತಿನಿಧಿಸುತ್ತವೆ. ಜೊತೆಗೆ ಗೌರಿ ಹಬ್ಬದಲ್ಲಿ ಗೌರಮ್ಮನ ಕುರಿತಾಗಿ ಮನೆ ಮನೆಗೆ ಹೋಗಿ ಹಾಡುಗಳನ್ನು ಹಾಡಿ ಜನರನ್ನು ಖುಷಿ ಪಡಿಸಿ ಹಣ ಕಾಳುಗಳನ್ನು ಸಂಪಾದಿಸಿಕೊಂಡು ಬರುತ್ತಾರೆ. ಬಳ್ಳಾರಿ ತಾಲೂಕಿನ ಬಂಡಿಹಟ್ಟಿ ಗ್ರಾಮದಲ್ಲಿರುವ ಒಬ್ಬ ಕಣ್ಣು ಕಾಣದ ವಿಕಲಚೇತನಳಾದ ೪೫ ವಯಸ್ಸಿನ ದೇವದಾಸಿ ಮಹಿಳೆ ಇದಕ್ಕೆ ನಿದರ್ಶನವಾಗಿದ್ದಾಳೆ.

"ಕಮಲಾಪುರದ ಬೇಡ ಜೋಗತಿಯರೆಲ್ಲರೂ ದೇವದಾಸಿಯರಾಗಿದ್ದಾರೆಂಬುದು ಗಮನಿಸಬೇಕಾದ ಅಂಶವಾದರು ಅದರಲ್ಲಿ ಯಾರು ಸಹ ಅತ್ಯಂತ ಬಡತನದಲ್ಲಿಲ್ಲ ಎಂಬುದನ್ನು ಗಮನಿಸಬಹುದು. ಜೊತೆಗೆ ಕೇರಿಯ ಹಿರಿಯರು ಕೇರಿಯಲ್ಲಿರುವ ಬೇಡ ಸಮುದಾಯದವರ ಮೇಲೆ ಪ್ರತಿ ತಿಂಗಳು ದೇವರ ಹೆಸರಿನ ಮೇಲೆ ೨೦ ರಿಂದ ೨೫ ರೂಪಾಯಿ ಗುಡಿ ಪಟ್ಟಿಯನ್ನು ನೀಡುವ ಪದ್ಧತಿ ಸುಮಾರು ೪೦ ವರ್ಷಗಳಿಂದ ಇದೆ. ಈ ಹಣವನ್ನು ಬ್ಯಾಂಕಿನಲ್ಲಿಟ್ಟು ಬಂದ ಬಡ್ಡಿಯ ಹಣದಲ್ಲಿ ದೇವತೆಗೆ ಬೇಕಾದ ಅಡುಗೆ ಪದಾರ್ಥಗಳನ್ನು ಖರೀದಿಸುವುದನ್ನು ಮಾಡುತ್ತಾರೆ. ಉಳಿದ ಕೆಲವೊಂದು ಸಾಮಾನುಗಳನ್ನು ಬೇಡ ಜೋಗತಿಗೆ ನೀಡುವ ಪದ್ಧತಿ ಇದೆ. ದೇವಸ್ಥಾನದ ಕಾರ್ಯದಿಂದ ಹಿಡಿದು ಮದುವೆ, ತೊಟ್ಟಿಲು, ನಾಮಕರಣ, ಋತುಮತಿ, ಇಂತಹ ಎಲ್ಲ ಆಚರಣೆಗಳಲ್ಲಿ ಬೇಡ ಜೋಗತಿಗೆ ಮಹತ್ವವಾದ ಸ್ಥಾನ ಕಲ್ಪಿಸಿ ದೈವ ದೃಷ್ಟಿಯಲ್ಲಿ ಆಕೆಯನ್ನು ಕಾಣುತ್ತಾರೆ" *(ಸಣ್ಣವಿರೇಶ್ ಪಿ:೨೦೧೬:೪೪)*. ಹೆಚ್ಚಾಗಿ ಪರಿಶಿಷ್ಟ ಜಾತಿಯಲ್ಲಿರುವ ದೇವದಾಸಿಯರು ಹೆಚ್ಚಿನ ಬಡತನದಲ್ಲಿದ್ದು ಆರ್ಥಿಕವಾಗಿ ಬಹಳ ಹಿಂದುಳಿದಿರುವುದನ್ನು ಕ್ಷೇತ್ರಕಾರ್ಯದಲ್ಲಿ ಕಂಡುಕೊಳ್ಳಲಾಗಿದೆ.

ದೇವರ ಹೆಸರಿನಲ್ಲಿ ಬಿಟ್ಟಿರುವ ದೇವದಾಸಿ ಮಹಿಳೆಯರು ಆರ್ಥಿಕವಾಗಿ ಬಹಳ ದುರ್ಬಲರಾಗಿದ್ದಾರೆ. ಇಡೀ ಕುಟುಂಬದ ನಿರ್ವಹಣೆಯ ಹೊಣೆಗಾರಿಕೆ ದೇವದಾಸಿ ಮಹಿಳೆಯದ್ದೇ ಆಗಿರುತ್ತದೆ. ಹಾಗಾಗಿ ಇವರು ನಿರಂತರ ದುಡಿಮೆಯಲ್ಲಿ ತೊಡಗುತ್ತಾರೆ. ಅಕ್ಷರಸ್ಥರಾದ ಅಧಿಕ ಸಂಖ್ಯೆಯ ದೇವದಾಸಿ ಕುಟುಂಬಗಳು ಬಡತನದಿಂದ ಕೂಡಿವೆ. ದೇವದಾಸಿ ಮಹಿಳೆಯು ಪ್ರತಿದಿನದ ಆದಾಯದ ದುಡಿಮೆ, ಸಂತಾನೋತ್ಪತ್ತಿ ಮತ್ತು ಕೌಟುಂಬಿಕ ದುಡಿಮೆಯಲ್ಲಿ ತೊಡಗಿದ್ದಾಳೆ. ದೇವದಾಸಿಯರು ಕೃಷಿಕೂಲಿ, ಪಶುಪಾಲನೆ, ವ್ಯಾಪಾರದ ದುಡಿಮೆಯಲ್ಲಿ ತೊಡಗಿದ್ದು, ಬಂದಿರುವ ಆದಾಯದಲ್ಲಿ ದಿನದ ಜೀವನದ ಜೊತೆಗೆ ಮಕ್ಕಳ ಶಿಕ್ಷಣಕ್ಕೆ ಇತರೆ ಕಾರ್ಯಗಳಿಗೂ ಬಳಕೆ ಮಾಡುತ್ತಾರೆ. ಹೀಗೆ ದುಡಿದ ಹಣ ಜೀವನಕ್ಕೆ ಸಾಕಾಗದೇ ಹೊಟ್ಟೆ ಬಟ್ಟೆಗೂ ಸಮಸ್ಯೆಯಾಗಿದೆ. ಅಲ್ಲದೇ ಕೆಲವರು ರಂಗ ಕಲಾವಿದರಾಗಿ ದುಡಿಮೆಯಲ್ಲಿ ತೊಡಗಿದ್ದಾರೆ. ಗಣಿಗಾರಿಕೆ, ಕಟ್ಟಡ ನಿರ್ಮಾಣ ಕೆಲಸ ಹೀಗೆ ಅನೇಕ ರೂಪದ ದುಡಿಮೆಗಳಲ್ಲಿ ತೊಡಗಿದ್ದು, ಮುಪ್ಪಿನ ಕಾಲದಲ್ಲಿ ೪೫ರಿಂದ ೫೦ ವರ್ಷದ ದೇವದಾಸಿ ಮಹಿಳೆಯರು ದೈವಿಸಂಬಂಧಿ ಆಚರಣೆಗಳಲ್ಲಿ ಭಾಗವಹಿಸುವ ಮೂಲಕ ದುಡಿಯುತ್ತಿದ್ದಾರೆ. ಉದಾಹರಣೆಗೆ ಧಾರ್ಮಿಕ ಭಿಕ್ಷಾಟಾನೆ.

ಪರಿಶಿಷ್ಟ ಜಾತಿಯ ಸಮುದಾಯದ ಜನರು ಹೆಚ್ಚಾಗಿ ಗಣಿಗಾರಿಕೆ ಕೂಲಿ ಕೆಲಸ, ಕೃಷಿಕೂಲಿ, ಕಟ್ಟಡ ನಿರ್ಮಾಣದಂತಹ ದುಡಿಮೆಯಲ್ಲಿ ತೊಡಗಿದ್ದು, ಇವರು ಬಂದಿರುವ ಆದಾಯದಲ್ಲಿ ದೈನಂದಿನ ಜೀವನವಷ್ಟೇ ಸಾಗಿಸಲು ಸಾಧ್ಯವಾಗುತ್ತದೆ. ಕೃಷಿಕೂಲಿಗೆ ಹೋದಾಗ ಇವಳನ್ನು ಜನರು ದೇವದಾಸಿ ಇಂಥವನ ಸೂಳೆ ಎಂದೆಲ್ಲಾ ಆಡವ ಮಾತುಗಳನ್ನು ಕೇಳಿಸಿಕೊಂಡು ದುಡಿಮೆಯ ದೈಹಿಕ ಶ್ರಮದೊದಿಗೆ ಮಾನಸಿಕ ಹಿಂಸೆಯನ್ನು ಅನುಭವಿಸುತ್ತಿದ್ದಾಳೆ. ಬಹುತೇಕರು ಗ್ರಾಮೀಣ ಪ್ರದೇಶದಲ್ಲಿ ಒಂದು ಹೊತ್ತಿನ ಊಟಕ್ಕೂ ಗತಿ ಇಲ್ಲದ ಸ್ಥಿತಿಯಲ್ಲಿದ್ದಾರೆ. ಹೀಗೆ ಆದಾಯ ಕಡಿಮೆ ಶ್ರಮ ಹೆಚ್ಚಾಗಿರುವುದರಿಂದ ಶಿಕ್ಷಣ ಮತ್ತು ಆರೋಗ್ಯದ ಕಡೆಗೆ ಗಮನಹರಿಸುವುದಿಲ್ಲ. ಇವರ ಜೊತೆಗೆ ಸಂಬಂಧ ಹೊಂದಿರುವವರು ಸಹ ಆರ್ಥಿಕವಾಗಿ ಕೆಲದಿನಗಳು ಮಾತ್ರ ನಡೆಸಿಕೊಂಡು ಹೋಗುತ್ತಾರೆ. ಕೆಲವೊಮ್ಮೆ ಹಣ ಕೊಡದಿದ್ದರೂ ಬಂದರೆ ಸಾಕು ಎಂಬ ಮನೋಭಾವನೆ ದೇವದಾಸಿಯರು ಹೊಂದಿರುತ್ತಾರೆ.

ದೇವದಾಸಿ ಮಹಿಳೆಯೊಂದಿಗೆ ಯಾರು ಇಲ್ಲ ಎಂದು ತಿಳಿದರೆ, ಉಳಿದವರ ಕಣ್ಣು ಆ ದೇವದಾಸಿಯ ಮನೆಯ ಮೇಲೆ ಇರುತ್ತದೆ. ಹೀಗಾಗಿ ಪುರುಷರನ್ನು ಬದಲಿಸುವ ಬದಲು ಹೆಸರಿಗೆ ಒಬ್ಬರಿದ್ದರೆ ಸಾಕು ಎಂಬ ಮನಸ್ಥಿತಿ ಹೊಂದಿದ್ದಾರೆ.

ಪರಿಶಿಷ್ಟ ಜಾತಿಯ ಹತ್ತಿರ ಸಂಬಂಧ ಹೊಂದಿರುವವರು ಪರಿಶಿಷ್ಟ ಜಾತಿಯವರೇ ಹೆಚ್ಚಾಗಿ ಕಂಡುಬರುತ್ತಾರೆ. ಆರ್ಥಿಕವಾಗಿ ದುರ್ಬಲರಾಗಿರುವ ಇವರು ದೇವದಾಸಿ ಮಹಿಳೆಗೆ ಆರ್ಥಿಕವಾಗಿ ನೇರವಾಗುವುದು ಕಡಿಮೆ ಎಂದೇ ಹೇಳಲಾಗುವುದು. ಹಾಗಾಗಿ ಸರ್ಕಾರ ವಿಶೇಷ ಸೌಲಭ್ಯವನ್ನು ನೀಡಿ ಆರ್ಥಿಕವಾಗಿ ಭದ್ರಗೊಳಿಸಬೇಕು. ಪರಿಶಿಷ್ಟ ಪಂಗಡದಲ್ಲೂ ಸಹ ಆರ್ಥಿಕವಾಗಿ ಸ್ವಲ್ಪ ಮಟ್ಟಿಗೆ ಭದ್ರತೆಯನ್ನು ಹೊಂದಿದ್ದರು. ಇವರು ಸಹ ಕೃಷಿಕೂಲಿ, ಪಶುಪಾಲನೆ, ವ್ಯಾಪಾರ ಇತರೆ ದುಡಿಮೆಯ ಮೂಲಗಳನ್ನು ಹೊಂದಿದ್ದಾರೆ. ಈ ಸಮುದಾಯಗಳಲ್ಲಿ ಕೆಲವರು ರಂಗಭೂಮಿಯಲ್ಲಿ ತಮ್ಮ ಬದುಕನ್ನು ಕಟ್ಟಿಕೊಂಡಿದ್ದಾರೆ. ಆದರೂ ಸಹ ಆರ್ಥಿಕವಾಗಿ ಸಬಲರಾಗಿದ್ದಾರೆ ಎಂದು ಹೇಳಲಾಗುವುದಿಲ್ಲ. ಪರಿಶಿಷ್ಟ ಪಂಗಡದ ಸಮುದಾಯದ ದೇವದಾಸಿಯರ ಬಳಿಯಲ್ಲಿ ಉನ್ನತವರ್ಗದ ಪುರುಷರು ಇರುವುದರಿಂದ ಸ್ವಲ್ಪಮಟ್ಟಿಗೆ ಆರ್ಥಿಕತೆ ಸುಧಾರಣೆ ಕಾಣಬಹುದಾಗಿದೆ. ಆದರೂ ಸಹ ಇವರ ಆರ್ಥಿಕ ಜೀವನದ ಭದ್ರತೆಗೆ ಸರ್ಕಾರ ಇವರ ನೆರವಿಗೆ ಇನ್ನು ಅನೇಕ ರೀತಿಯ ಸೌಲಭ್ಯಗಳನ್ನು ಒದಗಿಸಬೇಕು.

ಹಿಂದುಳಿದ ವರ್ಗಗಳಲ್ಲೂ ಆರ್ಥಿಕವಾಗಿ ಅಷ್ಟಾಗಿ ಅನುಕೂಲಕರವಾಗಿಲ್ಲ. ಆದರೆ ಇವರು ದುಡಿಮೆಯಲ್ಲಿ ತೊಡಗಿರುವುದು ಕಡಿಮೆ ಎಂದೇ ಹೇಳಬಹುದು. ಬಹುತೇಕವಾಗಿ ಗಂಡುಮಕ್ಕಳಿಲ್ಲದ ಕಾರಣ ದೇವದಾಸಿ ಬಿಟ್ಟಿರುವುದು ಕಂಡುಬಂದಿದೆ. ಹಾಗಾಗಿ ಇರುವ ಅಲ್ಪಸ್ವಲ್ಪ ಆಸ್ತಿಯಲ್ಲೇ ಜೀವನ ನಡೆಸುತ್ತಿದ್ದಾರೆ. ಬರುವ ಆದಾಯ ಕೇವಲ ಹೊಟ್ಟೆಬಟ್ಟೆಗೆ ಅಷ್ಟೇ ಸಾಕಾಗುತ್ತದೆ. ಹಾಗೆಯೇ ಈ ದೇವದಾಸಿ ಮಹಿಳೆಯರೊಂದಿಗೆ ಸಂಬಂಧ ಹೊಂದಿರುವ ಪುರುಷರು ಕುಟುಂಬ ನಿರ್ವಹಿಸುವುದರಿಂದ ಇವರ ಸ್ಥಿತಿ ಪರಿಶಿಷ್ಟರಿಗೆ ಹೋಲಿಸಿದರೆ ಉತ್ತಮವಾಗಿದೆ. ಮರಿಯಮ್ಮನಹಳ್ಳಿಯ ಹಿಂದುಳಿದ ವರ್ಗದ ದೇವದಾಸಿ ಮಹಿಳೆಯರು ಅನಾರೋಗ್ಯದಿಂದ ನರಳುತ್ತಿದ್ದು, ಚಿಕಿತ್ಸೆಗೆ ಹಣವಿಲ್ಲದೆ

ಓಣಿಯಲ್ಲಿ ಚಂದಾ ಎತ್ತಿ ಆರೋಗ್ಯ ಸರಿಪಡಿಸಿದ ಸಂಗತಿಗಳು ಕ್ಷೇತ್ರಾಧ್ಯಯನದಲ್ಲಿ ತಿಳಿದುಬಂದಿದೆ. ಒಟ್ಟಾರೆ ದೇವದಾಸಿ ಮಹಿಳೆಯರು ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಸಬಲರಾದಾಗ ಮಾತ್ರ ಉತ್ತಮ ಜೀವನ ನಡೆಸುವಂತಾಗುತ್ತದೆ. ಹಾಗಾಗಿ ಇಂತಹ ದೇವದಾಸಿ ಕುಟುಂಬಗಳಿಗೆ ಸರ್ಕಾರ ಶಿಕ್ಷಣ ಮತ್ತು ಆರ್ಥಿಕವಾಗಿ ಭದ್ರಗೊಳಿಸುವ ನಿಟ್ಟಿನಲ್ಲಿ ಯೋಜನೆಗಳಾಗಬೇಕು.

**೫.೪ ಶೈಕ್ಷಣಿಕ ಬದುಕು**

ವ್ಯಕ್ತಿಗೆ ಶಿಕ್ಷಣವು ಜ್ಞಾನ ಮತ್ತು ತಿಳುವಳಿಕೆಯನ್ನು ನೀಡುತ್ತದೆ. ಸಮಾಜದಲ್ಲಿ ಆದರ್ಶ ಪ್ರಾಯವಾಗಿ ಬದಕಲು ಅಗತ್ಯವಾದ ಜ್ಞಾನವನ್ನು ಕೊಡುತ್ತದೆ. ಶಿಕ್ಷಣವು ಸಮಾಜದ ನೀತಿ ನಿಯಮ, ಮೌಲ್ಯಗಳ ಪ್ರಭಾವವನ್ನು ಒಳಗೊಂಡಿದೆ. ಇದು ವ್ಯಕ್ತಿ ತನ್ನನ್ನು ತಾನು ತಿಳಿಯಲು ಹಾಗೂ ಕುಟುಂಬ ಮತ್ತು ಸಮಾಜದಲ್ಲಿ ಸಾಮರಸ್ಯ ನೆಮ್ಮದಿ ನೆಲೆಸುವಂತೆ ಮಾಡುತ್ತಿದೆ. ಇಂಥದೊಂದು ಸಂಸ್ಥೆಯಿಂದ ಸ್ತ್ರೀಯರನ್ನು ಸಂಪೂರ್ಣವಾಗಿ ಹೊರಗಿಟ್ಟು ಅವರಿಗೆ ಶಿಕ್ಷಣ ದೊರೆಯದಂತೆ ಮಾಡಿದರು. ಮಾನವ ಇತಿಹಾಸ ಸಾವಿರಾರು ವರ್ಷಗಳಷ್ಟೇ ಹಳೆಯದು. ಅಂದಿನಿಂದಲು ಸ್ತ್ರೀಯರು ಪುರುಷರೊಂದಿಗೆ ಸಮಾಜದ ಏಳಿಗೆಗಾಗಿ ಶ್ರಮಿಸಿದ್ದಾರೆ. ಆದರೆ ಸ್ತ್ರೀಯರನ್ನು ತಮ್ಮ ಸಮಾನರಾದ ವ್ಯಕ್ತಿಗಳೆಂದು ಪುರುಷರು ಪರಿಗಣಿಸಲಿಲ್ಲ. "ತಮಗಿಂತ ಬುದ್ಧಿವಂತಿಕೆಯುಳ್ಳ ಸ್ತ್ರೀಯರಿಗಿಂತ ತಮ್ಮನ್ನು ಎತ್ತರದಲ್ಲಿರಿಸಿಕೊಳ್ಳಬೇಕೆಂಬ ಅಸೂಯೆ, ಛಲದಿಂದ ಪುರುಷರು ಕ್ರಮೇಣ ಅವರ ಬುದ್ಧಿ ಹರಿತವಾಗದಂತೆ ಕಾಯ್ದುಕೊಂಡು ಬಂದಿದ್ದಾರೆ. ಹೀಗೆ ಮೂಲೆಗೊತ್ತರಿಸಲು ಶಿಕ್ಷಣ ರಹಿತರನ್ನಾಗಿ ಮಾಡಿದುದು ಮುಖ್ಯಕಾರಣ" *(ಜ್ಯೋತಿ ಶಶಿಕುಮಾರ್:೨೦೦೭:೮೨).* ಶಿಕ್ಷಣವಿಲ್ಲದ ಮಹಿಳೆಯರಿಗೆ ಹೋರಜಗತ್ತಿನ ತಿಳುವಳಿಕೆ ದೊರೆಯದೇ ವಿಶಾಲ ಮನೋಭಾವ ಬೆಳೆಯದೆ ಸಂಕುಚಿತ ದೃಷ್ಟಿ, ಕೀಳರಿಮೆ ಬಲಹೀನತೆಗಳುಂಟಾಗಿ ಅಸಾಮಾನ್ಯ ಪ್ರತಿಭೆಯಿದ್ದರೂ ತಮ್ಮ ಶಕ್ತಿ ಸಾಮರ್ಥ್ಯಗಳ ಅರಿವಿಲ್ಲದೆ ಅಸಹಾಯಕರಾಗುತ್ತಾರೆ."ವೈದಿಕ ಯುಗದಲ್ಲಿ ಆಸ್ತಿ ಹಕ್ಕಿನ ಕಾರಣ ಪ್ರಮುಖವಾಗಿ ಮಹಿಳೆಯರು ಮನೆಯ ನಾಲ್ಕು ಗೋಡೆಗಳ ಮಧ್ಯೆ ಬಂಧಿತರಾದರು. ಇನ್ನು ಚಾರಿತ್ರಿಕ ಕಾಲದಲ್ಲಿ ಮಹಿಳೆಯರು ಮತ್ತೆ ಸಂಕಷ್ಟಕ್ಕಿಡಾದರು. ಮಧ್ಯಕಾಲೀನ ಯುಗ ಸ್ತ್ರೀಯರ ಅವನತಿಯ ಅತ್ಯಂತ ಕೆಟ್ಟಕಾಲ. ಮುಸ್ಲಿಮರು ಪದೇ ಪದೇ ಆಕ್ರಮಣ ಮಾಡಿ ಸ್ತ್ರೀಯರನ್ನು ಅಡಗಿಸಿದ್ದ ದೇವತಾ ವಿಗ್ರಹಗಳಂತೆ ಮನೆಯಲ್ಲಿ ವಸ್ತುಶಃ ಕೂಡಿಹಾಕಿದರು. ಬಾಲ್ಯಾವಿವಾಹ, ಪರದಾ ಪದ್ಧತಿ, ಸತಿಪದ್ದತಿಗಳಂಥ ಕ್ರೂರ ಪದ್ಧತಿಗಳಿಂದಾಗಿ ಸ್ತ್ರೀಯರಿಗೆ ಅಕ್ಷರಜ್ಞಾನ ಪಾಪ ಕಾರ್ಯವಾಯಿತು. ಸ್ತ್ರೀಯರು ಹೊರಗೆ ಓಡಾಡುವುದನ್ನು ಅನಿಷ್ಟವೆಂದು ಪರಿಗಣಿಸಲಾಯಿತು. ಶಿಕ್ಷಣದ ರಹದಾರಿಯಾಗಿದ್ದ ಉಪನಯನವನ್ನು ರದ್ದುಗೊಳಿಸಲಾಯಿತು. ವಿಧವಾ ವಿವಾಹಕ್ಕೆ ಮನ್ನಣೆಯಿಲ್ಲದ್ದರಿಂದ ಸತಿ ಪದ್ದತಿ, ಜೋಹಾರ್, ದೇವದಾಸಿ ಮುಂತಾದವು ಸ್ತ್ರೀಯರನ್ನು ಅಂದಕಾರದಲ್ಲಿರಿಸಿತ್ತು. ಕೊನೆಗೆ ಆಕೆ ಪುರುಷನ ಕೈಗೊಂಬೆಯಾಗಿ ಆಶ್ರಿತಳಾಗಿ ದಾಸಿಯುತೆ ಇರುವ ಪರಿಸ್ಥಿತಿ ಉಂಟಾಯಿತು" *(ಜೋತಿ ಶಶಿಕುಮಾರ್:೨೦೦೭:೮೩–೮೪).* ಬ್ರಿಟೀಷರ ಆಡಳಿತದ ನಂತರ ಶಿಕ್ಷಣ ಕ್ಷೇತ್ರದಲ್ಲಿ ಮಹತ್ತರದ ಬದಲಾವಣೆಗಳು ಕಂಡು ಬಂದವು. ಮಹಿಳೆಯರ ಶಿಕ್ಷಣಕ್ಕೆ ಆಧ್ಯತೆ ನೀಡಿದರು. ಆದರೆ ಹೀಗೆ ಶಿಕ್ಷಣದಲ್ಲಿ ಹಿಂದುಳಿದಿರುವ ಕೆಳವರ್ಗ ಮತ್ತು ಹಿಂದುಳಿದ

ವರ್ಗಗಳಲ್ಲಿ ಜನರು ಅಜ್ಞಾನ ಮತ್ತು ಮೂಢನಂಬಿಕೆಗಳಿಂದ ತಮ್ಮ ಮನೆಯ ಮಗಳನ್ನು ದೇವರ ಹೆಸರಿನಲ್ಲಿ ದೇವದಾಸಿಯಾಗಿ ಬಿಟ್ಟಿದ್ದಾರೆ. ಕಾರಣ ಇವರಾರು ಶಿಕ್ಷಣ ಪಡೆದಿರುವುದಿಲ್ಲ.

ಮಹಿಳೆಯರು ವಿದ್ಯಾವಂತರಾದ ಸ್ವಾವಲಂಬನೆಯ ಮಾರ್ಗ ಅರಿತು ವೈಚಾರಿಕ ತಿಳುವಳಿಕೆ ಪಡೆದು ಅವರ ದೃಷ್ಟಿ ವಿಶಾಲವಾಗುತ್ತದೆ. ಅಜ್ಞಾನ ತೊಲಗಿ ವಿಮರ್ಶಾನತ್ಮಕ ದೃಷ್ಟಿಯು ಬೆಳೆದು ಸ್ವಸಾಮರ್ಥ್ಯದಿಂದ ತನನ್ನು ತಾನು ಮತ್ತು ಸಮುದಾಯವನ್ನು ಉನ್ನತ ಹಾದಿಯಲ್ಲಿ ನಡೆಸಲು ಶಿಕ್ಷಣ ಸಹಾಯಕವಾಗುತ್ತದೆ. ಹೀಗೆ ಮೂಢನಂಬಿಕೆಗಳನ್ನು ತೊಡೆದು ಹಾಕಿ ಉತ್ತಮ ಸಂಪ್ರದಾಯ ಆಚಾರ–ವಿಚಾರ ಮತ್ತು ಆರೋಗ್ಯಕರ ಮನೋಭಾವಗಳು ಬೆಳೆಯಬೇಕಾದರೆ ಶಿಕ್ಷಣ ಪ್ರಮುಖ ಪಾತ್ರ ವಹಿಸುತ್ತದೆ. ವಿಶೇಷವಾಗಿ ಇಂತಹ ಶಿಕ್ಷಣ ಹೆಣ್ಣು ಮಕ್ಕಳಿಗೆ ಅವಶ್ಯಕವಾಗಿದೆ. ಹೀಗೆ ಶೈಕ್ಷಣಿಕವಾಗಿ ಮುಂದುವರೆದ ಸಮಾಜದಲ್ಲಿ ಯಾವುದೇ ರೀತಿಯ ಅಜ್ಞಾನ ಮತ್ತು ಮೂಢನಂಬಿಕೆಗಳಿಗೆ ಅವಕಾಶ ವಿರುವುದಿಲ್ಲ. ವಿದ್ಯಾವಂತರಲ್ಲದವರು ಕಂದಾಚಾರಗಳಿಗೆ ಬಲಿಯಾಗುತ್ತಾರೆ. ವಿದ್ಯೆಯು ಮನುಷ್ಯನನ್ನು ಅಜ್ಞಾನದಿಂದ ಸುಜ್ಞಾನದತ್ತ ಕೊಂಡೊಯ್ಯುತ್ತದೆ. ಈ ರೀತಿಯ ಉತ್ತಮವಾದ ಶಿಕ್ಷಣದಿಂದ ವಂಚಿತರಾದವರು ಮೂಢನಂಬಿಕೆಗಳಿಂದ ದೇವದಾಸಿ ಪದ್ಧತಿಗೆ ಬಲಿಯಾಗಿದ್ದಾರೆ. ಜನರಲ್ಲಿ ದೇವರು ಧರ್ಮ ಎಂಬ ಹೆಸರಿನಲ್ಲಿ ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳಲ್ಲಿ ಈ ಪದ್ದತಿಯನ್ನು ರೂಢಿಸಿಕೊಂಡಿದ್ದಾರೆ. ಗಂಡು ಸಂತಾನ ಇಲ್ಲದಿರುವಾಗ ದೇವ–ದೇವತೆಗಳಿಗೆ ಹೆಣ್ಣು ಅರ್ಪಿಸುವುದರಿಂದ ನಮ್ಮ ವಂಶದಲ್ಲಿ ಗಂಡು ಮಗು ಜನಿಸಿ ವಂಶವನ್ನು ಬೆಳೆಸುತ್ತದೆ ಎಂದು ಮತ್ತು ಹುಟ್ಟಿರುವ ಗಂಡು ಮಗುವಿಗೆ ಆರೋಗ್ಯ ಸರಿ ಇಲ್ಲದಿದ್ದಾಗ ಅಥವಾ ಹುಟ್ಟಿದ ಹೆಣ್ಣು ಮಗುವಿಗೆ ಆರೋಗ್ಯ ಸರಿ ಪಡಿಸಿದರೆ ನಿನ್ನ ಪಾದಕ್ಕೆ ಹಾಕುತ್ತೆನೆಂಬ ಹರಕೆಗಳು ಅಜ್ಞಾನದ ಕೂಪಗಳಂತೆ ಕಾಣುತ್ತವೆ. ಈ ರೀತಿಯಲ್ಲಿ ದೇವರ ಭಯ ಭಕ್ತಿಯಿರುವ ಕುಟುಂಬದಲ್ಲಿ ಮಾನಸಿಕವಾಗಿ ಅಸ್ವಸ್ಥತೆಯಲ್ಲಿದ್ದಾಗಲು ದೇವಿಯ ಕಾಟ, ದೇವಿಯ ಬೇಡಿಕೆ ಎಂದೆಲ್ಲ ಹೇಳಿ ಹೆಣ್ಣು ಮಕ್ಕಳಿಗೆ ಮುತ್ತು ಕಟ್ಟುವ ಮೂಲಕ ದಾಸಿಯನ್ನಗಿಸುತ್ತಾರೆ. ಜಡೆ ಬಂದರೆ ಅದಕ್ಕೆ ವೈಜ್ಞಾನಿಕ ಕಾರಣವನ್ನು ತಿಳಿಯದೆ ದೇವಿ ಜಡೆ ಕಟ್ಟಿದ್ದಾಳೆ ಎಂದು ಆ ಮಗಳನ್ನು ದೇವರಿಗೆ ಮುಡುಪಾಗಿಸಬೇಕು ಎಂಬ ನಂಬಿಕೆಗಳು ಒಂದು ರೀತಿಯ ಮೌಢ್ಯವನ್ನು ಪ್ರತಿಬಿಂಬಿಸುವಂತಿವೆ. ಇದೆಲ್ಲದನ್ನೂ ಒಮ್ಮೆ ಹಿಂದಿರುಗಿ ನೋಡಿದಾಗ ಇವರಲ್ಲಿ ಶಿಕ್ಷಣದ ಕೊರತೆ ಮತ್ತು ಮೂಢನಂಬಿಕೆಯು ಎದ್ದು ಕಾಣುತ್ತಿದೆ ಎಂದು ಹೇಳಬಹುದು.

ದೇವದಾಸಿ ಪದ್ಧತಿಯು ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳಲ್ಲಿ ಹುಟ್ಟಿಕೊಳ್ಳಲು ಪ್ರಮುಖವೆಂದರೆ ಮೇಲ್ವರ್ಗದ ಪುರುಷ ಸಮಾಜವು ದೇವರ ಹೆಸರಿನಲ್ಲಿ ಮೂಢನಂಬಿಕೆಯನ್ನು ಮೌಢ್ಯಗಳಲ್ಲಿ ಬಳಸಿ ಅವರನ್ನು ಈ ಸಂಪ್ರದಾಯಗಳಿಗೆ ದೂಡಿದ್ದಾರೆ. ದೇವರ ಸೇವೆಗೆ ಎಂದು ನೇಮಿಸಿ ಬಿಟ್ಟಿರುವ ಮಹಿಳೆಯರನ್ನು ಲೈಂಗಿಕವಾಗಿ ಬಳಸಿಕೊಳ್ಳುತ್ತಿರುವುದು ಪುರುಷ ವರ್ಗವೇ ಹೊರತು ಯಾವ ದೇವಾಲಯದಲ್ಲಿ ದೇವರ ಸೇವೆ ಮಾಡುತಿಲ್ಲ ಎಂದು ಹೇಳಬಹುದು. ಧಾರ್ಮಿಕ ಕಟ್ಟುಪಾಡು ದೈವಶಕ್ತಿ ಮೂಢನಂಬಿಕೆಯ ಪರಂಪರೆಯ ಹಿನ್ನೆಲೆಯಲ್ಲಿ ದೇವದಾಸಿ ಪದ್ಧತಿ ಬೆಳೆದು ಬಂದಿರುವುದಾಗಿದೆ. ದೇವದಾಸಿಯರನ್ನು ನೀವ್ಯಾಕೆ ದೇವದಾಸಿಯಾದಿರಿ? ಎಂದು ಪ್ರಶ್ನಿಸಿದಾಗ ಆ

ಮಹಿಳೆಯರು ಕೊಟ್ಟ ಉತ್ತರ ಎಂದರೆ 'ಏನೋ ಅಮ್ಮ ನಾನು ಓದಿಲ್ಲ ಆವಾಗ ನನಗೆ ಇದರ ಬಗ್ಗೆ ತಿಳಿದಿದ್ದಿಲ್ಲ, ನಾನು ಸ್ವಲ್ಪ ಓದಿದ್ರೂ ನಾನು ಮಾನ್ಯಾಗ ಇರ್‌ತಿರಲಿಲ್ಲ' ಎಂದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿಸಿದರು. ಅಂದರೆ ಅವರು ಶಿಕ್ಷಣದ ಕೊರತೆಯಿಂದಾಗಿ ತಿಳಿಯದೆಯೇ ಈ ಪದ್ಧತಿಗೆ ಬಲಿಯಾಗಿದ್ದಾರೆ. ಇನ್ನೂ ಕೆಲವರು ೫-೧೦ ನೇ ತರಗತಿ ಓದಿರುವ ದೇವದಾಸಿಯರು ಬೆರಳಣಿಕೆಯಷ್ಟು ಜನ ದೊರೆಯುತ್ತಾರೆ. ಇವರು ಕೂಡ ಹೇಳುವ ಮಾತು ಇದೇ. ಅವಾಗ ಅಷ್ಟು ಜ್ಞಾನ ಇರಲಿಲ್ಲ. ತಂದೆ ತಾಯಿ ಮಾತು ಮೀರದೇ ಕುಟುಂಬದ ಪರಿಸ್ಥಿತಿಗೆ ನಾನು ಈ ಪದ್ಧತಿಗೆ ಒಳಗಾಗಲ್ಪಟ್ಟಿದ್ದೆ ಎನ್ನುತ್ತಾರೆ.

ದೇವದಾಸಿಯಾಗಿ ಬದುಕು ಸಾಗಿಸುವ ಎಷ್ಟೋ ಮಹಿಳೆಯರು ತಮ್ಮ ಮಕ್ಕಳ ಭವಿಷ್ಯದ ಕಡೆಗೆ ಚಿಂತಿಸುತ್ತಿದ್ದಾರೆ. ದೇವದಾಸಿಯಾಗಿ ಮಾಡುವುದು, ದೇವದಾಸಿ ಆಗುವುದು ಈಗ ಮುಗಿದೋಗಿರುವ ಕಾಲವಾಗಿದೆ. ಆದರೆ ದೇವದಾಸಿ ಮಕ್ಕಳ ಮುಂದಿನ ಶಿಕ್ಷಣದ ಭವಿಷ್ಯದ ಕಡೆಗೆ ಗಮನ ಹರಿಸುವ ಅಗತ್ಯವಿದೆ. ದೇವದಾಸಿ ಮಕ್ಕಳಿಗೆ ವಿದ್ಯೆಯನ್ನು ಕಲಿಸಿ ಶಿಕ್ಷಣವಂಚಿತರಾನ್ನಾಗಿಸದೆ ಇದ್ದರೆ ಅವರ ಸಮುದಾಯದಲ್ಲಿರುವ ಇಂತಹ ಪದ್ಧತಿಗಳನ್ನು ಬೇರು ಸಮೇತ ಕೀತ್ತು ಹಾಕಲು ಸಾಧ್ಯವಾಗುತ್ತದೆ. ಹಾಗಾಗಿ ದೇವದಾಸಿಯ ಮಕ್ಕಳ ಕುರಿತು ಶೈಕ್ಷಣಿಕ ಅವಲೋಕನ ಅಗತ್ಯವಾಗಿದೆ.

ಬಳ್ಳಾರಿ ಜಿಲ್ಲೆಯು ಸಾಮಾಜಿಕವಾಗಿ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ತುಂಬ ಹಿಂದುಳಿದ ಜಿಲ್ಲೆಯಾಗಿದೆ. ಹಾಗಾಗಿಯೇ ಬಳ್ಳಾರಿ ಜಿಲ್ಲೆಯನ್ನು ಹೈದರಾಬಾದ್ ಕರ್ನಾಟಕ ೩೭೧ ಜೆ ಯ ಪಟ್ಟಿಯಲ್ಲಿ ಸೇರಿಸಲಾಗಿದೆ. ಶಿಕ್ಷಣವು ಸಾಮಾಜಿಕ ಬದಲಾವಣೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಸ್ವಾತಂತ್ರ್ಯ ನಂತರದಲ್ಲಿ ಶಿಕ್ಷಣ ವ್ಯವಸ್ಥೆಯನ್ನು ಪುನರ್ರಚಿಸುವ ಪ್ರಯತ್ನ ಅನೇಕ ಹಂತಗಳಲ್ಲಿ ನಡೆದಿದೆ. ಕಳೆದ ಕೆಲವು ದಶಕಗಳಲ್ಲಿ ತೆಗೆದುಕೊಂಡ ಗಮನಾರ್ಹ ಕ್ರಮಗಳೆಂದರೆ ಬಹುಸಂಖ್ಯಾ ಮಕ್ಕಳಿಗೆ ಅನೇಕ ಹೊಸ ಶಾಲೆಗಳ ಸ್ಥಾಪನೆ ಮಾಡಿರುವುದು. ಶಿಕ್ಷಣ ವ್ಯವಸ್ಥೆಯಲ್ಲಿ ಎಷ್ಟೇಲ್ಲ ಹೊಸ ರೂಪರೇಷೆಗಳನ್ನು ಮಾಡಿದಾಗ್ಯೂ ದೇವದಾಸಿ ಮಕ್ಕಳಲ್ಲಿ ಶಿಕ್ಷಣದ ಕೊರತೆ ಕಂಡು ಬರುತ್ತಿದೆ. ಮಕ್ಕಳು ಶಾಲೆಗೆ ಸೇರಿ ಓದು ಬರಹದ ಕಲಿಕೆಯಲ್ಲಿ ಹಿಂದುಳಿಯಲು ಕಾರಣವೇನು? ಮಕ್ಕಳಿಗೆ ಶಿಕ್ಷಣದಲ್ಲಿ ಎದುರಾಗುವ ಸಮಸ್ಯೆ ಸಾವಾಲುಗಳನ್ನು ತಿಳಿಯುವುದು ಅಗತ್ಯವಿದೆ. ದೇವದಾಸಿ ಮಕ್ಕಳು ಸಾಮಾಜದಲ್ಲಿ ನಿಂದನೆಗಳಿಗೆ ಒಳಗಾಗಿ ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಸಾಮಾಜಿಕ ವ್ಯವಸ್ಥೆ ಮಾಡಿದ ಮತ್ತು ಮೇಲ್ ವರ್ಗದ ಜನರು ಮೂಢನಂಬಿಕೆಯಿಂದ ದೇವದಾಸಿ ಪದ್ಧತಿಯನ್ನು ಹುಟ್ಟು ಹಾಕಿದ ತಪ್ಪಿಗೆ ಇಂದು ದೇವದಾಸಿ ಮತ್ತು ಅವರ ಮಕ್ಕಳಾದ ಯುವ ಸಮಾಜ ಸಮಸ್ಯೆಯನ್ನು ಎದುರಿಸಬೇಕಾದ ಪರಿಸ್ಥಿತಿ ಬಂದಿದೆ.

ದೇವದಾಸಿಯರು ತಾವು ಅನುಭವಿಸಿದ ಅಜ್ಞಾನದ ಹಾದಿಯಲ್ಲಿ ತಮ್ಮ ಮಕ್ಕಳು ಬರಬಾರದು ಶಿಕ್ಷಣ ಪಡೆದು ಉನ್ನತವಾದ ಗೌರವ ಸ್ಥಾನಮಾನ ಪಡೆಯಬೇಕೆಂಬ ಬಯಕೆಯಲ್ಲಿರುತ್ತಾರೆ. ದುಡಿದು ತಿನ್ನುವ ಪರಿಸ್ಥಿತಿಯಲ್ಲಿ ಇದ್ದರೂ ಮಕ್ಕಳಿಗೆ ಶಾಲೆಗೆ ಸೇರಿಸಲು ಹೋದಾಗ ಸಮಸ್ಯೆಗಳು ಎದುರಾಗುವವು ಯಾಕೆಂದರೆ ಮಗುವನ್ನು ಶಾಲೆಯಲ್ಲಿ ನೋಂದಾಯಿಸುವಾಗ ಜಾತಿ ಮತ್ತು ತಂದೆಯ ಹೆಸರನ್ನು

ಅಗತ್ಯವಾಗಿ ಸೂಚಿಸಬೇಕಾಗುತ್ತಿತ್ತು. ಅನಧಿಕೃತ ತಂದೆಯ ಹೆಸರನ್ನು ಸೂಚಿಸುವುದು ಈ ಸಮಾಜದ ದೇವದಾಸಿ ಮಹಿಳೆಯರಿಗೆ ತುಂಬ ಮುಜುಗರ ತರುತಿತ್ತು. ಈ ಹಿನ್ನೆಲೆಯಲ್ಲಿ ಮಕ್ಕಳಿಗೂ ಅವಮಾನ. ತಂದೆ ಇಲ್ಲದೆ ಅನೈತಿಕವಾಗಿ ಹುಟ್ಟಿದವರೆಂಬ ಕೀಳು ದೃಷ್ಟಿಗೆ ಒಳಗಾಗಿ ಮಾನಸಿಕ ಹಿಂಸೆಗೆ ಒಳಗಾಗುತ್ತಿದ್ದಾರೆ. ಈ ಕಾರಣ್ಕಕಾಗಿಯೇ ಶಾಲೆ ಬಿಟ್ಟು ಮಕ್ಕಳು ಮತ್ತೆ ಹಿಂದುಳಿಯುತ್ತಾರೆ. ಇದರ ಜೊತೆಗೆ ಮಕ್ಕಳು ಶಾಲೆಯನ್ನು ಬಿಡಲು ಅನೇಕ ಕಾರಣಗಳು ಇರುವ ಸಾಧ್ಯತೆಗಳಿವೆ. ಮೊದಲ ತಲೆಮಾರಿನ ಅಕ್ಷರಸ್ಥ ಸಮಸ್ಯೆ ಒಂದು ಬಗೆಯದ್ದಾದರೆ ಇತ್ತೀಚಿನಲ್ಲಿ ಕಂಡು ಬರುವ ಸಮಸ್ಯೆಗಳು ಬೇರೆಯಾಗಿದೆ. ಶಾಲೆಯೊಳಗಿನ ವಾತಾವರಣವೂ ಬಹಳ ಮುಖ್ಯವಾಗಿರುತ್ತದೆ. ಮಕ್ಕಳಿಗೆ ಶಾಲೆ ಪಾಠ ಆಕರ್ಷಣೀಯವಾಗುವಂತೆ ಮಾಡುವುದು, ಉಚಿತ ಊಟ, ಪಠ್ಯಪುಸ್ತಕ, ಪಠ್ಯಕ್ರಮ, ಸಮವಸ್ತ್ರ ಮುಂತಾದವುಗಳನ್ನು ಒದಗಿಸುವುದು ಮಕ್ಕಳು ಶಾಲೆಯನ್ನು ಮಧ್ಯದಲ್ಲಿ ಬಿಡುವುದನ್ನು ಕಡಿಮೆ ಮಾಡಲು ಇದು ಒಂದು ಹಂತದಲ್ಲಿ ಕಾರ್ಯ ಮಾಡುತ್ತದೆ. ಆದರೆ ಅಷ್ಟೇ ಪ್ರಮಾಣದಲ್ಲಿ ಕುಟುಂಬದಲ್ಲಿ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ಮಕ್ಕಳು ಶಾಲೆಯನ್ನು ಬಿಟ್ಟು ದೇವದಾಸಿ ತಾಯಿಯ ಜೊತೆಯಲ್ಲಿ ಕೆಲಸದಲ್ಲಿ ತೊಡಗುತ್ತಾರೆ. ಈ ರೀತಿಯ ಸಮಸ್ಯೆಗಳನ್ನು ಪರಿಶಿಷ್ಟ ಜಾತಿ ಪಂಗಡದ ಮಕ್ಕಳಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಹಾಗೆಯೇ ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳು ಶಾಲೆಯನ್ನ ಮಧ್ಯದಲ್ಲಿ ಬಿಡುವುದನ್ನು ಅಧಿಕ ಸಂಖ್ಯೆಯಲ್ಲಿ ಕಾಣಲಾಗುವುದು. ಕಾರಣಗಳನ್ನು ನೋಡಿದಾಗ ಕ್ಷೇತ್ರದಲ್ಲಿ ಕಂಡು ಬಂದಿರುವುದೆನೆಂದರೆ ಮನೆಕೆಲಸ, ಶಾಲೆಯಲ್ಲಿ ದೌರ್ಜನ್ಯ ಮತ್ತು ಶೋಷಣೆ, ಆರ್ಥಿಕ ದುರ್ಬಲತೆ, ಕುಟುಂಬದ ವಲಸೆ, ಓದಲು ಆಸಕ್ತಿ ಇಲ್ಲದಿರುವಂತಹ ವಾತಾವರಣ ಮತ್ತು ಗ್ರಾಮ ಪ್ರದೇಶದಲ್ಲಿ ಶಾಲಾ ಸೌಲಭ್ಯಗಳ ಕೊರತೆ ಇವುಗಳನ್ನು ಕಾಣಲಾಗುತ್ತದೆ.

ಬೇಡ ಸಮುದಾಯದಲ್ಲಿ "ಕುಟುಂಬಗಳ ವಿದ್ಯಾವಂತ ಯುವಕರು ತಮ್ಮ ಕುಲ ವೃತ್ತಿಯನ್ನು ವಿರೋಧಿಸುತ್ತಿದ್ದರು. ದೇವದಾಸಿಯರ ಗಂಡು ಮಕ್ಕಳು ಡಾಕ್ಟರ್, ಎಂಜಿನಿಯರ್, ವಕೀಲರು ಆಗಿದ್ದಾರೆ. ಅಲ್ಲದೇ ವಿದೇಶಗಳಿಗೂ ಹೋದವರಿದ್ದಾರೆ. ಶಾಲಾ ಉಪಾಧ್ಯಾಯರು, ಬ್ಯಾಂಕ್ ಮ್ಯಾನೇಜರ್‌ಗಳು, ಪೋಲಿಸ್ ಇಲಾಖೆ, ಪ್ರಾಂಶುಪಾಲರು, ಭಾರತ ಆಡಳಿತ ಸೇವೆಯಲ್ಲಿ, ಕರ್ನಾಟಕ ಆಡಳಿತ ಸೇವೆಯಲ್ಲಿ ಇದ್ದಾರೆ. ಈ ವಿದ್ಯಾವಂತರು ದೇವದಾಸಿ ಪದ್ಧತಿಯನ್ನು ಬಿಡಲು ಹೇಳಿದರೆ, ಸಮುದಾಯದವರು ಹೀಗೆ ಹೇಳುತ್ತಾರೆ. ನಮ್ಮನೆಲ್ಲ ನೋಡಿಕೊಳ್ಳಿ ಎಲ್ಲಾ ಬೇಡಿಕೆಗಳನ್ನು ಈಡೇರಿಸಿ ನಮಗೆ ಪರ್ಯಾಯ ವ್ಯವಸ್ಥೆ ಮಾಡಿ ಎಂಬ ಬೇಡಿಕೆ ಇಟ್ಟಾಗ ತಮ್ಮ ಹೆಂಡತಿ ಮಕ್ಕಳ ಜೊತೆಯಲ್ಲಿ ಬೇರೆ ಊರುಗಳಿಗೆ ಹೋಗಿರುವ ಉದಾಹರಣೆಗಳಿವೆ. ಹೀಗೆ ಶಿಕ್ಷಣ ಪಡೆದಿದ್ದರೂ ಅವರ ಅಜ್ಞಾನವನ್ನು ಕಿತ್ತು ಹಾಕುವ ಶೋಷಣೆ ವಿರುದ್ಧ ಸಿಡಿದೇಳಲಾಗದ ಸ್ಥಿತಿಯಲ್ಲಿದ್ದಾರೆ"*(ಕೊತ್ಲಮ್ಮ:೨೦೦೮:೨೧೬)*. ಬೇಡ ಸಮುದಾಯದಲ್ಲಿ ಶಿಕ್ಷಣಕ್ಕಾಗಿ ಒಂದಿಷ್ಟು ಉತ್ತಮ ಸ್ಥಾನ ಹೊಂದಿದ್ದು, ಈ ಪದ್ಧತಿಯನ್ನು ವಿರೋಧಿಸುತ್ತಾರೆ. ಆದರೆ ಪರಿಶಿಷ್ಟ ಜಾತಿಯ ಸಮುದಾಯಗಳಲ್ಲಿ ಶಾಲೆ ಬಿಟ್ಟ ಮಕ್ಕಳ ಸಂಖ್ಯೆಯೂ ಹೆಚ್ಚಾಗಿದ್ದು, ಇವರಲ್ಲಿ ಈ ಪದ್ಧತಿಯ ಕುರಿತಾಗಿ ಸಂಘಟನೆಗಳ ಮೂಲಕವೇ ವಿರೋಧಗಳು ಕಂಡುಬರುತ್ತೀವೆ. ಇವರಲ್ಲಿ ಬೆರಳಣಿಕೆಯಷ್ಟು ದೇವದಾಸಿ ಮಕ್ಕಳು ಮಾತ್ರ ಪದವಿಯವರೆಗೆ ಓದಿದ್ದಾರೆ.

ಉಳಿದವರು ಶಾಲೆ ಅಥವಾ ಕಾಲೇಜಿನಿಂದ ಡ್ರಾಪೌಟ್ ಆಗಿದ್ದಾರೆ. ಓಂದುಳಿದ ವರ್ಗದ ಸಮುದಾಯದಲ್ಲಿಯೂ ಸಹ ಮಕ್ಕಳು ಉತ್ತಮ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಇವರಿಗೆ ಈ ಪದ್ಧತಿಯ ಕುರಿತಾಗಿ ತಿಳುವಳಿಕೆ ಮೂಢಿಬಂದಿದ್ದು ಶಿಕ್ಷಣದಿಂದ ಈ ಪದ್ಧತಿಯು ಅನಿಷ್ಟ ಆಚರಣೆ ಎಂದು ಮನಗಂಡಿದ್ದಾರೆ. ದೇವದಾಸಿ ಮಕ್ಕಳು ಅನೇಕ ರೀತಿಯ ಸಮಸ್ಯೆಗಳನ್ನು ಶೋಷಣೆಗಳನ್ನು ಶಾಲೆ ಅಥವಾ ಶೈಕ್ಷಣಿಕ ವಲಯದಲ್ಲಿ ಅನುಭವಿಸುತ್ತಾರೆ.

ದೇವರ ಹೆಸರಿನಲ್ಲಿ ಬಿಟ್ಟಿರುವ ದೇವದಾಸಿ ಮಹಿಳೆಯರು ಆರ್ಥಿಕವಾಗಿ ಬಹಳ ದುರ್ಬಲರಾಗಿದ್ದಾರೆ. ಇಡೀ ಕುಟುಂಬದ ನಿರ್ವಹಣೆಯ ಹೊಣೆಗಾರಿಕೆ ದೇವದಾಸಿ ಮಹಿಳೆಯದ್ದೇ ಆಗಿರುತ್ತದೆ. ಹಾಗಾಗಿ ಇವರು ನಿರಂತರ ದುಡಿಮೆಯಲ್ಲಿ ತೊಡಗುತ್ತಾರೆ. ಅಕ್ಷರಸ್ಥರಾದ ಅಧಿಕ ಸಂಖ್ಯೆಯ ದೇವದಾಸಿ ಕುಟುಂಬಗಳು ಬಡತನದಿಂದ ಕೂಡಿವೆ. ದೇವದಾಸಿ ಮಹಿಳೆಯು ಪ್ರತಿದಿನದ ಆದಾಯದ ದುಡಿಮೆ, ಸಂತಾನೋತ್ಪತ್ತಿ ಮತ್ತು ಕೌಟುಂಬಿಕ ದುಡಿಮೆಯಲ್ಲಿ ತೊಡಗಿದ್ದಾಳೆ. ದೇವದಾಸಿಯರು ಕೃಷಿಕೂಲಿ, ಪಶುಪಾಲನೆ, ವ್ಯಾಪಾರದ ದುಡಿಮೆಯಲ್ಲಿ ತೊಡಗಿದ್ದು, ಬಂದಿರುವ ಆದಾಯದಲ್ಲಿ ದಿನದ ಜೀವನದ ಜೊತೆಗೆ ಮಕ್ಕಳ ಶಿಕ್ಷಣಕ್ಕೆ ಇತರೆ ಕಾರ್ಯಗಳಿಗೂ ಬಳಕೆ ಮಾಡುತ್ತಾರೆ. ಹೀಗೆ ದುಡಿದ ಹಣ ಜೀವನಕ್ಕೆ ಸಾಕಾಗದೇ ಹೊಟ್ಟೆ ಬಟ್ಟೆಗೂ ಸಮಸ್ಯೆಯಾಗಿದೆ. ಅಲ್ಲದೇ ಕೆಲವರು ರಂಗ ಕಲಾವಿದರಾಗಿ ದುಡಿಮೆಯಲ್ಲಿ ತೊಡಗಿದ್ದಾರೆ. ಗಣಿಗಾರಿಕೆ, ಕಟ್ಟಡ ನಿರ್ಮಾಣ ಕೆಲಸ ಹೀಗೆ ಅನೇಕ ರೂಪದ ದುಡಿಮೆಗಳಲ್ಲಿ ತೊಡಗಿದ್ದು, ಮುಪ್ಪಿನ ಕಾಲದಲ್ಲಿ ೪೫ರಿಂದ ೫೦ ವರ್ಷದ ದೇವದಾಸಿ ಮಹಿಳೆಯರು ದೈವಿಸಂಬಂಧಿ ಆಚರಣೆಗಳಲ್ಲಿ ಭಾಗವಹಿಸುವ ಮೂಲಕ ದುಡಿಯುತ್ತಿದ್ದಾರೆ. ಉದಾಹರಣೆಗೆ ಧಾರ್ಮಿಕ ಭಿಕ್ಷಾಟಾನೆ.

"ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ" ಎಂಬ ನಾಣ್ನುಡಿಯ ಪ್ರಕಾರ ಶಿಕ್ಷಣವು ಪ್ರಗತಿಯ ಹಾದಿಯಾಗಿದೆ. ಮಹಿಳೆಯರು ವಿದ್ಯಾವಂತರಾದರೆ ಸ್ವಾಲಂಬನೆಯ ಮಾರ್ಗವನ್ನು ಅರಿತು ಉತ್ತಮ ಹಾದಿಯಲ್ಲಿ ನಡೆಯಲು ಸಹಾಯಕವಾಗುತ್ತದೆ. ಆದರೆ ದೇವರು-ಧರ್ಮದ ಹೆಸರಿನಲ್ಲಿ ಮೂಢನಂಬಿಕೆಯ ಮೌಢ್ಯಗಳಿಗೆ ಬಲಿಯಾಗಿ ದೇವದಾಸಿ ಪದ್ಧತಿಯಂತಹ ವ್ಯವಸ್ಥೆಗೆ ಗುರಿಯಾಗಿದ್ದಾರೆ. ಮಹಿಳೆಯರಲ್ಲಿನಶಿಕ್ಷಣದ ಕೊರತೆಯಿಂದಾಗಿ ದೇವದಾಸಿ ಪದ್ಧತಿಗೆ ಬಲಿಯಾಗಿದ್ದಾರೆ. ಹೀಗೆ ದೇವದಾಸಿ ಪದ್ಧತಿಗೆ ಒಳಗಾದ ದೇವದಾಸಿ ಮಹಿಳೆಯರು ಬಹುತೇಕ ಅನಕ್ಷರಸ್ಥರಾಗಿದ್ದಾರೆ. ಕೆಲವರು ಮಾತ್ರ ಶಿಕ್ಷಣವಂತರಾಗಿದ್ದರೂ ಇಂತಹ ಪದ್ಧತಿಗೆ ಮನೆಯ ಒತ್ತಡಗಳಿಗೆ ಮಣಿದು ಒಳಗಾಗಿದ್ದಾರೆ.

ಪರಿಶಿಷ್ಟ ಜಾತಿಯ ಸಮುದಾಯದ ದೇವದಾಸಿಯರ ಶಿಕ್ಷಣ ತುಂಬ ಕಡಿಮೆ ಪ್ರಮಾಣದಲ್ಲಿದೆ. ಹಾಗಾಗಿಯೇ ಈ ಸಮುದಾಯಗಳಲ್ಲಿ ಅಧಿಕ ಸಂಖ್ಯೆಯ ದೇವದಾಸಿಯರನ್ನು ಕಾಣಲು ಸಾಧ್ಯವಾಗುತ್ತದೆ. ಮನೆಯ ವಂಶೋದ್ಧಾರಕರಾದ ಗಂಡುಮಕ್ಕಳಿಲ್ಲ ಎಂಬುದಕ್ಕೆ ದೇವಿ ಕೇಳಿದ್ದಾಳೆ ಎಂಬ ಮೌಢ್ಯ ತುಂಬಿದ ಕಾರಣಗಳು ಈ ಸಮುದಾಯಗಳಲ್ಲಿ ಕಂಡುಬರುತ್ತವೆ. ಅಲ್ಲದೆ ಈ ಸಮುದಾಯದ ದೇವದಾಸಿ ಮಕ್ಕಳು ಸಹ ಅನೇಕ ರೀತಿಯ ದೌರ್ಜನ್ಯ ಮತ್ತು ಮಾನಸಿಕ ಹಿಂಸೆಗೆ ಗುರಿಯಾಗಿದ್ದಾರೆ. ಪರಿಶಿಷ್ಟ ಸಮುದಾಯಗಳಲ್ಲಿಯೇ ಅಧಿಕ ಸಂಖ್ಯೆಯಲ್ಲಿ ಶಾಲೆಬಿಟ್ಟ ಮಕ್ಕಳನ್ನು ಕಾಣುತ್ತೇವೆ. ಶಿಕ್ಷಣದ

ಜೊತೆಗೆ ದುಡಿಮೆಯಲ್ಲಿದ್ದಾರೆ. ಹಾಗಾಗಿ ಒಂದು ಕಡೆ ಶಿಕ್ಷಣ ಮತ್ತು ಆರ್ಥಿಕತೆ ಎರಡು ದೋಣಿಯ ಪ್ರಯಾಣ ಕೊನೆಯಲ್ಲಿ ಗುರಿತಲುಪುವುದಿಲ್ಲ ಎಂಬುದು ಖಚಿತವಾದ ಮಾತಾಗಿದೆ. ತಂದೆಯ ಯಾವುದೇ ಪೋಷಣೆ ಅಥವಾ ಪ್ರೋತ್ಸಾಹಗಳು ದೊರಕುವುದಿಲ್ಲ. ಅಲ್ಲದೇ ಶಿಕ್ಷಣ ಪಡೆಯಲು ಶಾಲೆಗೆ ಹಾಕುವಲ್ಲಿಯೇ ದೇವದಾಸಿ ಮಕ್ಕಳ ಸಮಸ್ಯೆಗಳು ಪ್ರಾರಂಭವಾಗುತ್ತವೆ. ತಂದೆಯ ಹೆಸರು ಬರೆಸಬೇಕು, ಇಲ್ಲಿ ತಂದೆಯಾರೆಂದು ಗೊತ್ತಿಲ್ಲದಿದ್ದಲ್ಲಿ ತಂದೆ ಹೆಸರನ್ನು ಸೇರಿಸುವುದು ಕಷ್ಟದ ಕೆಲಸವಾಗಿರುತ್ತದೆ. ಈ ರೀತಿಯ ಸಮಸ್ಯೆಗಳಿಗೆ ಒಳಗಾಗುತ್ತಾರೆ. ಪರಿಶಿಷ್ಟ ಪಂಗಡದಲ್ಲಿ ಸ್ವಲ್ಪ ಮಾತ್ರ ಅಜ್ಞಾನದ ಅಂಧಕಾರಗಳಿಗೆ ಒಳಗಾಗಿದ್ದಾರೆ. ಪ್ರಸ್ತುತ ಇಂದಿನ ದಿನಮಾನಗಳಲ್ಲಿ ಮಹಿಳೆಯರನ್ನು ದೇವದಾಸಿಯಾಗಿ ಬಿಟ್ಟಿರುವುದು ಕಂಡುಬರುವುದಿಲ್ಲ. ಹಾಗಾಗಿ ಈ ಸಮುದಾಯದಲ್ಲಿ ಶಿಕ್ಷಣ ಮಟ್ಟ ಸ್ವಲ್ಪಮಟ್ಟಿಗೆ ಸುಧಾರಣೆಯಾಗಿರುವುದು ಕಂಡುಬರುತ್ತದೆ.

ಶಿಕ್ಷಣ ಪಡೆದವರು ದೇವದಾಸಿ ಪದ್ಧತಿಯಂತಹವುಗಳಿಗೆ ಸಾಮಾನ್ಯವಾಗಿ ಒಳಗಾಗುವುದಿಲ್ಲ. ಮದುವೆಯಾಗಲೆಂದು ಕಾದು ಯಾರೂ ಬರದಿದ್ದಾಗ ದೇವದಾಸಿಯಾಗಿದ್ದಾರೆ. ಜೊತೆಗೆ ಶಿಕ್ಷಿತ ಹೆಣ್ಣುಮಕ್ಕಳು ಸರ್ಕಾರಿ ನೌಕರಿಯಲ್ಲಿದ್ದಾರೆ.

ಪರಿಶಿಷ್ಟ ಪಂಗಡದ ಕುಟುಂಬಗಳಲ್ಲಿ ಇಂದಿನ ವಿದ್ಯಾವಂತ ಯುವಕರಲ್ಲಿ ತಮ್ಮ ಕುಲದಲ್ಲಿರುವ ದೇವದಾಸಿ ಪದ್ಧತಿಯನ್ನು ವಿರೋಧಿಸುವ ಮನಸ್ಸುಗಳು ಕಂಡುಬರುತ್ತವೆ. ಆದರೂ ಪ್ರಾಚೀನ ಕಾಲದಿಂದಲೂ ಬಂದಿರುವ ಈ ಅನಿಷ್ಟ ಪದ್ಧತಿಯನ್ನು ಅಷ್ಟು ಸುಲಭವಾಗಿ ಅಳಿಸಲು ಆಗುವುದಿಲ್ಲ. ಆದರೆ ಪರಿಶಿಷ್ಟ ಜಾತಿಗೆ ಹೋಲಿಸಿದರೆ ಶೈಕ್ಷಣಿಕವಾಗಿ ಇವರು ಉತ್ತಮ ಸ್ಥಾನದಲ್ಲಿರುವುದು ಕಂಡುಬರುತ್ತದೆ. ಇನ್ನೂ ಶಿಕ್ಷಣದ ಕುರಿತು ವಿಶೇಷವಾಗಿ ದೇವದಾಸಿ ಮಕ್ಕಳಿಗೆ ಹೆಚ್ಚಿನ ಸೌಲಭ್ಯವನ್ನು ಮಾಡಿಕೊಡಬೇಕು. ಇವರೂ ಕೂಡ ತಂದೆ ಇಲ್ಲದೆ ಶೈಕ್ಷಣಿಕವಲಯದಲ್ಲಿ ಸಾಕಷ್ಟು ಶೋಷಣೆಯನ್ನು ಅನುಭವಿಸುತ್ತಿದ್ದಾರೆ.

ಹಿಂದುಳಿದ ವರ್ಗಗಳಲ್ಲಿ ದೇವದಾಸಿ ಮಹಿಳೆಯರು ಶಿಕ್ಷಣವನ್ನು ಪಡೆದಿದ್ದರಿಂದ ಅವರ ಮಕ್ಕಳ ಶೈಕ್ಷಣಿಕ ಮಟ್ಟವು ಪರಿಶಿಷ್ಟರಿಗಿಂತ ಸ್ವಲ್ಪಮಟ್ಟಿಗೆ ಸುಧಾರಿಸಿದೆ ಎಂದೇ ಹೇಳಲಾಗುವುದು. ಆದರೆ ಇವರಲ್ಲೂ ದೇವದಾಸಿ ಮಗ ಅಥವಾ ಮಗಳಾದರೆ ಅವರು ಅನೇಕ ಶೈಕ್ಷಣಿಕ ಸಮಸ್ಯೆಯನ್ನು ಅನುಭವಿಸುತ್ತಾರೆ. ತಂದೆಯ ಹೆಸರು ಸೇರ್ಪಡೆಯಲ್ಲಿ ಇವರೂ ಸಹ ಮುಜುಗರಕ್ಕೆ ಒಳಗಾಗಿದ್ದಾರೆ.

ಒಟ್ಟಾರೆಯಾಗಿ ದೇವದಾಸಿ ಮಹಿಳೆಯರೆಲ್ಲರೂ ಕೂಡ ಅನಕ್ಷರಸ್ಥರೆ ಹೆಚ್ಚಾಗಿದ್ದಾರೆ. ಶೈಕ್ಷಣಿಕವಾಗಿ ಮೂರು ವರ್ಗಗಗಳಲ್ಲೂ ಸುಧಾರಣೆ ಅವಶ್ಯಕವಾಗಿದೆ. ಇದಕ್ಕಾಗಿ ಸರ್ಕಾರ ವಿಶೇಷವಾಗಿ ಪರಿಶಿಷ್ಟ ಮತ್ತು ಹಿಂದುಳಿದ ವರ್ಗಗಳ ದೇವದಾಸಿ ಕುಟುಂಬಗಳಿಗೆ ಶಿಕ್ಷಣ ಮತ್ತು ಉದ್ಯೋಗಗಳ ಕಡೆಗೆ ಗಮನಹರಿಸಬೇಕು. ದೇವದಾಸಿ ಆಗುವ ಮತ್ತು ಮಾಡುವ ಕಾಲ ಮುಗಿಯುತ್ತಿವೆ. ಹೀಗೆ ಶೋಷಣೆ ಹಾಗೂ ಸಮಸ್ಯೆಗಳಿಗೆ ಒಳಗಾಗಿರುವ ದೇವದಾಸಿಯರ ಮಕ್ಕಳಿಗೆ ಒಳ್ಳೆಯ ಶಿಕ್ಷಣ, ಉದ್ಯೋಗದ ಅವಕಾಶಗಳನ್ನು ಕಲ್ಪಿಸಬೇಕು.

### ೫.೫ ರಾಜಕೀಯ ಜೀವನ

ಮಹಿಳೆಯರು ಶತಮಾನದಿಂದ ಸಮಾಜದಲ್ಲಿ ಪುರುಷರ ಅಧೀನದಲ್ಲಿದ್ದು ಕೇವಲ ಅವರ ಲೈಂಗಿಕ ಬಳಕೆಯನ್ನು ಈಡೇರಿಸುವ ಕಾರ್ಯದಲ್ಲಿ ತೊಡಗುವ ಪರಿಸ್ಥಿತಿ ಅವರದ್ದಾಗಿದೆ. ಪುರುಷ ಪ್ರಾಧಾನ್ಯತೆಯಲ್ಲಿ ಅವನ ಅಧಿಕಾರದಲ್ಲಿ ಹೆಣ್ಣಿನ ವಿಚಾರಕ್ಕೆ ಬೆಲೆ ಕೊಡದೆ ಅವಳನ್ನು ಮೂಲೆ ಗುಂಪಾಗಿ ಮಾಡಿದ್ದು ನಮ್ಮ ಪುರುಷ ವ್ಯವಸ್ಥೆಯಾಗಿದೆ. ಹಾಗಾಗಿ ಮಹಿಳೆಯರು ಹಲವಾರು ವರ್ಷಗಳ ಕಾಲ ನೊಂದು ನೋವು ಕಷ್ಟ ದೌರ್ಜನ್ಯಗಳನ್ನು ಅನುಭವಿಸುತ್ತಾ ನಿರ್ಗತಿಕರಾಗಿದ್ದರು. ಇವರ ಸುಧಾರಣೆಯ ನಿಟ್ಟಿನಲ್ಲಿ ಈ ಹಿಂದೆ ಹಲವಾರು ಸಮಾಜ ಸುಧಾರಕರು ಮಹಿಳೆಯರಿಗೆ ಸಮಾನತೆಯ ಸ್ಥಾನವನ್ನು ಕೊಡಿಸುವಲ್ಲಿ ಅನೇಕ ಪ್ರಯತ್ನ ಮಾಡಿದರು. ಆದರೆ ಅದು ಸಂಪೂರ್ಣವಾಗಿ ಕೈಗೂಡಲಿಲ್ಲ. ನಂತರ "ಡಾ.ಬಿ.ಆರ್. ಅಂಬೇಡ್ಕರ್ ಅವರು ದೇಶದ ಅಂದಿನ ಎಲ್ಲಾ ಮತಾಂಧರ ಒತ್ತಡಗಳ ಮಧ್ಯೆ ನೆಹರು ಅವರ ಸಲಹೆಯ ಮೇರೆಗೆ ಹಿಂದೂ ಕೋಡ್ ಬಿಲ್ ಅನ್ನು ಎರಡು ಹಂತಗಳಲ್ಲಿ ಮಂಡಿಸಲು ಸೂಚಿಸಿದರು ಹೀಗಾಗಿ ಒಂದನ್ನು ಮಂಡಿಸಿದರು ಅವರು ಎರಡನೇ ಫಾರ್ಮ್ ಮಂಡಿಸುವಷ್ಟರಲ್ಲಿ ರಾಜನಾಮೆ ಕೊಟ್ಟು ಹೊರಗೆ ಬಂದರು. ಏಕೆಂದರೆ ಹಿಂದೂ ರೋಡ್ ಬಿಲ್ ಮಸೂದೆಯಲ್ಲಿ ಮಹಿಳೆಯರಿಗೆ ಪುರುಷನಷ್ಟು ಸಮಾನ ಹಕ್ಕು ಮತ್ತು ಮಹಿಳೆಯ ಶ್ರೇಯೋಭಿವೃದ್ಧಿ ಕಾರ್ಯಗಳ ಬಗ್ಗೆ ಅಳವಡಿಸಲಾಗಿತ್ತು. ಅದನ್ನು ಸಹಿಸದ ಹಿಂದೂವಾದಿಗಳು ಅದನ್ನು ಒಪ್ಪದೇ ಸ್ತ್ರೀಗೆ ಸಂಪೂರ್ಣ ಸ್ವಾತಂತ್ರ್ಯ ಕೊಡಬಾರೆದೆನ್ನುವ ಉದ್ದೇಶದಿಂದಲೇ ಅವನ್ನು ಒಪ್ಪಿಕೊಳ್ಳಲಿಲ್ಲ. ಆದರೂ ಅವರು ಛಲ ಬಿಡದ ಪ್ರಯತ್ನದಿಂದ ಭಾರತೀಯ ಸಂವಿಧಾನದಲ್ಲಿ ಪುರುಷನಷ್ಟೇ ಮಹಿಳೆಯನ್ನು ಸಮಾನವಾಗಿ ಕಾಣಬೇಕೆಂಬುದಲ್ಲದೆ ಸರಕಾರಿ ಉದ್ಯೋಗಗಳಲ್ಲಿಯೂ ಕೂಡಾ ಸ್ತ್ರೀಗೆ ಪುರುಷನಷ್ಟೆ ಸಮಾನವಾಗಿ ಹಕ್ಕುಗಳನ್ನು ಕೊಡಬೇಕೆನ್ನುವುದು ಸಂವಿಧಾನದ ಹದಿನಾರನೇ ವಿಧಿಯು ಸ್ಪಷ್ಟಪಡಿಸುತ್ತದೆ. ೩೯ನೇ ವಿಧಿಯು ಪುರುಷ ಮತ್ತು ಮಹಿಳೆಗೆ ಸಮಾನವಾದ ಕೆಲಸಕ್ಕೆ ಸಮಾನವೇತನ ಒದಗಿಸುವಂತೆ ದುಡಿಯುವ ಮಹಿಳೆಯರಿಗೆ ಹೆರಿಗೆ ಭತ್ಯೆಯಿಲ್ಲದೆ ಆ ಸಮಯದಲ್ಲಿ ರಜೆ ನೀಡಬೇಕೆಂದು ನಲವತ್ತೆರಡನೆಯ ವಿಧಿಯು ಸ್ಪಷ್ಟಪಡಿಸುತ್ತಿದೆ" *(ಪ್ರಸನ್ನ ಕುಮಾರ್:೨೦೧೪:೧೫೭).* ಹೀಗೆ ಮಹಿಳೆಯರಿಗೆ ಪುರುಷನ ಸಮಾನ ಅವಕಾಶಗಳನ್ನು ನೀಡುತ್ತಾರೆ. ರಾಜಕೀಯದಲ್ಲಿಯೂ ಮಹಿಳೆಯರಿಗೆ ಮೀಸಲಾತಿಯನ್ನು ನೀಡುತ್ತಾರೆ. "ಸಂವಿಧಾನದ ೨೪೩ ರ ೧, ೨, ೩ ಮತ್ತು ೪ ನೇ ವಿಧಿಯು ಪಂಚಾಯಿತಿಯಲ್ಲಿ ಮಹಿಳೆಯರಿಗೆ ಮೀಸಲಾತಿ ಕಲ್ಪಿಸಿಕೊಡಬೇಕೆಂದು ವಿವರಿಸುತ್ತದೆ. ಪ್ರತಿಯೊಂದು ಪಂಚಾಯ್ತಿಯಲ್ಲಿ ಮಿಸಲಿಡಲಾದ ಸ್ಥಾನಗಳ ಒಟ್ಟು ಸಂಖ್ಯೆಯ ಮೂರನೆಯ ಒಂದು ಭಾಗಕ್ಕಿಂತ ಕಡಿಮೆಯಿಲ್ಲದಷ್ಟು ಸ್ಥಾನಗಳನ್ನು ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಮಹಿಳೆಯರಿಗೆ ಮೀಸಲಿರಿಸತಕ್ಕದ್ದು ಎಲ್ಲಾ ಹಂತಗಳ ಪಂಚಾಯ್ತಿಗಳ ಅಧ್ಯಕ್ಷರ ಹಾಗೂ ಉಪಾಧ್ಯಕ್ಷರ ಸ್ಥಾನಗಳನ್ನು ಹಿಂದುಳಿದ ವರ್ಗಗಳ ಮಹಿಳೆಯರಿಗೆ ಮೀಸಲಿಡತಕ್ಕದೆಂದು ಈ ಮೇಲಿನ ವಿಧಿಯು ತಿಳಿಸುತ್ತದೆ" *(ಪೂರ್ವಾಚಾರ್ ಎಂ:೨೦೧೪:೯೩-೯೪).* ಮಹಿಳೆಯರಿಗೆ ರಾಜಕೀಯ ಅಧಿಕಾರ ನೀಡದೆ ಕೇವಲ ಆರ್ಥಿಕ ಹಾಗೂ ಸಾಮಾಜಿಕ ಅಂತಸ್ತಿನ ಭಾವನೆ ನೀಡುವುದು ಕೇವಲ ನಿರರ್ಥಕವಾಗಿತ್ತು. ಹೀಗೆ

ರಾಜಕೀಯ ಆಡಳಿತ ನಿರ್ವಹಣೆಯ ದೃಷ್ಟಿಯಿಂದ ಮಹಿಳೆಯರಿಗೆ ಮೀಸಲಾತಿಯನ್ನು ಕಲ್ಪಿಸಿ ಕೊಟ್ಟು ಆ ಮೂಲಕ ಇವರ ಹೊಸ ಹೆಜ್ಜೆ ದಾರಿಯನ್ನು ಕಂಡುಕೊಳ್ಳವಂತಾಗಿದೆ. ಇಲ್ಲಿಯವರೆಗೆ ಹೊಲ ಗದ್ದೆಗಳಲ್ಲಿ ಕೂಲಿಕಾರರಾಗಿ ದುಡಿಯುತ್ತಾ ಪಾತ್ರೆ, ಬಟ್ಟೆ ಬರೆಗಳನ್ನು ತೊಳೆಯುತ್ತಾ ದೂರದ ಕೆರೆ ಕಟ್ಟೆ ಬಾವಿಗಳಿಂದ ಕುಡಿಯುವ ನೀರನ್ನು ಹೊತ್ತು ತರುತ್ತಾ, ಹಸು ಕರುಗಳ ಪೋಷಣೆ ಮಾಡುತ್ತಾ ಮನೆ ಮಂದಿಗೆಲ್ಲ ಅಡುಗೆ ಮಾಡಿ ಉಣಬಡಿಸಿ ಅವರ ಯೋಗಕ್ಷೇಮ ನೋಡಿಕೊಂಡಿರುತ್ತಿದ್ದ ಅನರಸ್ಥ ಮಹಿಳೆಯರು ಈ ಕಾಯ್ದೆಯ ಬಲದಿಂದ ಆಡಳಿತಾಧಿಕಾರ ಚಲಾಯಿಸಬಲ್ಲವರಾಗಿದ್ದಾರೆ. ಹಾಗೂ ಪುರುಷರಿಗೆ ಸಮಾನವಾದ ಪಾತ್ರವನ್ನು ರಾಜಕೀಯ ಕ್ಷೇತ್ರಗಳಲ್ಲಿ ನಿರ್ವಹಿಸುವಂತವರಾಗಿದ್ದಾರೆ. ಮೊದ ಮೊದಲು ಹಾಗೂ ಇತ್ತೀಚೆಗಷ್ಟೆ ಉನ್ನತ ವರ್ಗದ ಮಹಿಳೆಯರೇ ರಾಜಕೀಯ ಪ್ರವೇಶಿಸಿರುವುದು ಕಂಡು ಬಂದಿದೆ. ಆದರೆ ಮೀಸಲಾತಿ ತಿದ್ದುಪಡಿಯ ನಂತರ ಎಲ್ಲರೂ ರಾಜಕೀಯವನ್ನು ಪ್ರವೇಶ ಮಾಡಿದ್ದಾರೆ. ರಾಜಕೀಯದಲ್ಲಿ ಮೀಸಲಾತಿಯನ್ನು ನೀಡಿರುವುದ್ದರಿಂದಾಗಿ ದೇವದಾಸಿಯರು ಕೂಡಾ ಮೀಸಲಾತಿಯ ಆಧಾರದ ಮೇಲೆ ಇಂದು ರಾಜಕೀಯ ರಂಗಗಳಲ್ಲಿ ಪ್ರವೇಶಿಸುತ್ತಿದ್ದಾರೆ. ಆದರೆ ಹೇಳಿಕೊಳ್ಳುವಷ್ಟು ಮುಂದುವರೆದಿರುವುದಿಲ್ಲ. ಕೆಲವೇ ಕೆಲವು ಬೆರಳೆಣಿಕೆಯಷ್ಟು ದೇವದಾಸಿಯರು ಮಾತ್ರ ರಾಜಕೀಯದಲ್ಲಿ ಮುಂದೆ ಬಂದಿರುವುದು ಕ್ಷೇತ್ರಕಾರ್ಯದಲ್ಲಿ ತಿಳಿದು ಬಂದಿರುವ ವಿಷಯವಾಗಿದೆ. ಗ್ರಾಮಪಂಚಾಯತ್, ತಾಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಅಧ್ಯಕ್ಷರಾಗಿ, ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ರಾಜಕೀಯವಾಗಿ ಉನ್ನತ ಸ್ಥಾನದಲ್ಲಿ ಬೆಳೆಯದಿದ್ದರೂ ತಮ್ಮ ಜೀವನ ನಡೆಸುವುದಕ್ಕಾದರೂ ರಾಜಕೀಯ ಪ್ರಜ್ಞೆ ಇವರಲ್ಲಿ ಒಡಮೂಡಿದೆ. ಸಣ್ಣ ಪುಣ್ಣ ಕೆಲಸಗಳು ತಾವಾಗಿಯೇ ಮಾಡಿಕೊಳ್ಳುವಷ್ಟು ಮಟ್ಟಿಗೆ ರಾಜಕೀಯ ಜ್ಞಾನವನ್ನು ಹೊಂದಿರುವುದಾಗಿ ತಿಳಿದು ಬಂದಿದೆ.

ದೇವದಾಸಿಯರ ರಾಜಕೀಯ ಭಾಗವಹಿಸುವಿಕೆಯ ವಿಷಯವನ್ನು ಚರ್ಚಿಸಬೇಕಿದೆ. ಸಾಮಾನ್ಯವಾಗಿ ಎಲ್ಲರಿಗೂ ಮತದಾನದ ಗುರುತಿನ ಚೀಟಿ ಇದೆ.ಆದರೆ ಶೇ ೯೯ ರಷ್ಟು ದೇವದಾಸಿ ಮಹಿಳೆಯರಿಗೆ ರಾಜಕೀಯದ ಅರಿವಿಲ್ಲ. ಕೇವಲ ಶೇ ೧ ರಷ್ಟು ದೇವದಾಸಿ ಮಹಿಳೆಯರಿಗೆ ಮಾತ್ರ ಸ್ವಲ್ಪ ರಾಜಕೀಯ ಅರಿವಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬಂದಿದೆ. ಆದರೆ ಶೇ ೧ ರಷ್ಟು ಜನ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಸ್ಪರ್ಧಿಸಿ ಕಡಿಮೆ ಸ್ಥಾನದಲ್ಲಿ ಗೆದ್ದಿರುವ ಮತ್ತು ಸೋತಿರುವ ಉದಾಹರಣೆಗಳು ಸಿಗುತ್ತವೆ. ಇವರಿಗೆ ಯಾವುದೇ ತರಹದ ರಾಜಕೀಯ ಜ್ಞಾನವಿರುವುದಿಲ್ಲ. ಅವರ ಬೆಂಬಲಿಗರು ಮಾತ್ರ ರಾಜಕೀಯ ನಡೆಸುತ್ತಾರೆ. ಅಲ್ಲದೆ ಸಮಾಜದಲ್ಲಿ ತಿರಸ್ಕೃತ ಮನೋಭಾವನೆಯಿಂದ ಕಾಣಲ್ಪಡುವ ದೇವದಾಸಿ ಮಹಿಳೆಯರನ್ನು ಮತದಾನ ಮಾಡಿ ಗೆಲ್ಲಿಸುವ ಮನಸ್ಸು ಸಮಾಜ ಮಾಡುವುದಿಲ್ಲ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡಿರುವ ಸಂಗತಿ ಎಂದರೆ 'ನಾವೇನೂ ಓಟ್ ಹಾಕಿ ಗೆಲ್ಲಿಸ್ತ್ತಿವಿ ಗೆದ್ದ ಮೇಲೆ ಇಟ್ಟುಕೊಂಡಾತನೇ ಉಂಡಗ ಮಾಡ್‌ತ್ತಾಳೆ ನಮಗೇನು ಮಾಡೋಲ್ಲ ಅಷ್ಟಕ್ಕೂ ಸೂಳೆಯರನ್ಯಾಕೆ ಗೆಲ್ಲಿಸಬೇಕು? ಅವಳಿಗೆ ಅಧಿಕಾರ ಕೊಟ್ರೆ ಮುಗಿತು ಹಾದರ ಮಾಡಿಬಿಡ್‌ತ್ತಾಳೆ' ಎಂದು ಜನ ಆಡುವ ಮಾತನ್ನು ಕೇಳಿಸಿಕೊಂಡ ದೇವದಾಸಿ ಮಹಿಳೆ ನೊಂದ ಮನಸ್ಸಿನಿಂದ

ಹೇಳಿಕೊಂಡಳು. ನಾವು ಎಷ್ಟೇ ನಿಷ್ಟೆಯಿಂದ ಜೀವನ ನಡೆಸಿದರು ಸಮಾಜ ನಮ್ಮನ್ನು ಈ ರೀತಿ ನಿಂದಿಸುತ್ತಿದೆ ಎಂದು ಕಣ್ಣೀರುಹಾಕಿ ಹೇಳಿಕೊಂಡಳು.

ಅಲ್ಲದೆಯೇ ದೇವದಾಸಿ ಮಹಿಳೆಯರು ಹೆಚ್ಚಿನ ಅಕ್ಷರ ಜ್ಞಾನ ಹೊಂದಿದವರಲ್ಲ. ಹೆಚ್ಚಾಗಿ ಜನರ ಮಧ್ಯೆ ಓಡಾಟ, ಸಮಾಜದ ಒಡನಾಟ ಇಲ್ಲದ ಕಾರಣಕ್ಕೆ ಅವರಿಗೆ ರಾಜಕೀಯದ ಜ್ಞಾನ ಇರುವುದಿಲ್ಲ. ಅಲ್ಲದೆ ದೇವದಾಸಿ ಮಹಿಳೆಯರು ಚುನಾವಣೆಗೆ ನಿಂತಾಗ ಅವರನ್ನು ಬೆಂಬಲಿಸುವವರು ಕೂಡ ಸಿಗುವುದಿಲ್ಲ. ಆದ್ದರಿಂದ ಇಲ್ಲಿ ಸಾಮಾಜಿಕವಾಗಿ ಹೊರಗುಳಿದವರಿಗೆ ರಾಜಕೀಯದ ಪರಿಕಲ್ಪನೆ ಮತ್ತು ಸರ್ಕಾರದ ಕಾನೂನುಗಳ ಬಗ್ಗೆ ಕಾರ್ಯಗಾರ, ತರಬೇತಿಗಳನ್ನು ಕಡ್ಡಾಯವಾಗಿ ಕೊಟ್ಟು ದೇವದಾಸಿಯರನ್ನು ಜಾಗೃತರಾನ್ನಾಗಿಸಬೇಕು.

"ದೇಶದ ರಾಜಕೀಯ ಕ್ಷೇತ್ರಗಳಲ್ಲಿ ಬಳ್ಳಾರಿ ಜಿಲ್ಲೆಯೇ ಪ್ರತಿಷ್ಠಿತ ಕ್ಷೇತ್ರ ಎನ್ನಬಹುದು. ಏಕೆಂದರೆ ಈಗ ನಾಲ್ಕೈದು ವರ್ಷಗಳ ಕೆಳಗೆ ಸುಷ್ಮಸ್ವರಾಜ್ ಮತ್ತು ಸೋನಿಯಾಗಾಂಧಿಯವರು ಜಿದ್ದಾಜಿದ್ದಿ ನಡೆಸಿ ಇಡೀ ವಿಶ್ವವೇ ಬಳ್ಳಾರಿ ಜಿಲ್ಲೆಯನ್ನು ನೋಡುವಂತೆ ಮಾಡಿದವರು ಈ ದಿಗ್ಗಜ ಮಹಿಳೆಯರೇ. ಆದ್ದರಿಂದ ಬಳ್ಳಾರಿ ಜಿಲ್ಲೆಯ ರಾಜಕೀಯ ಕ್ಷೇತ್ರದಲ್ಲಿ ಪ್ರತಿಷ್ಠಿತ ಕ್ಷೇತ್ರವೆಂದು ರೂಪುಗೊಂಡಿದೆ" *(ಸುಜಾತ ಅಕ್ಕಿ:೨೦೦೪:೧೬೧).* ಹೀಗೆ ಬಳ್ಳಾರಿ ಜಿಲ್ಲೆಯ ರಾಜಕೀಯ ರಂಗದಲ್ಲಿ ಅಲ್ಲಲ್ಲಿ ದೇವದಾಸಿ ಮಹಿಳೆಯರು ರಾಜಕೀಯದಲ್ಲಿ ಕಾರ್ಯನಿರ್ವಹಿಸುವುದನ್ನು ಕಾಣಬಹುದಾಗಿದೆ.

"ಹೆಸರಾಂತ ಶ್ರೇಷ್ಠ ನಟಿ ಎನಿಸಿಕೊಂಡಿರುವ ಕೆ.ನಾಗರತ್ನಮ್ಮ ಗ್ರಾಮಪಂಚಾಯಿತಿಯಲ್ಲಿ ಮೊದಲೇ ದುಡಿದು ಅನುಭವ ಇದ್ದುದರಿಂದ ೧೯೯೫ ರಲ್ಲಿ ಬಂದ ತಾಲೂಕು ಪಂಚಾಯಿತಿ ಚುನಾವಣೆಯಲ್ಲಿ ಪರಿಶಿಷ್ಟ ಬುಡಕಟ್ಟಿನ ಮಹಿಳೆಗೆ ಮೀಸಲಿದ್ದರಿಂದ ಮನೆಯವರ ವಿರೋಧವಿದ್ದರೂ ಜನರ ಒತ್ತಾಯದ ಮೇರೆಗೆ, ಸುಭದ್ರಮ್ಮ ಮನ್ಸೂರು ಅವರ ಆದೇಶದ ಮೇರೆಗೆ ಈ ಚುನಾವಣೆಯಲ್ಲಿ ಸ್ಪರ್ಧಿಸಿ ತಾಲೂಕು ಪಂಚಾಯಿತಿಯ ಸದಸ್ಯರಾದರು. ಹಾಗೂ ಅಧ್ಯಕ್ಷ ಉಪದ್ಯಕ್ಷರ ಸ್ಥಾನಗಳು ಬದಲಾವಣೆ ಆದರಿಂದ ೭-೧೨-೧೯೯೮ ರಂದು ತಾಲೂಕು ಪಂಚಾಯಿತಿಯ ಉಪಾಧ್ಯಕ್ಷರ ಸ್ಥಾನವೂ ಲಭಿಸಿತು" *(ಸುಜಾತ ಅಕ್ಕಿ, :೨೦೦೪:೨೬೧).* ಇವರು ರಂಗನಟಿಯಾಗಿದ್ದು ಸಾಕಷ್ಟು ಹೆಸರನ್ನು ಗಳಿಸಿರುವುದು ಸಾಮಾಜದಲ್ಲಿ ಇವರು ರಾಜಕೀಯದಲ್ಲಿ ತಮ್ಮನ್ನು ಗುರುತಿಸಲು ಸಾಧ್ಯವಾಗಿದೆ ಎನ್ನಬಹುದು. ಅವರ ಮಾತನ್ನು ಗಮನಿಸುವುದಾದರೆ "ನಾನು ತಾಲೂಕು ಪಂಚಾಯಿತಿಯ ಉಪಾಧ್ಯಕ್ಷೆಯಾಗಿ ಅಧಿಕಾರ ವಹಿಸಿಕೊಂಡೆ ಜವಾಬ್ದಾರಿ ಮತ್ತಷ್ಟು ಹೆಚ್ಚಾಯಿತು. ಈ ಮೊದಲು ಸದಸ್ಯೆಯಾಗಿದ್ದಾಗ ಮುಯಮ್ಮನ ಹಳ್ಳಿಯ ಕೆಲಸಗಳಷ್ಟೇ ಗಮನವಿರುತ್ತಿತ್ತು ಈಗ ಇಡೀ ತಾಲೂಕು ಸಮಸ್ಯೆಗಳಲ್ಲಿ ಪಾಲ್ಗೊಳ್ಳಬೇಕಾಯ್ತು. ಅದಕ್ಕೆ ಹೆಚ್ಚಿನ ಸಮಯವೂ ಬೇಕು. ಈ ಎಲ್ಲಾ ಕೆಲಸಗಳ ನಡುವೆಯೂ ನಾನು ನಾಟಕಗಳನ್ನು ಅಭಿನಯಿಸುವುದನ್ನು ನಿಲ್ಲಿಸಲಿಲ್ಲ. ರಾಜಕೀಯದಿಂದ ನಾಟಕಗಳಿಗೆ ತೊಂದರೆಯೇನೂ ಆಗಲಿಲ್ಲ. ಅದು ನನ್ನ ಸುದೈವ. ರಾತ್ರಿ ನಿದ್ದೆ ಗೆಟ್ಟರೆ ಬೆಳಿಗ್ಗೆ ಆಫಿಸಿನಲ್ಲಿರುವುದು ಸ್ವಲ್ಪ ಕಷ್ಟವಾಗುತ್ತಿತ್ತು. ರಾತ್ರಿ ನಿದ್ದೆಗೆಟ್ಟು ನಾಟಕ ಮಾಡಿ ಪುನಃ ಬೆಳಿಗ್ಗೆ ಬೇರೆ ಬೇರೆ ಊರುಗಳಿಗೆ ಹೋಗಿ ನಾಟಕ ಮಾಡುವುದು ರೂಢಿಯಾಗಿತ್ತು. ಹಾಗಾಗಿ ಕಷ್ಟವೆನಿಸಲಿಲ್ಲ. ವೃತ್ತಿ ಮತ್ತು ರಾಜಕೀಯ

ಎರಡನ್ನೂ ನಾನು ನಿಭಾಯಿಸಿಕೊಂಡು ಹೋಗುತ್ತಿದ್ದೆ. ರಂಗಭೂಮಿಯ ಮೂಲಕ ಅನೇಕ ಕ್ಷೇತ್ರಗಳಲ್ಲಿ ನನಗೆ ಪರಿಚಿತರಿದ್ದರು ನನ್ನೊಂದಿಗೆ ಅಭಿನಯಿಸಿದ ಅಥವಾ ನನ್ನ ಅಭಿನಯ ನೋಡಿ ಮೆಚ್ಚಕೊಂಡ ಅಭಿಮಾನಿಗಳು ಸರ್ಕಾರಿ ಕಛೇರಿಗಳಲ್ಲಿ ನೌಕರಿಯಲಿದ್ದರು, ಅಧಿಕಾರಿಗಳಾಗಿದ್ದರು, ಅವರು ನನ್ನ ತಾಲೂಕು ಪಂಚಾಯಿತಿಯ ಕೆಲಸಗಳಲ್ಲಿ ಸಹಕಾರ ನೀಡುತ್ತಿದ್ದರು" *(ಗುಡಿಹಳ್ಳಿ ನಾಗರಾಜ:೨೦೧೫:೮೭).* ಹೀಗೆ ಇವರು ೧೦ ನೇ ತರಗತಿಯವರೆಗೆ ಓದಿರುವ ಕಾರಣಕ್ಕೆ ಕಛೇರಿಯ ಕಡತಗಳನ್ನು ಪರಿಶೀಲಿಸಲು ಸಾಧ್ಯ. ಓದುವುದು ಬರೆಯುವುದು ಸಲಭವಾಗಿದ್ದು ಒಂದಿಷ್ಟು ಹೆಸರುಗಳಿಸಿರುವುದು ಕೂಡ ರಾಜಕೀಯದಲ್ಲಿ ಸ್ಥಾನವನ್ನು ಪಡೆದಿದ್ದಾರೆ.

ಅಲ್ಲದೆ "ನಾಗರತ್ನಮ್ಮ ೧೯೯೮ ರಲ್ಲಿ ನಾಟಕ ಅಕಾಡೆಮಿ ಸದಸ್ಯೆಯಾಗಿಯೂ ನೇಮಕ ಗೊಂಡರು. ತಮ್ಮ ಬಾಳ ಸಂಗಾತಿಯಾದ ಗುಡಿಹಳ್ಳಿ ನಾಗರಾಜರ ಸಹಕಾರದ ಮೇರೆಗೆ ಈ ಎಲ್ಲಾ ಕ್ಷೇತ್ರಗಳಲ್ಲಿ ನಾನು ಕೆಲಸ ಮಾಡಲು ಸಹಾಯವಾಗಿದೆ. ಈ ನಿಟ್ಟಿನಲ್ಲಿ ನಾನು ಅವರನ್ನು ಸ್ಮರಿಸಿಕೊಂಡೇ ಇಂದಿಗೂ ಮುನ್ನಡೆಯುತ್ತಿದ್ದೇನೆ ಎಂದು ಸ್ವತಃ ಅವರೇ ತಮ್ಮ ರಂಗಕ್ಷೇತ್ರ, ರಾಜಕೀಯ ಕ್ಷೇತ್ರ ಎರಡೂ ಕಡೆ ಹೆಸರು ಮಾಡಲು ಗುಡಿಹಳ್ಳಿ ಅವರೇ ಕಾರಣ ಎಂದು ಹೇಳುತ್ತಾರೆ" *(ಕೆ ನಾಗರತ್ನಮ್ಮ :ದಿ.೦೫.೭.೨೦೧೫).* ಇವರು ಹೇಳಿರುವಂತೆ ಇವರ ಬಾಳಸಂಗಾತಿ ಸಹಕಾರ ನೀಡಿದಕ್ಕೆ ಸಾಧ್ಯವಾಯಿತ್ತೆಂದು ಹೇಳಿರುವ ಪ್ರಕಾರ ಇವರಂತೆ ಎಲ್ಲಾರಿಗೂ ಬಾಳ ಸಂಗಾತಿಯವರು ಸಹಕರಿಸಿದ್ದರೆ ಬಹುಷಃ ಅನೇಕ ದೇವದಾಸಿ ಮಹಿಳೆಯರು ರಾಜಕೀಯದಲ್ಲಿ ಪ್ರವೇಶಿಸುತ್ತಿದ್ದರು. ದೇವದಾಸಿಯಾಗಿ ಹೆಚ್ಚಾಗಿ ಗುರುತಿಸಿಕೊಳ್ಳದೆಯೇ ಒಬ್ಬ ಕಲಾವಿದೆಯಾಗಿ ಇವರು ಗುರುತಿಸಿಕೊಂಡಿರುವುದು ಮತ್ತೊಂದು ಪ್ರಮುಖ ಅಂಶ. ದೇವದಾಸಿ ಮಹಿಳೆಯರನ್ನು ಕಂಡರೆ ಸಮಾಜ ಕೀಳಾಗಿ ಕಾಣುವ ಸ್ಥಿತಿಯಲ್ಲಿದ್ದರೂ ಕೂಡ ಇವರ ಬಾಳಸಂಗಾತಿ ಇವರೊಂದಿಗೆ ಜೀವನ ನಡೆಸುತ್ತಿರುವುದು ಹಾಗೂ ಅವರನ್ನು ಎಲ್ಲಾ ರಂಗಗಳಲ್ಲಿ ಕೈ ಜೋಡಿಸಿ ಯಶಸ್ವಿಗೆ ಕಾರಣರಾದ ಇವರಿಗೆ ಒಮ್ಮೆ ನಮಸ್ಕರಿಸಬೇಕೆನ್ನಿಸುವುದು ಸಹಜವೇ ಸರಿ.

"ಕೂಡ್ಲಿಗಿ ತಾಲೂಕಿನ ವಿರುಪಾಪುರ ಗ್ರಾಮದ ಜೆ.ಗಂಗಮ್ಮ ವಿರುಪಾಪುರ ಗ್ರಾಮ ಪಂಚಾಯಿತಿಯ ಸದಸ್ಯರು ಆಗಿದ್ದಾರೆ. ತೀರಾ ಹಿಂದುಳಿದ ಊರಾದ ವಿರುಪಾಪುರ ರಾಷ್ಟ್ರೀಯ ಹೆದ್ದಾರಿ ಬೆಂಗಳೂರಿನ ಹಾದಿಯಲ್ಲಿರುವ ಒಂದು ಚಿಕ್ಕಗ್ರಾಮ ೨೦೦ ಮನೆಗಳಿರುವ ಈ ಊರಲ್ಲಿ ಹೆಚ್ಚಾಗಿ ನಾಯಕ ಜನಾಂಗದವರಿದ್ದು ಆ ಜನಾಂಗದ ಹೆಚ್ಚು ಕಡಿಮೆ ಎಲ್ಲರೂ ರಂಗಭೂಮಿಯ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಅಜ್ಜಿ, ಮೊಮ್ಮಗಳ ಪರಂಪರೆಯಂತೆ ನಟಿಯರ ಪರಂಪರೆ ಈ ಊರಿನಲ್ಲಿ ಇದೆ. ಈ ಗ್ರಾಮದ ಜೆ.ಗಂಗಮ್ಮ ಎಂಬ ನಟಿಯು ೧೦ ನೇ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಿಕೊಂಡಿದ್ದು ಇಂತಹ ವಾತಾವರಣದಲ್ಲಿ ರಾಜಕೀಯ ಪ್ರವೇಶಿಸಿ ಗ್ರಾಮಪಂಚಾಯತಿ ಸದಸ್ಯಯೂ ಆಗಿ ರಂಗ ಬದುಕು ರಾಜಕೀಯ ಬದುಕು ಎರಡರಲ್ಲೂ ಯಶಸ್ಸನ್ನು ಸಾಧಿಸಿದ್ದಾರೆ" *(ಸುಜಾತ ಅಕ್ಕಿ:೨೦೦೪:೨೬೨).* ಈ ಎರಡು ರಾಜಕೀಯ ಕ್ಷೇತ್ರದಲ್ಲಿನ ಮಹಿಳೆಯರನ್ನು ಕಂಡಾಗ ಇವರು ಪರಿಶಿಷ್ಟ ಪಂಗಡವಾಗಿದ್ದು ಇವರಿಗೆ ಬೆಂಬಲಿಗರೂ ಇದ್ದು ರಾಜಕೀಯದಲ್ಲಿ ಅವಕಾಶ ದೊರೆತಿರಬಹುದು. ಆದರೆ ಬಹು

ಸಂಖ್ಯೆ ದೇವದಾಸಿ ಮಹಿಳೆಯರಿಗೆ ರಾಜಕೀಯದಲ್ಲಿ ಅಷ್ಟಾಗಿ ಸ್ಥಾನಗಳು ದೊರೆತಿಲ್ಲ. ಅದು ಕೆಲವೇ ಕೆಲವು ಮಹಿಳೆಯರಿಗೆ ದೊರೆತಿರುವುದಾಗಿ ಹೇಳಬಹುದು. ಅದರಲ್ಲೂ ಪರಿಶಿಷ್ಟ ಜಾತಿಯ ದೇವದಾಸಿ ಮಹಿಳೆಯರಿಗೆ ಈ ರೀತಿಯ ಅವಕಾಶಗಳು ದೊರೆತಿಲ್ಲ ಎನ್ನಬಹುದು. ನಾಗರತ್ನಮ್ಮನವರು ಒಬ್ಬ ಅಮಯಾಕ ಸಮುದಾಯದವರಾಗಿರುವ ಮತ್ತು ಒಬ್ಬ ಉತ್ತಮ ಹೆಮ್ಮೆಯ ಹೆಸರು ಗಳಿಸಿದ ರಂಗ ಕಲಾವಿದೆಯಾಗಿರುವುದರಿಂದಲೂ ಅವರ ಬಾಳಸಂಗತಿಯ ಸಹಕಾರದಿಂದಲೂ ಗುರುತಿಸಿಕೊಂಡಿದ್ದಾರೆ. ಆದರೆ ಅದೇಷ್ಟೊ ಅಸ್ಪೃಶ್ಯ ಸಮುದಾಯದ ದೇವದಾಸಿ ಮಹಿಳೆಯೊಂದಿಗೆ ಸಂಬಂದ ಇಟ್ಟುಕೊಂಡಿರುವ ಯಾವ ಪುರುಷನು ಬಹಿರಂಗ ಪಡಿಸಿಕೊಳ್ಳುವುದಿಲ್ಲ. ಯಾರಿಗೂ ಗೊತ್ತಿಲ್ಲದ ರೀತಿಯಲ್ಲಿ ಅವಳೊಂದಿಗೆ ದೈಹಿಕ ಸಂಬಂಧ ಹೊಂದಿರುತ್ತಾನೆ. ಇನ್ನೊಂದು ಅಂಶವೆಂದರೆ ಪರಿಶಿಷ್ಟ ಜಾತಿಯ ಜನರು ರಾಜಕೀಯ ಪ್ರವೇಶ ಮಾಡುವುದೇ ಕಡಿಮೆ. ಅವರಿಗೆ ಹೆಚ್ಚಾಗಿ ದುಡಿದು ದಣಿದು ಬದುಕುವುದೇ ತಿಳಿದಿರುವುದು. ಹೀಗಿರುವಾಗ ಅಸ್ಪೃಶ್ಯ ಮತ್ತು ಕೆಳ ಜಾತಿಯ ದೇವದಾಸಿ ಮಹಿಳೆಯರೊಂದಿಗೆ ಅದೇ ಸಮುದಾಯದ ಪುರುಷರು ಸಂಬಂಧ ಹೊಂದಿರುವುದು ಹೆಚ್ಚು ಕಂಡು ಬರುತ್ತದೆ. ಹಾಗಾಗಿ ಅದೇ ಬಾವಿಯೊಳಗಿನ ಕಪ್ಪೆಯಂತೆಯೇ ಜೀವನ ನಡೆಸುತ್ತಾರೆಯೋ ವಿನಃ ಅವರು ಬೇರೆ ಕ್ಷೇತ್ರಕ್ಕೆ ಬರುವ ಮನಸ್ಸು ಮಾಡುವುದಿಲ್ಲ. ಸಂವಿಧಾನದ ಪ್ರಕಾರ ಮಹಿಳೆಯರಿಗೆ ರಾಜಕೀಯ ಮೀಸಲಾತಿಯನ್ನು ಕೊಡಬೇಕೆಂದು ವಿವರಿಸಿದ್ದಾರೆ. ಪ್ರತಿಯೊಂದು ಪಂಚಾಯಿತಿಯ ಮೀಸಲಿಡಲಾದ ಸ್ಥಳಗಳ ಒಟ್ಟು ಸಂಖ್ಯೆಯು ಮೂರನೆಯ ಒಂದು ಭಾಗಕ್ಕಿಂತ ಕಡಿಮೆ ಇಲ್ಲದಷ್ಟು ಸ್ಥಾನಗಳನ್ನು ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಮಹಿಳೆಯರಿಗೆ ಮೀಸಲಿರಿಸತಕ್ಕದ್ದು. ಎಲ್ಲಾ ಹಂತಗಳ ಪಂಚಾಯಿತಿಗಳ ಅಧ್ಯಕ್ಷರ ಹಾಗೂ ಉಪಾಧ್ಯಕ್ಷರ ಸ್ಥಾನ ಹಿಂದುಳಿದ ವರ್ಗಗಳ ಮಹಿಳೆಯರಿಗೆ ಮೀಸಲಿಡತಕ್ಕದೆಂದು ಸಂವಿಧಾನ ತಿಳಿಸುತ್ತದೆ. ಆದರೆ ದೇವದಾಸಿ ಮಹಿಳೆಯರು ಬೆರಳೆಣಿಕೆಯಷ್ಟು ಪ್ರಮಾಣದಲ್ಲಿ ಕಂಡುಬರುತ್ತಾರೆ ಪರಿಶಿಷ್ಟ ಜಾತಿಯಲ್ಲಿ ದೇವದಾಸಿ ಮಹಿಳೆಯ, ರಾಜಕೀಯವಾಗಿ ತೊಡಗಿಸಿಕೊಂಡಿಲ್ಲ. ಒಂದೆರಡು ಕಡೆಗಳಲ್ಲಿ ಪಂಚಾಯಿತಿ ಚುನಾವಣೆಗೆ ನಿಂತು ಸೋತಿರುವ ಸಂಗತಿಗಳು ಕಂಡುಬರುತ್ತವೆ. ಹೆಚ್ಚಾಗಿ ಇವರಲ್ಲಿ ರಾಜಕೀಯ ಒಲವುಗಳು ಕಂಡುಬರುವುದಿಲ್ಲ. ರಾಜಕೀಯದಲ್ಲಿ ಪರಿಶಿಷ್ಟ ಪಂಗಡದ ದೇವದಾಸಿಯರು ಕಂಡುಬರುತ್ತಾರೆ. ಇವರಿಗೆ ಇರುವ ರಾಜಕೀಯ ಬೆಂಬಲಗಳಿಂದಾಗಿ ಈ ಕ್ಷೇತ್ರದಲ್ಲಿ ಕಂಡುಬರುತ್ತಾರೆ. ಒಬ್ಬರು-ಇಬ್ಬರೂ ರಾಜಕೀಯದಲ್ಲಿ ಪಾಲ್ಗೊಳ್ಳುವುದು ಇಡೀ ದೇವದಾಸಿ ಸಮುದಾಯದ ಜೀವನವಾಗುವುದಿಲ್ಲ. ಹಾಗಾಗಿ ರಾಜಕೀಯವಾಗಿ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ದೇವದಾಸಿ ಮಹಿಳೆಯರಿಗೆ ಸಿಗುವ ಅವಕಾಶಗಳು ಹೆಚ್ಚಾಗಬೇಕು. ರಾಜಕೀಯ ಪ್ರಜ್ಞೆ ಪರಿಕಲ್ಪನೆ ಮತ್ತು ಸರ್ಕಾರದ ಕಾನೂನುಗಳ ಬಗ್ಗೆ ಕಾರ್ಯಾಗಾರ, ತರಬೇತಿಗಳನ್ನು ಕಡ್ಡಾಯವಾಗಿ ಕೊಟ್ಟು ಅವರನ್ನು ರಾಜಕೀಯವಾಗಿ ಜಾಗೃತರನ್ನಾಗಿಸಬೇಕು.

**೫.೬ ಕಲಾ ಜೀವನ**

ರಂಗ ಭೂಮಿಯು ಧಾರ್ಮಿಕ ಹಿನ್ನೆಲೆಯುಳ್ಳದ್ದು, ಭಕ್ತಿ ಪೂರಕವಾಗಿದ್ದು ಕುಣಿತ, ಹಾಡು ಸಂಭಾಷಣೆಗಳ ಸಂಯೋಜನೆಯಲ್ಲಿ ನೋಡುಗರ ಕಣ್ಣು ಕಿವಿಗಳನ್ನು ರಂಜಿಸುತ್ತಿತ್ತು. ಮನುಷ್ಯರ

ಆಸರ ಬೇಸರಗಳನ್ನು ಕಳೆಯುವ ಒಂದು ಮಾಧ್ಯಮವಾಗಿತ್ತು. ಜೊತೆಗೆ ಕೆಲವೊಮ್ಮೆ ಸಮಾಜದ ಅಂಕು ಡೊಂಕುಗಳನ್ನು ತಿದ್ದುವ ಜೀವನದ ಕೆಲ ಮೌಲ್ಯಗಳನ್ನು ಎತ್ತಿ ಹಿಡಿಯುವ ಪ್ರಯತ್ನಗಳು ನಾಟಕದ ಉದ್ದೇಶಗಳಲ್ಲಿ ಒಂದಾಗಿರುತ್ತದೆ. ವಿಜಯನಗರ ಸಾಮ್ರಾಜ್ಯದ ಅಸ್ತಿತ್ವದ ಕಾಲದಿಂದಲು ಹೊಸಪೇಟೆ, ಕಮಲಾಪುರ, ಮರಿಯಮ್ಮನಹಳ್ಳಿ, ಕೂಡ್ಲಿಗಿ, ಬಳ್ಳಾರಿ, ಕಪ್ಪಗಲ್ಲು, ಹಗರಿಬೊಮ್ಮನಹಳ್ಳಿಯ ಸೊನ್ನೆ ಪ್ರದೇಶದಲ್ಲಿ ಕಲಾವಿದೆಯರು ತಮ್ಮ ಕಲಾ ವ್ಯಕ್ತಿಯನ್ನು ವಂಶಪಾರಂಪರ್ಯವಾಗಿ ಉಳಿಸಿ ಬೆಳೆಸಿಕೊಂಡು ಬಂದಿರುವುದಕ್ಕೆ ಇಂದಿಗೂ ಉದಾಹರಣೆಗಳು ಸಿಗುತ್ತವೆ. ಒಂದು ಕಾಲದಲ್ಲಿ ರಂಗಭೂಮಿ ಪ್ರವೇಶಿಸುವುದಿರಲಿ ನಾಟಕವನ್ನು ಹೆಣ್ಣು ಮಕ್ಕಳು ನೋಡುವುದೇ ಅಪರಾಧ ಎನ್ನುವ ಬಿಕ್ಕಟ್ಟಿನ ಸ್ಥಿತಿಯಲ್ಲಿರುವಾಗ ನಟಿಯರು ದಿಟ್ಟವಾಗಿ ರಂಗಭೂಮಿಗೆ ಪ್ರವೇಶಿಸಿಯೇ ಬಿಟ್ಟರು. ಇವರುಗಳಲ್ಲಿ ಕೆಲವರು ತಮ್ಮ ಮನೆತನದಲ್ಲಿನ ನಾಟಕ ಪರಂಪರೆಯಿಂದ ರಂಗಭೂಮಿಗೆ ಬಂದಿದ್ದಾರೆ. ಇನ್ನೂ ಕೆಲವರು ಸ್ವ ಆಸಕ್ತಿಯಿಂದ ಇನ್ನು ಕೆಲವರು ದೇವದಾಸಿ ಸಂಪ್ರದಾಯದಿಂದ ಇನ್ನೂ ಕೆಲವರು ಮನೆಯ ಆರ್ಥಿಕ ಪರಿಸ್ಥಿತಿ ಸರಿಯಾಗಿಲ್ಲದ ಬಡತನ ನೀಗಿಸುವ ಸಲುವಾಗಿ ಹೀಗೆ ಒಂದಲ್ಲ ಒಂದು ಕಾರಣಗಳಿಂದ ದೇವದಾಸಿ ಮಹಿಳೆಯರು ನಟಿಯರಾಗಿ ರಂಗಭೂಮಿಯ ಪ್ರವೇಶ ಮಾಡಿದ್ದಾರೆ.

ಪ್ರತಿ ವರ್ಷವು ನಡೆಯುವ ಹಬ್ಬ ಮತ್ತು ಮೂರು ಅಥವಾ ಐದು ವರ್ಷಕ್ಕೆ ಒಮ್ಮೆ ನಡೆಯುವ ಗ್ರಾಮೀಣ ಪ್ರದೇಶದ ಊರ ಜಾತ್ರೆಗಳಲ್ಲಿ ಸಾಮಾಜಿಕ ಮತ್ತು ಪೌರಾಣಿಕ ನಾಟಕಗಳನ್ನು ಆಡುತ್ತಾರೆ. ಈ ಭಾಗಗಳಲ್ಲಿ ಬಯಲಾಟವು ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಇದನ್ನು ದೊಡ್ಡ ಮೂಡಲಪಾಯ ಎಂಬ ಹೆಸರಿನಿಂದಲೂ ಕರೆಯುತ್ತಾರೆ. "ದೊಡ್ಡಾಟದ ಪ್ರಸಂಗಗಳನ್ನು ಕುಡುತಿನಿಯ ಭೀಮೇಶನ ಸ್ತುತಿಯಿದೆ. ಬಳ್ಳಾರಿ ಜಿಲ್ಲೆಯ ಕುಡುತಿನಿಯ ಭೀಮೇಶನೆ ದೊಡ್ಡಾಟದ ಬಹುಪಾಲು ಪ್ರಸಾರ ಕರ್ತರಿಗೆ ಆರಾಧನಾ ದೈವವಾಗಿದ್ದಾನೆ. ಈ ಪ್ರಸಂಗಗಳನ್ನು ಬರೆದ ಕವಿಗಳೂ ಹಂಪೆ, ಕಂಪಲಿ, ಕುಡುತಿನಿ ಮುಂತಾದ ಊರಿಗೆ ಸೇರಿರುವರಿದ್ದಾರೆ. ಇದನ್ನೆಲ್ಲವನ್ನು ನೋಡಿದರೆ ಹಂಪೆಯ ಸುತ್ತಣ ಪ್ರದೇಶದಲ್ಲಿಯೇ ದೊಡ್ಡಾಟ ಹುಟ್ಟಿ ಬೆಳೆದಿರಬೇಕೆಂಬ ಅಭಿಪ್ರಾಯಕ್ಕೆ ಅವಕಾಶವಿದೆ"*(ಮರುಳಸಿದ್ದಪ್ಪ: ೧೯೮೩:೩೬)*. ಅಲ್ಲದೆಯೇ ಇದರ ಜೊತೆಗೆ ೧೫೫೬ರಲ್ಲಿ ಸಿಗುವ ತಾಳ ಮದ್ದಳೆಯನ್ನು ಪ್ರಸ್ತಾಪಿಸಿರುವ ಕುಡುಗೋಡು ಶಾಸನ ಕೂಡ ಬಳ್ಳಾರಿ ಜಿಲ್ಲೆಯಲ್ಲಿ ದೊರೆತಿರುವುದು ಇದಕ್ಕೆ ಸಾಕ್ಷಿಯಾಗಿದೆ ಎನ್ನಬಹುದು. ಹಾಗಾಗಿ ಉತ್ತರ ಕರ್ನಾಟಕದಲ್ಲಿ ಮೂಡಲಪಾಯ ಅಥವಾ ಬಯಲಾಟವು ಮೊದಲು ಕಾಣಿಸಿಕೊಂಡು ನಂತರ ಕರ್ನಾಟಕದಾದ್ಯಂತ ಇದು ಪ್ರಸಾರವಾಗಿರುವುದೆಂದು ಸಂಶೋಧಕರಾದ ಆರ್ ವೆಂಕಟೇಶನ್‌ರವರು ಅಭಿಪ್ರಾಯಪಟ್ಟಿದ್ದಾರೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಮರಿಯಮ್ಮನಹಳ್ಳಿ ರಂಗ ಕಲಾವಿದರ ತವರೂರಾಗಿದೆ ತುಂಗಾಭದ್ರ ಜಲಾಶಯದ ಮುಳುಗಡೆಯಿಂದ ಇತಿಹಾಸವಾಗಿರುವ ನಾರಾಯಣ ದೇವಕೆರೆಯ ಮೂಲದವರಾದ ಇವರು ಜಿಲ್ಲೆಯ ರಂಗಭೂಮಿಯ ಕಲಾವಿದೆಯರಾಗಿದ್ದಾರೆ. ಇಲ್ಲಿರುವ ಒಬ್ಬ ಕಲಾವಿದೆ "ಮೈಸೂರು ಒಡೆಯರಿಂದ ಪೀತಾಂಬರ ಸೀರೆಯನ್ನು ಪುರಸ್ಕಾರವನ್ನಾಗಿ ಪಡೆದಿದ್ದಾರೆ" *(ಸುಜಾತ ಅಕ್ಕಿ :೨೦೦೫:೩)*. ಆಗಿನ ಕಾಲದ ಗಂಭೀರ ದಿನಗಳಲ್ಲಿ ಸಮಾಜದ ಕಟ್ಟು ಕಟ್ಟಳೆಯನ್ನು

ಮೀರಿ ರಂಗಭೂಮಿಯಲ್ಲಿ ತಮ್ಮ ಛಾಪನ್ನು ಮೂಡಿಸಿರುವ ಮರಿಯಮ್ಮನಹಳ್ಳಿಯ ಕಲಾವಿದೆಯರ ಮುಂದೆ ಲಲಿತ ಕಲಾರಂಗ, ಗ್ರಾಮೀಣ ಮಹಿಳಾ ಹವ್ಯಾಸಿ ಸಂಘಗಳನ್ನು ಮಾಡಿಕೊಂಡು ಸೃಜನ ವೈಚಾರಿಕ ಪ್ರಜ್ಞೆಯ ನಾಟಕಗಳನ್ನು ಪ್ರದರ್ಶನ ಮಾಡುತ್ತಾ ಬಂದಿದ್ದಾರೆ. "ಕೂಡ್ಲಿಗಿಯನ್ನು ರಂಗನಟಿಯರ ತವರೂರು ಎನ್ನುವುದಕ್ಕೆ ರಂಗ ನಾಯಕಿಯರ ಪರಂಪರೆ ಅಭಿನಯ ವೃತ್ತಿಯ ಕಲಾ ಕುಟುಂಬಗಳನ್ನು ಇಲ್ಲಿ ಕಾಣಬಹುದಾಗಿದೆ" *(ಕೊಟ್ರಮ್ಮ:೨೦೦೮:೨೧೯).* ಈ ಕೂಡ್ಲಿಗಿ ತಾಲೂಕಿನಲ್ಲಿ "ವಿರುಪಾಪುರ, ಅಮ್ಮನಕೇರಿ ಎಂಬ ಊರುಗಳಲ್ಲಿ ಹೆಚ್ಚಾಗಿ ನಾಯಕ ಸಮುದಾಯದವರೇ ಇದ್ದು, ಅದರಲ್ಲಿ ಊರನಾಯಕ ಜಾತಿಗೆ ಸೇರಿದ ಹೆಣ್ಣು ಮಕ್ಕಳೆಲ್ಲರೂ ರಂಗಭೂಮಿಗೆ ಬಂದಿದ್ದಾರೆ." *(ಸುಜಾತ ಅಕ್ಕಿ:೨೦೦೪:೪).* ಗ್ರಾಮೀಣ ರಂಗಭೂಮಿ ಹವ್ಯಾಸಿ ಕಲಾವಿದರು ಸಾಮಾಜಿಕ ಮತ್ತು ಪೌರಾಣಿಕ ನಾಟಕಗಳಲ್ಲಿ ಕೂಡ್ಲಿಗಿಯ ಎಲ್ಲಾ ಕಲಾವಿದೆಯರು ಪಾತ್ರವನ್ನು ನಿರ್ವಹಿಸುತ್ತಾರೆ. ಅಲ್ಲದೆ ಬಳ್ಳಾರಿ ಜಿಲ್ಲೆಯಲ್ಲಿ ನಾಯಕ ಸಮುದಾಯದ ರಂಗ ಕಲಾವಿದರೆ ಹೆಚ್ಚಾಗಿದ್ದಾರೆ. ಸಂಡೂರು ಮತ್ತು ಸಿರುಗುಪ್ಪ ತಾಲೂಕಿನಲ್ಲಿ ಕಲಾವಿದರು ಕಂಡು ಬರುವುದಿಲ್ಲ. ಇನ್ನೂ ಬಳ್ಳಾರಿಯ ವಿಶೇಷವೆಂದರೆ ಕಪ್ಪಗಲ್ಲು ಗ್ರಾಮದಲ್ಲಿ ಕಲಾವಿದರ ಮನೆತನಗಳಲ್ಲಿ ಇದ್ದು, ಅದರಲ್ಲಿ ಅಸ್ಪೃಶ್ಯ ಸಮುದಾಯವೆನ್ನಿಸಿಕೊಂಡಿರುವ ಮಾದಿಗ ಸಮುದಾಯದವರು ಇದ್ದಾರೆ. ಬಹಳ ವರ್ಷಗಳ ಕೆಳಗಡೆ ನರಸೂಬಾಯಿ ಎಂಬ ಕಲಾವಿದೆ ಸೂತ್ರಧಾರಿಯಾಗಿದ್ದಳು. ಇಂದಿಗೂ ಕೆಲ ರಾಗ ಕಲಾವಿದೆಯರು ಅನೇಕ ಪ್ರಶಸ್ತಿಗೆ ಪಾತ್ರರಾಗಿದ್ದಾರೆ. ಬಳ್ಳಾರಿ ಹಾಗೂ ಸಿರುಗುಪ್ಪ ತಾಲೂಕಿನಲ್ಲಿ ಬಯಲಾಟಗಳಿಗೆ ಹೆಚ್ಚು ಪ್ರಧಾನ್ಯತೆ ನೀಡಿದ್ದು, ಬಯಲಾಟಗಳನ್ನು ನೋಡುವ ಪ್ರೇಕ್ಷಕರೆ ಹೆಚ್ಚಾಗಿದ್ದಾರೆ. ಇನ್ನೂ ವಿಶೇಷವೆಂದರೆ ಈ ಭಾಗದಲ್ಲಿ ರಂಗಕಲಾವಿದೆಯರಿಗೆ ಪ್ರಸುತ ಸಂಭಾವನೆಯನ್ನು ಹೆಚ್ಚು ಕೊಡುತ್ತಿದ್ದಾರೆ. ಅದಕ್ಕೆ ಎಷ್ಟೋ ಕಲಾವಿದರು ಸಾಮಾಜಿಕ ನಾಟಕಗಳನ್ನು ಬಿಟ್ಟು ಬಯಲಾಟವನ್ನೆ ತಮ್ಮ ಕ್ಷೇತ್ರವನ್ನಾಗಿ ಮಾಡಿಕೊಂಡಿದ್ದಾರೆ. ಬಳ್ಳಾರಿ, ಕಪಗಲ್ಲು, ಕೂಡ್ಲಿಗಿ, ವಿರುಪಾಪುರ, ಹೊಸಪೇಟೆ, ಕಂಪ್ಲಿಯಲ್ಲಿ ಬಯಲಾಟ ಕಲಾವಿದೆಯರಿದ್ದು ಮರಿಯಮ್ಮನಹಳ್ಳಿ ಕಲಾವಿದೆಯರು ಮಾತ್ರ ವೃತ್ತಿರಂಗ ಭೂಮಿಯ ಹೆಚ್ಚಿನ ಪ್ರಭಾವದಿಂದ ಸಾಮಾಜಿಕ, ಪೌರಾಣಿಕ, ಸೃಜನಶೀಲ ನಾಟಕಗಳಲ್ಲಿ ಇಂದಿಗೂ ಪಾತ್ರವಹಿಸುತ್ತಾರೆ. ಇಲ್ಲಿಯ ಕೆಲವರಿಗೆ ಕೌಟುಂಬಿಕವಾಗಿ ರಂಗಕಲೆಯ ಹಿನ್ನೆಲೆಯಿರಲಿಲ್ಲ. ಸಂಗೀತ ಕಲಿಯುವ ವ್ಯವಧಾನವೂ ಇವರಿಗಿರಲಿಲ್ಲ. ಚಿಕ್ಕ ವಯಸ್ಸಿನಲ್ಲಿಯೇ ತಮ್ಮೆಲ್ಲಾ ಸುಖ ಸಂತೋಷ ಕನಸುಗಳನ್ನು ಬದಿಗೊತ್ತಿ ತಮ್ಮ ಕುಟುಂಬಗಳನ್ನು ಸಾಕುವ ಹೊಣೆ ಹೊತ್ತು ಮಗಳಾಗಿದ್ದು, ಮಗನಂತೆ ಕಿತ್ತು ತಿನ್ನುವ ಬಡತನದ ಕಾರಣಕ್ಕಾಗಿ ಇವರು ಬಣ್ಣದ ಬದುಕಿನಿಂದಲೇ ಮನೆಯವರನ್ನು ಸಾಕಿ ಸಲುಹಲು ತಮ್ಮ ಇಡೀ ಜೀವನವನ್ನು ತ್ಯಾಗದಲ್ಲಿಯೇ ಬದುಕಿನ ಏಳಿಗೆ ಕಂಡವರು ಎಂದು ಹೇಳಲಾಗುವುದು.

ಬಳ್ಳಾರಿ ಜಿಲ್ಲೆಯಲ್ಲಿ ಕಂಡು ಬರುವ ಅನೇಕ ದೇವದಾಸಿಯರು ತಮ್ಮ ಬಾಲ್ಯದಲ್ಲಿಯೇ ಅಂದರೆ ೫ ರಿಂದ ೧೦ ವರ್ಷದ ವಯಸ್ಸಿನಲ್ಲಿ ನಾಟಕದಲ್ಲಿ ನೃತ್ಯ ಮಾಡುವುದಕ್ಕೆ ಸಂಗೀತ ಕಲಿಯಲು ಪ್ರಾರಂಭಿಸಿದ್ದಾರೆ. ಇವರಿಗೆ ಕೇವಲ ನಾಟಗಳಲ್ಲಿ ನೃತ್ಯ ಮಾಡಲು ಮಾತ್ರ ಪ್ರಾರಂಭದಲ್ಲಿ ಅವಕಾಶ ನೀಡುತ್ತಿದ್ದರು. ಹಿರಿಯ ಕಲಾವಿದೆಯರ ಹತ್ತಿರ ರಂಗ ಕಲೆಯ ಕುಣಿತ ಕಲಿತು ಜೊತೆಗೆ ಕೆಲವರು ಸಂಗೀತ ಗುರುಗಳ ಹತ್ತಿರವೂ ಹಾಡುಗಳನ್ನು ಕಲಿತಿರುವರು ಮತ್ತು ರೇಡಿಯೋ ಸಿನಿಮಾಗಳಲ್ಲಿ

ಬರುವ ಗೀತೆಗಳನ್ನು ಕೇಳಿ ಕಲಿತು ಇದರ ಜೊತೆಗೆ ನೃತ್ಯ ನಟನೆಯನ್ನು ಅಭ್ಯಸಿಸುತ್ತಿದ್ದರು. ಮೊದಲು ರಂಗ ಭೂಮಿಯಲ್ಲಿ ಹಿರಿಯ ಕಲಾವಿದೆಯರ ಜೊತೆಯಲ್ಲಿ ನಾಟಕದ ಮಧ್ಯದಲ್ಲಿ ನೃತ್ಯ ಮಾಡುವ ಅವಕಾಶಗಳನ್ನು ಪಡೆಯುತ್ತಿದ್ದರು. ನಂತರ ಅಲ್ಲಿ ಅವರು ಚೆನ್ನಾಗಿ ಅಭಿನಯಿಸಿ ನೃತ್ಯ ಮಾಡಿ ಹೆಸರುಗಳಿಸಿದರೆ ನಂತರ ದೊಡ್ಡ ಪಾತ್ರಗಳನ್ನು ಮಾಡಲು ಅವಕಾಶ ನೀಡುತ್ತಿದ್ದರು. ಇದರಲ್ಲಿ ಅನೇಕರು ಅನಕ್ಷರಸ್ಥರಾಗಿದ್ದರೂ ಹೆಸರಾಂತ ಕಲಾವಿದರಾಗಿ ಅಚ್ಚರಿಯನ್ನುಂಟು ಮಾಡಿದ್ದಾರೆ. ಇನ್ನು ಕೆಲವರು ಸಂಭಾಷಣೆ ಕಲಿಯಲು ಬೇಕಾದಷ್ಟು ವಿದ್ಯೆ ಕಲಿತು ಶಾಲೆಯನ್ನು ಬಿಟ್ಟು ರಂಗ ಭೂಮಿಯಲ್ಲಿಯೇ ಬದುಕು ಕಳೆದಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳಲ್ಲಿ ದೇವದಾಸಿಯರು ಕಂಡು ಬರುತ್ತಾರೆ. ಅವರುಗಳಲ್ಲಿ ಪರಿಶಿಷ್ಟ ಪಂಗಡದಲ್ಲಿ ನಾಯಕ ಸಮುದಾಯವಿದೆ. ಮಾದಿಗರು, ಚಲುವಾದಿಗಳು ಮುಂತಾದ ಜಾತಿಗಳಲ್ಲಿ ರಂಗಕಲಾವಿದರು ಹೆಚ್ಚಾಗಿ ಕಂಡು ಬಂದರೆ ಹಿಂದುಳಿದ ವರ್ಗಗಳಲ್ಲಿ ಅತಿ ಕಡಿಮೆ ಸಂಖ್ಯೆಯಲ್ಲಿ ಕಾಣಲಾಗುವುದು. ಹಾಗಾಗಿ ಈ ಜಿಲ್ಲೆಯಲ್ಲಿ ತಮ್ಮ ಬಡತನ ನೀಗಿಸಲು ಮತ್ತು ಜೀವನ ಸಾಗಿಸಲು ರಂಗಕಲಾವಿದೆಯರಾಗಿ ತಮ್ಮದೇ ಸೇವೆಯನ್ನು ಸಲ್ಲಿಸುತ್ತಾ ಬದುಕುತ್ತಿರುವುದನ್ನು ಕಾಣಲಾಗುವುದು. ಈ ಜಿಲ್ಲೆಯಲ್ಲಿ ನಾಟಕದ ರಂಗಭೂಮಿಯನ್ನು ಪ್ರವೇಶಿಸಿ ನಟಿಯರಾಗಿ ತಮ್ಮ ವೃತ್ತಿಯನ್ನು ಸ್ವೀಕರಿಸಿದವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನಾಯಕ ಸಮುದಾಯದವರನ್ನು ಕಾಣಲಾಗುವುದು. ಇವರನ್ನು ಬಿಟ್ಟರೆ ಮಾದಿಗರು ರಂಗಭೂಮಿಯನ್ನು ಆಯ್ಕೆ ಮಾಡಿಕೊಂಡು ಅಭಿನಯವನ್ನೆ ವೃತ್ತಿಯನ್ನಾಗಿ ಆಯ್ಕೆ ಮಾಡಿಕೊಂಡು ಇಡೀ ಬದುಕನ್ನು ರಂಗಭೂಮಿಯ ಸೇವೆಯಲ್ಲಿ ತೊಡಗಿಸಿ ಕೊಂಡಿದ್ದಾರೆ. ಹಾಗೆಯೇ ಹಿಂದುಳಿದ ವರ್ಗಗಳಲ್ಲಿ ಕೆಲವೇ ಕೆಲವು ದೇವದಾಸಿ ಮಹಿಳೆಯರು ರಂಗಕಲಾವಿದರಾಗಿದ್ದಾರೆ. ಇವರು ಕೇವಲ ಬಡತನಕ್ಕಷ್ಟೆ ರಂಗ ಭೂಮಿ ಪ್ರವೇಶ ಮಾಡಿರುವವರಲ್ಲದೆ ಅವರ ಪಾರಂಪರಿಕ ವೃತ್ತಿಯಾಗಿ ಮುಂದುವರೆಸಿಕೊಂಡು ಹೋಗಿದ್ದಾರೆ. ಬಳ್ಳಾರಿಯಲ್ಲಿ ಸಾಕಷ್ಟು ಕುಟುಂಬಗಳು ದೇವದಾಸಿಯ ಪರಂಪರೆಯನ್ನು ವಂಶಪಾರಂಪರ್ಯವಾಗಿ ಬೆಳೆಸಿಕೊಂಡು ಬಂದಂತವುಗಳಾಗಿವೆ. ಅವರುಗಳಲ್ಲಿ ರಂಗ ಭೂಮಿಯ ಕಲಾ ಜೀವನದಲ್ಲಿ ಬದುಕಿರುವ ಕುಟುಂಬಗಳು ಕಂಡುಬರುತ್ತವೆ. ಹಾಗೆಯೇ ರಂಗಭೂಮಿಯನ್ನು ಪಾರಂಪರಿಕ ವೃತ್ತಿಯಾಗಿ ಮುಂದುವರಿಸಿಕೊಂಡು ಹೋಗಿದ್ದಾರೆ. ಸಮಾಜದಲ್ಲಿ ದೇವದಾಸಿ ಮಹಿಳೆಯರು ನಟಿಸುವ ಅಥವಾ ಜೀವ ತುಂಬುವ ಪಾತ್ರಗಳಿಗೆ ಗೌರವ ಸಿಗುತ್ತದೆಯೇ ಹೊರತು ಅವರ ನಿಜ ಜೀವನಕ್ಕೆ ಸಿಕ್ಕುವುದಿಲ್ಲ. ಇವರು ದೇವದಾಸಿಯರಾಗಿ ನಂತರ ರಂಗಭೂಮಿಯನ್ನು ಪ್ರವೇಶಿಸಿರುವುದರಿಂದ ಇವರನ್ನು ಸಮಾಜದ ವ್ಯವಸ್ಥೆ ಸೂಳೆಯರೆಂದು ಗುರುತಿಸುತ್ತಿದೆ. ಹಾಗಾಗಿ ಇವರು ಯಾವಾಗಲೂ ಮಾನಸಿಕ ತೊಳಲಾಟದಲ್ಲಿಯೇ ಇರುತ್ತಾರೆ. ನಾಟಕ ಪ್ರದರ್ಶನ ಸಂದರ್ಭದಲ್ಲಿಯೂ ರಂಗದ ಒಳಗೆ ಹೊರಗೆ ಎರಡೂ ಕಡೆಗಳಲ್ಲಿ ಇವರ ಮೇಲೆ ನಿರಂತರವಾಗಿ ಲೈಂಗಿಕ ಮತ್ತು ಮಾನಸಿಕ ಶೋಷಣೆ ನಡೆಯುತ್ತಿರುವುದುಂಟು. ಒಂದು ಕಡೆ ದೇವದಾಸಿಯರೆಂಬ ಕೀಳು ಮನೋಭಾವನೆಯಿಂದ ಸಮಾಜ ನೋಡುವ ದೃಷ್ಟಿ ಇನ್ನೊಂದೆಡೆ ರಂಗನಟಿಯರಾಗಿ ಅನುಭವಿಸುವ ಮಾನಸಿಕ ಹಿಂಸೆ ಇವೆಲ್ಲವನ್ನು

ಸಹಿಸಿಕೊಂಡು ತಮ್ಮ ಆರ್ಥಿಕ ಜೀವನಕ್ಕಾಗಿ ಇಡೀ ಜೀವನವನ್ನು ರಂಗಭೂಮಿಯಲ್ಲಿ ಸವಿಸುತ್ತಿದ್ದಾರೆ. ಹಾಗಾಗಿ ಇವರು ಇದನ್ನು ಬಿಡಲಾಗದೆ ಮಾಡಲಾಗದೆ ಇವರ ಬದುಕು ಅತಂತ್ರ ಸ್ಥಿತಿಯಿಂದ ಕೂಡಿದೆ. ಹೀಗೆ ವೃತ್ತಿಯನ್ನು ರಂಗಭೂಮಿಯನ್ನಾಗಿಸಿಕೊಂಡು ರಂಗಭೂಮಿಯಲ್ಲಿಯೇ ದುಡಿಯುವ ಜೀವನವನ್ನು ಸವೆಸಿರುವ ಅದೇಷ್ಟೋ ರಂಗಭೂಮಿ ಮಹಿಳೆಯರನ್ನು ಕುರಿತಾಗಿ ಸುಜಾತ ಹಕ್ಕಿಯವರು ಬಳ್ಳಾರಿ ಜಿಲ್ಲೆಯ ರಂಗ ನಟಿಯರು ಎಂಬ ಮಹಾಪ್ರಬಂಧದಲ್ಲಿ ತಿಳಿಸಿಕೊಟ್ಟಿದ್ದಾರೆ.

ನಾಟಕ, ಬಯಲಾಟಗಳಲ್ಲಿ ನಟಿಸುವ ಅಥವಾ ಪಾತ್ರ ಮಾಡುವ ಹೆಣ್ಣು ಮಕ್ಕಳು ಯಾವುದೇ ತಪ್ಪು ಮಾಡದಿದ್ದರೂ ಸಮಾಜ ಅವರನ್ನು ಸೂಳೆ ರೀತಿಯಲ್ಲಿ ನೋಡುತ್ತದೆ. ಸೂಳೆಯರು ಪಾತ್ರ ನಾಟಕ ಮಾಡುತ್ತಾರೆ ಎಂಬ ನಂಬಿಕೆಯೂ ಇಡೀ ಜಿಲ್ಲೆಯಲ್ಲೂ ಪಸರಿಸಿದೆ. ಪರ ಪುರುಷರ ಹತ್ತಿರ ಮೈ ಮುಟ್ಟಿಸಿಕೊಳ್ಳುತ್ತಾರೆ ಹಾಗಾಗಿ ನಾಟಕ ಮಾಡುವವರು ಸೂಳೆಯರಾಗುತ್ತಾರೆ ಎಂದು ತಿಳಿದುಕೊಂಡಿದ್ದಾರೆ. ಈಗಲೂ ಯುವತಿಯರು ಶಾಲೆ ಕಾಲೇಜುಗಳಲ್ಲಿ ನಾಟಕಕ್ಕೆ ಸೇರಿಕೊಂಡರೆ ಹಳ್ಳಿಗಳಲ್ಲಿ ಬಯಲಾಟಕ್ಕೆ ಸೇರಿ ಸೂಳೆ ಆಗ್ತಿಯಾ? ಎಂದು ಹೇಳುವ ಮಾತುಗಳು ಕ್ಷೇತ್ರ ಅವಲೋಕನದಲ್ಲಿ ಕೇಳಿ ಬಂದಿವೆ. ಇದೇ ಜನ ಟಿ.ವಿ. ಸಿನಿಮಾಗಳಲ್ಲಿ ಕಂಡು ಬರುವ ನಟಿಯರಿಗೆ ಅಭಿಮಾನಿಗಳಾಗುತ್ತಾರೆ. ಆಗುತ್ತಾರೆ. ಅದೇ ಬಯಲಾಟ ಇತರೆ ನಾಟಕಗಳಲ್ಲಿ ಪಾತ್ರ ಮಾಡುವವರಿಗೆ ಸೂಳೆಯರೆಂದು ಪಟ್ಟ ಕಟ್ಟುವ ಸಮಾಜವನ್ನು ನಾವು ಕಾಣುತ್ತಿದ್ದೇವೆ. ಪಾತ್ರದವರಿಗೆ, ದೇವದಾಸಿ, ಬಸವಿ ಮತ್ತು ಜೋಗತಿಯರಿಗೆ ಲೈಂಗಿಕ ಮುಕ್ತತೆಗೆ ಸಮಾಜದಿಂದ ಒಪ್ಪಿಗೆ ಸಿಕ್ಕಿರುತ್ತದೆ. ಆದರೆ ಸೂಳೆಯರಿಗೆ ಸಮಾಜದಿಂದ ಒಪ್ಪಿಗೆ ಸಿಕ್ಕಿರುವುದಿಲ್ಲ. ಹಾಗಂತ ದೇವದಾಸಿ ಎಂಬುದು ಒಂದು ವೃತ್ತಿಯಲ್ಲ. ಇದು ಪದ್ಧತಿಯಾಗಿ ಪರಂಪರೆಯಿಂದ ಬೆಳೆದುಕೊಂಡು ಬಂದ ಪುರೋಹಿತಶಾಹಿ ಉಳಿಗಮಾನ್ಯಶಾಹಿ ವ್ಯವಸ್ಥೆಯ ಕೊಡುಗೆಯಾಗಿ ಬಂದಿದೆ. ಇದನ್ನೆ ಕೆಲವರು ವೃತ್ತಿಯಾಗಿಸಿಕೊಂಡಿದ್ದಾರೆ. ಆದರೆ ಇವರ ಸಂಖ್ಯೆ ತುಂಬ ಕಡಿಮೆ ಸಂಖ್ಯೆಲ್ಲಿ ಕಾಣಸಿಗುತ್ತದೆ. ದೇವದಾಸಿಯಾದ ಮಹಿಳೆಯರಿಗೆ ಮುಕ್ತವಾಗಿ ಲೈಂಗಿಕ ಸ್ವಾತಂತ್ರವಿದ್ದು ಪುರುಷರ ಆಯ್ಕೆಯ ಸ್ವಾತಂತ್ಯವನ್ನು ಹೊಂದಿರುತ್ತಾರೆ. ಇವರು ತಾವು ಸ್ವೀಕರಿಸಿದ ಪುರುಷನ ಅಧೀನ ಇರುವುದಿಲ್ಲ. ಇವರದು ಪುರುಷರ ಮುಕ್ತ ಸ್ವತಂತ್ರ ಜೀವನ ಆಗಿರುವ ಕಾರಣಕ್ಕೆ ಎಷ್ಟೋ ದೇವದಾಸಿ ಮಹಿಳೆಯರು ನಾಟಕ ರಂಗದಲ್ಲಿ ನಿರ್ಭಯವಾಗಿ ರಂಗ ಪ್ರವೇಶವನ್ನು ಮಾಡಿದ್ದಾರೆಂದು ಕೆಲವರು ಅಭಿಪ್ರಾಯ ತಿಳಿಸಿದ್ದಾರೆ.

ಯಾವುದೇ ರೀತಿಯ ನಾಟಕವಿರಲಿ ಬಳ್ಳಾರಿ ಜಿಲ್ಲೆಯನ್ನೊಳಗೊಂಡಂತೆ ಕರ್ನಾಟಕದ ಹಲವು ಪ್ರದೇಶಗಳಲ್ಲಿನ ಹಳ್ಳಿ ಹಳ್ಳಿಗೂ ಪ್ರಸಿದ್ಧಿ ಪಡೆದು ನೆರೆ ರಾಜ್ಯಗಳಾದ ಆಂಧ್ರ ಪ್ರದೇಶ ಮತ್ತು ಮಹಾರಾಷ್ಟದ ಗಡಿ ಭಾಗಗಳಲ್ಲಿ ನಾಟಕಗಳ ಪ್ರದರ್ಶನ ನೀಡಿ ಹೆಸರು ಗಳಿಸಿಕೊಂಡಿದ್ದಾರೆ. ಇವರ ಭಾವಪೂರ್ಣ ಅಭಿನಯದಿಂದ ಇಡೀ ಬಳ್ಳಾರಿ ಮತ್ತು ಕರ್ನಾಟಕದ ಕೆಲ ಹಳ್ಳಿಗಳಲ್ಲಿ ಅಭಿಮಾನಿಗಳ ಬಳಗವನ್ನೆ ಹೊಂದಿದ್ದಾರೆ. ಇವರ ಆಭಿನಯ, ನೃತ್ಯ, ಸಂಗೀತದಲ್ಲಿ ಸಿನಿಮಾ ನಟಿಯರನ್ನು ಮೀರಿಸುವಷ್ಟು ಪ್ರದರ್ಶನದ ಕಲೆಯನ್ನೊಳಗೊಂಡಿದ್ದಾರೆ. ಆಯಾಪಾತ್ರ, ಸನ್ನಿವೇಶಗಳಿಗೆ ಜೀವ ತುಂಬಿ ಅಭಿನಯಿಸುವುದರಿಂದ ಬಂದಿರುವ ಪ್ರೇಕ್ಷಕರಿಂದ ಚಪ್ಪಾಳೆಯ ಜೊತೆಗೆ ಮುಯ್ಯಿ ಪಡೆದು ನಾಟಕಗಳನ್ನು

ಯಶಸ್ವಿಗೊಳಿಸುತ್ತಿದ್ದಾರೆ. ಆದರೆ ಸಿನಿಮಾ ನಟಿಯರಿಗೆ ಇರುವಂತೆ ವರ್ಷವಿಡೀ ಬೇಡಿಕೆ ಇವರಿಗೆ ಇರುತ್ತಿರಲಿಲ್ಲ. ಕೆಲ ವರ್ಷಗಳಲ್ಲಿ ಸಮೃದ್ಧ ಬೆಳೆ ಬಂದಾಗ ಮೂರು ಅಥವಾ ಐದು ವರ್ಷಗಳ ಬಿಟ್ಟು ನಡೆಯುವ ಊರ ಜಾತ್ರಗಳಲ್ಲಿ ಮತ್ತು ವರ್ಷದ ಜಾತ್ರೆಯ ಸಂದರ್ಭಗಳಲ್ಲಿ ಮಾತ್ರ ಇವರಿಗೆ ಅವಕಾಶಗಳು, ಬೇಡಿಕೆಗಳು ಬರುತ್ತಿದ್ದವು. ಅವು ವರ್ಷದಲ್ಲಿ ಮೂರು ತಿಂಗಳು ಮಾತ್ರ ಇರುತ್ತಿದ್ದವು. ಆ ಸಂದರ್ಭದಲ್ಲಿ ದಿನಕ್ಕೆ ಒಂದರಂತಾದರೂ ಮೂವತ್ತು ದಿನಗಳು ಅಭಿನಯದಲ್ಲಿ ತೊಡಗಿಕೊಂಡು ಹಣ ಸಂಪಾದಿಸಿಕೊಳುತ್ತಿದ್ದರು.

ನಾಟಕದ ಸೀಜನ್‌ಗಳಲ್ಲಿ ಒಂದು ಸಾರಿ ಯಾರಾದರೂ ಮುಂಗಡ ಕೊಟ್ಟು ಇಂಥದಿನ ಅಂತ ಹೇಳಿ ಹೋಗುತ್ತಾರೆ. ಆ ದಿನ ಏನಾದರೂ ಸರಿಯೇ ಹೊಗಲೇ ಬೇಕು. ಒಂದು ವೇಳೆ ಆರೋಗ್ಯ ಸರಿಯಾಗಿಲ್ಲದಿದ್ದರೂ, ಜ್ವರ ಬಂದಿದ್ದರೂ, ಹೆರಿಗೆ ಆಗಿದ್ದರೂ, ಆಯಾ ಸಂದರ್ಭದ ಪಾತ್ರಕ್ಕೆ ಅನುಗುಣವಾಗಿ ಭಾವ ತುಂಬಿಕೊಂಡು ಆಡಬೇಕು. ತನ್ನೆಲ್ಲಾ ವೈಯಕ್ತಿಕ ದುಃಖ, ಸಮಸ್ಯೆ, ನೋವುಗಳನ್ನು ಬದಿಗಿರಿಸಿ ಮನಸ್ಸು ಉಲ್ಲಾಸ ಭರಿತವಾಗಿ ನಟಿಸುತ್ತಿದ್ದರು. ಗ್ರಾಮೀಣ ಪ್ರದೇಶಗಳಲ್ಲಿ ಸಾಕಷ್ಟು ಹಣ ಖರ್ಚು ಮಾಡಿ ಕಲಾವಿದೆಯರನ್ನು ಕರೆಸಿ ನಾಟಕ ಮಾಡಿಸಿರುತ್ತಾರೆ. ಹಾಗಾಗಿ ಅವರ ಆ ಶ್ರಮಕ್ಕೆ ಮತ್ತು ನಮ್ಮ ಮೇಲೆ ಇಟ್ಟಿರುವ ಅಭಿಮಾನ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಆ ಕಾಲದ ದಿನಗಳ ನಮ್ಮ ಹೊಟ್ಟೆ ಪಾಡಿಗಾಗಿ ಎಲ್ಲಾ ನೋವುಗಳನ್ನು ಸಹಿಸಿಕೊಂಡು ನಾಟಕಗಳನ್ನು ಯಶಸ್ವಿಗೊಳಿಸುತ್ತಿದ್ದರು. ಒಂದು ಸಾರಿ ನಾಟಕದಲ್ಲಿ ಯಾವುದಾದರೂ ಕಾರಣಕ್ಕೆ ಕೆಟ್ಟ ಹೆಸರುಬಂದಿದ್ದರೆ (ಅಭಿನಯದಲ್ಲಿ) ಮತ್ತೊಮ್ಮೆ ಯಾರು ನಾಟಕಗಳಿಗೆ ಅವರನ್ನು ಕರೆಸುತ್ತಿರಲಿಲ್ಲ. ಹಾಗಾಗಿ ಅವರು ಸಿಕ್ಕಲ್ಲಿ ನೀರು ಆಹಾರ ಸೇವಿಸದೆ ಆರೋಗ್ಯ ಜಾಗ್ರತೆ ಮಾಡಿಕೊಳ್ಳುತ್ತಿದ್ದರು. ಮುಖ್ಯವಾಗಿ ರಂಗ ಕಲಾವಿದೆಯರಿಗೆ ಧ್ವನಿಯೇ ಪ್ರಧಾನವಾದ ಆಸ್ತಿಯಾಗಿದ್ದು, ಅದರಲ್ಲೂ ಪೌರಾಣಿಕ, ಐತಿಹಾಸಿಕ ನಾಟಕಗಳಲ್ಲಿ ಗಟ್ಟಿಯಾದ ಧ್ವನಿಯೇ ಅವರ ಪಾತ್ರದ ಜೀವವಾಗಿರುತ್ತದೆ. ಹಾಗಾಗಿ ಬಹುತೇಕ ನಟಿಯರು ಧ್ವನಿ ಕೆಡದಂತೆ ಮುನ್ನೆಚರಿಕೆ ವಹಿಸುತ್ತಾರೆ.

ಕೆಲವು ದೇವದಾಸಿಯರ ಮಾತುಗಳನ್ನು ಇಲ್ಲಿ ಪ್ರಸ್ತಾಪಿಸುವುದಾದರೆ, ಹಳ್ಳಿಗಳಲ್ಲಿ ಸಾಕಷ್ಟು ಖರ್ಚು ಮಾಡಿ ನಮ್ಮಂತ ಕಲಾವಿದೆಯರನ್ನು ಕರೆಸುತ್ತಾರೆ. ಬಯಲಾಟ ಇತರೆ ನಾಟಕ ಮಾಡುವ ನಮ್ಮನ್ನು ಸಿನಿಮಾ ನಟಿಯರು ಬಂದಿರುವಂತೆ ಸಂಭ್ರಮ ತೋರಿಸುತ್ತಾರೆ. ಅಲ್ಲದೆಯೇ ಅವರ ಬಂಧು ಬಾಂಧವರ ಮಧ್ಯೆ ಹಬ್ಬದ ವಾತಾವರಣದಲ್ಲಿ ಹಬ್ಬದ ಅಡುಗೆಯ ಊಟ ಮಾಡಿಸಿ, ಉತ್ತಮವಾದ ಸಂಭಾವನೆ ನೀಡಿ, ಪ್ರೋತ್ಸಾಹ ರೂಪದ ಮೂಯ್ಯಿ ಮತ್ತು ನೆನಪಿನ ಕಾಣಿಕೆ ಜೊತೆಗೆ ತಮ್ಮ ಮನೆ ಮಗಳಂತೆ ಸೀರೆ ಕುಪ್ಪಸ ಉಡಿತುಂಬಿ ಭಾವಚಿತ್ರ ತೆಗೆಯಿಸಿಕೊಳ್ಳುತ್ತಾರೆ. ಕೆಲವರು ಅವರು' ಬೆಳೆದಿರುವ ದವಸ ಧಾನ್ಯಗಳನ್ನು ಕೊಟ್ಟು ಬಹು ಪ್ರೀತಿಯಿಂದ ಅಭಿಮಾನದಿಂದ ಬೀಳ್ಕೊಡುವರು ಎಂದು ಸಂತೋಷದ ಮನಸ್ಸಿನಿಂದ ದೇವದಾಸಿ ಕಲಾವಿದೆಯರು ಹೇಳಿಕೊಂಡಿದ್ದಾರೆ.

ರಂಗ ಭೂಮಿಯಲ್ಲಿರುವ ರಂಗ ನಟಿಯರು ತಮ್ಮ ಬದುಕನ್ನು ಅಭಿನಯಕ್ಕೆ ಮುಡುಪಾಗಿಟ್ಟು ತಾವೇ ನಾಟಕಗಳನ್ನು ವಿಮರ್ಶಿಸುವ ಹಂತವನ್ನು ತಲುಪಿದ್ದಾರೆ. ಹೇಗೆಂದರೆ ಸಿನಿಮಾಗಳಲ್ಲಿ ನಟಿಸುವ

ನಟಿಯರಂತೆ ನಾವು ಇರಬೇಕು ಎಂಬ ಕಲ್ಪನೆ ಜನರಲ್ಲಿ ಇದೆ. ಅಭಿನಯದ ಸನ್ನಿವೇಶಗಳೇನೇ ಇರಲಿ ಬಿಡಲಿ ಸಿನಿಮಾ ಹಾಡಿಗೆ ನೃತ್ಯ ಮಾಡಬೇಕು, ಅಶ್ಲೀಲ ಸಂಭಾಷಣೆಗಳು ಅತ್ಯಾಚಾರ ಇತರೆ ಅಂಶಗಳನ್ನು ವೈಭವೀಕರಿಸುವ ನಾಟಕಗಳೇ ಹೆಚ್ಚಾಗಿದೆ. ಇದಕ್ಕೆಲ್ಲ ಕಾರಣ ಟಿ.ವಿ. ಸಿನಿಮಾ ಮಾಧ್ಯಮಗಳು ಎಂದು ಹೇಳುತ್ತಾರೆ.

ದೇವದಾಸಿಯರು ರಂಗಭೂಮಿಯಲ್ಲಿ ಕಲಾವಿಧೆಯರಾಗಿ ಇಡೀ ಬದುಕನ್ನು ರಂಗಭೂಮಿ ಮತ್ತು ರಂಗಭೂಮಿಯ ಬೆಳವಣಿಗೆಗೆ ಮೀಸಲಿಸಿದ ಕುರಿತಾಗಿ ಮತ್ತು ಅವರ ಅಭಿನಯ ಪ್ರತಿಭೆಗೆ ಮೆಚ್ಚಿ ಅನೇಕ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದ ದೇವದಾಸಿಯರಿದ್ದಾರೆ. ಹೀಗೆ ಸಿಕ್ಕಿರುವ ಸಾಮಾಜಿಕ ಮನ್ನಣೆ ಮತ್ತು ಗೌರವ ಪ್ರಶಸ್ತಿಗಳೆಲ್ಲವೂ ಕೇವಲ ಭ್ರಮಾಲೋಕದಲ್ಲಿ ವಿವಹರಿಸುವಂತೆ ಮಾಡುವಂಥವುಗಳಾಗಿವೆ. ಹೊರತು ನಮಗೆ ನಿಜವಾದ ಸಾಮಾಜಿಕ ಗೌರವ ಮನ್ನಣೆ ಮಾನಸಿಕವಾಗಿ ಸಿಗುವುದಿಲ್ಲ. ನಮ್ಮ ತಂದೆ ಅಥವಾ ತಾಯಿಯವರು ಎಲ್ಲರಂತೆ ಮದುವೆ ಮಾಡಿಕೊಟ್ಟಿದ್ದರೆ, ಈ ಸಮಾಜದ ವಿಭಿನ್ನ ಆಯಾಮಗಳಿಂದ ಶೋಷಣೆಗೆ ಒಳಗಾಗುವುದನ್ನು ತಪ್ಪಿಸಿಕೊಳ್ಳಬಹುದಿತೆಂದು ತಾವು ಇಡೀ ಜೀವನದಲ್ಲಿ ಅನುಭವಿಸಿದ ಕಷ್ಟ ನೋವುಗಳು ನಮಗೆ ಕೊನೆಯಾಗಲಿ ಮತ್ತೆ ಈ ಪದಗಥತಿ ಮುಂದುವರೆದು ಹೆಣ್ಣು ಮಕ್ಕಳ ಬದುಕು ಬರುಡಾಗುವ ಬದಲು ಈ ಪದ್ಧತಿಯನ್ನು ಸಂಪೂರ್ಣವಾಗಿ ನಿರ್ಮೂಲನೆಗೊಳಿಸಬೇಕು ಎಂಬ ನಿಟ್ಟಿನಲ್ಲಿ ನಾಟಕ ಪ್ರದರ್ಶನಗಳ ಮೂಲಕ ದೇವದಾಸಿ ಪದ್ಧತಿಯ ಕುರಿತಾಗಿ ಜನಕ್ಕೆ ಜಾಗೃತಿ ಮೂಡಿಸುವ ನಾಟಕಗಳ ಪ್ರದರ್ಶನಗಳನ್ನು ನೀಡುವುದು ದೇವದಾಸಿಯರ ಕಲಾ ಜೀವನದ ಕೊಡುಗೆಗಳಾಗಿವೆ.

ದೇವದಾಸಿ ಮಹಿಳೆಯರು ರಂಗಭೂಮಿಯಲ್ಲಿ ಕಲಾವಿದೆಯರಾಗಿದ್ದು ಪ್ರಶಸ್ತಿಗೆ ಭಾಜನರಾಗಿರುವುದು ಒಂದು ಸಂತೋಷದ ವಿಚಾರವಾಗಿದೆ. ಆದರೂ ಇದೇನೂ ಹೆಮ್ಮೆಯ ವಿಷಯವಲ್ಲ. ಕುಟುಂಬವನ್ನು ಸಾಕುವ ಹೊಣೆ ಹೊತ್ತು ಬದುಕಲು ಬೇರೆ ದಾರಿ ಸಿಗದೆ ಅನಿವಾರ್ಯವಾಗಿ ಈ ಕಲಾ ಜೀವನದ ಆಯ್ಕೆ ಮಾಡಿಕೊಂಡಿದ್ದೇವೆಂದು ತಿಳಿಸಿದ್ದಾರೆ. ಕುಟುಂಬದವರಿಗೆ ಈ ಪದ್ಧತಿ ಸರಿಯಾದುದಲ್ಲ ಇದೊಂದು ನಿರಾಶ್ರಿತ ಹೆಣ್ಣಿನ ಬದುಕೆಂದು ತಿಳಿದಾಗ ತಂದೆ ತಾಯಿ ಕುಟುಂಬದವರು ತಮ್ಮ ಆಶ್ರಯಕ್ಕಾಗಿ ಈ ಪದ್ಧತಿಗೆ ಹೆಣ್ಣು ಮಕ್ಕಳನ್ನು ಬಿಡುವ ಮೂಲಕ ಮಹಿಳೆಯರನ್ನು ದೇವರ ಹೆಸರಿನಲ್ಲಿ ಬಲಿಕೊಡುತ್ತಾರೆ. ದೇವದಾಸಿ ಮಹಿಳೆಯರು ತಮಗೆ ಎಷ್ಟೇ ಕಷ್ಟ ಸಮಸ್ಯೆಗಳು ಎದುರಾದರು ತಮ್ಮ ದೇಹವನ್ನು ಪುರುಷನಿಗೆ ಒಪ್ಪಿಸಲೇ ಬೇಕು. ಕೊನೆಗೆ ತನ್ನ ಜೀವನಕ್ಕೆ ಆಸರೆಗೆಂದೂ ವಂಶ ಬೆಳವಣಿಗೆಗೆಂದು ಮಗು ಪಡೆಯುವ ಉದ್ದೇಶಕ್ಕಾದರೂ ಬೇರೆಯವರೊಂದಿಗೆ ಸಂಬಂಧ ಹೊಂದಲೇ ಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ದೇವದಾಸಿ ಎಂದರೆನೇ ಸಮಾಜ ಅವಳನ್ನು ಕಾಮದ ವಸ್ತುವಿನಂತೆ ನೋಡುವ ಸ್ಥಿತಿಯಲ್ಲಿ ಮತ್ತೇ ಅವಳು ರಂಗ ಕಲಾವಿದೆಯಾಗಿರುವಲ್ಲಿ ಅವಳನ್ನು ಲೈಂಗಿಕವಾಗಿ ಮಾನಸಿಕ ಹಿಂಸೆಗೂ ಒಳಪಡಿಸುತ್ತದೆ. ಕೆಲವೊಂದು ಬಾರಿ ನಿಗದಿತ ಸ್ಥಳಕ್ಕೆ ತಲುಪಲು ಯಾವುದೇ ಬಸ್ಸು ಅಥವಾ ವಾಹನದ ವ್ಯವಸ್ಥೆ ಇಲ್ಲದಿದ್ದಾಗೂ ಹೇಗಾದರೂ ಸರಿಯೇ ಅವರು ಸರಿಯಾದ ಸಮಯಕ್ಕೆ ತಲುಪಲೇ ಬೇಕು. ಅಲ್ಲದೇಯೇ ನಾಟಕಕ್ಕೆ ಹೋದಾಗ ಕೆಲವು ಸಂದರ್ಭಗಳಲ್ಲಿ

ನಾಟಕದ ಸೂಳೆ, ಆಟದ ಬಸವಿ ಪಾತ್ರದವರು ಎಂದು ಪುರುಷರು ವಿಚಿತ್ರ ರೀತಿಯಲ್ಲಿ ನೋಡುತ್ತಾರೆ. ರಂಗದ ಕಲಾ ಜೀವನದಲ್ಲಿನ ಕೆಲವು ಘಟನೆಗಳು ಹಿಂಸೆಯನ್ನುಂಟುಮಾಡಿರುವುದೇ ಹೆಚ್ಚು. ಪುರುಷನ ಮನಸ್ಥಿತಿಗಳು ಒಂದೊಂದು ರೀತಿಯಲ್ಲಿರುತ್ತವೆ. ಕೆಲವು ಪುರುಷರು ಆಟವಾಡುವ ಮನಸ್ಥಿತಿಯನ್ನಷ್ಟೇ ಹೊಂದಿರುತ್ತಾರೆ. ಇಂತಹವರು ಬೆರಳೆಣಿಕೆಯಷ್ಟು ಜನ ಮಾತ್ರ ಸಿಗುತ್ತಾರೆ. ಕೆಲವರು ದೇವದಾಸಿ ಕಲಾವಿದೆಯರನ್ನು ಆಟವಾಡುವ ಸಂದರ್ಭದಲ್ಲಿ ತಮ್ಮ ಕಾಮದ ಚಪಲದಿಂದ ಅನಾವಶ್ಯಕವಾಗಿ ಅಪ್ಪಿಕೊಳ್ಳುವುದು, ತೊಡೆ ಮೇಲೆ ಕುರಿಸಿಕೊಳ್ಳುವುದು, ಕೈ ಮೈಯನ್ನು ಸವರುವುದು ಮಾಡುತ್ತಾರೆ. ಹೀಗೆ ದೈಹಿಕವಾಗಿ, ಮಾನಸಿಕವಾಗಿ ನಾಟಕದ ಪರದೆಯಲ್ಲಿಯೇ ಹಿಂಸೆಯನ್ನು ಅನುಭವಿಸುತ್ತಾಳೆ. ಗಂಡಸರು ಹಣಕೊಟ್ಟು ಕರೆಯಿಸಿದ್ದೇವೆ ಹೇಗೆ ಬೇಕಾದರೂ ಅವರನ್ನೂ ಬಳಸಿಕೊಳ್ಳಬಹುದು ಎಂಬ ಮನಸ್ಥಿತಿಯನ್ನು ಹೊಂದಿರುತ್ತಾರೆ. ಕೆಲವೇ ಪುರುಷರು ಸಂದರ್ಭ ಇದ್ದರೂ ಕೈ ಮುಟ್ಟದೆ ಇರುವವರನ್ನು ಕ್ಷೇತ್ರಕಾರ್ಯಕ್ಕೆ ಹೋಗಿದ್ದಾಗ ನಡೆದ ನಾಟಕಗಳ ಅವಲೋಕನದಲ್ಲಿ ಕಂಡುಬಂದಿದೆ. ಕೆಲವು ಸಲ ನಾಟಕದ ಮುಖ್ಯಸ್ಥರು ದೇವದಾಸಿ ಕಲಾವಿದೆಯರಿಗೆ ಸರಿಯಾಗಿ ಕೊಡಬೇಕಾದ ಹಣವನ್ನು ಕೊಡುವುದಿಲ್ಲ. ಹಾಗಾಗಿ ಒಪ್ಪಿಕೊಂಡಿರುವ ನಾಟಕಗಳಿಗೆ ಹೋಗಲೇ ಬೇಕಾದ ಅನಿವಾರ್ಯ ಸಂದರ್ಭದಲ್ಲಿ ತಮ್ಮ ಕೊರಳಲ್ಲಿ ಇರುವ ತಾಳಿಯನ್ನು ಮಾರಿ ಬಸ್ಸಿನ ಮತ್ತು ಇತರೆ ಖರ್ಚಿಗೆ ಬಳಸಿಕೊಂಡು ಹೋಗುತ್ತಾರೆ. ಕಲೆಯನ್ನು ಪ್ರೋತ್ಸಾಹಿಸುವ ಕಲಾಮನಸ್ಸುಗಳು ದೇವದಾಸಿ ಕಲಾವಿದೆಯರನ್ನು ಗೌರವದಿಂದ ಮನೆಗೆ ಆಹ್ವಾನಿಸಿ ಊಟೋಪಚಾರದ ವ್ಯವಸ್ಥೆಯನ್ನು ಮಾಡಿಸುತ್ತಾರೆ. ಅದರೆ ಅಲ್ಲಿರುವ ಹೆಣ್ಣು ಮಕ್ಕಳು ಇವಳು ಸೂಳೆ ಎಲ್ಲರೊಂದಿಗೆ ಮೈಮುಟ್ಟಿಸಿಕೊಂಡು ಕುಣಿಯುತ್ತಾಳೆಂದು ತಾತ್ಸಾರದಿಂದ ನೋಡುತ್ತಾರೆ. ಕೆಟ್ಟ ದಾರಿ ಹಿಡಿಯದೆ ಸಮಾಜದಲ್ಲಿ ಒಂದು ರೀತಿಯ ಮೆಚ್ಚುಗೆಯ ಬದುಕಿಗಾಗಿ ಅಂಬಲಿಸಿತ್ತಾ ಕಲೆಯನ್ನು ರಂಗಭೂಮಿಯನ್ನು ಗೌರವಿಸುತ್ತ ಬೆಳೆಸುತ್ತಾರೆ.

"ಬಳ್ಳಾರಿ ಜಿಲ್ಲೆಯಲ್ಲಿ ವಿಜಯನಗರ ಆಳ್ವಿಕೆಯಿಂದಲೂ ಈ ದೇವದಾಸಿ ಪದ್ಧತಿಯೂ ನಮ್ಮ ಪರಂಪರೆಯೊಂದಿಗೆ ಮುಂದುವರೆಸಿಕೊಂಡು ಬಂದಿದೆ. ಆದರೆ ಇಂದು ಈ ವ್ಯವಸ್ಥೆ ಸಂಪೂರ್ಣವಾಗಿ ಹೋಗಿಲ್ಲ. ಅಂಥವರ ಬೀದಿಗಳು ಇಂದಿಗೂ ಅಸ್ತಿತ್ವದಲ್ಲಿವೆ. ನಮ್ಮ ವ್ಯವಸ್ಥೆಯಲ್ಲಿ ನಾಯಕ ಜಾತಿಯಲ್ಲಿ ಈ ಸಂಪ್ರದಾಯ ಇರುವುದರಿಂದಲೇ ಹೆಚ್ಚಾಗಿ ಹೆಣ್ಣು ಮಕ್ಕಳು ಕಲಾಸಕ್ತಿಯಿಂದ ರಂಗ ಬದುಕಿಗೆ ಶರಣಾಗಿದ್ದಾರೆ. ಈ ಜಾತಿಯ ಪ್ರತಿಯೊಬ್ಬರ ಮನೆಯಲ್ಲಿ ಪರಂಪರೆಯಾಗಿ ಮುನ್ನಡೆದುಕೊಂಡು ಬಂದಿದೆ. ಆದ್ದರಿಂದ ಈ ಸಂಪ್ರದಾಯ ಇರುವ ಮನೆಯವರೇ ಬಳ್ಳಾರಿ ಜಿಲ್ಲೆಯ ರಂಗಭೂಮಿಗೆ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ.

**ಬಳ್ಳಾರಿ:** ಬಳ್ಳಾರಿ ಲಲಿತಮ್ಮ ಪಾತರದವರ ಮನೆತನದವರಾದ್ದರಿಂದ ಇವರ ಸಹೋದರಿ ರತ್ನ ಮಾಲಾ ಈ ಇಬ್ಬರು ಸಂಗೀತ ನೃತ್ಯವನ್ನು ಕಲಿತುಕೊಂಡು ಯಾವ ಅಳುಕಿಲ್ಲದೆ ರಂಗಭೂಮಿಗೆ ಬಂದಿದ್ದಾರೆ.

**ಸುಜಾತನಮ್ಮ ಬಳ್ಳಾರಿ:** ಸ್ವತಃ ಬಯಲಾಟದ ತಂಡವನ್ನು ಕಟ್ಟಿ ಈ ಸಂಪ್ರದಾಯದಿಂದಲೇ ಕಲಾವಂತೆಯಾಗಿ ರಂಗ ಭೂಮಿಯಲ್ಲಿ ತಮ್ಮ ಅಮೋಘವಾದ ಸೇವೆಯನ್ನು ಸಲ್ಲಿಸಿದ್ದಾರೆ.

**ಸುಭದ್ರಮ್ಮಮನ್ಸೂರು:** ಪಾತರದವರ ಮನೆತನದವರಾಗಿದ್ದು ಪರಂಪರೆಯಿಂದ ಬಂದಿರುವ ಸಂಗೀತದಿಂದ ಇಂದು ರಂಗ ಕೋಗಿಲೆ ಎಂಬ ಕೀರ್ತಿಗೆ ಪಾತ್ರರಾಗಿದ್ದಾರೆ.

**ಮೀನಳ್ಳಿ ಪಾರ್ವತಮ್ಮ:** ದೇವದಾಸಿ ಮನೆತನದಿಂದ ಬಂದು ಕಲಾವಂತೆಯಾಗಿ ಬಳ್ಳಾರಿ ರಂಗಭೂಮಿಗೆ ತಮ್ಮ ಕೊಡುಗೆಯನ್ನ ಸಲ್ಲಿಸಿದ್ದಾರೆ.

**ಕೆ ವರಲಕ್ಷ್ಮಿ:** ಪಾತರದವರ ಮನೆತನದವರಾಗಿದ್ದು, ಈ ಹಿನ್ನೆಲೆಯಿಂದಲೇ ಅವರು ರಂಗಭೂಮಿಗೆ ಬಂದು ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ.

**ಭಾವನಿ ಬಳ್ಳಾರಿ:** ಇವರು ದೇವದಾಸಿ ಸಂಪ್ರದಾಯದಿಂದಲೇ ರಂಗಭೂಮಿಗೆ ಬಂದಿದ್ದಾರೆ.

**ಮರಿಯಮ್ಮನ ಹಳ್ಳಿ:** ನಾರಾಯಣ ದೇವರ ಕೆರೆಯ ಡಿ ಸಂಜೀವಮ್ಮ, ಡಿ ಹನುಮಂತಮ್ಮ ಬಾರಿಕರ ಜಿಂಗಮ್ಮ, ತಳವಾರ ಹನುಮಂತಮ್ಮ, ಬಿ. ಲಿಂಗಮ್ಮ, ಮಣಿಗಾರ ಹನುಮಂತಮ್ಮ, ಸೆರೆಗಾರ ಸುವರ್ಣಮ್ಮ, ಸೆರೆಗಾರ ಗಂಗಮ್ಮ, ಜೋಗಿ ಬಸಮ್ಮ, ಸುಮತೆಮ್ಮ, ನಂದಿಹಳ್ಳಿ ರಾಮಕ್ಕ, ಎಂ.ಅಂಬುಜಾ, ತಿಮ್ಮವ್ವ, ತಿರುಮಲ ಬಣದಾಳು, ಶಾರದ, ಕನಕವ್ವ ಅರಸಿಕೆರೆ ಯಲ್ಲಮ್ಮ, ಪಾರ್ವತಿ, ಚಿಕ್ಕಾಡಿ ಗಂಗಮ್ಮ, ಎರ್.ನಾಗವೇಣಿ, ಕೂಡ್ಲಿಗಿ ನಾಗವೇಣಿ, ಎನ್.ಯಶೋಧ, ಸೆರೆಗಾರ ಶ್ಯಾಮಲ, ಗಂಡಿ ಹುಲಿಗೆಮ್ಮ ಗಂಟಿ ಹನುಮಂತವ್ವ, ಕಡಗಿ ಕನಕಮ್ಮ ಮಗಲಿ ಬಸಮ್ಮ, ಶಾಂತಮ್ಮ, ಪದ್ಮಾವತಿ, ಚಂದ್ರಕಲಾ ಕಾಳಿ ಗಂಗಮ್ಮ, ಶಾಚಿತಮ್ಮ ಶೈಲಶ್ರೀ, ಶ್ಯಾಮಲಾ, ಸುಮಿತ್ರ, ಮಂಗಳಾ, ಶಾರದಾ, ಕಲಾವತಿ, ಎನ್ ರೇಣುಕಾ, ಎಸ್ ರೇಣುಕಾ ಮುಂತಾದವರು ಮರಿಯಮ್ಮನಹಳ್ಳಿ ರಂಗನಟಿಯರು ದೇವದಾಸಿ ಸಂಪ್ರದಾಯದಿಂದಲೇ ರಂಗಭೂಮಿಗೆ ಬಂದಿದ್ದಾರೆ. (ಸ್ವತಃ ಕಲಾವಿದೆಯರೇ ಈ ಅಭಿಪ್ರಾಯವನ್ನು ತಿಳಿಸಿರುತ್ತಾರೆ).

**ವಿರೂಪಾಪುರ:** ಎಸ್. ಅಂಜಿನಮ್ಮ, ಕಾರಿ ಬಸಮ್ಮ, ಹಟ್ಟಿ ಮಾರಮ್ಮ, ವಿಜಯಲಕ್ಷ್ಮಿ, ಬಿ ಓಬಮ್ಮ, ಕೆ ನಾಗರತ್ನ, ಎಸ್ ನಾಗವೇಣಿ, ಬಿ ಶಾರದ, ಬಿ ಲಕ್ಷ್ಮೀದೇವಿ, ಜೆ ಗಂಗಮ್ಮ, ಬಿ ನಾಗಮ್ಮ, ಬಿ ಹಂಪಮ್ಮ, ಬಿ ಭರಮಮ್ಮ

**ಹಗರಿಬೊಮ್ಮನಹಳ್ಳಿ:** ಬೆಳ್ಳಕ್ಕಿ ಚೌಡಮ್ಮ, ಕೊಟ್ಟೂರು ಎಸ್ ಕಮಲ, ವಟಮನಹಳ್ಳಿ ಗಂಗಮ್ಮ, ವಟಮನ ಹಳ್ಳಿ ಸುಜಾತಮ್ಮ, ಮಾಳಿಗಿ ಹನುಮಂತಮ್ಮ, ದಶಮಾಪುರ ಬಂಡ್ರಿ ಸಿದ್ದಮ್ಮ.

**ಹಡಗಲಿ:** ಸೋಗಿರತ್ನ, ಜೆ ಗಂಗಮ್ಮ, ಮಂಜುಳಾ

**ಕೂಡ್ಲಿಗಿ:** ಸಣ್ಣ ಮುದ್ದಮ್ಮ, ದೊಡ್ಡ ಮುದ್ದಮ್ಮ, ಟಿ ಭಾರತಿ, ಅಚಿಜಲಿ, ಪದ್ಮ, ಎಂ ಮಂಜುಳಾ ಗೀತಾ, ಕಮಲಮ್ಮ, ಬಿ ಶಿವಕುಮಾರಿ, ಜ್ಯೋ ಶಿವಕುಮಾರಿ, ಪಿ ಪದ್ಮ, ಕೆ ದುಶೀಲ, ಸೋಲ್ಲಮ್ಮ, ಓಬಮ್ಮ, ವನಿತ, ಕವಿತ, ಅಂಜನಮ್ಮ, ವೆಂಕಮ್ಮ, ಕಮಲಮ್ಮ, ರತ್ನಮ್ಮ, ದುರುಗಮ್ಮ, ಶಿವಕುಮಾರಿ, ಜ್ಯೋತಿ ಗೀತಾ ಸಣ್ಣ ವೆಂಕಮ್ಮ ಸಾವಿತ್ರಿ ಜ್ಯೋಪದ್ಮ, ರಂಗವೇಣಿ ರೇಣುಕಾ.

ದೇವದಾಸಿ ಬದುಕಿಗೆ ತಮ್ಮನ್ನು ತಾವು ಅರ್ಪಿಸಿಕೊಂಡರೆ ಮಾತ್ರ ಕಲಾವಿದೆಯರಾಗಿ ಮುಂದುವರೆಯಲು ಸಾಧ್ಯವಿರುವ ಹಳ್ಳಿ ಗಾಡಿನ ಸಮಾಜದಲ್ಲಿ ಹೆಣ್ಣುಗಳು ತೆರಬೇಕಾದ ಬೆಲೆ ತಮ್ಮ

ವೈಯಕ್ತಿಕ ಸುಖ ಸಿಕ್ಕಷ್ಟೇ ಸುಖವನ್ನು ಜೋಪಾನ ಮಾಡಿ ತಮ್ಮ ದುಡಿಮೆಯನ್ನೇ ನೆಚ್ಚಿ ಬದುಕಬೇಕಾದ ಅನಿವಾರ್ಯತೆಇದೆ. ಆದರೆ ಇಂತ' ದೇವದಾಸಿಯರಿಗೆ ಸಮಾಜ 'ನಡತೆಗೆಟ್ಟವಳು' ಎಂಬ ಪಟ್ಟ ಕಟ್ಟುತ್ತದೆ. *(ಸುಜಾತ ಕುಮುಟಾ:೮೫).* ಇವರೆಲ್ಲರೂ ಬಳ್ಳಾರಿ ಜಿಲ್ಲೆಯವರು ದೇವದಾಸಿ ಸಂಪ್ರಾದಾಯದಿಂದಲೇ ರಂಗಭೂಮಿಗೆ ಬಂದಿದ್ದಾರೆ" *(ಸುಜಾತ ಅಕ್ಕಿ:೨೦೦೪:೨೩೫-೨೩೭).* ದೇವದಾಸಿಯರು ರಂಗಭೂಮಿಯ ಕಲಾವಿದೆಯರಾಗಿ ತಮ್ಮ ಬದುಕಿನುದ್ದಕ್ಕೂ ಕಲಾ ಜೀವನವಾಗಿ ರೂಪಿಸಿಕೊಂಡು ಗೌರವಯುತವಾಗಿ ಬಾಳಬೇಕೆಂದು ಪ್ರಯತ್ನಿಸಿದರೂ ಆಗುತ್ತಿಲ್ಲ. ರಂಗವೇದಿಕೆಯ ನಟರಿಂದ ಹಿಡಿದು ಆ ಊರಿನ ದೊಡ್ಡ ಶ್ರೀಮಂತರವರೆಗೂ ಇವರ ಮೇಲೆ ಕಣ್ಣು ಬೀಳುತ್ತದೆ. ರಂಗ ವೇದಿಕೆಯ ಮೇಲೆ ಹೇಗೋ ಪಾರಾದೆವು ಎಂದು ಭಾವಿಸಿ ಹೋಗುತ್ತಿರುವಾಗ ಆ ಊರಿನ ಗೌಡರು, ಪಟೇಲರು ಇವರ ಮೇಲೆ ಆಸೆ ಪಡುತ್ತಾರೆ. ಬದುಕಿನ ಮೂಲ ಜವಬ್ದಾರಿಯನ್ನು ತಿಳಿಯದ ಅನೇಕ ಗಂಡಸರು ಮದುವೆಯಾಗಿ ಸಂಸಾರಸ್ಥರಾಗಿದ್ದರೂ ಕೂಡ ದೇವದಾಸಿ ಕಲಾವಿದೆಯರನ್ನು ಮನೆ, ಹೊಲ, ಗದ್ದೆ ಮಾರಿಯಾದರು ಪಡೆಯಬೇಕೆಂದು ಹಂಬಲಿಸುತ್ತಾರೆ. ಜೀವನವಿಡೀ ನಿನ್ನ ಬಳಿ ಇರುತ್ತೇನೆನ್ನುವ ಭರವಸೆ ನೀಡಿ ಕೊನೆಯಲ್ಲಿ ಬಿಟ್ಟು ಹೋಗುತ್ತಾರೆ. ಹೀಗೆ ಕೈ ಹಿಡಿದವರಲ್ಲಿ ಕೆಲವೇ ಕೆಲವು ಕಲಾವಿದೆಯರು ವಿವಾಹವಾಗಿದ್ದಾರೆ. ಹೀಗೆ ದೇವದಾಸಿಯರು ತಮ್ಮ ಇಡೀ ಯೌವನದ ಕಾಲದಲ್ಲಿ ಕುಟುಂಬ ಮತ್ತು ಸಮಾಜದ ಜನರಿಗಾಗಿ ತನ್ನನ್ನು ತಾನು ದಣಿದುಕೊಂಡು ದುಡಿದು ಮುಪ್ಪಿನ ಬಳಿಕ ಯಾರ ಆಸರೆಯೂ ಇಲ್ಲದೇ ಅನಾಥವಾಗಿ ಬೀದಿಪಾಲಾಗಿ ಬದುಕುತ್ತಿರುವವರನ್ನು ಬಳ್ಳಾರಿ ಜಿಲ್ಲೆಯಲ್ಲಿ ಕಾಣಬಹುದು. ಇವರ ಈ ಪರಿಸ್ಥಿತಿಯನ್ನು ಸುಧಾರಿಸಲು ಕೇವಲ ಸರ್ಕಾರದ ಸೌಲಭ್ಯಗಳು ಕಾನೂನುಗಳಿಂದ ಸಾಧ್ಯವಾಗುವುದಿಲ್ಲ. ಪುರುಷವರ್ಗ ಮತ್ತು ಸಮುದಾಯದ ಜನರು ಸಹಕಾರ ನೀಡಿದಾಗ ಮಾತ್ರ ಜವಾಬ್ದಾರಿಯಿಂದ ಈ ಪರಿಸ್ಥಿತಿ ಸುಧಾರಿಸಲು ಸಾಧ್ಯವಾಗುತ್ತದೆ.

ದೇವದಾಸಿ ಮಹಿಳೆ ಇಡೀ ಬದುಕನ್ನು ವಿವಾಹದ ಚೌಕಟ್ಟಿನಿಂದ ಹೊರಗೆ ಉಳಿದು ಪುರುಷನಷ್ಟೇ ಸಮಾನವಾಗಿ ಬದುಕಲು ಅನುವು ಮಾಡಿಕೊಡಬೇಕು. ಜೊತೆಗೆ ದೇವದಾಸಿ ಪದ್ಧತಿಯ ಬಗ್ಗೆ ಇರುವ ಪೂರ್ವ ಗ್ರಹಿಕೆಗಳಿಗೆ ಕೊನೆ ಹೇಳಿ ದೇವದಾಸಿಯ ಹಸನಾದ ಬದುಕಿಗೆ ಅನುಮಾಡಿಕೊಟ್ಟರೆ ಸಮಾಜದಲ್ಲಿ ಆರೋಗ್ಯಕರವಾದ ವ್ಯವಸ್ಥೆಯನ್ನು ರೂಪಿಸಲು ಸಾಧ್ಯವಾಗುತ್ತದೆ.

ದೇವದಾಸಿಯರು ಪ್ರಾಚೀನ ಕಾಲದಿಂದಲೂ ಸಂಗೀತ ನೃತ್ಯದ ಹಿನ್ನೆಲೆಯಲ್ಲಿ ದೇವಾಲಯಕ್ಕೆ ಮೀಸಲಿರಿಸಿದವರಾಗಿದ್ದಾರೆ. ಹಾಗಾಗಿ ಪ್ರಸ್ತುತ ಕಲಾ ಜೀವನದಲ್ಲಿ ತೊಡಗಿಸಿಕೊಂಡಿರುವ ದೇವದಾಸಿ ಮಹಿಳೆಯರನ್ನು ಬಳ್ಳಾರಿ ಜಿಲ್ಲೆಯಲ್ಲಿ ಕಾಣಲಾಗುತ್ತದೆ.

ಕಲಾ ಜೀವನದಲ್ಲಿ ತೊಡಗಿಕೊಂಡವರನ್ನು ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳಲ್ಲಿಯೂ ಕಾಣುತ್ತೇವೆ. ಅಲ್ಲಿಯೂ ಸಹ ಜಾತಿಯ ತಾರತಮ್ಯಗಳು ಕಂಡುಬರುತ್ತವೆ. ಪರಿಶಿಷ್ಟ ಜಾತಿಯ ಸಮುದಾಯದ ಕಲಾವಿದರನ್ನು ನೋಡುವುದು ಭಿನ್ನವಾಗಿದೆ. ಸಾಮಾಜಿಕ ಕೆಳಸ್ತರದಲ್ಲಿರುವ ಇವರನ್ನು ಬಯಲಾಟ ಇತರೆ ಕಲಾ ಪ್ರದರ್ಶನಕ್ಕೆ ತಮ್ಮ ಊರುಗಳಿಗೆ ಕರೆಸಿದಾಗ ಅಸ್ಪೃಶ್ಯರಾದ್ದರಿಂದ ಮನೆಯಲ್ಲಿ

ಪ್ರವೇಶ ನೀಡುವುದು ಕಡಿಮೆ ಮತ್ತು ಇವರಿಗೆ ಬೇಡಿಕೆಯೂ ಕಡಿಮೆ ಇರುತ್ತದೆ. ಕಾರಣ ಆಟವಾಡುವಾಗ ಕೈ–ಮೈ ಮುಟ್ಟಬೇಕಾಗಿತ್ತದೆ. ಮತ್ತು ಊರೊಳಗೆ ಕರೆಯಿಸಿಕೊಳ್ಳಬೇಕಾಗುತ್ತದೆ. ಹಾಗಾಗಿ ಇವರು ಇಲ್ಲಿಯೂ ಶೋಷಣೆಯನ್ನು ಅನುಭವಿಸುತ್ತಿದ್ದಾರೆ. ಇಂತೆಲ್ಲಾದರ ನಡುವೆ ಕಲೆಯನ್ನು ಉಸಿರಾಗಿಸಿಕೊಂಡು ಅನೇಕ ಪ್ರಶಸ್ತಿಗಳಿಕೆಗೆ ಹರಿಜನ ಪದ್ಮಮ್ಮ ನವರು ಭಾಜನರಾಗಿದ್ದಾರೆ. ಇವರನ್ನು ಸಮಾಜ ದೇವದಾಸಿ ಎನ್ನುವುದಕ್ಕಿಂತ ಕಲಾವಿದೆಯಾಗಿ ಗುರುತಿಸಲು ಸಾಧ್ಯವಾಗಿದೆ.

ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಗಳಲ್ಲೂ ಕಲಾವಿದರನ್ನು ಕಾಣುತ್ತೇವೆ. ಬಹುತೇಕವಾಗಿ ಕಲಾವಿದರು ದೇವದಾಸಿ ಸಂಪ್ರದಾಯದಿಂದಲೇ ಬಂದವರಾಗಿದ್ದಾರೆ. ಇವರು ಸಮಾಜದಲ್ಲಿ ಪರಿಶಿಷ್ಟರಿಗಿಂತ ಉತ್ತಮ ಸ್ಥಾನ ಹೊಂದಿದ್ದಾರೆ. ಇವರು ಹೆಚ್ಚಾಗಿ ಬಯಲಾಟ, ಸಾಮಾಜಿಕ ನಾಟಕಗಳಲ್ಲಿ ಭಾಗವಹಿಸುತ್ತಾರೆ. ಇವರಿಗೆ ಬೇಡಿಕೆ ಹೆಚ್ಚಾಗಿರುವುದು ಕಂಡುಬರುತ್ತದೆ. ರಂಗಭೂಮಿಗೆ ಬರಲು ದೇವದಾಸಿ ಪದ್ಧತಿ ಕೆಲವರಿಗೆ ಕಾರಣವಾಗಿದೆ. ನಾಯಕ ಸಮುದಾಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಲಾವಿದರನ್ನು ಕಾಣಲಾಗುವುದು. ರಂಗಭೂಮಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಕೆ ನಾಗರತ್ನಮ್ಮ ನವರು ಅನೇಕ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಇವರು ದೇವದಾಸಿ ಎನ್ನುವುದಕ್ಕಿಂತ ರಂಗ ನಟಿಯಾಗಿ ಗುರಿತಿಸಿಕೊಂಡು ಹೆಸರು ಗಳಿಸಿಕೊಂಡಿದ್ದಾರೆ.

### ೫.೭ ಆರೋಗ್ಯ

ಆರೋಗ್ಯ ಎನ್ನುವುದು ಮೂಲಭೂತ ಪರಿಕಲ್ಪನೆಗಳಲ್ಲಿ ಒಂದಾಗಿದೆ. ಯಾವುದೇ ಸಮಾಜದ ಜನ ಜೀವನವನ್ನು ಅರ್ಥಮಾಡಿಕೊಳ್ಳಬೇಕಾದರೆ ಆ ಸಮಾಜದಲ್ಲಿರುವ ಮಹಿಳೆಯರ ಆರೋಗ್ಯದ ಬಗ್ಗೆ ಅರ್ಥ ಮಾಡಿಕೊಳ್ಳಬೇಕಾದ್ದು ಅವಶ್ಯಕವಾಗಿದೆ. ಸಾಮಾಜಿಕ ಸಂಸ್ಥೆಗಳ ಮೂಲಕವೇ ಸಾಮಾಜಿಕ ಜೀವನ ನಡೆಯುವುದು ಹಾಗಾಗಿ ಪ್ರತಿಯೊಂದು ಸಾಮಾಜಿಕ ಸಂಸ್ಥೆಗಳಲ್ಲಿಯೂ ವಿಶಿಷ್ಟವಾದ ಜೀವನ ಕ್ರಮ, ಮೌಲ್ಯಗಳು ಹಾಗೂ ಆಚರಣೆಗಳು ಜಾರಿಯಲ್ಲಿರುವುದನ್ನು ಕಾಣಲಾಗುತ್ತದೆ. ವ್ಯಕ್ತಿಗಳ ಮೂಲಭೂತ ಅವಶ್ಯಕತೆಗಳಲ್ಲಿ ಒಂದಾದ ಆರೋಗ್ಯದ ಬಗ್ಗೆ ಗಮನ ಹರಿಸಿ ಅವರ ಜೀವನ ಸುಗಮವಾಗುವಂತೆ ನೋಡಿಕೊಳ್ಳುವುದು ಹೇಗೆ ಸರಕಾರದ ಜವಾಬ್ದಾರಿಯೋ ಹಾಗೆಯೇ ಸಮಾಜಿಕ ಸಂಸ್ಥೆಯಲ್ಲಿ ಪ್ರಮುಖ ಸ್ಥಾನ ಪಡೆದಂತಹ ಕುಟುಂಬವು ಕೂಡ ಎಲ್ಲ ಸದಸ್ಯರಿಗೆ ಸಮಾನವಾದ ಆರೋಗ್ಯವನ್ನು ಕಾಪಾಡುವುದು ಕೂಡ ಅಷ್ಟೆ ಮಹತ್ವವಾದದ್ದು. ಆದರೆ ಸಮಾಜದಲ್ಲಿ ಬಹಳಷ್ಟು ಜನ ಅನಕ್ಷರಸ್ಥರಾಗಿದ್ದು, ಮೊದಲಿನಿಂದಲೂ ಆಚರಿಸಿಕೊಂಡು ಬಂದಂಥಹ ಸಂಪ್ರದಾಯ, ಮೂಢನಂಬಿಕೆ ಪದ್ಧತಿಗಳಿಗೆ ಬದ್ಧರಾದ್ದರಿಂದ ಅವು ಅವರನ್ನು ದಾರಿ ತಪ್ಪಿಸಿ ಆರೋಗ್ಯದ ವಿಷಯಗಳನ್ನು ಅದರಲ್ಲೂ ಮಹಿಳೆಯರ ಆರೋಗ್ಯವನ್ನು ಸಮಾಜವು ಅವಗಣಿಸುತ್ತಿದೆ. ವೈದ್ಯಕೀಯ ತಿಳುವಳಿಕೆಯ ಪ್ರಕಾರ ನರಗಳ ದೌರ್ಬಲ್ಯ, ಪೌಷ್ಟಿಕ ಆಹಾರದ ಕೊರತೆ, ಪರಿಸರ ಬದಲಾವಣೆಯಿಂದ ಆರೋಗ್ಯ ಅಧೋ ಗತಿಗೆ ಇಳಿದರೆ ಅವುಗಳಿಗೆ ಮೂಢನಂಬಿಕೆಯ ಪಟ್ಟಿ ಕಟ್ಟಿ ದೇವರು, ದೆವ್ವ, ಮಾಟ, ಮಂತ್ರ ಇನ್ನಿತರ ಸಂಶಯಗಳಲ್ಲಿ ತೊಡಗಿ ವ್ಯರ್ಥವಾಗಿ ಹಣ ದುರುಪಯೋಗ ಮಾಡುವುದರಲ್ಲಿ ಮುಂದಾಗುತ್ತಾರೆ. ಹಲವಾರು ಪದ್ಧತಿಗಳಿಗೆ ಮೊರೆಹೋಗಿ ಅನಾರೋಗ್ಯಕ್ಕೆ ಮತ್ತಷ್ಟು ಎಡೆ ಮಾಡುತ್ತಾರೆ.

ಇದಕ್ಕೆಲ್ಲ ಈ ದೇವರು, ದೆವ್ವ, ಭೂತಗಳೇ ಕಾರಣವೆಂದು ನಂಬಿ ಸ್ತ್ರೀ ಮತ್ತು ಪುರುಷರೆನ್ನದೆ ಎಲ್ಲರೂ ಮೂಢನಂಬಿಕೆಗೆ ಬಲಿಪಶು ಆಗುತ್ತಾರೆ.

ಕುಟುಂಬದಲ್ಲಿ ಮಹಿಳೆಯರ ಆರೋಗ್ಯದ ಸಮಸ್ಯೆಯನ್ನು ಗಂಭಿರವಾಗಿ ಪರಿಗಣಿಸುವುದಿಲ್ಲ. ಅವರ ದೈಹಿಕ, ಮಾನಸಿಕ ಖಾಯಿಲೆಗಳಿಗೆ ಅವರ ಮೇಲಿನ ಒತ್ತಡ, ಕಿನ್ನತೆ-ಕೀಳಿರಿಮೆ, ಒಂಟಿತನ ಹಾಗೂ ದೌರ್ಜನ್ಯಗಳಿಗೆ ಕುಟುಂಬಗಳೇ ಕಾರಣವೆಂದು ಕೆಲವು ಅಧ್ಯಯನಗಳು ಗುರುತಿಸುತ್ತವೆ. ಮಹಿಳೆಯರ ಮೇಲಿನ ಹಿಂಸೆಗಳು ಹಲವು ನೆಲೆಗಳಲ್ಲಿ ನಡೆಯುತ್ತವೆ, ಅದರಲ್ಲೂ ಮಹಿಳೆಯರ ಆರೋಗ್ಯದ ಮತ್ತು ಅನಾರೋಗ್ಯದ ಕಡೆಗೆ ಗಮನ ಹರಿಸುವುದಾದರೆ ಅವಳು ಸಮಾಜದಲ್ಲಿ ಅನೇಕ ರೀತಿಯ ದೈಹಿಕ ಮತ್ತು ಮಾನಸಿಕ ಹಿಂಸೆ ದೌರ್ಜನ್ಯಗಳಿಗೆ ಒಳಗಾಗಿರುವುದನ್ನು ಕಾಣಲಾಗುವುದು. ಸಮಾಜದಲ್ಲಿ ಲೈಂಗಿಕ ಕಿರುಕುಳ ಗಂಡನಲ್ಲದಿದ್ದರೂ ಗಂಡನಂತಿರುವ ದೇವದಾಸಿ ಮಹಿಳೆಯೊಂದಿಗೆ ಸಂಬಂಧ ಹೊಂದಿರುವ ಪುರುಷರ ಹಿಂಸೆಗಳೊಂದಿಗೆ ಆರ್ಥಿಕವಾಗಿ, ಸಾಮಾಜಿಕವಾಗಿ ಇಡೀ ಕುಟುಂಬದ ಹೊರೆ ಹೊತ್ತಿರುವ ದೇವದಾಸಿ ಮಹಿಳೆಯರು ಸಾಕಷ್ಟು ನೋವಿನ ಜೊತೆಯಲ್ಲಿ ಅನಾರೋಗ್ಯಕ್ಕೆ ತುತ್ತಾಗಿರುವ ಕುರಿತು ಗಮನ ಹರಿಸುವ ಅಗತ್ಯವಿದೆ.

ಆರೋಗ್ಯವಂತ ಹಾಗೂ ದೃಢಕಾಯದ ಮಾನವ ಸಂಪನ್ಮೂಲವನ್ನು ಆಯಾ ದೇಶದ ಅಭಿವೃದ್ಧಿಯ ಅಡಿಪಾಯವೆಂದೆ ಕರೆಯಲಾಗುತ್ತದೆ. ಸಮಾಜದಲ್ಲಿ ಪ್ರತಿಯೊಬ್ಬರು ತನ್ನ ದಿನ ನಿತ್ಯದ ಜೀವನಕ್ಕಾಗಿ ಉದ್ಯೋಗ, ಆದಾಯ, ಆಹಾರ, ಶಿಕ್ಷಣ, ಇತರೆ ಸೌಲಭ್ಯಗಳನ್ನು ತನ್ನದಾಗಿಸಿಕೊಳ್ಳಲು ಪರಸ್ಪರ ಸ್ಪರ್ಧೆಗಳಿಂದ ಅನೇಕ ಒತ್ತಡಗಳಿಗೆ ಬಲಿಯಾಗಿದ್ದಾರೆ. ಕುಟುಂಬವನ್ನು ಸಾಕಲು ಯಾವುದಾದರು ಕೆಲಸದಲ್ಲಿ ತೊಡಗಬೇಕಾಗುತ್ತದೆ. ಇವತ್ತಿನ ಇಂತಹ ಜಾಗತೀಕ ಸಂದರ್ಭಗಳಲ್ಲಿ ಅನೇಕ ತಂತ್ರಜ್ಞಾನಗಳ ಬಳಕೆಯಿಂದ ಮತ್ತು ಕೈಗಾರಿಕರಣದಿಂದಾಗಿ ಕೃಷಿ ಚಟುವಟಿಕೆಗಳು ಕಣ್ಮರೆಯಾಗುತ್ತಿವೆ. ಅಕ್ಷರ ಜ್ಞಾನವಿಲ್ಲದ ದೇವದಾಸಿ ಮಹಿಳೆಯರು ಕೃಷಿ ಚಟುವಟಿಕೆಯಲ್ಲಿ ಗಳಿಸುವ ಕೂಲಿಯನ್ನು ಅವಲಂಬಿಸಿಕೊಂಡು ತಾನು ಮತ್ತು ತನ್ನ ಕುಟುಂಬದ ಹೊಟ್ಟೆ ತುಂಬಿಸುವ ಕೆಲಸದಲ್ಲಿ ನಿರತರಾಗಿದ್ದಾರೆ. ಅಲ್ಲದೆ ಕೆಲವು ವ್ಯಾಪಾರಗಳಿಂದ, ಪಶುಪಾಲನೆಯಿಂದ, ಕಟ್ಟಡ ನಿರ್ಮಾಣ ಕೆಲಸ, ಗಣಿಗಾರಿಕೆಯಲ್ಲಿ ಕೂಲಿಕೆಲಸಗಳಲ್ಲಿ ತೊಡಗಿ ನಿರಂತರವಾಗಿ ದುಡಿಯುತ್ತಾರೆ. ಅವಿವಾಹಿತ ಮಹಿಳೆಯಾದ' ದೇವದಾಸಿಯು ಇಡೀ ಮನೆ ಮಂದಿಯನೆಲ್ಲಾ ಸಾಕಿ ಸಲಹುವ ಜವಾಬ್ದಾರಿಯಲ್ಲಿ ನಿರತಳಾಗಿರುತ್ತಾಳೆ. ಹೀಗೆ ನಿರಂತರವಾಗಿ ದುಡಿಮೆಯಲ್ಲಿ ತೊಡಗಿಕೊಂಡಿರುವ ದೇವದಾಸಿ ಮಹಿಳೆಯರು ದೈಹಿಕ ಮತ್ತು ಮಾನಸಿಕ ಅನಾರೋಗ್ಯಕ್ಕೆ ತುತ್ತಾಗುವ ಸಾಧ್ಯತೆಗಳು ಕಂಡು ಬರುತ್ತವೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರಲ್ಲಿ ನಿರುದ್ಯೋಗ, ಬಡತನ, ಅನಾರೋಗ್ಯ ಹಾಗೂ ಅಸಮರ್ಥತೆಗಳಿಗೆ ಎಡೆ ಮಾಡಿ ಕೊಟ್ಟಿರುವುದರಿಂದ ದೇವದಾಸಿಯರ ಆರೋಗ್ಯದ ಸ್ವರೂಪ ಮತ್ತು ಸಮಸ್ಯೆಗಳ ಕುರಿತಾಗಿ ತಿಳಿಯುವುದು ಅತ್ಯವಶ್ಯಕವಾಗಿದೆ.

"ಪ್ರಪಂಚದಾದ್ಯಂತ ಇಂದಿಗೂ ಜನ ಜೀವನ ಹಾಗೂ ಸಂಸ್ಕೃತಿಗಳ ಮೇಲೆ ಪ್ರಭಾವವನ್ನು ಬೀರುತ್ತಿರುವ ಸಂಸ್ಥೆ ಎಂದರೆ ಧರ್ಮ. ಧರ್ಮವು ಸಾಮಾಜದ ಒಂದು ಅವಿಭಾಜ್ಯ ಅಂಗವಾಗಿದೆ.

ಧರ್ಮ ಎಂಬ ಪದವನ್ನು ಆಂಗ್ಲ ಭಾಷೆಯ ರಿಲಿಜಿಯನ್ ಎಂಬ ಪದಕ್ಕೆ ತತ್ಸಮಾನವಾಗಿ ಬಳಸಲಾಗುತ್ತದೆ. ಧರ್ಮ ಎಂದರೆ ಸಮಾಜ ಸ್ವರಕ್ಷಣೆಗಾಗಿ ಬಳಸುವ ಒಂದು ಸಂಸ್ಥೆ. ಧರ್ಮ ಎಂದರೆ ಮಾನವರ ಶಕ್ತಿಗೆ ಮೀರಿನಿಂತ ಅವರ ನಡುವಳಿಕೆಗಳಿಗೆ ನಿದರ್ಶವನ್ನು ಒದಗಿಸತಕ್ಕ ಪವಿತ್ರವಾದುದನ್ನು ಅಪವಿತ್ರವಾದುದ್ದರಿಂದ ಬೇರ್ಪಡಿಸುವ ಹಾಗೂ ವ್ಯಕ್ತಿಗಳಿಗೆ ಮತ್ತು ಸಮುದಾಯಗಳಿಗೆ ಸರಿ ತಪ್ಪುಗಳ ಬೇಕು ಬೇಡಗಳ ಕಲ್ಪನೆಯನ್ನು ನೀಡತಕ್ಕ ಒಂದು ಅಲೌಕಿಕ ಶಕ್ತಿಯೆಂದು ಪರಿಗಣಿಸಲ್ಪಟ್ಟಿದೆ" *(ಚಂದ್ರಶೇಖರ್ ಟಿ ಆರ್: ೨೦೦೧:೨೦೮).* ಆದರೆ ಇದೇ ದೇವರು ಧರ್ಮದ ಹೆಸರಿನಲ್ಲಿ ಅವಿವಾಹಿತ ಹೆಣ್ಣನ್ನು ದೇವದಾಸಿ, ಬಸವಿ, ಜೋಗುತಿಯಂತಹ ಪದ್ದತಿಗಳಿಗೆ ಒಳಪಡಿಸಿ ಧಾರ್ಮಿಕತೆಯಲ್ಲಿ ಉನ್ನತ ಸ್ಥಾನವನ್ನು ತೋರಿಸುತ್ತಾ ಅವರನ್ನು ಲೈಂಗಿಕವಾಗಿ ಪುರುಷರು ಬಳಸಿಕೊಳ್ಳುವ ಮುಲಕ ಸಮಾಜದಲ್ಲಿ ಕಟ್ಟ ಕಡೆಯ ಅಸ್ಪೃಶ್ಯಗಳಂತೆ ನೋಡುವ ಹಾಗೆ ಮಾಡಿದೆ. ಹೀಗೆ ಧರ್ಮ ದೇವರ ಹೆಸರಿನ ಮೂಲಕವೇ ಅವಳನ್ನು ಅಪವಿತ್ರಳಂತೆ ಸಮಾಜ ಕಾಣುತ್ತದೆ. ರಕ್ಷಣೆಯ ಧರ್ಮ ದೇವರ ಹೆಸರಿನಲ್ಲಿಯೇ ದೇವದಾಸಿ ಮಹಿಳೆಯರನ್ನು ಲೈಂಗಿಕವಾಗಿ ಭಕ್ಷಿಸುತ್ತಿದೆ. ದೇವರಲ್ಲಿನ ನಂಬಿಕೆ ಒಂದು ರೀತಿಯಲ್ಲಿ ಜನರಿಗೆ ಅನುಕೂಲವಾಗಿ ಮಾನಸಿಕ ಸಮತೋಲನವನ್ನು ಕಾಪಾಡಿಕೊಳ್ಳಲು ನೆರವಾದರೆ, ಮತ್ತೊಂದು ರೀತಿಯಲ್ಲಿ ದೇವದಾಸಿ ಮಹಿಳೆಯರಿಗೆ ಅನಾನುಕೂಲಕರವಾಗಿ ಮಾಸಿಕ ಸಮತೋಲನವನ್ನು ಏರುಪೇರು ಮಾಡಿ ಕೊನೆಗೆ ಕಾಯಿಲೆಯನ್ನು ತರಬಲ್ಲದು.

ಆರಂಭದಲ್ಲಿ ಪೂರ್ಣ ಸ್ವತಂತ್ರ್ಯ ಅನುಭವಿಸಿದ ಹೆಣ್ಣು ರಾಜಕೀಯ, ಸಾಮಾಜಿಕ, ಧಾರ್ಮಿಕ ಕಾರಣಗಳಿಂದ ನಾಲ್ಕು ಗೋಡೆಗಳ ಮಧ್ಯೆ ಕೊಳೆಯುವಂತಾಗಿದೆ. ಇಂತಹ ಕಡೆಗಳಲ್ಲಿ ಸಾಮಾಜಿಕವಾಗಿ ಆಕೆಗೆ ಬೆಳೆಯುವ ಅವಕಾಶ ನೀಡಿಲ್ಲ. ದೇವದಾಸಿ ಪದ್ಧತಿ ಸತಿಪದ್ಧತಿಗಳಂತಹ ಮೂಢನಂಬಿಕೆಗಳು ಆಕೆಯನ್ನು ಸಮಾಜದ ಮಧ್ಯದಲ್ಲಿ ತಲೆ ಎತ್ತಿನಿಲ್ಲದಂತೆ ಮಾಡಿರುವುದು ಸುಳ್ಳಲ್ಲ. ಆದ್ದರಿಂದ ಇವರು ಮಾನಸಿಕ ಮತ್ತು ದೈಹಿಕ ನೋವುಗಳಿಗೆ ತಲುಪಿರುವುದು ಖಚಿತವಾಗಿದೆ. ಕುಟುಂಬದಲ್ಲಿ ಕಾಣಿಸಿಕೊಳ್ಳುವ ಅನಾರೋಗ್ಯದ ಸಂದರ್ಭಗಳಲ್ಲಿ ಹುಟ್ಟಿರುವ ಹೆಣ್ಣುಮಗುವನ್ನು ದೇವರಿಗೆ ಅರ್ಪಿಸುವೆನೆಂದು ಹರಕೆ ಹೊತ್ತುಕೊಂಡು ಹೆಣ್ಣು ಮಕ್ಕಳನ್ನು ದೇವದಾಸಿ ಪದ್ಧತಿಗೆ ಒಳಪಡಿಸುತ್ತಾರೆ. ಇಲ್ಲಿ ಆಕೆಯನ್ನು ಮತ್ತೊಂದು ಅನಾರೋಗ್ಯಕರ ಪರಿಸ್ಥಿತಿಗೆ ಮಗಳನ್ನು ತಳ್ಳುತ್ತಿದ್ದೆನೆಂಬ ಅರಿವು ಇಲ್ಲದೆಯೇ ಮೂಢತ್ವಕ್ಕೆ ಬಲಿ ಪಶುವಾಗಿ ಮಾಡಿ ಬಿಡುತ್ತಾರೆ. ಕುಟುಂಬದಲ್ಲಿ ಗಂಡು ಮಗನಿಗೆ ಅನಾರೋಗ್ಯ ಕಾಡಿದರೂ ಕೂಡ ಇಲ್ಲಿ ದೇವರ ಹೆಸರಲ್ಲಿ ಹೆಣ್ಣನ್ನು ದೇವದಾಸಿಯಾಗಿ ಮಾಡುತ್ತಾರೆ. ಈ ಮೂಲಕ ಅವಳು ಇಡೀ ಜೀವನವನ್ನು ವಿವಾಹವಾಗದೆಯೇ ಪರಪುರುಷನೊಂದಿಗೆ ಸಂಬಂಧ ಹೊಂದಿ ಮಕ್ಕಳನ್ನು ಪಡೆಯುತ್ತಾಳೆ. ದೇವದಾಸಿ ಮಹಿಳೆಯ ಜೊತೆಗೆ ಇದ್ದ ಪುರುಷರು ಸಾಯುವವರೆಗೆ ಇರುವುದಿಲ್ಲ. ಹಾಗ ದೇವದಾಸಿ ಮಹಿಳೆಯರು ತಮ್ಮ ಕುಟುಂಬದ ಸದಸ್ಯರನ್ನು ಮತ್ತು ಮಕ್ಕಳ ಪಾಲನೆ ಪೋಷಣೆಯಲ್ಲಿ ತೊಡಗಿಕೊಂಡು ತಮ್ಮ ಆರೋಗ್ಯದ ಕಡೆಗೆ ಗಮನಹರಿಸುವುದಿಲ್ಲ. ಮುಖ್ಯವಾಗಿ ದುಡಿಯುವ ಕೆಲಸದ ಸ್ವರೂಪ, ಕೂಲಿಯ ಪ್ರಮಾಣ, ವಸತಿಯ ಸ್ವರೂಪ ಮತ್ತು ಕುಟುಂಬದ ಗ್ರಾಮ ಮತ್ತು ವೈದ್ಯಕೀಯ ಸೌಲಭ್ಯ ಇತ್ಯಾದಿ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಿದರೆ

ದೇವದಾಸಿಯರ ಆರೋಗ್ಯದ ಪ್ರಮಾಣವನ್ನು ಗುರುತಿಸಲು ಸಾಧ್ಯವಾಗುತ್ತದೆ. ದುಡಿಮೆಯ ಅಭದ್ರತೆ, ಕಡಿಮೆ ಕೂಲಿ ಬಡತನಗಳಿಂದಾಗಿ ದೇವದಾಸಿಯರಿಗೆ ತಗಲುವ ಸಣ್ಣ ಪಟ್ಟ ರೋಗಗಳಿಗೂ ಚಿಕಿತ್ಸೆಯನ್ನು ಪಡೆಯಲು ಆಗದಿರುವ ಪರಿಸ್ಥಿತಿ ನಿರ್ಮಾಣವಾಗಿರುವುದು ದೇವಾಸಿಯರ ಅನಾರೋಗ್ಯಕ್ಕೆ ಒಂದು ಮೂಲಭೂತ ಕಾರಣವಾಗಿ ಕಂಡು ಬರುತ್ತದೆ. ಅದರಲ್ಲಿ ದೇವದಾಸಿಯರು ಅನಕ್ಷರಸ್ಥರಾಗಿರುವುದರಿಂದ ಅವರು ಹೆಚ್ಚು ಮಕ್ಕಳನ್ನು ಪಡೆಯುವುದು ಭಾರವೆಂದು ಪರಿಗಣಿಸುವುದಿಲ್ಲ. ಬಹುತೇಕ ದೇವದಾಸಿಯರು ೪ ರಿಂದ ೫ ಮಕ್ಕಳನ್ನು ಪಡೆದಿರುವುದು ಸಹಜವಾಗಿ ಕಂಡು ಬರುತ್ತದೆ. ಕಡಿಮೆ ಕೂಲಿ, ಅತಂತ್ರ ದುಡಿಮೆಯಿಂದಾಗಿ ಇಡೀ ಕುಟುಂಬವನ್ನು ನಿಭಾಯಿಸುವುದು ಕಷ್ಟಕರವಾಗಿದೆ. ಇದರಿಂದಾಗಿ ದೇವದಾಸಿಯರ ಬಡತನವು ಮತ್ತಷ್ಟು ಬಲಿಷ್ಟಗೊಂಡಿದೆ. ಹೆಚ್ಚಿನ ಅವಧಿ ದುಡಿಮೆಗೆ ತೊಡಗುವುದು, ಸರಿಯಾದ ಪೌಷ್ಟಿಕ ಆಹಾರ ಇಲ್ಲದಿರುವುದು ದೇವದಾಸಿಯರ ಮತ್ತು ಅವರ ಕುಟುಂಬಗಳು ಅನಾರೋಗ್ಯಕ್ಕೆ ತುತ್ತಾಗಲ ಕಾರಣವಾಗಿವೆ. ಮರಿಯಮ್ಮನಹಳ್ಳಿಯಲ್ಲಿ ಒಬ್ಬ ದೇವದಾಸಿ ಮಹಿಳೆ ಪಾರ್ಶ್ವ ರೋಗದಲ್ಲಿ ನರಳುತ್ತಿರುವಾಗ ಗಂಡು ಮಕ್ಕಳು ಇದ್ದರೂ, ತಾಯಿಯನ್ನು ನೋಡಿಕೊಳ್ಳದ ಪರಿಸ್ಥಿತಿಯಲ್ಲಿ ಆಕೆಯ ಕೊನೆಯ ಮಗಳು ಕೂಡ ದೇವದಾಸಿಯಾಗಿದ್ದು, ಅವರಿವರ ಮನೆಗಳಲ್ಲಿ ಮುಸುರೆ, ಬಟ್ಟೆ ತೊಳೆದು ದುಡಿದು ಬಂದ ಹಣದಲ್ಲಿ ಜೀವನ ಸಾಗಿಸಲು ಎರಡೋತ್ತಿನ ಊಟಕ್ಕೆ ಪರದಾಡುವ ಸ್ಥಿತಿ ಇರುವುದು ಕಂಡು ಬಂದಿದೆ. ಹಾಗಾಗಿ ಊರೊಳಗೆ ಇಡೀ ಓಣಿಯ ಮನೆ ಮನೆಗೆ ಹೋಗಿ ತಾಯಿಯ ಅನಾರೋಗ್ಯ ತಿಳಿಸಿ, ಪಟ್ಟಿ ಎತ್ತಿ ಹೊಸಪೇಟೆಯಲ್ಲಿ ಚಿಕಿತ್ಸೆ ಕೊಡಿಸಿದ್ದಾಳೆ. ಹೀಗೆ ಅನಾರೋಗ್ಯ ಸಂದರ್ಭಗಳು ಎಲ್ಲಾ ಜಾತಿ ವರ್ಗದ ದೇವದಾಸಿಯರಲ್ಲಿ ಕಂಡು ಬರುತ್ತವೆ. ಪರಿಶಿಷ್ಟ ಜಾತಿಯಲ್ಲಿರುವ ದೇವದಾಸಿ ಮಹಿಳೆಯರಲ್ಲಿ ಕೆಲವರಿಗೆ ಹುಚ್ಚು ಹಿಡಿದಿದೆ. ಆರೋಗ್ಯವು ಅತಿಯಾಗಿ ಹದಗೆಟ್ಟ ಕಾರಣಕ್ಕೆ ಕುಟುಂಬದ ಕೆಲವು ಆಘಾತಕಾರಿ ಸಂಗತಿ ತಿಳಿದು ಮಾನಸಿಕ ಅಸ್ವಸ್ಥರಾಗಿದ್ದಾರೆ. ಮಗನಿಗೆ ಅಪಘಾತವಾದ ವಿಷವನ್ನು ತಿಳಿದ ದೇವದಾಸಿ ಮಹಿಳೆಯು ಆಘಾತವನ್ನು ಸಹಿಸಲಾಗದೆ ಮರಣ ಹೊಂದಿದ್ದಾಳೆ. ಈ ರೀತಿಯ ಸಂಗತಿಗಳು ಕ್ಷೇತ್ರದಲ್ಲಿ ತಿಳಿದು ಬಂದಿದೆ. ಅಲ್ಲದೆಯೇ ಸಾಕಷ್ಟು ದೇವದಾಸಿ ಮಹಿಳೆಯರು ವಿಶ್ರಾಂತಿ ಇಲ್ಲದೆ ನಿರಂತರ ದುಡಿಮೆಯಲ್ಲಿ ತೊಡಗಿದ್ದರಿಂದ ಇವರಿಗೆ ತಲೆ ನೋವು, ಕೈಕಾಲುನೋವು, ಗಣಿ ಕೆಲಸ ಮಾಡುವಲ್ಲಿ ಅಸ್ತಮ ಮತ್ತು ಕ್ಯಾನ್ಸರ್ ಮುಂತಾದ ರೋಗಗಳು ಕಂಡು ಬಂದಿವೆ.

ದೇವದಾಸಿ ಮಹಿಳೆಯೊಂದಿಗೆ ದೈಹಿಕ ಸಂಬಂಧ ಹೊಂದಿರುವ ಪುರುಷರು ಅವಳು ಗರ್ಭಿಣಿಯಾಗುವವರೆಗೆ ಮಾತ್ರ ಇರುತ್ತಾರೆ. ನಂತರ ಅವಳು ಒಂಟಿಯಾಗಿ ಬಿಡುತ್ತಾಳೆ. ಅಂದರೆ ವಿವಾಹದ ಚೌಡಟ್ಟಿನಲ್ಲಿ ಗರ್ಭಿಣಿಗೆ ಆಗುವ ಕಾಳಜಿ ಮತ್ತು ಬಾಣಂತನದ ಆರೈಕೆ ಇವರಿಗೆ ಅಷ್ಟಾಗಿ ಸಿಗುವುದಿಲ್ಲ. ೩–೪ ದಿನಗಳಲ್ಲಿ ಎದ್ದು ಮನೆ ಕೆಲಸ ಮಾಡಿಕೊಂಡು ೩ ತಿಂಗಳ ನಂತರ ಕೂಸನ್ನು ಹಿರಿಯರ ಬಳಿಬಿಟ್ಟು ದುಡಿಮೆಗೆ ತೊಡಗುತ್ತಾರೆ. 'ಹಸಿಮೈಯಲ್ಲಿ ಆರೈಕೆ ಇಲ್ಲದೆ ದುಡುಬೇಕು. ಇವತ್ತು ನಮಗೆ ಇಷ್ಟೆಲ್ಲ ನೋವು. ಮನೆಲಿದ್ರೆ ಹೊಟ್ಟೆ ತುಂಬಬೇಕೆಲ್ಲ, ಬಂದೋನು ನನ್ನ ಹೊಟ್ಟೆ ತುಂಬಿಸಿದ ಹೋದ. ಇವಾಗ ಹುಟ್ಟಿದ ಮಗುವಿಗೂ ಮತ್ತು ನನ್ನ ಹುಟ್ಟಿಸಿದವರಿಗೆ ಹೊಟ್ಟೆ

ತುಂಬಬೇಕಲ್ಲಮ್ಮ ಅದಕ್ಕೆ ೩–೪ ತಿಂಗಳಾಗೆ ಕೆಲಸಕ್ಕೆ ಹೋಗಬೇಕು' ಎಂದು ಹೇಳಿ ನೋವಿನ ನಿಟ್ಟುಸಿರು ಬಿಟ್ಟ ದೇವದಾಸಿಯರ ಮಾತನ್ನು ಕೇಳಿದಾಗ ಅವರ ಆರೋಗ್ಯ ಕಾಳಜಿಯ ಕುರಿತಾಗಿ ಯಾರು ಗಮನ ಹರಿಸುತಿಲ್ಲವಲ್ಲ ಎನ್ನಿಸುತ್ತದೆ. ಮತ್ತೆ ೨–೩ ವರ್ಷಗಳಾದ ಬಳಿಕ ಮತ್ತೊಬ್ಬ ಪುರುಷನು ಬರುತ್ತಾನೆ. ಅವನು ತನಗೆ ಬೇಕಾದಷ್ಟು ದಿನ ಇರುತ್ತಾನೆ. ನಂತರ ಹೊರಟು ಹೋಗುತ್ತಾನೆ ಎಂದು ಹೇಳುತ್ತಾರೆ. ಕೃಷಿಕೂಲಿ ಕೆಲಸದಲ್ಲಿ ತೊಡಗಿರುವ ದೇವದಾಸಿ ಮಹಿಳೆಯರು ಹಾವು ಕಚ್ಚಿಸಿಕೊಂಡು ಸರಿಯಾದ ಚಿಕಿತ್ಸೆ ಸಿಗದೆಯೇ ಸತ್ತಿದ್ದಾರೆ. ಹೀಗೆ ದೇವದಾಸಿ ಮಹಿಳೆಯರೆಲ್ಲರೂ ಒಂದಲ್ಲ ಒಂದು ರೀತಿ ಅನಾರೋಗ್ಯಕ್ಕೆ ತುತ್ತಾಗಿದ್ದಾರೆ.

**೫.೮ ಆಯ್ದ ದೇವದಾಸಿಯರ ಬದುಕಿನ ಚಿತ್ರಣ**

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರ ವ್ಯಕ್ತಿ ಅಧ್ಯಯನ ನಡೆಸಲಾಗಿದೆ. ಅವರ ಜೀವನದ ಎಲ್ಲಾ ನೋವು ನಲಿವುಗಳನ್ನು ಇಲ್ಲಿ ಚಿತ್ರಿಸಲಾಗಿದೆ. ದೇವದಾಸಿಯರ ಮೂಲ ಹೆಸರನ್ನು ಬದಲಾಯಿಸಿ ಆಯ್ದ ದೇವದಾಸಿಯರ ಬದುಕಿನ ಚಿತ್ರಣವನ್ನು ಈ ಕೆಳಗೆ ವಿವರಿಸಲಾಗಿದೆ.

**ಧನಲಕ್ಷ್ಮಿ, ವಯಸ್ಸು – ೫೬ (ಎಸ್ ಸಿ)**

ನನಗೆ ಇನ್ನೂ ಹೊಕ್ಕುಳ ಮಾದಿಲ್ಲದ ೧೬ ದಿನದ ಮಗುವಾಗಿದ್ದಾಗ ನನ್ನ ತಂದು ಸಾಕಿದ್ದಾರೆ. ತಂದೆ – ತಿಮ್ಮಯ್ಯ, ತಾಯಿ – ರಾಮಕ್ಕ ಎಲ್ಲರಿಗೂ ಗೊತ್ತು. ನಾನು ಸಾಕಿದ ಮಗಳು ಎಂದು. ನನ್ನ ದತ್ತು ತಗಂಡಾಗ ಎಲ್ಲರಿಗೂ ಮೂರು ದಿನ ಊಟ ಹಾಕಿಸಿದರಂತೆ. ನನ್ನ ಸಾಕು ತಂದೆ ಎಸ್.ಸಿ. ಹಾಸ್ಟಲ್‌ನಲ್ಲಿಕೆಲಸ ಮಾಡಿತಿದ್ದರು ಮತ್ತು ಕಾಂಗ್ರೆಸ್ ಮೆಂಬರ್ ಆಗಿದ್ರು. ತಂದೆ ತೀರಿಕೊಂಡ ನಂತರ ತಾಯಿ ಕುಡಿತ ಚಟಕ್ಕೆ ಬಲಿಯಾದರು. ಅವರ ಸಂಬಂಧಿಕರು ಮೊಸದಲ್ಲಿ ಎ(ಹೆ)ಬೆಟ್ಟು ಒತ್ತಿಸಿಕೊಂಡು ಆಸ್ತಿಯನ್ನು ವಶಪಡಿಸಿಕೊಂಡರು. ೫ ಎಕರೆ ಗದ್ದೆ ಹೋಯಿತು. ೪೦–೭೫ ಜಾಗ ಅಷ್ಟೆ ನನಗೆ ಸಿಕ್ಕಿರೋದು. ನಾನು ಹಾಸ್ಟಲ್‌ನಲ್ಲಿಯೇ ವಿದ್ಯಾಭ್ಯಾಸ ಪಡೆದ ೧೦ನೇ ತರಗತಿಯವರೆಗೆ ಅಷ್ಟೇ ಓದೋಕೆ ಸಾಧ್ಯವಾಯಿತು. ಆಸ್ತಿ ಹೋದ ಮೇಲೆ ಮಸಾಲೆ ಪಾದರ್ಥ ಮಾರಿದದುಡ್ಡಿನಲ್ಲಿ ಅಮ್ಮ ನನ್ನ ಓದಿಸಿದರು. ನಂತರ ಕುಟುಂಬದ ಆಧಾರಸ್ತಂಭವಾದನು. ನನ್ನ ತಾಯಿಗೆ ನನ್ನ ಟೀಚರ್ ಮಾಡಬೇಕು ಅಂತ ಆಸೆ ಇತ್ತು. ಆದರೆ ನನಗೆ ಅಂತಹ ಸೌಭಾಗ್ಯ ಬರಲಿಲ್ಲ.

ನಾನು ಓದಿದ ಕೆಲವು ಪುಸ್ತಕಗಳಲ್ಲಿ ಹಿಂದಿನ ಕಾಲದಲ್ಲಿ ರಾಜರ ಆಳ್ವಿಕೆಯ ಸಂದರ್ಭದಲ್ಲಿ ನರ್ತಕಿ ಅಂದರೆ ದೇವದಾಸಿ ಎಂದು ಆ ಪ್ರಕಾರವಾಗಿ ತಂಗಂಡಿದ್ದಾರೆ. ಆಗ ದೇವದಾಸಿಯವರಿಗೆ ರಾಜ ವೈಭವ ಇತ್ತು. ಆದರೆ ಈಗ ದೇವದಾಸಿಯರಿಗೆ ಕಷ್ಟಗಳೇ ಎದುರಾಗಿವೆ. ನಾವು ದೇವದಾಸಿಯರಪ್ಪ ನಾವು ಅಲಂಕಾರ ಮಾಡಿಕೊಂಡು ಮೆರಿಬೇಕು ಅಂತ ಇಲ್ಲಿ ನಮಗೆ ಬೇರೆ ಬೇರೆ ದೇವದಾಸಿಯರಲ್ಲಿ ಮೈತುಂಬ ಬಂಗಾರ ಮಾಡಿಕೊಂಡರ, ಆದರೆ ನಮಗೆ ಬಂಗಾರದಂತ ಜೀವನ ಕೊಡಪ್ಪ ದೇವರೆ ಎಂದು ಬೇಡಕೊಳ್ಳುತ್ತೇನೆ. ಬೆಂಗಳೂರಿನಲ್ಲಿ ನಡೆದ ಸಭೆಯಲ್ಲಿ ಉಮಾಶ್ರೀ ಏನಂದರಂದ್ರೆ ಅನಾದಿ

ಕಾಲದಿಂದ ವೇಶ್ಯಾವಾಟಿಕೆಯಿಂದ ಬಂದವರೇ ದೇವದಾಸಿಯರು ಎಂದು ಹೇಳಿದರು. ಆದರೆ ನಾವು ವೇಶ್ಯಾವಾಟಿಕೆ ಮಾಡಿಕೊಂಡು ಬಂದವರಲ್ಲ. ವೇಶ್ಯಾವಾಟಿಕೆ ಎನ್ನುವಂತದ್ದು ನಮ್ಮ ಜೀವನದಲ್ಲಿಯೇ ಇಲ್ಲ. ದೇವದಾಸಿ ಎಂದರೆ ನಾವು ದೇವರಿಗಾಗಿ ಮಡುಪಾದಂತವರು ಅಂತ ನಮ್ಮ ಮನೆಯಲ್ಲಿ ಮಾಡಿಕೊಂಡಿದ್ದೇವೆ. ಇವರು ಏನೆಂದುಕೊಂಡಾರೆ ಅಂದರೆ ದೇಹನೇ ದೇಗುಲ ಮಾಡಿಕೊಂಡು ನಾಟಕದ ಪ್ರಪಂಚ ನಡೆಸುತ್ತಿದ್ದಾರೆ ಅಂತ ಅಂದುಕೊಂಡಿದ್ದಾರೆ. ನಾವು ಆ ನಾಟಕ ನಡೆಸಿಲ್ಲ. ನಮ್ಮ ಮಕ್ಕಳನ್ನು ಒಂದು ದಾರಿಗೆ ತಂದಿವಿ.

ನಾನು ದೇವದಾಸಿಯಾಗಲು ಕಾರಣವೆಂದರೆ ಈ ಮನೆಯಲ್ಲಿ ಮಕ್ಕಳು ಯಾರು ಇಲ್ಲ, ಗಂಡು ಇಲ್ಲ, ಹೆಣ್ಣು ಇಲ್ಲ, ಮಕ್ಕಳೇ ಇಲ್ಲದ' ಮನೆ ಇದು. ನಾನು ಮುಸ್ಲಿಂ ಹುಡಿಗಿ, ೧೬ ದಿನದ ಮಗುವಾಗಿದಾಗ ತಂದು ಸಾಕಿದರು. ನನ್ನ ತಂದೆ ತಾಯಿಗಳು ಕಾಲಾಂತರದಲ್ಲಿ ನನ್ನ ದೇವದಾಸಿಯನ್ನಾಗಿ ಮಾಡಿದ್ದಾರೆ. ಈ ಮನೆಯ ದೀಪ ಹಚ್ಚುವ ಸಲುವಾಗಿ ದೇವದಾಸಿಯನ್ನಾಗಿ ಮಾಡಿದ್ದಾರೆ ಅಷ್ಟೇ. ಆದರೆ ಯಾವುದೇ ಹಣ ಸಂಪಾದನೆಗಲ್ಲ ಎಂದು ನೋವಿನಿಂದ ನುಡಿದರು.

ನನಗೆ ದೇವರು ಕಟ್ಟಿರೋ ವಿಷಯ ಯಾವುದು ನನಗೆ ಗೊತ್ತಿಲ್ಲ. ೧೯೫೫ರಲ್ಲಿ ಜನನ ಆಗಿದೆ. ೧೯೬೨ರಲ್ಲಿ ದೇವರು ಕಟ್ಟಿರೋದು. ಅಂದ್ರೇ ಮೂರು ವರ್ಷವಿದ್ದಾಗ ದೇವರಿಗೆ ಬಿಟ್ಟಾರ. ಆಗ ನನಗೆ ಕುಂಕುಮ ಹಚ್ಚಿಕೊಳ್ಳುದು ಕೂಡ ಗೊತ್ತಿದ್ದಿಲ್ಲ. ಅಲ್ಲಿಂದ ೪ನೇ ಕ್ಲಾಸ್‌ಗೆ ಹಾಸ್ಟಲ್‌ನಲ್ಲಿ ಬೆಳೆದೆ. ನಂತರ ಆಸ್ತಿ ಕೈ ತಪ್ಪಿ ಹೋದಮೇಲೆ ಅಮ್ಮ ಕೊತ್ತಂಬರಿ ಮಸಾಲೆ ಪದಾರ್ಥ ಮಾರಿ ಜೀವನ ನಡೆಸುತ್ತಿದ್ದರು. ನಂತರ ರಜೆಯಲ್ಲಿ ನಾನು ಅಮ್ಮನ ಜೊತೆ ವ್ಯಾಪಾರ ಮಾಡುತ್ತಿದ್ದೆ. ಆಗ ಊಡೋಕೆ ಬಟ್ಟೇನು ಇರಲಿಲ್ಲ. ನನಗೆ ದೇವರು ಕಟ್ಟಿರುವ ವಿಷಯ ನಾನು ದೊಡ್ಡೊಳು ಆಗುವವರೆಗೂ ನನಗೆ ಗೊತ್ತಿಲ್ಲ. ನಂತರ ಗೊತ್ತಾಯಿತು. ಅಲ್ಲಿಯವರೆಗೂ ದೇವರು ಏನು ನನ್ನ ಕೊರಳಿಗೆ ಹಾಕಿರಲಿಲ್ಲ. ಎಸ್.ಎಸ್.ಎಲ್.ಸಿ.ಗೆ ಬಂದ ಮೇಲೆ ಗೊತ್ತಾಯಿತು. ಹಡಲಿಗೆಯಲ್ಲಿ ಹಾಕಿ ಇಟ್ಟಿದ್ದರು. ನಾನು ಒಂದು ದಿನ ನೋಡಿ ಅಮ್ಮನ್ನ ಕೇಳಿದೆ, ಇದು ಯಾರದು? ಎಂದು. ಅಮ್ಮ ನಿಂದೆ ಅಂತ ಹೇಳಿದಳು. ನಾನು ಆಗ ಅಷ್ಟಾಗಿ ಅದನ್ನು ಒಪ್ಪಿರಲಿಲ್ಲ. ನಮ್ಮ ಚಿಕ್ಕಮ್ಮ ನನಗೆ ಗಂಡು ಹುಡುಕುತ್ತಿದ್ದಳು.ನನ್ನ ಮದುವೆ ಸುದ್ದಿ ಒಂದು ದಿನ ಅಮ್ಮನ ಅತ್ರ ಮಾತಾಡಿದೆ. ಆಗ ನನ್ನ ತಾಯಿ ನನ್ನ ನೋಡೊರು ಯಾರು? ನನ್ನ ವಂಶ ಬೆಳೆಬೇಕು ಎಂದೆಲ್ಲ ಹೇಳಿದರು. ಅಮ್ಮ ನೀನೆನಾದ್ರು ಮದುವೆ ಮಾಡಿಕೊಳ್ಳುವ ಹಾಗಿದ್ರೆ ನನಗೆ ಸ್ವಲ್ಪ ವಿಷಕೊಟ್ಟು ಮದುವೆ ಮಾಡಿಕೋ ಅಂದಾಗ ಅನಿವಾರ್ಯವಾಗಿ ಈ ಪದ್ಧತಿಗೆ ತಲೆಬಾಗಿಸಲೇಬೇಕಾಯಿತು. ಮದುವೆ ದೇವದಾಸಿಯಾಗಬೇಕೋ ತಾಯಿನಾ ಕಳೆದುಕೊಳ್ಳಬೇಕೋ ಅಂತ ಯೋಚಿಸಿ ಈ ಪದ್ಧತಿಗೆ ಒಪ್ಪಿಕೊಂಡೆನು. ನಾನು ಹೆಚ್ಚಾಗಿ ಆಲೋಚನೆ ಮಾಡಿದ್ದೇನೆಂದರೆ ಈ ಮನೆಯಲ್ಲಿ ನನ್ನ ಬಿಟ್ರೆ ಯಾರು ಇಲ್ಲ, ಈ ಮನೆಯ ನಿರ್ನಾಮಾವಾಗುತ್ತೆ ನಾನು ಈ ಮನೆ ದೀಪ ಹಚ್ಚೋಣ ಅಂತನೇ ಈ ಪದ್ಧತಿಗೆ ಒಪ್ಪಿಕೊಂಡೆನು.

ನಾನು ೨೦ ವರ್ಷ ವಯಸ್ಸಿಗಾಗಲೇ ೫ ಮಕ್ಕಳ ತಾಯಿಯಾಗಿದ್ದೆ. ನನ್ನ ಜೊತೆ ಮುಸ್ಲಿಂ ಸಮುದಾಯದ ಒಬ್ಬ ವ್ಯಕ್ತಿ ಇದ್ದ. ಆತ ಮೊದಲು ಚೆನ್ನಾಗಿ ನೋಡಿಕೊಂಡ. ನಂತರ ದಿನಗಳಲ್ಲಿ

ಸಾಕಷ್ಟು ಹಿಂಸೆಯನ್ನು ಕೊಟ್ಟನು. ಕುಡಿದು ಬಂದು ನನ್ನ ಬಹಳ ಹೊಡಿತ್ತಿದ್ದ. ತೊಡೆಗಳನ್ನು ಗಟ್ಟಿಯಾಗಿ ಕಚ್ಚುವುದು, ಸಿಗರೇಟ್‌ನಿಂದ ಎದೆಗೆ ಸುಡುವುದು. ಹೀಗೆ ನಾನಾ ತೆರನಾಗಿ ಹಿಂಸೆ ಕೊಡತೊಡಗಿದ. ಆಗ ಇನ್ನೂ ಮಕ್ಕಳು ಚಿಕ್ಕವಿದ್ದವು. ಆತನನ್ನು ಬಿಟ್ಟರೆ ಊರೋರು ಸುಮ್ನೆ ನನ್ನ ಮನೆ ಮೇಲೆ ಕಣ್ಣು ಅಂತ ಹಾಗೆಯೇ ಹಿಂಸೆಯನ್ನು ಸಹಿಸಿಕೊಂಡು ಜೀವನ ಮಾಡಿದೆ. ಮಕ್ಕಳು ಹಾಗೆ ಬೆಳೆದು ದೊಡ್ಡವರಾದರು. ಅವರಪ್ಪ ನನಗೆ ಕೊಡತಿದ್ದ ಹಿಂಸೆಗಳು ಮಕ್ಕಳಿಗೆ ತಿಳಿಯುತ್ತಿದ್ದವು. ಸುತ್ತಮುತ್ತಲಿನ ಜನಗಳು ಇಂತ ಮನುಷ್ಯನ್ನ ಯಾಕ ಇಟ್ಟುಕೊಂಡಳಾ ಈಕೆ. ಮಕ್ಕಳ ಕೈಗೆ ಬಂದರೂ ಹಾಗೆ ಹೀಗೆ ಅಂತ ಬೈಯೋದು ಕೇಳಿಸಿಕೊಂಡು. ನಾನು ಒಂದು ದಿನನೂ ಅವನಿಗೆ ಎದುರು ಮಾತಾಡಿದಿಲ್ಲ. ಆವತ್ತು ನೋಡಪ್ಪ ನನ್ನ ಮಕ್ಕಳು ದೊಡ್ಡವರಾಗ್ಯಾರ ನಾನು ಆ ಮಕ್ಕಳನ್ನು ಇಟ್ಟುಕೊಂಡು ಜೀವನ ಮಾಡ್‌ತ್ತೀನಿ, ನೀನು ಬರಬೇಡ, ಅಂತೆಲ್ಲ ಹೇಳಿ ಬರೋದು ಬಿಡಿಸಿದೆ. ಆಗ ನನ್ನ ಕೊನೆ ಮಗನಿಗೆ ೫ ತಿಂಗಳು ಇರುವಾಗ ಬಟ್ಟೆ ಹೊಲಿದು ಮಕ್ಕಳನ್ನು ಸಾಕಿನಿ. ದಿನಕ್ಕೆ ೫೦–೬೦ ರೂಪಾಯಿ ಸಿಗುತ್ತಿದ್ದು, ಒಂದೊಂದು ದಿನ ಅದೂನೂ ಸಿಗುತ್ತಿರಲಿಲ್ಲ. ಹಬ್ಬ ಬಂದರೆ, ಒಂದು ಸೀರೆ ತಗಂಡು ನನ್ನ ಮೂರು ಹೆಣ್ಣು ಮಕ್ಕಳಿಗೆ ಗೌನ್ ಹೊಲಿದು ಹುಡಿಸುತ್ತಿದ್ದೆ. ಹಬ್ಬಗಳ ದಿನಗಳಲ್ಲಿ ರಾತ್ರಿ ಇಡೀ ಬಟ್ಟೆಗಳನ್ನು ಹೊಲಿಯುತ್ತಿದ್ದೆ. ಬಟ್ಟೆ ಹೊಲಿಯುವ ಯಂತ್ರನಂದಲ್ಲ, ಬೇರೆಯವರದು. ಒಂದು ದಿನ ಅವರು ಅದನ್ನು ತಗಂಡು ಹೋಗಿಬಿಟ್ಟರು. ಅಲ್ಲಿಂದ ಜೀವನ ನಡೆಸುವುದು ತುಂಬ ಕಷ್ಟವಾಯಿತು.

ಒಂದು ಕಾಲದಲ್ಲಿ ನಮ್ಮೂರುರಲ್ಲಿ ೫ಳನೇ ಕವಿಯಾಗಿದ್ದೆ. ಆದರೆ ಕಷ್ಟಗಳ ತುಳಿತದಿಂದ ಈಗೆಲ್ಲ ಹವ್ಯಾಸ ಹೋಗಿದೆ. ಉದಯ ಟಿವಿಯಲ್ಲಿ ಎರಡು ಸಾರಿ ಬಹುಮಾನವನ್ನು ಪಡೆದಿದ್ದೇನೆ. ಸುಮಾರು ಕವನಗಳನ್ನು ಬರೆದಿದ್ದೇನೆ. ಅವುಗಳೆಲ್ಲವೂ ನೋವಿನವೇ ಹೊರತು ನಲಿವಿನ ಕವನಗಳು ಬರೆದಿಲ್ಲ. ನೋವನ್ನು ಉಂಡುವರು ಆ ನೋವನ್ನು ಕವನಗಳ ಮೂಲಕ ಹೊರಹಾಕುತ್ತಾರೆ. ಅದು ನಿಜವಾದ ಸತ್ಯವಾಗಿದೆ. ನಾನು ಬರೆದಿರುವ ಕವನಗಳನ್ನು ಓದಿದಾಗ ತಿಳಿಯುತ್ತದೆ. ನಿಮಗೆ ಎಷ್ಟು ನೋವನ್ನು ಉಂಡಿದಿನಿ ನನ್ನ ಬದುಕಿನಲ್ಲಿ ಎಂದು. ನಾನೊಂದು ಕಾರ್ಯಕ್ರಮದಲ್ಲಿ ಕವನ ಓದಿದೆ. ಅದು ತಾಯಿ ಮಗುವಿನ ಕುರಿತಾಗಿದ್ದು, ಅದೇನೆಂದರೆ ಗಂಡ ಸತ್ತಿರುತ್ತಾನೆ, ಅವರ ಅಣ್ಣ ತಮ್ಮಂದಿರು ಕೂಸು ನಮ್ಮದಲ್ಲ ಎಂದು ಇಬ್ಬರನ್ನು ಹೊರಹಾಕುತ್ತಾರೆ. ಎತ್ತನೋಡಿದರು ಕತ್ತಲೂ, ನನ್ನ ಕಂದನನ್ನು ಎತ್ತಿಕೊಳ್ಳುವರೂ ಯಾರು ಇಲ್ಲ. ತಾಯಿ ಮಗುವಿಗೆ ಹಾಕಿಕೊಳ್ಳಲಿಲ್ಲ, ಹೊದಿಕೆಯೂ ಇಲ್ಲದೆ ಬೀದಿಯಲ್ಲಿ ನರಳುತ್ತಿರುವ ಕವನವನ್ನು ಕೇಳಿ ಅಲ್ಲಿ ಸೇರಿರುವ ಜನರ ಕಣ್ಣಲ್ಲಿ ನೀರು ಬಂದವು. ನನಗೆ ಅವಕಾಶ ದೊರೆತಿದ್ದರೆ, ನಾನು ದೊಡ್ಡ ಕವಿಯಾಗುತ್ತಿದ್ದೆ. ಆದರೆ ಈ ಸಮಾಜ ನಮ್ಮಂತ ಕೆಳಜಾತಿ ಜನರಿಗೆ ಅವಕಾಶ ಕೊಡೋದಿಲ್ಲ.

ನಾನು ದೇವದಾಸಿ ಮಹಿಳಾ ವಿಮೋಚನಾ ಸಂಘಟನೆಯ ಅಧ್ಯಕ್ಷೆಯಾಗಿದ್ದೆ. ಆದರೆ ಬೇರೆ ಸಮುದಾಯದ ಮಹಿಳೆ ನನ್ನ ಮುಂದುವರೆಯಲು ಬಿಡಲಿಲ್ಲ. ಸಂಘಟನೆಯ ಹೋರಾಟ ಕಾರ್ಯ ಪ್ರಾರಂಭ ಮಾಡಿದ್ದೇನೆ. ಆದರೆ ನಾಯಕ ಸಮುದಾಯದ ಮಹಿಳೆ ನನಗೆ ಅವಕಾಶ ಕೊಡದೇ

ತಾನೇ ಆ ಅಧ್ಯಕ್ಷ ಸ್ಥಾನವನ್ನು ವಹಿಸಿಕೊಂಡು ಹೋಗುತ್ತಿದ್ದಾರೆ. ಬೆಂಗಳೂರಿನಲ್ಲಿ ಲೇಟರ್‌ಗಳನ್ನು ನೀಡಿ ಒಳಗೊಳಗೆ ಅವರು ಅಧ್ಯಕ್ಷರಾಗಿದ್ದಾರೆ. ಮಾದಿಗ ಸಮುದಾಯದ ಮಹಿಳೆಯನ್ನು ತುಳಿಯುವ ಕೆಲಸಗಳು ಹೀಗೆ ನಡೆಯುತ್ತವೆ. ಮಾದಿಗ ಸಮುದಾಯದ ದೇವದಾಸಿ ಮಹಿಳೆಯ ಮಗಳ ಮೇಲೆ ಬಂಗಾರ ಕದ್ದಿದ್ದಾಳೆ. ಲಾಡ್ಜ್‌ನಲ್ಲಿ ದಂದೆಗೆ ಇಳಿದಿದ್ದಾಳೆ ಅಂತೆಲ್ಲೆ ಹೇಳಿ ಪಕ್ಕದ ಜನರು ಪೊಲೀಸ್ ದೂರು ಕೊಟ್ಟು ಅಪರಾಧಿ ಮಾಡಿ ಜೈಲಿಗೆ ಕಳುಹಿಸಿದ್ದರು. ಅವಳನ್ನು ಹೊರಗೆ ತರರೊಕೆ ತುಂಬ ಕಷ್ಟಪಟ್ಟು ಸಣ್ಣಪುಟ್ಟ ವಸ್ತುಗಳನ್ನು ಮಾರಿ, ಸಾಲ ಮಾಡಿ ಮಗಳನ್ನು ಬಿಡಿಸಿಕೊಂಡು ಬಂದೆ. ಆ ಮೇಲೆ ಅವಳಿಗೆ ಮದುವೆ ಮಾಡಿಕೊಳ್ಳಲು ಬಂದ ಗಂಡುಮಕ್ಕಳಿಗೆ ಈ ವಿಷಯ ತಿಳಿದು ಮದುವೆ ಆಗದೆ ಹಾಗೆ ಉಳಿದಳು. ದೇವದಾಸಿ ಮಕ್ಕಳಿಗೆ ಮದುವೆ ಮಾಡಿಕೊಳ್ಳೊದೆ ಕಷ್ಟ. ಅಂತದ್ರಲ್ಲಿ ಇಂತಹ ಅಪರಾಧ ಹೊತ್ತಕೊಂಡ ನನ್ನ ಮಗಳಿಗೆ ಮದುವೆ ಮಾಡೊದೇ ಒಂದು ದೊಡ್ಡ ಚಿಂತೆಯಾಗಿತ್ತು. ಅವಳನ್ನು ದೇವದಾಸಿ ಮಾಡೋಕೆ ನನಗೆ ಮನಸ್ಸು ಇಲ್ಲ. ಮಾಡಿಕೊಳ್ಳೋಕೆ ಯಾರು ಮುಂದೆ ಬರ್‌ತಿಲ್ಲ. ನನ್ನ ಮೊದಲನೇ ಮಗಳ ಗಂಡನೇ ತಾಳಿ ಕಟ್ಟಿ ಮದುವೇ ಆಗಿದ್ದಾನೆ. ಆದರೆ ಅವನು ಸರಿಯಾಗಿ ನೋಡಿಕೊಳ್ಳುವುದಿಲ್ಲ. ಒಂದು ರೀತಿ ಅವಳ ಜೀವನವು ಕೂಡ ದೇವದಾಸಿಯ ರೀತಿ ನಡೆಯುತ್ತಿದೆ. ನನ್ನ ಜೊತೆಯೇ ಇದ್ದಾಳೆ. ಅವಳಿಗೆ ಎರಡು ಮಕ್ಕಳು ಇದ್ದಾವೆ. ಅವರನ್ನು ಸಾಕೋಕೆ ಕಷ್ಟ ಪಡುತ್ತಿದ್ದಾಳೆ ನನ್ನ ಮಗಳು. ಹೆಣ್ಣು ಮಕ್ಕಳಾಗಿ ಹುಟ್ಟಬಾರದು, ಹುಟ್ಟಿದ್ರು ದೇವದಾಸಿ ಜೀವನಕ್ಕೆ ಮಾತ್ರ ಬಲಿಯಾಗಬಾರದು. ಅದರಲ್ಲೂ ಮಾದ್ರು ಕುಲದಲ್ಲಿ ಮಾತ್ರ ಹುಟ್ಟಲೇ ಬಾರದು. ನನ್ನ ಮಗಳಿಗೆ ಅಪರಾಧಿ ಸ್ಥಾನ ಸಿಗದಿದ್ದರೆ ಮದುವೆ ಮಾಡಿಕೊಂಡು ಹಸನಾದ ಜೀವನ ಮಾಡುತ್ತಿದ್ದಳು. ಆದರೆ ಮದುವೆಯಾದರೂ ದೇವದಾಸಿಯಂತೆ ಒಂಬೊಂಟಿಯಾಗಿ ಮಕ್ಕಳನ್ನು ಸಾಕುತ್ತಿದ್ದಾಳೆ. ನಂದು ನನ್ನ ಮಗಳ ಬಾಳು ಒಂದೇ ಹಾಗೊಯಿತು.

**ಅಂಜಲಿ, ವಯಸ್ಸು –೩೫ (ಎಸ್ ಸಿ)**

ನಮ್ಮ ತಂದೆ – ತಾಯಿಗೆ ಇಬ್ಬರು ಮಕ್ಕಳು. ನಾನು ಮತ್ತು ನನ್ನ ಅಣ್ಣ. ತಂದೆ–ತಾಯಿಗೆ ನನ್ನನ್ನು ಮದುವೆ ಮಾಡಿಕೊಡಲು ಇಷ್ಟವಿರಲಿಲ್ಲ. ಅವರಿಗೆ ನನ್ನನ್ನು ದೇವದಾಸಿಯನ್ನಾಗಿ ಮಾಡಬೇಕೆಂದು ಮನಸ್ಸಿನಲ್ಲಿ ಇತ್ತು. ನಾನು ೧೨–೧೩ನೇ ವಯಸ್ಸಿನಲ್ಲಿ ಇರುವಾಗ ನನ್ನನ್ನು ದೇವದಾಸಿಯನ್ನಾಗಿ ಮಾಡಲು ಏರ್ಪಾಟು ಮಾಡಿದರು. ಆದರೆ ಕೇರಿಯ ಜನರಿಗೆ ಈ ವಿಷಯ ಗೊತ್ತಾಗಿ. ಎಲ್ಲರೂ ಪಂಚಾಯಿತಿಯನ್ನು ಮಾಡಲು ಕೇರಿಯ ಜನ ಒಂದೆಡೆ ಸೇರಿದರು. ದೇವದಾಸಿಯನ್ನಾಗಿ ಮಾಡಲು ಕೇರಿಯ ಜನರಿಂದ ವಿರೋಧ ವ್ಯಕ್ತಪಡಿಸಿದಾಗ ನನ್ನ ತಾಯಿಯವರು ನಮಗೆ ಮದುವೆ ಮಾಡಲು ಶಕ್ತಿ ಇಲ್ಲ. ಒಂದು ವೇಳೆ ಈ ಕೇರಿಯಲ್ಲಿ ಯಾರಾದರೂ ತಾವೇ ಮದುವೆ ಮಾಡಿಕೊಳ್ಳುವುದಾದರೆ ನಾನು ಅವರಿಗೆ ನನ್ನ ಮಗಳನ್ನು ಕೊಡುತ್ತೇನೆ ಎಂದರು. ಆಗ ಕೇರಿಯಲ್ಲಿರುವ ಜನರು ಯಾವುದೇ ಉತ್ತರವನ್ನು ನೀಡದೆ ಸುಮ್ಮನಿದ್ದರು. ಒಟ್ಟಿನಲ್ಲಿ ನನ್ನನ್ನು ದೇವದಾಸಿ ಮಾಡಬಾರದೆಂದು ಒತ್ತಾಯಿ ಹಾಕುತ್ತಿದ್ದರು. ಸ್ವಲ್ಪ ದಿನಗಳ ನಂತರ ಯಾರಿಗೂ ತಿಳಿಯದಾಗೆ ನನ್ನ ಕುಟುಂಬದವರು ನನ್ನನ್ನು ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ,

ದೇವದಾಸಿಯನ್ನಾಗಿ ಮಾಡಿದರು. ಪ್ರಾರಂಭದಲ್ಲಿ ಬೇರೆ ಜಾತಿಯ ಪುರುಷನೊಂದಿಗೆ ಸಂಬಂಧವಿತ್ತು. ಆತನಿಂದ ಎರಡು ಹೆಣ್ಣು ಮಕ್ಕಳನ್ನು ಪಡೆದೆ ನನಗೆ ಪ್ರಾರಂಭದ ದಿನಗಳಲ್ಲಿ ಯಾವ ಕಷ್ಟಗಳು ಬರಲಿಲ್ಲ. ಯಾಕೆಂದರೆ ನನ್ನ ತಂದೆ-ತಾಯಿ ಇಬ್ಬರು ದುಡಿದು ನನ್ನನ್ನು ನೋಡಿಕೊಳ್ಳುತ್ತಿದ್ದರು. ಆನಂತರ ನನ್ನ ತಾಯಿ ರಸ್ತೆ ಅಪಘಾತದಲ್ಲಿ ಸತ್ತು ಹೋಗಿದ್ದರು. ನನ್ನ ತಾಯಿ ಸತ್ತು ಹೋದ ಚಿಂತೆಯಲ್ಲಿ ಕುಡಿತಕ್ಕೆ ಒಳಗಾದರು. ಈಗ ನನ್ನ ಬಳಿ ಬರುತ್ತಿದ್ದ ಆ ವ್ಯಕ್ತಿಯು ಸಹ ಬರುತ್ತಿಲ್ಲ. ಯಾಕೆಂದರೆ ಇದುವರೆಗೂ ಆತನಿಂದ ನನಗೆ ಯಾವುದೇ ಆರ್ಥಿಕ ಸಹಾಯವನ್ನು ಪಡೆಯುತ್ತಿದಿಲ್ಲ. ಈಗ ಆತನಿಗೆ ಕುಟುಂಬ ಪೋಷಿಸಲು ಆರ್ಥಿಕ ಸಹಾಯ ಕೇಳಬಹುದು ಎಂಬ ಉದ್ದೇಶದಿಂದ ನನ್ನನ್ನು ಬಿಟ್ಟು ಬಿಟ್ಟಿದ್ದಾನೆ. ಈ ರೀತಿಯ ಪರಿಸ್ಥಿತಿಯಲ್ಲಿ ನಾನು ಕೂಲಿ ಕೆಲಸಕ್ಕೆ ಹೋಗಿ ದುಡಿದು ತಿನ್ನಬೇಕಾಯಿತು. ನಾನು ಕಷ್ಟಬಿದ್ದರೆ ಮಾತ್ರ ನನ್ನ ಹೊಟ್ಟೆ ತುಂಬುತಿತ್ತು. ಆಗ ನನಗೆ ಈ ದೇವದಾಸಿಯನ್ನು ಯಾಕೆ ಮಾಡಿದರು. ಅದೇ ನನ್ನನ್ನು ಮದುವೆ ಮಾಡಿಕೊಟ್ಟಿದ್ದರೆ. ಗಂಡನೇ ನನ್ನನ್ನು ದುಡಿದು ಸಾಕುತ್ತಿದ್ದಾ ಎಂದು ಬೇಸರವಾಗುತ್ತಿತ್ತು. ದಿನಗಳು ಕಳದಂತೆ ನಾನು ಇರುವ ಕೇರಿಯಲ್ಲಿ ಒಬ್ಬ ಪುರುಷನ ಸಂಬಂಧವನ್ನು ಮಾಡಿದೇ ಆತನಿಗೆ ಆಗಾಗಲೇ ಮದುವೆಯಾಗಿತ್ತು. ಈಗ ಆತನಿಂದ ೨ ಹೆಣ್ಣುಮಕ್ಕಳನ್ನು ಪಡೆದಿದ್ದೇನೆ. ಆತನಿಂದಲೂ ನನಗೆ ಯಾವುದೇ ಆರ್ಥಿಕ ಸಹಾಯವಿಲ್ಲ. ಈವಾಗಲೂ ನಾನು ದುಡಿದು ತಿನ್ನುವ ಪರಿಸ್ಥಿತಿ ಇದೆ. ಕೆಲವು ಸಲ ಆತನ ಹೆಂಡತಿಯಿಂದ ಬೈಯಿಸಿಕೊಂಡಿದ್ದೇನೆ. ಏನೇ ಆಗಲಿ ದೇವದಾಸಿಯರಿಗೆ ಸಂಬಂಧವಿರುವ ವ್ಯಕ್ತಿಯ ಮೇಲೆ ದೇವದಾಸಿ ಅಧಿಕಾರವಿರುವುದಿಲ್ಲ. ಕೆಲವು ಸಂದರ್ಭಗಳಲ್ಲಿ ನನ್ನ ಮಕ್ಕಳು ಉಡಿಗೆ-ತೊಡಿಗೆಯನ್ನು ಆತನ ಹೆಂಡತಿ ನೋಡಿದಾಗ ಹೊಟ್ಟೆಕೆಚ್ಚು ಪಡುತ್ತಾಳೆ. ಎಲ್ಲವನ್ನು ಸೊಳೆ ಮತ್ತು ಆಕೆಯ ಮಕ್ಕಳಿಗೆ ಹಾಳು ಮಾಡುತ್ತಾನೆ ಎಂದು ಅನ್ನುತ್ತಾಳೆ. ಆತನು ಯಾವುದೇ ರೀತಿಯಲ್ಲಿ ಸಹಾಯ ಮಾಡಿಲ್ಲ. ಆದರೂ ಅವರಿಂದ ನಾನು ಬೇಯಿಸಿಕೊಳ್ಳುವುದು ತಪ್ಪಿಲ್ಲ. ನಾನು ಗಟ್ಟಿ ಇರುವುದರೊಳಗಾಗಿ ನನ್ನ ೪ ಜನ ಮಕ್ಕಳ ಮದುವೇ ಮಾಡಬೇಕು. ಇದೆಲ್ಲ ನೆನಸಿಕೊಂಡರೆ ನನಗೆ ಭಯ ಬರುತ್ತೆ. ಆ ದೇವರೇ ನನ್ನನ್ನು ಕಾಯಬೇಕು. ನನಗೆ ದುಡಿಯುವ ಶಕ್ತಿ ಕೊಡಬೇಕು. ಈ ರೀತಿ ನನ್ನಂತಹ ಎಷ್ಟೋ ಜನ ದೇವದಾಸಿಯರು ಕಷ್ಟ ಬೀಳುತ್ತಿದ್ದಾರೋ ಅವರನ್ನು ಆ ದೇವರೇ ಕಾಪಾಡಬೇಕು.

**ಜಯಶ್ರೀ, ವಯಸ್ಸು-೨೮ (ಎಸ್ ಸಿ)**

ನಮ್ಮ ತಂದೆ – ತಾಯಿಗೆ ೫ ಜನ ಮಕ್ಕಳು. ಅದರಲ್ಲಿ ಒಂದು ಗಂಡು ಮಗ ಸತ್ತಾನ. ಇವಾಗ ಇಬ್ಬರು ಹೆಣ್ಣುಮಕ್ಕಳು, ಇಬ್ಬರು ಗಂಡು ಮಕ್ಕಳು ಇದ್ದೀವಿ. ನಮ್ಮ ತಂದೆಯ ಅಮ್ಮನವರು ದೇವದಾಸಿಯಾಗಿದ್ದರು. ನಮ್ಮ ಅಕ್ಕನ ಮದುವೆ ಮಾಡಿ ಕೊಟ್ಟಾರ. ನನ್ನ ಮನೆಗೆ ಬಿಡಬೇಕು ಅಂತ ಅನ್ನೋ ಮನಸ್ಥಿತಿ ಯಾರಿಗೂ ಇರಲಿಲ್ಲ. ನಾನೇ ಆ ಪರಿಸ್ಥಿತಿ ತಂದುಕೊಂಡಿನಿ ಅಂತ ಅನಿಸುತ್ತೆ. ನಾನು ೪-೫ ವರ್ಷದ ಕೆಳಗೆ ಊರೊಳಗಿನ ಹುಡುಗನ್ನು ಪ್ರೀತಿಸಿದ್ದೇ. ಆತನು ನನ್ನ ಇಷ್ಟಪಟ್ಟಿದ್ದ. ದಿನಾಲೂ ನಾವು ಹೊಲದ ಹತ್ರ ಕುಳಿತು ಮಾತಾಡುತ್ತಾ ಇದ್ದೀವಿ. ಒಂದು ದಿನ ನಮ್ಮ ಮನೆಯವರು ನೋಡಿ ಇಬ್ಬರನ್ನು ಬೈದರು. ಈ ಸುದ್ದಿ ಆ ಹುಡುಗನ ಮನೆಯವರಿಗೂ ಗೊತ್ತಾಯಿತು. ಹೀಗೆ ಸ್ವಲ್ಪ

ಗಲಾಟೆನೂ ಆಯಿತು. ನಾವು ದೊಡ್ಡ ಜನ ನೀವು ಕೀಳು ಜಾತಿಯವರಾಗಿ ಊರಾಳನ ಹುಡುಗರನ್ನು ಮುಟ್ಟಿಸಿಕೊಳ್ಳುವಷ್ಟು ಸಲೀಗೆ ಬೆಳೆಸಿರಾ? ಹಾಗೆ ಹೀಗೆ? ಅಂತೆಲ್ಲ ಮಾತಾಡಿದ್ರು. ನನ್ನ ತಂದೆ – ತಾಯಿಯವರು ಆಗಿದ್ದು ಆಯಿತು ಮದುವೇ ಮಾಡಿ ಒಂದು ದಾರಿ ಮಾಡನಾ ಅಂತೆಲ್ಲಾ ಹೇಳಿದ್ರು. ಅದಕ್ಕೆ ಊರೊಳಗಿನ ಜನರೆಲ್ಲ ಸೇರಿ ಮಾತಾಡಿ ಒಂದು ನಿರ್ಧಾರಕ್ಕೆ ಬಂದರು. ಇಲ್ಲಿ ನೀವು ಕೆಳಜಾತಿ ಜನ ನಿಮ್ಮ ಹುಡುಗಿನ ಮದುವೆ ಆಗೋದು ಅಂದ್ರೆ ಏನು? ನಮ್ಮ ಕುಲಕ್ಕೆ ಅವಮಾನ ಅಂತೆಲ್ಲಾ ಹೇಳಿ. ನಾವು ಖರ್ಚು ಕೊಡುತ್ತೇವೆ, ನಿಮ್ಮ ಮಗಳನ್ನು ಮನೇಲಿ ಬಿಟ್ಟುಕೊಳ್ಳಿ ಬೇಕಾದ್ರೆ ನಮ್ಮ ಮಗನೇ ಇರುತ್ತಾನೆ ಅಂತ ಹೇಳಿದ್ರು. ನಮ್ಮ ಜನನು ಹೌದು. ದೊಡ್ಡ ಜಾತಿ ಜನ ಎನ್ನೋ ಮನಸ್ಥಿತಿ ಇರೋರು ಎಲ್ಲಾ ಸೇರಿ ಸರಿ ಅಂತ ಒಪ್ಪಿಕೊಂಡು ಹಣ ಪಡೆದು ಮನೆಯಲ್ಲಿ ದೇವರು ಕಟ್ಟಿದರು. ಹುಲಿಗೆಮ್ಮಗ ಹೋಗಿ ಪೂಜೆ ಮಾಡಿಸಿಕೊಂಡರು ಬಂದರು. ಆಮೇಲೆ ನಾನು ಮನೆಲ್ಲೇ ಇದ್ದೆ. ಆತನು ಬಂದು ಹೋಗೋದು ಮಾಡುತ್ತಿದ್ದೆ. ಅವರ ಮನೇಲಿ ಆತನಿಗೂ ಮದುವೆ ಮಾಡಿದ್ರು, ಆಮೇಲೆ ಆತ ಬರೋದು ಕಡಿಮೆ ಆಯಿತು. ಯಾವಾಗೋ ತಿಳಿದಾಗ ಬರುತ್ತಿದ್ದ. ಪ್ರೀತಿಸುವಾಗ ಇದ್ದ ಪ್ರೀತಿ ಇವಾಗ ತೋರಿಸುತ್ತಿರಲ್ಲ. ನಮ್ಮ ಮನೆಯಲ್ಲಿಯೂ ತಂದೆಗೆ ನನ್ನ ಮೇಲೆ ಏನು ಸಿಟ್ಟು ಏನೋ ಗೊತ್ತಿಲ್ಲ. ಸ್ವಲ್ಪ ಜಗಳ ಮಾಡುತ್ತಿದ್ದ. ನನಗೂ ಬೈಸಿಕೊಂಡು ಬೈಸಿಕೊಂಡು ಸಾಕಾಗಿತ್ತು. ನನ್ನ ಮನೇಲಿ ಬಿಡೋಕೆ ಅಂತ ಕೊಟ್ಟಿರೋ ಹಣದಲ್ಲಿ ಸ್ವಲ್ಪ ಖರ್ಚು ಮಾಡಿ ದೇವರು ಕಟ್ಟಿದರು. ಉಳಿದ್ದನ್ನು ಅವರೇ ಉಳಿಸಿಕೊಂಡಿದ್ರು, ಅದಕ್ಕೆ ಆ ರೊಕ್ಕ ಕೋಡ್ರಿ ಸುಮ್ನೆ ನನ್ನ ಜೀವನಕ್ಕೆ ಆಧಾರ ಆಗುತ್ತೆ ಅಂತ ಕೇಳಿದೆ. ಅದಕ್ಕೆ ತಮ್ಮ ತಂದೆ ವಿರೋಧ ತೋರಿಸಿದರು. ಮನೆ ಬಿಟ್ಟು ಹೋಗು ಅಂತೆಲ್ಲ ಜಗಳ ಮಾಡಿ ಹೊರಗೆ ಹಾಕಿದರೆ ಪ್ರೀತಿಸಿದ ಹುಡುಗನು ಇವಾಗ ನನ್ನ ಹತ್ರ ಬರಲ್ಲಾ. ನಾನೊಬ್ಬಳೇ ಜೀವನ ಮಾಡುದ್ದಿದ್ದೇನೆ. ದೇವರು ನನಗೆ ಮಕ್ಕಳನ್ನು ಕೊಡಲಿಲ್ಲ. ನಾನೇ ಕೂಲಿ ಕೆಲಸ ಮಾಡಿಕೊಂಡು ಬಾಡಿಗೆ ಮನೆಯಲ್ಲಿ ಬದುಕುತ್ತಿದ್ದೇನೆ. ನನ್ನ ಮನೆಲಿ ಬಿಟ್ಟಿರೀ ನನ್ನ ಭಾಗದ್ದು ಆಸ್ತಿಕೊಡ್ರಿ ಎಂದು ಕೇಳನಾಂದ್ರೆ, ಆಸ್ತಿನೂ ಏನೂ ಇಲ್ಲ. ನಾನು ಪ್ರೀತಿ ಮಾಡಿದ್ದು ತಪ್ಪು, ಅದರಲ್ಲೂ ಮೇಲ್‌ಜಾತಿ ಜನರಲ್ಲಿ ಪ್ರೀತಿಸಿ ದೊಡ್ಡ ತಪ್ಪು ಮಾಡಿನಿ ಅನಿಸುತ್ತಿದೆ. ಈ ಕಡೆ ಪ್ರೀತಿಸಿದ ಹುಡುಗನೂ ಕೈಹಿಡಿಯದೇ ಹುಟ್ಟಿಸಿದ ತಂದೆ – ತಾಯಿನೂ ಕೈ ಹಿಡಿಯದೇ ಬೀದಿನಾಯಿಯ ಬದುಕಾಗಿದೆ. ಸರ್ಕಾರದ ಸೌಲಭ್ಯ ಪಡೆಯಾಕೆ ನನ್ನ ಹೆಸರು ಪಟ್ಟಿಯಲ್ಲಿಯೂ ಇಲ್ಲ. ಆದರೆ ದೇವದಾಸಿ ಅನ್ನೋ ಪಟ್ಟ ಕಟ್ಟಿಕೊಂಡು ಬದುಕುತ್ತಿದ್ದೇನೆ. ಹೇಗಾದ್ರು ಮಾಡಿ ನನ್ನ ಹೆಸರು ಪಟ್ಟಿಯಲ್ಲಿ ಸೇರೋ ಹಾಗೆ ಮಾಡಿ ಎಂದು ಹೇಳಿದಳು.

**ಗಂಗೋತ್ರಿ, ವಯಸ್ಸು–೪೫ (ಎಸ್ ಸಿ)**

ನಾವು ತಂದೆ–ತಾಯಿಯವರಿಗೆ ನಾವು ಇಬ್ಬರು ಹೆಣ್ಣುಮಕ್ಕಳು. ನಮ್ಮ ಅಮ್ಮ ನಾನು ಚಿಕ್ಕವಳು ಇರೋವಾಗಲೇ ಸತ್ತೋದ್ರು. ನನಗೆ ಆಗ ಒಂದು ವರ್ಷದ ಮಗುವಾಗಿದ್ದೆ ಎಂದು ನಮ್ಮ ಅವ್ವ ಹೇಳುತ್ತಿದ್ದಳು. ನಮ್ಮ ಅಕ್ಕನಿಗೆ ಬಾಲ್ಯವಿವಾಹ ಮಾಡಲಾಗಿತ್ತು. ಆಕೆ ಋತುಮತಿಯಾದ ನಂತರ ಗಂಡನ ಮನೆಗೆ ಕಳುಹಿಸಿದರು. ಆಗ ಮನೆಯಲ್ಲಿ ನಾನು, ಅಜ್ಜಿ ಮತ್ತು ನಮ್ಮ ತಂದೆ ಅಷ್ಟೇ ಇದ್ದೆವು.

ನಮ್ಮ ತಂದೆಯ ತಮ್ಮ ಅಂದರೆ ನಮ್ಮ ಚಿಕ್ಕಪ್ಪ ಚಿಕ್ಕಮ್ಮ ನಮ್ಮನ್ನು ನೋಡಿಕೊಂಡಿದ್ದರು. ನಮ್ಮ ಚಿಕ್ಕಪ್ಪನಿಗೆ ಸರ್ಕಾರಿ ನೌಕರಿ ಇತ್ತು. ಅನಿವಾರ್ಯವಾಗಿ ಬೇರೆ ಊರಿಗೆ ಹೋದರು. ನನಗೆ ಸುಮಾರು ೧೨-೧೩ನೇ ವಯಸ್ಸಿನಲ್ಲಿ ಋತುಮತಿಯಾದೆ. ಆಗ ತಂದೆ ಮತ್ತು ಅಜ್ಜಿಯನ್ನು ನೋಡಿಕೊಳ್ಳಲು ಯಾರೂ ಇಲ್ಲದಿದ್ದ ಕಾರಣ ಮತ್ತು ವಂಶ ಬೆಳವಣಿಗೆ ಎಂದೆಲ್ಲಾ ಆಲೋಚಿಸಿ ನನ್ನ ದೇವದಾಸಿ ಮಾಡಬೇಕು ಅಂತ ನಮ್ಮ ತಂದೆಗೆ ಊರಿನ ಜನ ಹೇಳಿದರು. ಇದಕ್ಕೆ ನಮ್ಮ ಬಸವರಾಜ ಚಿಕ್ಕಪ್ಪ ಒಪ್ಪಲಿಲ್ಲ. ಈ ಪದ್ಧತಿ ಒಳ್ಳೆದಲ್ಲ, ಮುಂದೆ ತುಂಬ ಕಷ್ಟವಾಗುತ್ತದೆ ಎಂದೆಲ್ಲಾ ಹೇಳಿದರು. ಆಗ ನಮ್ಮ ತಂದೆ ನಿನ್ನ ಮಗನ್ನ ನನ್ನ ಬಳಿ ಬೀಡು ನನ್ನ ನೋಡಿಕೊಳ್ಳುತ್ತಾರೆ. ನನ್ನ ಮಗಳನ್ನು ಮದುವೆ ಮಾಡಿ ಕೊಡುತ್ತೇನೆ ಎಂದು ಹೇಳಿದರು. ಆಗ ಇನ್ನೂ ನಮ್ಮ ತಮ್ಮೂರು ಸಣ್ಣೋರು ಇದ್ದರು, ತಂದೆ – ತಾಯಿನ ಬಿಟ್ಟು ಇರುತ್ತಿರಲಿಲ್ಲ. ಹಾಗಾಗಿ ನನ್ನ ತಂದೆಯನ್ನು ನೋಡಿಕೊಳ್ಳುವ ಸಲುವಾಗಿಯೇ ನನ್ನ ಮನೆತನಕ್ಕೆ ಬಿಟ್ಟಿದ್ದಾರೆ. ಆ ಕಾಲದ ವತ್ತಿನಲ್ಲಿ ನಮ್ಮೂರಲ್ಲಿ ಮನೆಗೊಬ್ಬ ದೇವದಾಸಿಯರನ್ನು ಬಿಟ್ಟಾರ. ಹಾಗೆ ನೋಡೋದಾದರೆ ನಮ್ಮ ಎರಡು ಕುಟುಂಬದಲ್ಲಿಯೇ ಯಾರೂ ಇರಲಿಲ್ಲ. ವಿಧಿ ನನ್ನ ಮೇಲೆ ಆಟ ಆಡಿದೆ ಅಂದುಕೋಬೇಕು. ಈಗ ಒಟ್ಟು ನಮ್ಮೂರಗ ೬೭ ಜನ ಬರಿ ಮಾದಿಗರಲ್ಲೇ ಇದ್ದಾರೆ.

ದೇವರು ಕಟ್ಟಿದಾಗ ನನಗೆ ಇನ್ನೂ ೧೨-೧೩ ವರ್ಷ ವಸ್ಸಿತ್ತು. ನನ್ನ ಕೊರಳಲ್ಲಿ ತಾಳಿ ನೋಡಿ ಕೇರಿಯಲ್ಲಿನ ನನ್ನ ಓರೆಯ ಗೆಳೆಯತಿಯರು ನನ್ನ ನೋಡಿ ಅಯ್ಯಯ್ಯೋ... ಗೌರಿಗೆ ಮದುವೆ ಆಗಿದೆ, ಆದರೆ ಗಂಡ ಇಲ್ಲ ಅಂತೆಲ್ಲ ಗೇಲಿ ಮಾಡಿ ನಗುತ್ತಿದ್ದರು. ನಾನು ಓಡೋಡಿ ಬಂದು ನಮ್ಮ ಅಜ್ಜಿಗೆ ಹೇಳಿ ಆಳುತ್ತಿದ್ದೇ. ಹೀಗೆ ಕಾಲಾಂತರದಲ್ಲಿ ಲಿಂಗಾಯಿತ ಸಮುದಾಯದ ವ್ಯಕ್ತಿ ನನ್ನೊಂದಿಗೆ ಸಂಬಂಧ ಹೊಂದಿದ. ಆದರೆ ಆತನು ನಮ್ಮ ಮನೆಯಲ್ಲಿ ನೀರು ಸಹ ಕುಡಿಯುತ್ತಿರಲಿಲ್ಲ. ನಾನು ಏನೋ ಬಿಡು ಅಂತ ಸುಮ್ಮನಿದ್ದೆ. ಒಂದು ದಿನ ಗೊತ್ತಾಯಿತು. ಅವರು ನಮಗಿಂತ ಬಹಳ ದೊಡ್ಡ ಜಾತಿಯವರು ಅಂತ. ಹೀಗೆ ದಿನ ಕಳೆದು ನಾನು ಗರ್ಭಿಣಿಯಾದೆ. ಈ ವಿಷಯ ನಮ್ಮ ತಂದೆ ಮತ್ತು ಸಂಬಂಧಿಕರಿಗೆ ತಿಳಿಸಿದೆ. ಹಾಗೆಯೇ ಆತನಿಗೂ ಹೇಳಿದೆ. ಆದರೆ ಸ್ವಲ್ಪನೂ ಸಂತೋಷಪಡಲಿಲ್ಲ. ಹೀಗೆ ೪-೫ ತಿಂಗಳು ಗರ್ಭಿಣಿಯಾದೆ. ಅಷ್ಟರಲ್ಲೇ ಆತ ನನ್ನನ್ನು ಬಿಟ್ಟೋದ. ನಾನು ಕಾದು ಕಾದು ಸಾಕಾಯಿತು. ಕೊನೆಗೆ ನಾನು ಒಂದು ಹೆಣ್ಣು ಮಗುವಿಗೆ ಜನ್ಮ ನೀಡಿದೆ. ಹೀಗೆ ಮಗುವಿಗೆ ೨-೩ ವರ್ಷ ತುಂಬಿದವು. ನಂತರ ನನ್ನ ಬಳಿ ಇನ್ನೊಬ್ಬ ವ್ಯಕ್ತಿ ಬಂದ. ಆತನು ಅಷ್ಟೇ. ನಂತರ ನಾನು ಗಂಡುವಿಗೆ ಜನ್ಮ ನೀಡಿದೆ. ಆಮೇಲೆ ಕೇರಿಯ ಮಂದಿಯ ಮಾತುಗಳನ್ನು ಕೇಳಿಸಿಕೊಂಡೆ. ಅದೆನೆಂದರೆ ಈ ಗಂಡಸರ ಬುದ್ಧಿನೇ ಇಷ್ಟೇ, ಅವರ ಆಸೆ ತೀರಿಸಿಕೊಳ್ಳೋಕೆ ಬರುತ್ತಾರೆ. ಇವಳಿಗೆ ನಿಂತು ಕೂಡಲೇ ಬಿಟ್ಟೊಗುತ್ತಾರೆ. ಈ ಹೆಣ್ಮಕ್ಕಳ ಕಷ್ಟನೇ ನೋಡಕ ಆಗಲ್ಲೆಂದು. ಆಗ ನಾನು ಆಲೋಚನೆ ಮಾಡಿ ಒಂದು ನಿರ್ಧಾರಕ್ಕೆ ಬಂದೆ, ಇನ್ನು ಮುಂದೆ ನಾನು ಯಾರನ್ನು ಕರೆದುಕೊಳ್ಳಬಾರದು ಎಂದು.

ಎಲ್ಲರಂತೆ ನನಗೂ ಮದುವೆಯಾಗಿದ್ದರೆ ತವರು ಮನೆಗೆ ಬಂದು ಬಾಣಂತನ ಮುಗಿಸಿಕೊಂಡು ಹೋಗುತ್ತಿದ್ದೆ. ನನ್ನ ಜೀವನ ಗರ್ಭಿಣಿ ಮಾಡಿದವನ ಪ್ರೀತಿಯು, ಆರೈಕೆಯು ಇಲ್ಲದೆ ಈ ಕಡೆ ತವರಿನ ಆರೈಕೆಯು ಇಲ್ಲದೆ, ನರಕ ಜೀವನವೇ ದೇವದಾಸಿ ಜೀವನವಾಗಿದೆ. ನಮ್ಮ ಅಜ್ಜಿಗೆ ಕಣ್ಣುಗಳು ಕಾಣುತ್ತಿರಲಿಲ್ಲ. ಅಂತೋರ ಬಳಿ ನನ್ನ ಮಕ್ಕಳನ್ನು ಬಿಟ್ಟು ನಾನು ಕೂಲಿ ಕೆಲಸಕ್ಕೆ ಹೋಗುತ್ತಿದ್ದೆ. ಗೋಡೆ ಕಟ್ಟುವ ಕೆಲಸ, ಗಣಿ ಕೂಲಿ, ಕಾರ್ಖಾನೆಯಲ್ಲಿ ಕೂಲಿ ಮಾಡಿ ಮನೆಯನ್ನು ನಿಭಾಯಿಸುತ್ತಿದ್ದೆ. ಒಂದೊಂದು ದಿನ ನನಗೆ ಜ್ವರ ಬಂದಿದ್ದರೂ ಹಾಗೆ ಕೂಲಿಗೆ ಹೋಗುತ್ತಿದ್ದೆ. ಮನೆಯಲ್ಲಿ ಅಜ್ಜಿ, ವಯಸ್ಸಾದ ತಂದೆ ಮತ್ತು ಇಬ್ಬರು ಮಕ್ಕಳನ್ನು ಸಾಕುವ ಹೊರೆ ನನ್ನ ಮೇಲೆ ಇತ್ತು. ಜಾತ್ರೆ–ಪರ್ಸಿ, ಶುಭ ಸಮಾರಂಭ ಇಂತಹ ಯಾವುದೇ ಸಂತೋಷದ ಆಚರಣೆಗಳಲ್ಲಿ ಭಾಗಿಯಾಗಿರುವುದು ಸುಖ ಸಂತೋಷದಿಂದ ಇರುವ ದಿನಗಳೇ ನನ್ನ ಜೀವನದಲ್ಲಿ ಇಲ್ಲ. ತಂದೆಯಿಂದ ಬಂದಿರುವ ಆಸ್ತಿಯಂತು ಮೊದಲೇ ಇಲ್ಲ. ಏನೋ ಮನೆ ಮಾತ್ರ ಇತ್ತು. ಅದು ಮಳೆಗೆ ಬಿದ್ದೊತು. ನನ್ನ ಹೆಸರಿಗೆ ಒಂದು ಜನತಾಮನೆ ಬಂತು. ಆದರೆ ಮೊದಲು ಕಟ್ಟಿಸಿಕೊಳ್ಳಬೇಕು. ಆಮೇಲೆ ಆ ಬಿಲ್‌ನ್ನು ಕಳಿಸಿದರೆ ಅದನ್ನು ಪಾಸ್ ಮಾಡಿ ದುಡ್ಡು ಕೊಡುತ್ತಿದ್ದರು. ಹೀಗೆ ಹಂತ ಹಂತವಾಗಿ ಬಿಲ್ ಕೊಡಬೇಕಾಗಿತ್ತು. ಮೊದಲೇ ಗಂಡು ದಿಕ್ಕಿಲ್ಲದ ನನ್ನ ಮನೆಯಲ್ಲಿ ಮನೆಕಟ್ಟಲು ನನಗೆ ಆಗಲಿಲ್ಲ. ಯಾರನ್ನಾದರೂ ಸಾಲ ಕೇಳಿದರೆ ಅದೂ ಕೂಡ ಕೊಡಲ್ಲ. ಹೆಣ್ಣು ಮಗಳು ಸಾಲ ಹೇಗ್ ತೀರಿಸುತ್ತಾಳೆ ಎಂದು ಯಾರೂ ಸಾಲ ನೀಡಲಿಲ್ಲ. ಹೀಗೆ ಮೂರು ಸರಿ ಮನೆ ಬಂದರೂ ಕಟ್ಟಿಕೊಳ್ಳಲು ಆಗಲಿಲ್ಲ. ಹೇಗೊ ಹಾಗೆ ಹೀಗೆ ಮಾಡಿ ಸಾಲ ತೆಗೆದುಕೊಂಡೆ. ಮನೆಕಟ್ಟಿ ಬಾಡಿಗೆ ಕೊಟ್ಟು ನಿಮ್ಮ ಸಾಲ ತೀರಿಸುತ್ತೇನೆಂದು ಹೇಳಿದೆ. ಹಾಗಾಗಿ ಅವರು ಒಪ್ಪಿಕೊಂಡರು. ಅಂತೂ ಇಂತೂ ಜನತಾ ಮನೆ ಕಟ್ಟಿಸಿದೆ. ೨ – ೩ ವರ್ಷಗಳ ಕಾಲ ನಾನು ಗುಡಿಸಲಲ್ಲೇ ಇದ್ದು, ಮನೆಯನ್ನು ಬಾಡಿಗೆ ಕೊಟ್ಟು ಸಾಲ ತೀರಿಸಿದೆ. ಕಾರಣ ಸರ್ಕಾರ ನೀಡಿರುವ ಹಣದಲ್ಲಿ ಮನೆ ಪೂರ್ಣವಾಗಿ ಕಟ್ಟಿಕೊಳ್ಳಲು ಆಗಲಿಲ್ಲ. ಹಾಗಾಗಿ ಮತ್ತೆ ಸಾಲ ಮಾಡಿದ್ದೆ. ನನ್ನ ತಂದೆ ಕೂಡ ತೀರಿಕೊಂಡರು. ಆವಾಗ ನಾನು ನನ್ನ ಇಬ್ಬರು ಮಕ್ಕಳು ಅಷ್ಟೇ ಇದ್ದೇವು. ಕೇರಿಯ ಹಿರಿಯ ದೇವದಾಸಿ ಮಹಿಳೆಯರು ನೀನು ಗಂಡು ದಿಕ್ಕಿಲ್ಲದ ಮನೆಯಲ್ಲಿದ್ದಿಯಾ ಎಲ್ಲಾ ಗಂಡಸರ ಕಣ್ಣು ನಿನ್ನ ಮನೆ ಮೇಲೆ ಬೀಳುತ್ತೇ ಅದಕ್ಕೆ ನೀನು ಮೊದಲು ಯಾರನ್ನಾದರೂ ಇಟ್ಟುಕೋ ಎಂದರೂ. ನನಗೆ ಅದೆಲ್ಲ ಇಷ್ಟವಿರಲಿಲ್ಲ. ಇದನ್ನೆಲ್ಲಾ ವಿರೋಧಿಸಿದೆ. ಹಾಗೆ ಕೆಲ ದಿನಗಳಲ್ಲಿ ಆ ದೇವದಾಸಿ ಮಾತುಗಳನ್ನು ಗಮನಿಸಿದೆ. ಹೌದು ಕಂಡ ಗಂಡಸರ ಕಣ್ಣು ನನ್ನ ಮೇಲೆ ಇತ್ತು. ಯಾರಾದರೂ ಒಬ್ಬ ನನ್ನ ಹತ್ರ ಇದ್ದರೆ ಉತ್ತಮ ಅನ್ನಿಸಿತು. ಒಂದು ದಿನ ನನ್ನ ತಾಯಿಯ ತವರಿನಿಂದ ಮಾವನಾಗುವ ವ್ಯಕ್ತಿ ಬಂದು, ನಾನು ನಿನ್ನು ಮತ್ತು ನಿನ್ನಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳುತ್ತೇನೆ ಎಂದೆಲ್ಲಾ ಪ್ರೀತಿಯಿಂದ ಮಾತಾಡಿದರು. ನಾನು ಕೂಡ ಸರಿ ಎಂದು ಹೇಳಿ ಕರೆದುಕೊಂಡಿದ್ದೆ. ಇವರಿಂದ ಆತನ ಹೆಂಡತಿ ಬಂದು ನನ್ನ ಬಳಿ ತುಂಬ ಜಗಳವಾಡಿದಳು. ಆತನು ಹೆಚ್ಚಾಗಿ ಕುಡಿಯುತ್ತಿದ್ದ. ನನಗೆ ಯಾವುದೇ ರೀತಿಯ ಆರ್ಥಿಕ ಸಹಾಯ ಮಾಡಲಿಲ್ಲ. ಮೊದಲೆ ಅವರು ಬಡವರಾಗಿದ್ದರು. ನಾನು ಹಾಗೆ ಇರಲಿ ಬಿಡು, ಕಂಡೋರು ಕಣ್‌ಗೆ ಬಲಿಯಾಗುವುದು ತಪ್ಪುತ್ತದೆ ಅಂತ ಆತನನ್ನು ನಾನೇ ನೋಡಿಕೊಳ್ಳುತ್ತಿದ್ದೆ. ಕುಡಿಯಲು, ತಿನ್ನಲು ನಾನೇ ದುಡ್ಡು ಕೊಡುತ್ತಿದ್ದೆ.

ಹೀಗೆ ಒಂದು ದಿನ ನನ್ನ ಸಂಬಂಧಿಕರೆಲ್ಲರೂ ನನ್ನನ್ನು ಬೈದರು. ಆತನಿಗೆ ಎದುರಿಟ್ಟು ಇಟ್ಟುಕೊಳ್ಳೋದು ನಿನೆಗೇನು ಚಂದ ಕಂಡೈತಿ ಎಂದು, ಆತನ ಹೆಂಡತಿ ಕೂಡ ನನ್ನ ಪತ್ರ ಮತ್ತೆ ಬಂದು ಜಗಳ ಹಾಡಿ ಮನೆ ಹಾಳು ಮಾಡುತ್ತಿ ಅಂತೆಲ್ಲ ಬೈದಳು. ಆತ ನನಗೆ ಒಂದು ರೂಪಾಯಿನೂ ಕೊಟ್ಟಿಲ್ಲ. ನನ್ನ ಮಕ್ಕಳಿಗೆ ಒಂದು ಪಪ್ಪರ್‌ಮೆಂಟ್(ಚಾಕಲೇಟ್) ಕೂಡ ಕೊಟ್ಟಿಲ್ಲ. ಸುಮ್ಮನೆ ಯಾಕೆ ಬೀಡು ಅಂತ ನೀನು ಇನ್ನೂ ಮೇಲೆ ಬರಬೇಡ ಅಂತ ಹೇಳಿದೆ. ಹಾಗೆ ಬರುತ್ತಿದ್ದ. ಒಂದು ದಿನ ಬರಬೇಡ ಎಂದಿದ್ದಕ್ಕೆ ಇನ್ಯಾರನ್ನೂ ಇಟ್ಟುಕೊಂಡಿಯಾ ಅದಕ್ಕೆ ನನ್ನ ಬರಬೇಡ ಅಂತೆಯಾ ಅಂತೆಲ್ಲಾ ಅಂದು ನನ್ನ ಚೆನ್ನಾಗಿ ಬಡಿದ. ಕೇರಿಯ ಜನರೆಲ್ಲಾ ಸೇರಿ ಆತನಿಗೆ ತಣ್ಣೀರು ಎತ್ತಿ, ಆ ಹುಡುಗಿ ಇಷ್ಟು ದಿನ ಇದ್ದರೂ ಒಂದು ದಿನನೂ ಬೈಲಿಗೆ ಬಂದಿಲ್ಲ. ಗಂಡುಳ್ಳ ಹೆಂಡತಿಯಾಂಗ ಇದ್ದಳು. ನೀನು ಬಂದು ಇಷ್ಟೆಲ್ಲಾ ಆಯಿತು ಅಂತೆಲ್ಲಾ ಬೈದು ಬಿಡಿಸಿದರು.

ನನ್ನ ಮಕ್ಕಳು ಕೂಡ ಕೈಬಂದರೂ ಹೆಣ್ಣು ಮಗಳು ೧೦ನೆಯ ಓದಿದಳು. ಮುಂದೆ ಓದಿಸೋಕೆ ನನಗೆ ಆಗಲಿಲ್ಲ. ಅದು ಬೇರೆ ಊರಿಗೆ ಕಳುಹಿಸಬೇಕಿತ್ತು. ನನ್ನ ಮಕ್ಕಳನ್ನು ಶಾಲೆಯಲ್ಲಿ ನಮ್ಮ ಅಕ್ಕನ ಗಂಡನ ಹೆಂಸರನ್ನು ಬರೆಸಿನಿ. ದೇವದಾಸಿ ಮಕ್ಕಳು ಅಂದ್ರೆ ಅವಮಾನ ಆಗುತ್ತೆ ಅಂತ. ತಂದೆ ಹೆಸರು ಬರೆಸಿಲ್ಲ ಅಂತ ತಂದೆ ಇಲ್ಲದೇ ಹುಟ್ಟಿದೆಯಾ ಅಂತೆಲ್ಲಾ ಪಕ್ಕದ ಮನೆಯ ಹುಡಿಗಿಗೆ ಅವಮಾನ ಆಗಿತ್ತು. ಅದಕ್ಕೆ ನಾನು ನಮ್ಮ ಅಕ್ಕನ ಗಂಡನ ಹೆಸರನ್ನು ತಂದೆ ಅಂತ ಬರೆಸಿನಿ. ಮಗನನ್ನೂ ಓದಿಸಬೇಕು ಅಂತ ಬಹಳ ಆಸೆ ಇದೆ. ಆದರೆ ದುಡಿದು ತಿನ್ನುವ ಹಣೆ ಬರಹದಲ್ಲಿ ಖರ್ಚು ಮಾಡಿಸಿ ಓದಿಸುವ ಶಕ್ತಿ ನನ್ನಲ್ಲಿ ಇಲ್ಲ. ಅವನೇ ರಜೆ ದಿನಗಳಲ್ಲಿ ಕೂಲಿ ಮಾಡಿ ಹಾಗೆ ಹೀಗೆ ಬಳ್ಳಾರಿಗೆ ೧೨ನೇದು ಓದುತ್ತಿದ್ದಾನೆ. ಮಗಳ ಮದುವೆಗೆ ತುಂಬ ಕಷ್ಟ ಆಯಿತು. ದೇವದಾಸಿ ಮಗಳು ಅಂತ ಯಾರೂ ಮದುವೆ ಮಾಡಿಕೊಳ್ಳಲು ಮನಸ್ಸು ಮಾಡಲಿಲ್ಲ. ಇವಾಗೆ ಚಿಕ್ಕವಯಸ್ಸಲೇ ಮದುವೆ ಮಾಡಿದ್ರೆ ಆಯಿತು. ವಯಸ್ಸಾದರೆ ವರದಕ್ಷಿಣೆ ಕೊಟ್ಟು ಮಾಡಿ ಕೊಡುವುದು ನನ್ನ ಕೈಯಲ್ಲಿ ಆಗುವುದಿಲ್ಲ ಅಂತ ೧೦ನೇದು ಮಗಿದು ಕೂಡ್ಲೆ ವರ ನೋಡಕತ್ತಿದೆ. ೪ – ೫ ಸಂಬಂಧ ಬಂದ್ರು, ದೇವದಾಸಿ ಮಗಳು ಬೇಡ ಅಂತ ಬಿಟ್ಟರು. ದೇವದಾಸಿ ಕುಟುಂಬದವರು ಬಂದರು ಕೊಟ್ಟು ನಡೆ ಅಂದು ಬಿಟ್ಟೆ. ಇನ್ನೂ ಮದುವೇ ಸಾಲ ಹಾಗೆ ಉಳಿದಿದೆ. ಈಗಲೂ ದಿನಕೂಲಿಗೆ ಹೋಗುತ್ತಿದ್ದೇನೆ. ಹೊಟ್ಟೆ ಬಟ್ಟೆ ಆರೋಗ್ಯಕ್ಕೆ ಜೀವನ ನಡೆಸುವುದು ಕಷ್ಟವಾಗಿದೆ. ಸರ್ಕಾರ ನಮ್ಮ ಮಕ್ಕಳಿಗೆ ಏನಾದ್ರು ಮಾಡ್ಲಿ.

**ಅಶ್ವಿನಿ, ವಯಸ್ಸು–೪೬ (ಎಸ್ ಸಿ)**

ನಮ್ಮದು ತುಂಬು ಕುಟುಂಬ. ನಮ್ಮ ತಂದೆ – ತಾಯಿಗೆ ಮೂರು ಜನ ಗಂಡು ಮಕ್ಕಳು ಇಬ್ಬರು ಹೆಣ್ಣು ಮಕ್ಕಳು ಇದ್ದೀವಿ. ನನ್ನ ಅಕ್ಕಳಿಗೆ ಮದುವೆಯಾಯಿತು. ನನ್ನ ಅಣ್ಣಂದಿರಿಗೂ ಮದುವೆಯಾಯಿತು. ಇಷ್ಟೆಲ್ಲಾ ಇದ್ರು ನನ್ನ ಹುಲಿಗೆಮ್ಮ ದೇವರಿಗೆ ಮುತ್ತು ಕಟ್ಟುವ ಮೂಲಕ ದೇವಧಾಸಿ ಮಾಡಿದ್ದಾರೆ. ಕಾರಣ ನಮ್ಮ ಅಣ್ಣೊರು ಮುಪ್ಪಿನ ಕಾಲಕ್ಕೆ ನೋಡಿಕೊಳ್ಳಲ್ಲ. ಮತ್ತೆ ತಮ್ಮನನ್ನು ನೋಡಿಕೊಳ್ಳೊಕಂತ ಮನೆಯಲ್ಲಿ ಬಿಟ್ಟಾರ. ನನ್ನ ದೇವದಾಸಿಯಾಗಿ ಬಿಟ್ಟಾಗ ನನಗೆ

ತಿಳುವಳಿಕೆ ಇತ್ತು. ಆದರೆ ತಂದೆ ತಾಯಿಯ ಮಾತಿಗೆ ವಿರೋಧ ತೋರಿಸದೆ ವಿಧೇಯಳಾಗಿ ಈ ಪದ್ಧತಿಗೆ ಬಲಿಯಾಗಿನಿ.

ದೇವದಾಸಿಯಾಗಿ ನನಗೆ ಇಷ್ಟು ವರ್ಷ ಜೀವನ ನಡೆಸಿದರೂ ಒಬ್ಬೆ ಪುರುಷನ ಜೊತೆ ಸಂಬಂಧ ಹೊಂದಿನಿ. ನಮ್ಮೂರಲ್ಲಿ ಇಬ್ಬರು ಮೂವರು ವ್ಯಕ್ತಿಗಳನ್ನು ಜೀವನದಲ್ಲಿ ಪ್ರವೇಶ ಮಾಡಿಕೊಂಡು ಹಿಲಥವಳ ಜನ ದೇವದಾಸಿಯರಿದ್ದಾರೆ. ಆದರೆ ಅವರೆಲ್ಲರೂ ಬೇರೆ ಸಮುದಾಯದ ಉನ್ನತ ವರ್ಗದ ವ್ಯಕ್ತಿಗಳನ್ನು ಸಂಬಂಧ ಹೊಂದಿದ್ದಾರೆ. ನಾನು ನಮ್ಮ ಸಮುದಾಯದ ವ್ಯಕ್ತಿಯನ್ನು ಬಾಳಸಂಗಾತಿಯಾಗಿ ಮಾಡಿಕೊಂಡಿದ್ದಕ್ಕೆ ಆತ ನನ್ನನ್ನು ಬಿಟ್ಟು ಹೋಗಿಲ್ಲ ಅಂತನೂ ಹೇಳಬಹುದು. ಇವತ್ತಿಗೂ ಆತನೇ ಇದ್ದಾನೆ. ನನ್ನ ಅಷ್ಟೇನೂ ಆರ್ಥಿಕವಾಗಿ ಚೆನ್ನಾಗಿ ನೋಡಿಕೊಳ್ಳುವುದಿಲ್ಲ. ಕಾರಣ ಅವರು ಕೂಡ ಬಡವರಿದ್ದಾರೆ. ನನಗೆ ತಲೆಮೇಲೆ ಒಂದು ನೆರಳು ಇದ್ದಂತೆ ಇರಲಿ, ನನ್ನ ಮನೆಮೇಲೆ ಮತ್ತೊಬ್ಬ ಪುರುಷನ ಕಾಮದ ಕಣ್ಣು ಬೀಳದಂತೆ ಇರಬೇಕಂತ ಆತನ ಜೊತೆಯಲ್ಲಿ ಜೀವನ ಮಾಡುತ್ತಿದ್ದೇನೆ. ನಾನು ನಮ್ಮ ತಂದೆ ತಾಯಿ ಮತ್ತು ತಮ್ಮ ಅವನ ಹೆಂಡತಿ ಮಕ್ಕಳೊಂದಿಗೆ ಒಂದೇ ಮನೆಯಲ್ಲಿದ್ದೆವು. ನನ್ನ ತಮ್ಮನ ಹೆಂಡತಿಯು ನಮ್ಮಾತ(ಸಂಬಂಧ ಹೊಂದಿರುವ ಪುರುಷ) ಮನೆಗೆ ಬರುವುದಕ್ಕೆ ಚೂಚ್ಚೂ ಮಾತಿನಿಂದ ಅಂದಿದಕ್ಕೆ ನಾನು ನಮ್ಮ ತಂದೆ ತಾಯಿಯನ್ನು ಕರೆದುಕೊಂಡು ಬೇರೆ ಮನೆಯಲ್ಲಿ ಜೀವನ ಮಾಡಲು ಪ್ರಾರಂಭಿಸಿದೆ. ನನಗೆ ಒಬ್ಬಳು ಮಗಳು ಇದ್ದಾಳೆ.

ನಾನು ಜಿಂದಲ್ ಕಾರ್ಖಾನೆಯಲ್ಲಿ ಕೂಲಿ ಕೆಲಸಕ್ಕೆ ಹೋಗುತ್ತೇನೆ. ಅಲ್ಲಿ ನಾನು ದೇವದಾಸಿ ಅಂತ ಎಲ್ಲೂ ತೋರಿಸಿಕೊಂಡಿಲ್ಲ. ಏಕೆಂದರೆ ಅಲ್ಲಿ ಜನ ಸರಿಯಿಲ್ಲ. ಅವರು ನೋಡುವ ದೃಷ್ಟಿಯೇ ಬೇರೆಯಾಗಿರುತ್ತದೆ. ಮಂಗಳವಾರ, ಶುಕ್ರವಾರ, ಅಮವಾಸ್ಯೆ ಮತ್ತು ಹುಣ್ಣಿಮೆಗಳಲ್ಲಿ ಮಾತ್ರ ದೇವರ ಮುತ್ತು ಕೊರಳಿಗೆ ಧರಿಸುತ್ತೇನೆ. ಸಮಾಜ ಕಣ್ಣಿನಲ್ಲಿ ನಾವು ಕೀಳಾಗಿ ಕಾಣಬಾರದು ಅಂತ ಹೀಗೆ ಗಂಡುಳ್ಳ ಮದುವೆ ಆಗಿರುವ ಮಹಿಳೆಯರಂತೆ ಹೋಗುತ್ತೇವೆ. ನಮ್ಮೂರಲ್ಲಿನ ಊರೊಳಗಿನ ಮೇಲ್ಜಾತಿಯ ಹೆಣ್ಣುಮಕ್ಕಳು ಜಿಂದಲ್‌ಗೆ ಕೆಲಸಕ್ಕೆ ಅಂತ ಹೋದಲ್ಲಿ ಅಲ್ಲಿರುವ ವ್ಯಕ್ತಿಗಳೊಂದಿಗೆ ಸಂಬಂಧವನ್ನು ಇಟ್ಟುಕೊಂಡಿದ್ದಾರೆ. ಸಮಾಜ ಅವರನ್ನು ಮಾತ್ರ ಏನೂ ಅನ್ನೋದಿಲ್ಲ. ಅದೇ ನಾವು ಒಬ್ಬತನನ್ನ ಇಟ್ಟುಕೊಂಡು ಗಂಡುಳ್ಳ ಗರತಿಯಂತೆ ಇದ್ದರೂ ಕೂಡ, ಊರೊಳಗೆ ಮಾದಿಗ ದೇವದಾಸಿಯರಾದ ನಾವು ಓಡಾಡಿದರೆ, ಆಗ ಇವರು ಬಸವಿ, ಸೂಳೆ, ಲೇಸಿ ಎಂದು ಮಾತನಾಡುತ್ತಾರೆ. ಅಂದರೆ ಕೆಳಜಾತಿಯಲ್ಲಿ ಹುಟ್ಟಿರುವುದೇ ತಪ್ಪಾಗಿದೆ. ಅವರು ಮದುವೆಯಾಗಿ ಗಂಡನಿದ್ದರೂ ಸೂಳೆ ವ್ಯವಹಾರ ಮಾಡುತ್ತಾರೆ.

ಅಕ್ಕ ಪಕ್ಕದ ಊರಿನ ಜನರು ದೇವದಾಸಿ ಮಹಿಳೆಯರನ್ನು ಬ್ರೋಕರ್ ರೀತಿಯಲ್ಲಿ ಕಾಣುತ್ತಾರೆ. ನಮ್ಮ ಪಕ್ಕದ ಊರಲ್ಲಿ ಇತ್ತೀಚೆಗೆ ಹೆಣ್ಣ್ಮಕ್ಕಳನ್ನು ಮನೆತನಕ್ಕೆ ಬಿಟ್ಟಾರ ಅವರ ತಂದೆನೆ ಬಂದು ಹೇಳುತ್ತಾನೆ. "ನೋಡಮ್ಮ. ಮತ್ತೆ ನನ್ನ ಮಗಳಿಗೆ ಯಾರಾರಾ ಇದ್ರೇ, ನೌಕರಿ ಮಾಡೋರು" ಎಂದು. ನಾನೇ ಇಲ್ಲಿ ದೇವದಾಸಿ ಅಂತ ಗುರುತಿಸಿಕೊಳ್ಳದೇ ಜೀವನ ಮಾಡುತ್ತಿದ್ದೇನೆ. ಹೀಗೆ ನಾವು

ಆ ಪದ್ಧತಿಯಿಂದ ಹೊರಬಂದು ಜೀವನ ಮಾಡುತ್ತಿದ್ದರೂ ದೇವದಾಸಿ ಎಂಬ ಪಣೆಪಟ್ಟಿ ಕಟ್ಟಿರುವುದರಿಂದ ಅದನ್ನು ಅಳಿಸಾಕೋಕೆ(ನಿರ್ಮೂಲನೆ) ಆಗಲ್ಲ. ಅದಕ್ಕೆ ಈ ಪದ್ಧತಿ ಮಾಡಿರೊರನ್ನ ಇವಾಗ ಶಪಿಸಬೇಕೆನ್ನಿಸುತ್ತೇ. ಮುಂದಕ್ಕೆ ಏನಾದ್ರೂ ದೇವದಾಸಿ ಬಿಟ್ಟರೆ ಅವರಿಗೆ ಗಲ್ಲು ಶಿಕ್ಷೆ ಆಗಬೇಕು ಅಂತ ಗಟ್ಟಿಯಾಗಿ ಹೇಳುತ್ತೇನೆ. ಯಾಕಂದ್ರೆ ದಂಡ ಕಟ್ಟುತ್ತಾರೆ, ದೇವದಾಸಿ ಬಿಡುತ್ತಾರೆ. ಬಿಡೊರಿಗೆ ಏನೂ ನೋವಿಲ್ಲ. ಆಮೇಲೆ ಅವಳ ಜೀವನ ಕಷ್ಟ. ಅದಕ್ಕೆ ಸರ್ಕಾರ ಗಲ್ಲು ಶಿಕ್ಷೆ ಕೊಡೊ ಕಾನೂನು ತರಬೇಕು. ಇದೇ ನನ್ನ ಈ ಪದ್ಧತಿಯ ನಿರ್ಮೂಲನೆಯ ಮಾತು. ನಾವು ಇಷ್ಟು ದಿನ ಸಮಾಜದಿಂದ ಸೂಳೆ, ಬಸವಿ ಎಂಬ ಮಾತುಗಳು ಮತ್ತು ಕೆಳಜಾತಿಯಾಗಿ ಅಸ್ಪೃಶ್ಯತೆಯ ಜೊತೆ ಇಂತಹ ನೋವನ್ನು ಉಂಡಿವಿ. ಮುಂದಕ್ಕೆ ಈ ಪದ್ಧತಿ ಜೀವಂತವಾಗಿ ಇರಬಾರದು.

ಎಲ್ಲರೂ ಹೇಳುತ್ತಾರೆ, ನಿನ್ನ ಮಗಳು ಒಬ್ಬಾಕೆ ನಿನ್ನ ನೋಡುರು ಯಾರು ಅದಕ್ಕೆ ಆಕೆಯನ್ನು ಮನೆತನಕ್ಕೆ ಮಾಡು ಅಂತ. ದೇವರೇ ಬಂದು ಈ ಮಾತು ಹೇಳಿದರೂ ನಾನು ಬಿಡಲ್ಲ. ಇವಾಗ ಹುಡುಗನ್ನು ಹುಡುಕುತ್ತಿದ್ದೇನೆ. ಕೂಲಿಯ ಕಷ್ಟನೋ ನಷ್ಟನೋ, ಸಾಲನಾದ್ರು ಮಾಡಿ ಮದುವೆ ಮಾಡಿ ಕೊಡುತ್ತೇನೆ. ನನ್ನ ಮುಪ್ಪಿನ ಕಾಲಕ್ಕ ದೇವರ ಗುಡಿ ಇದ್ದೇ ಇವೇ, ಭಿಕ್ಷೆ ಬೇಡಿ ತಿನ್ನುತ್ತೇನೆ. ಆದರೆ ನನಿಂದಲೇ ಈ ಪದ್ಧತಿ ಕೊನೆಯಾಗಲಿ. ನಾನು ಪಟ್ಟಿರೋ ಕಷ್ಟ, ನನ್ನ ಮಗಳಿಗೆ ಬರಬಾರದು ಅಷ್ಟೇ. ಇವಗೇನು ಇದಿವಲ್ಲಾ ನಮ್ಮಂತ ದುರದೃಷ್ಟ ದೇವದಾಸಿ ಮಹಿಳೆಯರಿಗೆ ಮತ್ತು ಅವರ ಮಕ್ಕಳಿಗೆ ಸರ್ಕಾರ ಏನಾದ್ರೂ ಒಂದು ಶಾಶ್ವತ ದಾರಿ ಮಾಡಿಕೊಡಬೇಕು. ಇವಾಗ ಪ್ರೀತಿಸಿ ಮದುವೆ ಮಾಡಿಕೊಂಡು ಅವನು ಕೈಕೊಟ್ಟ ಮೇಲೆ ಮತ್ತೇ ದೇವರು ಕಟ್ಟಿಕೊಂಡು ಮನೇಲಿದ್ದಾರೆ. ಇಂತವೆಲ್ಲ ನಮ್ಮ ಜಾತಿಯಲ್ಲೇ ನಡೆಯುತ್ತವೆ. ಅದಕ್ಕೆ ಸರ್ಕಾರ ನಮ್ಮ ಮಕ್ಕಳಿಗೆ ಒಂದು ಒಳ್ಳೆ ಜೀವನಕ್ಕೆ ಆಧಾರವಾಗಿ ದಾರಿ ಮಾಡಬೇಕು.

**ಸರೋಜ: ವಯಸ್ಸು ೪೮ (ಎಸ್ ಸಿ)**

ನನ್ನ ಯಾವಾಗ ಮನೆಯಲ್ಲಿ ಬಿಟ್ಟಾರೋ ಗೊತ್ತಿಲ್ಲ. ನಮ್ಮ ದೊಡ್ಡಮ್ಮನ ಮಗಳನ್ನು ಬಿಟೋಕಂತ ಪೆನ್ನೊಬಳೇಶ್ವರ ದೇವರಿಗೆ ಹೋಗಿದ್ದಾರಂತೆ, ಆವಾಗ ನನಗೂ ಆ ದೇವರ ತಾಳಿಕಟ್ಟಿಕೊಂಡು ಬಂದರಾ ಅಂತ ಹೇಳಿದ್ದಷ್ಟೇ ನೆನಪು. ನನಗೆ ಬುದ್ಧಿ ತಿಳಿದಾಗಗಿಂತ ನಾನು ದೇವದಾಸಿ ಅಂತ ಗೊತ್ತಾಯಿತು. ನಾನು ದೇವದಾಸಿಯಾಗಿ ಅಂತ ಅಚ್ಚ ಲೂಚ್ಚ(ಕೆಟ್ಟ) ಕೆಲಸ ಮಾಡಿಲ್ಲಮ್ಮ. ನಮ್ಮ ಜನ ಒಬ್ಬತನ ಬಾಳಸಂಗಾತಿಯನ್ನು ಮಾಡಿಕೊಂಡಿನಿ. ನನಗೆ ೩ ಜನ ಮಕ್ಕಳು ಓದಲಿಲ್ಲಮ್ಮ. ಓದಿಸುವಷ್ಟು ಶಕ್ತಿನೂ ನನಗೆ ಇಲ್ಲ. ಹೊಲಗಳಲ್ಲಿ ಕೆಲಸಕ್ಕೆ, ಜಿನ್ಸ್ ಅಂಗಡಿಯಲ್ಲಿ ಕೆಲಸಕ್ಕೆ ಕಳುಹಿಸುತ್ತಿದ್ದೇನೆ. ಜೀವನ ನಡೆಯಬೇಕಲ್ಲಾ. ನನಗೆ ಅರಾಮಿರಲಿಲ್ಲ. ಎಲ್ಲ ತೋರಿಸಿದರೂ ನನಗೆ ಸರಿಯಾಗಲಿಲ್ಲ. ಇಲ್ಲೇ ಚರ್ಚ್ ಇತ್ತು, ಅಲ್ಲಿ ಒಂದು ದಿನ ಆದಿವಾರ ಹೋಗಿ ಪ್ರಯರ್ ಮಾಡಿಸಿಕೊಂಡು ಬಂದೆ. ಅವಗಿಂದ ನಾವೆಲ್ಲಾ ಚರ್ಚ್‌ಗೆ ಹೋಗುತ್ತಿದ್ದೆವೆ. ನಮ್ಮ ಮನೇಲಿ ಚರ್ಚ್‌ಗೆ ಹೋಗೋಕೆ ನಿಂತಾಗಿಂದ ಎಲ್ಲರಿಗೂ ನೆಮ್ಮದಿ, ಮನಸ್ಸಿಗೆ ಶಾಂತಿ ಸಿಕ್ಕಿದೆ. ನಾನು ಇವಾಗ ಯಾವ ದೇವರನ್ನು ಪೂಜೆ ಮಾಡಲ್ಲಾ. ನನಗೆ ಯೇಸಪ್ಪನೇ ಯಾಲ್ಲಾ. ಪೆನ್ನೊಬಳೇಶ್ವರ ದೇವರಿಗೆ ತಾಳಿಕಟ್ಟಿಸಿಕೊಂಡ ದೇವದಾಸಿಯಾಗಿದ್ದರೂ

ನಾನು ಅದರಲ್ಲಿ ಒಂದು ದಿನಾಲೂ ಜೀವನ ಮಾಡಿಲ್ಲ. ದೇವರು ಪೋಟೋ ಎಲ್ಲಾ ತೆಗೆದುಬಿಟ್ಟಿವಿ. ನಮ್ಮ ಯೇಸಪ್ಪ ಹೇಳುತ್ತಾನೆ, ವಿಗ್ರಹ ಪೂಜೆ ಮಾಡಬಾರದು. ಅವೆಲ್ಲಾ ಮನುಷ್ಯರೇ ಕೈಯಿಂದ ಮಾಡಿರೋದು. ಯಾವುದು ಶಾಶ್ವತ ಅಲ್ಲ, ಆತ್ಮಶುದ್ಧಿಯಾಗಿರಬೇಕು. ಆವಾಗಲೇ ಆತ್ಮರಕ್ಷಣೆಗೆ ಪರಲೋಕಕ್ಕೆ ದಾರಿ ಅಂತೆ. ಪ್ರತಿ ಆದಿವಾರ ಚರ್ಚ್‌ಗೆ ಹೋಗುತ್ತೇವೆ. ಅಲ್ಲಿ ದೇವರ ಸ್ತೋತ್ರ ಮಾಡ್ತಡುತ್ತೇವೆ. ಇವಾಗ ನಮ್ಮನೆಲಿ ಎಲ್ಲಾ ಚೆನ್ನಾಗಿ ಇದ್ದೀನಿ. ನನ್ನ ಮಕ್ಕಳು ದುಡಿತ್ತಾರೆ, ನಾನು ಮನೆಯಲ್ಲಿ ಇರುತ್ತೇನೆ. ನಮ್ಮ ಕೇರಿಯಲ್ಲಿ ೫ ಜನರನ್ನು ಪೆನ್ನೋಬಳೇಶ್ವರ ದೇವರಿಗೆ ತಾಳಿಕಟ್ಟುವ ಮೂಲಕ ದೇವದಾಸಿ ಬಿಟ್ಟಾರೆ. ನಾವೆಲ್ಲರೂ ಇವಾಗ ಆ ದೇವರ ಯಾವ ಕಾರ್ಯಗಳು ಮಾಡೋಲ್ಲಾ, ಚರ್ಚೆಗೆ ಹೋಗುತ್ತೇವೆ. ನಾವು ಪೂರ್ತಿ ಯೇಸಪ್ಪನ ಕಡಿಗೆ ಬಿದ್ದಿವಿ. ಅಂದರೆ ಅದರಲ್ಲಿ ದೀಕ್ಷೆ ಪಡೆದುಕೊಂಡಿವಿ. ಆವಾಗಾದ್ರೆ, ದೇವದಾಸಿ ಬಸವಿ ಅಂತ ನಮ್ಮ ಜನದ ಹೆಣ್ಣು ಮಕ್ಕಳನ್ನು ಕೇಳಾಗಿ ಕಾಣುತ್ತಿದ್ದರು. ಆದರೆ ನಾವು ಚರ್ಚ್‌ಗೆ ಹೋಗೋದಕ್ಕೆ ನಮ್ಮನ್ನೇನು ಆ ರೀತಿ ಕಾಣೋದಿಲ್ಲ. 'ಇಲ್ಲ ಬುಡು ಅವರು ಚರ್ಚ್‌ಗೆ ಹೋಗ್‌ತ್ತಾರೆ ಅಂತ ಹೇಳುತ್ತಾರೆ'. ಆದ್ರು ಮಕ್ಕಳ ಭವಿಷ್ಯದ ಒಂದೇ ಚಿಂತೆ. ಅವರಿಗೆ ಒಂದು ಕೆಲಸ ಅಂತ ಸಿಕ್ಕರೆ ಅವರ ಮುಂದಿನ ಜೀವನ ಅವರಿಗೆ ಆಗುತ್ತೇ. ಏನೂ ಆ ಯೇಸಪ್ಪ ಅವರಿಗೆ ನೋಡಿಕೊಳ್ಳಿ. ಸರ್ಕಾರ ಏನಾದರೂ ಮನಸ್ಸು ಮಾಡಿ ನಮ್ಮ ಮಕ್ಕಳಿಗೆ ಒಂದು ನೌಕರಿ ಕೊಡ್ಲಿ ಅಷ್ಟೇ ಸಾಕು. ನಮ್ಮದೆನೂ ಬಿಡು ಮುಗಿದೋದ ಕತೆ ಅಷ್ಟೇ.

**ಶಶಿಕಲಾ, ವಯಸ್ಸು-೬೦ (ಎಸ್ ಸಿ)**

ನನಗೆ ಮುದ್ರೆ ಹಾಕುವ ಮೂಲಕ ನನ್ನ ಮನೆತನಕ್ಕೆ ಬಿಟ್ಟಾರ. ಏನೋ ಅವಗ್ಗೆ ಯಾಕ ಬಿಟ್ಟಾರ ಗೊತ್ತಿಲ್ಲ. ನಮ್ಮ ತಾಯಿಗೆ ಕೂಡ ಮುದ್ರೆ ಹಾಕಿ ಮನೆಯಲ್ಲಿ ಬಿಟ್ಟಿದ್ದರು. ನನ್ನ ಮುದ್ರೆ ಹಾಕುವ ಕಾಲಕ್ಕಾಗಲೇ ಕಾನೂನು ಬಂದಿತ್ತು. ಊರೊಳಗಿರುವವರು ಮನೆಯಲ್ಲಿ ಮುದ್ರೆ ಹಾಕುವ ಕಾರ್ಯ ಮಾಡ್ರಿ ಅಂದರು. ನನ್ನ ಗುಡಿ ಕರೆದುಕೊಂಡು ಹೋಗದೆ ಮನೆಯಲ್ಲಿ ಮುದ್ರೆ ಕಾರ್ಯ ಮಾಡಿದರು. ಇಬ್ಬರು ಮಕ್ಕಳು ಮದುವೆ ಮಾಡುವಾಗ ದೇವದಾಸಿ ಮಗನಿಗೆ ಹೆಣ್ಣು ಕೊಡಲು ಕೆಲವು ಕುಟುಂಬಗಳು ಒಪ್ಪಲಿಲ್ಲ. ಹಾಗೆ ಹುಡುಕಿ ಹುಡುಕಿ ಮದುವೆ ಮಾಡೀನಿ.ಈಗ ಕೂಲಿ ಕೆಲಸ ಮಾಡುತ್ತಿದ್ದಾರೆ. ಇವಾಗ ನನಗೆ ಪಿಂಚಣಿ ಬರುತ್ತೇ ಅದರಲ್ಲೇ ಮುಪ್ಪಿನ ಜೀವನ ನಡೆಸುತ್ತೇನೆ. ಲೋನ್ ತಂಗಡಿನಿ ಒಂದು ಸಲ. ಅದನ್ನು ಮನೆ ಕಟ್ಟಿಕೊಳ್ಳೋಕೆ ಹಾಕಿಕೊಂಡೀನಿ. ಕೃಷಿ ಕೂಲಿಗೆ ಹೋಗುತ್ತೇನೆ. ಆವಾಗ ೧ ರೂಪಾಯಿ ಕೂಲಿಯಿಂದ ದುಡಿದಿದ್ದೇವೆ. ಈವಾಗ ೧೦೦ ರೂಪಾಯಿ ಅಥವಾ ೧೫೦ ರೂಪಾಯಿ ಕೂಲಿ ಇವಾಗ ಸಿಕ್ಕಿರೋದು. ನನ್ನ ಹತ್ತಿರ ಗೌಡ್ರತ ಇದ್ದ. ನಮ್ಮನೆಗೇನು ಊಟಗೀಟ ಮಾಡುತ್ತಿದ್ದಿಲ್ಲ. ಆತನ್ನು ನೆನಸಿಕೊಂಡ್ರೆ ಬೈಬೇಕನ್ನಿಸುತ್ತೇ. ಗಂಡಸು ಏನು ಅವರ ಆಸೆ ತಿರೋತನಕ ಅಷ್ಟೇ. ನಮ್ಮನ್ನು ಹೆಂಡತಿ ನೋಡಿದಾಗೆ ಯಾಂಗ ನೋಡುತ್ತಾರೆ. ಇಟ್ಟುಕೊಂಡಳನ್ನು ಎಷ್ಟು ನೋಡಕ್ಯಾಂತರ. ಏನು ಇವಾಗ ಇರುವ ನಮ್ಮ ಮಕ್ಕಳಿಗೆ ಯಾವುದಾರೂ ದಾರಿ ಮಾಡಿಕೊಡಬೇಕು. ಸರ್ಕಾರ ನಮ್ಮ ಕಡೆಗೆ ನೋಡಿದರೆ ಜೀವನ ಸರಿಯಾಗುತ್ತದೆ. ಸರ್ಕಾರ ನಮ್ಮಗೋಸ್ಕರ ಏನೇನು ಮಾಡುತ್ತಿದೆ ಸೌಲಭ್ಯಗಳು ಅಂತೆನೂ ಗೊತ್ತಿಲ್ಲ. ನಮಗೆ ಪಿಂಚಣಿ, ಲೋನ್ ಅಷ್ಟು

ತಗಂಡು ಮನೆಕಟ್ಟೀನಿ. ಬಂದ ಪಿಂಚಣಿಯಲ್ಲಿ ಮಕ್ಕಳು ಸ್ವಲ್ಪ ಕಸಿತಾರೆ. ಊಳಿದಿದ್ದರಲ್ಲಿ ಮನೆಯಲ್ಲಿ ಸ್ವಲ್ಪ ನಡೆಸಬೇಕು. ಮೊದಲು ಸರ್ವೆನಲ್ಲಿ ನಮ್ಮ ಊರಿನ ದೇವದಾಸಿಯರ ಹೆಸರೇ ಇರಲಿಲ್ಲ. ೨೫ ವರ್ಷ ಮೇಲಿದ್ದವರನ್ನು ೨೦೦೭-೦೮ರಲ್ಲಿ ಪಟ್ಟಿಯಲ್ಲಿ ಹೆಸರು ಸೇರಿಸಿಕೊಂಡರು. ಅವಾಗಿನಿಂದ ನಮಗೆ ಕೆಲವು ಸೌಲಭ್ಯ ಇದ್ದಾವಂತ ಗೊತ್ತಾಯಿತು. ಮೊದಲು ಯಾವ ಸೌಲಭ್ಯಗಳ ಕುರಿತು ಯಾವುದೇ ಮಾಹಿತಿ ಇದ್ದಿದಿಲ್ಲ. ಇನ್ನೂ ಪಟ್ಟಿಯಲ್ಲಿ ಹೆಸರು ಸೇರಿಲ್ಲದ ಅವರನ್ನು ಸೇರಿಸಬೇಕು. ದೇವದಾಸಿಯರದು ಜೀವನ ಕಷ್ಟ ಆಗಿದೆ. ಅದಕ್ಕೆ ನಮ್ಮ ಜೀವನ ಹಸನು ಮಾಡಬೇಕು.

ನಮ್ಮ ತಾಯಿ ನನ್ನ ದೇವದಾಸಿ ಮಾಡಿದ ತಪ್ಪಿಗೆ ನಾನು ಬಲಿಯಾಗಿ ನನ್ನ ಮಕ್ಕಳು ನಮ್ಮನ್ನು ಬೈಯುತ್ತಾರೆ. ನಮ್ಮ ಮಕ್ಕಳಿಗೆ ತಂದೆ ಯಾರು? ಹೆಸರೇನು? ಇಂಗೆಲ್ಲಾ ಕೇಳುತ್ತಾರೆ. ಮೊದಲು ನಿಮ್ಮನ್ನು ಸಾಯಿಸಬೇಕು ಅಂತ ಬೈಯುತ್ತಾರೆ. ಈ ಕಡೆ ಸಮಾಜ ಮತ್ತು ಕುಟುಂಬ ಎರಡು ಕಡೆಯಿಂದ ಮಾನಸಿಕ ಹಿಂಸೆಗೆ ಒಳಗಾಗಿದ್ದೇವೆ. ಇವಾಗ ನಮ್ಮ ಮಂದಿಗಾ ದೇವದಾಸಿಯರನ್ನು ಬಿಟ್ಟಿಲ್ಲಾ, ಕಡಿಮೆ ಆಗಿದೆ. ಮಾದಿಗರಲ್ಲಿ ಹೆಚ್ಚಾಗಿ ಇವಾಗ ಕೂಡ ದೇವದಾಸಿ ಬೀಡುತ್ತಾರೆ.

ದೇವದಾಸಿಯಾದರೂ ಮದುವೆ ಮಾಡಿಕೊಳ್ಳಲು ಸಮಾಜ ಅವಕಾಶ ನೀಡುವುದಿಲ್ಲ. ಬಾವಿಯೊಳಗಿರುವ ಕಪ್ಪೆ ನೀರು ಕುಡಿದಿಲ್ಲ ಎಂದು ಸುಮಾರು ನಂಬುತ್ತಾರೆ. ಹಾಗೇ ದೇವದಾಸಿಯಾಗಿ ಬಿಟ್ಟಿರುವ ಮಹಿಳೆಯನ್ನು ಅವಳು ಕನ್ಯೆಯ ರೀತಿಯಲ್ಲಿ ಯಾರೊಂದಿಗೆ ಸಂಬಂಧ ಹೊಂದದೇ ಇದ್ದರೂ ಕೂಡ ಅವಳು ಕೆಟ್ಟಿದ್ದಾಳೆಂದು ಸಮಾಜ ತಿಳಿಯುತ್ತದೆ. ಹಾಗಾಗಿ ಒಂದು ಸಾರಿ ದೇವದಾಸಿ ಆದ ನಂತರ ನಮಗೆ ಮದುವೆಗೆ ಅವಕಾಶನೇ ಇರುವುದಿಲ್ಲ.

**ಹೇಮಶ್ರೀ, ವಯಸ್ಸು-೩೯ (ಎಸ್ ಟಿ)**

ನಮ್ಮ ತಂದೆ - ತಾಯಿಗೆ ಏಳು ಜನ ಹೆಣ್ಣು ಮಕ್ಕಳು ಅದರಲ್ಲಿ ನಾನೇ ದೊಡ್ಡವಳು. ನಾನು ಬಿ.ಕಾಂ ೨ನೇ ವರ್ಷದವರೆಗೆ ಓದಿದ್ದೇನೆ. ಮುಂದೆ ಓದಲು ಸಾಧ್ಯವಾಗಲಿಲ್ಲ. ಯಲ್ಲಮ್ಮ ದೇವರು ಮೈಮೇಲೆ ಬರುವ ಕಾರಣಕ್ಕಾಗಿ ನಾನು ಈ ದೇವಿಯನ್ನು ಒತ್ತುಕೊಂಡೀನಿ. ಅಲ್ಲದೆಯೇ ಇನ್ನೊಬ್ಬ ತಂಗಿಯನ್ನು ಹುಲಿಗೆಮ್ಮ ದೇವರಿಗೆ ಬಿಟ್ಟಿದ್ದಾರೆ. ಇನ್ನೂ ಉಳಿದವರಿಗೆ ಮದುವೆನೇ ಆಗಿಲ್ಲ. ನಾನು ಯಾವ ಪುರುಷನನ್ನು ನನ್ನ ಜೀವನ ಪ್ರವೇಶ ಮಾಡಿಕೊಂಡಿಲ್ಲ. ಯಲ್ಲಮ್ಮನ ಸೇವೆಗಾಗಿ ನನ್ನನ್ನು ಬಿಟ್ಟಾರ, ನಾನು ಆಕೆಯ ಪೂಜೆಯ ಸೇವೆಯಲ್ಲಿ ತೊಡಗಿಕೊಂಡಿನಿ. ಅಲ್ಲದೆ ದೇವದಾಸಿಯರ ಕುರಿತಾಗಿ ಕಾಳಜಿವಹಿಸಿಕೊಂಡು ನನಗೆ ಆದಷ್ಟು ಸಮಾಜ ಸೇವೆ ಮಾಡಿಕೊಂಡು ಜೀವನ ನಡೆಸುತ್ತಿದ್ದೇನೆ. ನಿಜವಾದ ದೇವಾದಸಿಯ ಜೀವನ ನಾನು ಮಾಡುತ್ತಿದ್ದೇನೆ. ದೇವದಾಸಿ ಎಂದು ಬಿಟ್ಟಿರುವ ದೇವದಾಸಿ ಮಹಿಳೆಯ ಜೀವನ ಶೈಲಿನೇ ಬೇರೆ. ಆದರೆ ನಾನು ದೇವದಾಸಿಯಾಗಿ ಪರಿಪಕ್ವವಾದ ಜೀವನ ಮಾಡುತ್ತಿದ್ದೇನೆ. ಇನ್ನೊಂದು ಸಮಸ್ಯೆ ಎಂದರೆ ಮನೆಯಲ್ಲಿ ಇಬ್ಬರು ದೇವದಾಸಿ ಹೆಣ್ಣುಮಕ್ಕಳು ಇರುವುದರಿಂದ ಇನ್ನೂಳಿದ ತಂಗಿಯರ ಮದುವೆ ವಿಳಂಬವಾಗುತ್ತಿದೆ. ಹುಡುಗಿಯನ್ನು ನೋಡಲು ಬರುತ್ತಾರೆ. ನೋಡಿಕೊಂಡು ಹೋದ ನಂತರ ಯಾವ ಪ್ರತಿಕ್ರೀಯೆಯನ್ನು ತಿಳಿಸುವುದಿಲ್ಲ: ಹೀಗೆ

ಮಧ್ಯದಲ್ಲಿರುವ ವ್ಯಕ್ತಿಯನ್ನು ವಿಚಾರಿಸಿದಾಗ ದೇವದಾಸಿಯರು ಇರುವ ಮನೆಯಲ್ಲಿ ಹೆಣ್ಣು ತೆಗೆಯುವುದು ಬೇಡ ಎಂಬ ಕಾರಣಗಳು ತಿಳಿದುಬಂದವು. ನೋಡಿ ನಾವು ಇಬ್ಬರೂ ಇದ್ದರೂ ಯಾವ ಪುರುಷನನ್ನು ಸೇರಿಸಿಕೊಂಡಿಲ್ಲ. ಆ ದೇವಿಯ ಸೇವೆಯಲ್ಲಿಯೇ ಬದುಕುತ್ತಿದ್ದರೂ ಅಥವಾ ದೇವದಾಸಿಯ ಅರ್ಥದಲ್ಲಿ ನಾವು ನ್ಯಾಯಯುತವಾಗಿ ಬದುಕುತ್ತಿದ್ದರೂ ಜನರು ನಮ್ಮನ್ನು ನೋಡುವ ದೃಷ್ಟಿಕೋನವೇ ಬೇರೆಯಾಗಿದೆ ಎಂದು ನೊಂದ ಮನಸ್ಸಿನಿಂದ ಹೇಳಿದರು.

ನಾನು ಚಿಕ್ಕವಳು ಇರುವಾಗಲೇ ದೇವದಾಸಿಗೆ ಬಿಟ್ಟಿದ್ದಾರೆ. ಆದರೆ ನನಗೆ ದೇವರು ಕಟ್ಟಿರುವ ವಿಷಯ ನನಗೆ ತಿಳಿದ್ದಿರಲಿಲ್ಲ. ನಾನು ಚೆನ್ನಾಗಿ ಓದುವ ಹಂಬಲ ಇತ್ತು. ಕಾಲಾಂತರದಲ್ಲಿ ದೇವರು ಕಟ್ಟಿರುವ ವಿಷಯ ಗೊತ್ತಾಯಿತು. ಆದರೂ ನಾನು ದೇವರ ಮುತ್ತು ಧರಿಸಿದಿಲ್ಲ. ಮದುವೆಯ ಕನಸು ನನ್ನಲ್ಲಿತ್ತು. ಆದರೆ ದೇವಿ ಮೈಮೇಲೆ ಬಂದಳು ಅನಿವಾರ್ಯವಾಗಿ ನನ್ನ ಕನಸುಗಳನ್ನು ಬದಿಗಿರಿಸಿ ಮುತ್ತು ಕಟ್ಟಿಸಿಕೊಂಡೆ. ನಾನು ಹೀಗೆ ಒಂದು ಮೀಟಿಂಗ್‌ಗೆ ಹೋಗಿದ್ದಾಗ ಆಫೀಸರ್ ಒಂದು ಮಾತು ಕೇಳಿದರು. ಇದೇನಮ್ಮ ನೀನು ಇಷ್ಟೊಂದು ಓದಿಕೊಂಡು ಈ ಪದ್ಧತಿಗೆ ಬಲಿಯಾಗಿದ್ದೀಯಾ ಎಂದು ಆಗ ನನ್ನ ಮದುವೆಯ ಎಲ್ಲಾ ಕನಸುಗಳು ಒಂದು ಕ್ಷಣ ನೆನಪಾಗಿ ನನ್ನ ಕಣ್ಣಲ್ಲಿ ನೀರು ಬಂದವು. ಆದರೆ ಅವರು ನಿಮ್ಮ ನೋವು ಎಷ್ಟಿದೆ ಎಂದು ಗೊತ್ತಾಗುತ್ತೇ ಬೀಡಿ ಎಂದು ಹೇಳಿದರು. ನನಗೆ ಮುಂಚೆನೆ ದೇವರು ಕಟ್ಟಿರೋಕೆ ಕಾರಣ ಮನೆಯಲ್ಲಿ ಗಂಡು ಮಕ್ಕಳು ಇಲ್ಲದಿರುವುದು ಕಾರಣವಾಗಿದೆ. ಆದರೆ ನಾನು ಮದುವೆ ಮಾಡಿಕೊಳ್ಳಬೇಕು ಅಂದುಕೊಂಡಾಗ ಮನೆಯಲ್ಲಿ ನಿನಗೆ ದೇವರು ಕಟ್ಟಿವಿ ಹುಟ್ಟಿದಾಗ ಜಡೆ ಬಂದಿತ್ತು. ದೇವಿ ಬಂದಿದ್ದಾಳೆ ಎಂದೆಲ್ಲಾ ಹೇಳಿದರು. ಹಾಗಾಗ ದೇವಿ ಮೈಮೇಲೆ ಬರುತ್ತಾಳೆ ಅಂತೆಲ್ಲಾ ಹೇಳಿ ನನಗೆ ದೇವರು ಕಟ್ಟಿದ್ದಾರೆ. ಅದಕ್ಕೆ ದೇವರು ಬರುವಾಗ ನಾನು ಅಪವಿತ್ರ ಆಗಬಾರದು ಎಂದು ಇವತ್ತಿಗೂ ನಾನು ಯಾರನ್ನು ನನ್ನ ಜೀವನದಲ್ಲಿ ಇರಿಸಿಕೊಂಡಿಲ್ಲ. ಈಗ ನಾನು ದೇವದಾಸಿ ವಿಮೋಚನಾ ಸಂಘಟನೆಯಲ್ಲಿ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸುತ್ತಾ ದೇವದಾಸಿ ಮಹಿಳೆಯರ ಕುರಿತಾಗಿ ಹೋರಾಟಗಳು ಇತರೆ ಕಾರ್ಯಗಳಲ್ಲಿ ನನ್ನನ್ನು ನಾನು ತೊಡಗಿಸಿಕೊಂಡು ಜೀವನ ಮಾಡುತ್ತಿದ್ದೇನೆ.

**ಭಾಗ್ಯ, ವಯಸ್ಸು–೩೩ (ಎಸ್ ಟಿ)**

ನನ್ನ ತಂದೆ – ತಾಯಿಗಳಿಗೆ ಇಬ್ಬರು ಮಕ್ಕಳು. ನಾನು ಮತ್ತು ನನ್ನ ಅಣ್ಣ. ನಮ್ಮ ಮನೆಯಲ್ಲಿ ವ್ಯವಸಾಯವೇ ಮುಖ್ಯ ಕೆಲಸವಾಗಿತ್ತು. ನಮ್ಮದು ಮೂರುವರೆ ಎಕರೆ ಜಮೀನಿದೆ. ಅದು ಒಣ ಬೇಸಾಯವಿದ್ದೂ, ಮಳೆ ಬಂದಾಗ ಅಷ್ಟೇ ಬಿತ್ತುಕೊಂಡು ಕಾಲುಕಡಿ ಮಾಡಿಕೊಳ್ಳುತ್ತಿದ್ದರು. ಉಳಿದ ದಿನಗಳಲ್ಲಿ ನನ್ನ ತಾಯಿ ಕೂಲಿಗೆ ಹೋಗಿ ಜೀವನ ಸಾಗಿಸುತ್ತಾಳೆ. ಅದರಲ್ಲಿಯೇ ನನಗೆ ಶಾಲೆಗೆ ಓದಲು ಕಳುಹಿಸುತ್ತಿದ್ದಳು. ಕಾರಣ ನಾನು ಬುದ್ಧಿವಂತಳಾಗಿ ಮುಂದೆ ನೌಕರಿ ಮಾಡಿ ಸುಖ ಜೀವನ ನಡೆಸಬೇಕು ಎಂಬ ಆಸೆ ಇತ್ತು. ಇಲ್ಲಿರುವ ಜನರು ನಿನ್ನ ಮಗ ಹಿರಿಯವನಾಗಿದ್ದರೂ ನಿನ್ನ ಸಾಕುವುದಿಲ್ಲ ಅಂತ ಹೇಳಿ, ನಮ್ಮ ಮನೆ ಹತ್ರ ಮದುವೆ ಮಾಡಿಕೊಂಡಿರುವ ಒಂದು ಉದಾಹರಣೆ ಹೇಳಿ ನಿನ್ನ ಮಗನಿಗೆ ಮದುವೆ ಮಾಡಿದರೆ ಬಂದ ಸೊಸೆ ನಿನ್ನನ್ನು ಬೈಯುವುದು ಮಾಡಿದರೆ,

ಮತ್ತೆ ಮಗಳು ಗಂಡ ಮನೆಗೆ ಹೋದರ ಪಡಬಾರದ ಕಷ್ಟ ಪಡಬೇಕಾಗುವುದು. ಎಂದೆಲ್ಲಾ ಹೇಳಿದ್ದಕ್ಕೆ ನಮ್ಮ ತಾಯಿ ನನ್ನ ಮದುವೆ ಮಾಡಿದರೆ ಕೂಲಿಗೆ ಹೋಗಬೇಕು. ಗಂಡನಿಂದ ಹಿಂಸೆ ಅನುಭವಿಸಬೇಕೆಂದು ಜೊತೆಗೆ ಮದುವೆ ಮಾಡಲು ಹಣವಿಲ್ಲದ ಕಾರಣ. ಇಷ್ಟು ದಿನ ಕಷ್ಟಪಟ್ಟು ಜೀವನ ಸಾಗಿಸಿದ್ದೇನೆ. ದೇವದಾಸಿ ಮಗಳೆಂದು ಮದುವೆ ಮಾಡಿಕೊಳ್ಳಲು ಯಾರು ಮುಂದೆ ಬರುವುದಿಲ್ಲ. ಹೆಚ್ಚು ವರದಕ್ಷಿಣೆ ಕೊಟ್ಟು ಮಾಡೋಕೆ ಶಕ್ತಿನೂ ಇಲ್ಲ. ಅದಕ್ಕಾಗಿ ನಾನು ೭ನೇ ತರಗತಿ ಮುಗಿದ ನಂತರ ದೇವದಾಸಿಯಾಗಿ ಮಾಡಿದರು. ಆಗ ನಾನು ಏನೋ ಮಾಡುತ್ತಿದ್ದಾರೆಂದು ಸಂಭ್ರಮಪಟ್ಟೆನು. ನಂತರ ತಿಳಿಯಿತು ಈ ದೇವದಾಸಿ ಬದುಕು ನರಕದ ಜೀವನ ಎಂದು.

ನಾನು ದೇವದಾಸಿ ಆಗಿದ್ದರೂ ಕಂಡ ಕಂಡ ವ್ಯಕ್ತಿಗಳನ್ನು ಕೂಡದೆ ನಮ್ಮ ತಾಯಿಯ ಹತ್ತಿರ ಜಗಳ ಮಾಡಿ ನನ್ನ ಮನಸ್ಸಿ ಬಂದವನ ಬಳಿ ಕೂಡಿಕೊಂಡು ಹೇಗೋ ಎಸ್.ಎಸ್.ಎಲ್.ಸಿಯ ತನಕ ಓದಿಕೊಂಡು ಬಂದು ಖಾಸಗಿ ಸಂಸ್ಥೆಯಲ್ಲಿ ಉದ್ಯೋಗಕ್ಕೆ ಸೇರಿಕೊಂಡು ಅಲ್ಲಿ ನಿಮ್ಮ ಗಂಡನ ಹೆಸರೇನು? ಎಂದು ಎಲ್ಲರೂ ಕೇಳುತ್ತಿದ್ದರು. ನನ್ನ ಸಮುದಾಯದ ವ್ಯಕ್ತಿಯು ನನ್ನ ಬಳಿ ಮೊದಲಿಂದಲೂ ಇದ್ದುದ್ದಕ್ಕೆ ಈತನ ಹೆಸರೇ ಹೇಳಿಕೊಂಡು ಪರಿಚಯ ಮಾಡಿಸಿದ್ದೆ. ಅವಾಗಿನಿಂದ ನನ್ನ ಬಳಿ ದುಡ್ಡು ವಡೆಯಲು ಶುರುಮಾಡಿದನು. ನನ್ನ ಮನೆಯವರು ಒಂದು ಕಡೆಯಾದರೆ ಇನ್ನೊಂದು ಕಡೆ ಗಂಡನೆಂದು ಸಮಾಜಕ್ಕೆ ಪರಿಚಯಿಸಿದ ವ್ಯಕ್ತಿಯಿಂದ ಹಣದ ಸೆಳೆದ ಮತ್ತು ಶೋಷಣೆ ಹೀಗೆ ಜೀವನವನ್ನು ನೂಕುತ್ತಾ ಎರಡು ಹೆಣ್ಣು ಮಕ್ಕಳಿಗೆ ಜನ್ಮ ಕೊಟ್ಟೆನು. ನನ್ನ ಮಕ್ಕಳು ನನ್ನಂತೇ ಆಗಬಾರದೆಂದು ಕಾಳಜಿಯನ್ನಿಟ್ಟುಕೊಂಡು ಅವರನ್ನು ವಿದ್ಯೆ ಕಲಿಸಿ ಬುದ್ಧಿವಂತರನ್ನಾಗಿ ಮಾಡಿ, ಅವರ ಕಾಲ ಮೇಲೆ ಅವರು ನಿಂತುಕೊಳ್ಳುವಂತೆ ಮಾಡುವುದೇ ನನ್ನ ಗುರಿಯಾಗಿತ್ತು. ಅವರ ಮೇಲೆ ಯಾರ ಕೆಟ್ಟ ಕಣ್ಣಿನ ದೃಷ್ಟಿ ಬೀಳದಂತೆ ಎಚ್ಚರ ವಹಿಸುತ್ತಿದ್ದೇನು. ದೇವದಾಸಿಯಾಗಿದ್ದ ನನ್ನನ್ನು ಸಮಾಜ ಸೂಳೆ ಎಂದೆಲ್ಲಾ ತುಚ್ಛವಾಗಿ ಕಾಣಬಾರದು. ನಾನು ಒಬ್ಬನಿಗೆ ಜೀವನ ನಡೆಸಬೇಕೆಂದು ಗಂಡ ಎಂದು ಹೇಳಿಕೊಂಡು ಆತನು ಹಣ ಕೊಟರೇನು? ಕೊಡದಿದ್ದರೇನು? ಎಂದು ತಿಳಿದು ಜೀವನ ಮಾಡಿಕೊಂಡು ಹೋಗುತ್ತಿದ್ದೆ. ಆತನೇ ಅನೇಕ ಸಲ ನನ್ನ ಬಳಿ ಹಣ ವಸೂಲಿ ಮಾಡಿಕೊಂಡು ಹೋಗುತ್ತಿದ್ದ. ಗಂಡನೆಂದು ಸಮಾಜಕ್ಕೆ ಪರಿಚಯ ಮಾಡಿಕೊಟ್ಟವನಿಂದ ಅನುಭವಿಸಿದ ಹಿಂಸೆಯೋ ನನ್ನ ಜೀವನದಲ್ಲಿ ಹೆಚ್ಚಾಗಿತ್ತು. ಅದಕ್ಕಾಗಿ ಅವನಿಗೆ ಮದುವೆ ಮಾಡಿ ಸಂಸಾರದಲ್ಲಿ ತೊಡಗಿಸಿದೆ. ಅಲ್ಲದೆಯೇ ಬೇಕಾದ ದವಸ – ಧಾನ್ಯ ಇತ್ಯಾದಿ ಬಟ್ಟೆ, ಹಣ ಎಲ್ಲವನ್ನೂ ಕೊಟ್ಟು ನೋಡಿಕೊಳ್ಳಬೇಕಾದುದು ನನ್ನ ಜವಾಬ್ದಾರಿಯಾಗಿತ್ತು. ಇಲ್ಲದಿದ್ದರೆ ಕುಡಿದು ಎಲ್ಲಿ ಬೇಕೆಂದರಲ್ಲಿ ಬಾಯಿಗ ಬಂದಂತೆ ಮಾತನಾಡುತ್ತಾನೆ. ನನ್ನ ಜೀವನವೇ ಜಿಗುಪ್ಸೆಯಾಗಿ ಸಾಕೆನಿಸಿತು. ಈತನ ಸಹವಾಸ ಸಾಕು ನಾನು ಒಬ್ಬೊಂಟಿಯಾಗಿ ಬದುಕಿದರೂ ಪರವಾಗಿಲ್ಲ ಎಂದು ಆತನಿಗೆ ಮದುವೆ ಮಾಡಿ ಇಷ್ಟೆಲ್ಲ ಕಷ್ಟಪಟ್ಟೆ. ನನ್ನ ಮಕ್ಕಳನ್ನು ಒಂದು ದಾರಿಗೆ ತರಬೇಕು. ಇದೇ ನನ್ನ ಜೀವನ.

**ಶೋಭರಾಣಿ, ವಯಸ್ಸು–೩೫ (ಎಸ್ ಟಿ)**

ನನ್ನ ತಾಯಿ ದೇವದಾಸಿ. ನಾವು ಇಬ್ಬರು ಅಣ್ಣ – ತಂಗಿ ಇದ್ದೀವಿ. ನಮ್ಮ ಅಣ್ಣ ಒಬ್ಬನೇ ಆಗುತ್ತಾನೆ. ನಮ್ಮ ವಂಶಕ್ಕೆ ಒಂಟಿಪೆಂಟಿ ಬೆಳೆಯಬಾರದು ಅಂತ ನಮ್ಮ ತಾಯಿ ನನ್ನ ದೇವದಾಸಿ

ಮಾಡಿದಳು. ನನ್ನ ಮುದ್ರೆ ಹಾಕಿಸೋ ಮೂಲಕ ದೇವದಾಸಿ ಮಾಡಿದ್ದಾರೆ. ನನಗೆ ೧೧ ವರ್ಷ ಇದ್ದಾಗ ನಮ್ಮ ಮನೆಯ ಅಕ್ಕಪಕ್ಕದ ಕಲಾವಿದೆಯರನ್ನು ಅವರ ಜೀವನ ನೋಡಿ ನಾನು ಕಲಾವಿದೆಯಾಗಬೇಕೆಂಬ ಆಸೆ ಬಂತು. ಇದಕ್ಕೆ ನಮ್ಮ ತಾಯಿಯ ಒಪ್ಪಿಗೆಯೂ ಇತ್ತು. ಆಗ ನಾನು ಹಿರಿಯ ಕಲಾವಿದರೊಂದಿ ಹೋಗಿ ಮೊದಲು ಮೊದಲು ೧೦ರೂ, ೧೫ರೂಪಾಯಿಗಳಿಗೆ ನೃತ್ಯ ಮಾಡುತ್ತಾ ಚಿಕ್ಕ ಚಿಕ್ಕ ಪಾತ್ರಗಳಿಗೆ ಅವಕಾಶ ಗಿಟ್ಟಿಸಿಕೊಳ್ಳುತ್ತಾ, ಹಾಡು ಮತ್ತು ನಾಟಕದ ಸಂಭಾಷಣೆಗಳನ್ನು ಕಲಿತೆ. ಸಂಗೀತ ಮತ್ತು ನಾಟಕದ ಕಷ್ಟ ಸಂಭಾಷಣೆಗಳನ್ನು ಕಲಿಯಲು ಬಳ್ಳಾರಿಯ ಮಾಸ್ತರ ಬಳಿ ತರಬೇತಿ ಪಡೆದೆ. ಆ ಮಾಸ್ತರು ನನ್ನ ಇಷ್ಟಪಟ್ಟನು. ನನ್ನ ಮದುವೆ ಮಾಡಿಕೊಳ್ಳುತ್ತೇನೆಂದು ಹೇಳಿದ. ನನಗೆ ಅವರ ಮೇಲೆ ಯಾವ ರೀತಿಯಾ ಭಾವನೆಗಳು ಇರಲಿಲ್ಲ. ಅದಕ್ಕೆ ನಾನು ಅವರನ್ನು ಬೇಡ ಎಂದೆ. ಅಷ್ಟರಲ್ಲಿ ನನ್ನ ತಾಯಿ ತೀರಿಕೊಂಡರು. ಅಣ್ಣ – ಅತ್ತಿಗೆ ನನ್ನನ್ನು ಸರಿಯಾಗಿ ನೋಡುತ್ತಿರಲಿಲ್ಲ. ಹಾಗಾಗಿ ನಾನೇ ಮತ್ತೆ ಮಾಸ್ತರನ್ನು ಒಪ್ಪಿಕೊಂಡೆ. ಆತನ ಜೊತೆ ಬಳ್ಳಾರಿಯಲ್ಲಿದ್ದು ನಾಟಕಗಳಿಗೆ ಹೋಗುತ್ತಿದ್ದೆ. ಸ್ವಲ್ಪ ದಿನಗಳ ನಂತರ ಆ ಮಾಸ್ತರ್‌ಗೆ ಮದುವೆ ಆಗಿರುವುದು ಗೊತ್ತಾಯಿತು. ಹೆಂಡತಿ ಮಕ್ಕಳು ಬಳ್ಳಾರಿಯ ಹತ್ತಿರ ಹಳ್ಳಿಯಲ್ಲಿದ್ದರು. ಅವರು ನನ್ನ ಮನೆಗ ಬರಲು ಶುರು ಮಾಡಿದರು. ನನ್ನ ಮದುವೆ ಮಾಡಿಕೊಳ್ಳುತ್ತೇನೆಂದು ಹೇಳಿದ್ದರು. ಮದುವೆ ಆಗಿಲ್ಲ ಎಂದುಕೊಂಡಿದ್ದ ನನಗೆ ಈ ವಿಷಯ ತುಂಬ ಬೇಸರವಾಯಿತು. ಮನಸ್ಸಿಗೆ ಬೇಸರವಾಗಿ ತವರಿಗೆ ಹೋಗೋಣ ಅಂದರೆ ಅಲ್ಲಿ ಅಣ್ಣ ವಿಪರೀತ ಕುಡಿಯುವುದನ್ನು ಕಲಿತು ಮನೆಯಲ್ಲಿನ ತಟ್ಟೆ, ಚೆಂಬುಗಳನ್ನು ಮಾರಿ ಕುಡಿಯುತ್ತಿದ್ದ. ಅಲ್ಲಿಯೂ ಬೇಸರವಾಗಿ ಮತ್ತೇ ಬಳ್ಳಾರಿಗೆ ಹೋದೆ. ನಾಟಕ ಆಡಿ ಗಳಿಸಿದ ಅಲ್ಪಸ್ವಲ್ಪ ಹಣವನ್ನು ಬ್ಯಾಂಕ್‌ನಲ್ಲಿಟ್ಟಿದ್ದೆ. ಮಾಸ್ತರ್ ಆತನ ಹೆಂಡತಿ ಮಕ್ಕಳಿಗೆ ಆರಾಮಿಲ್ಲ, ಉಪವಾಸ ಇದ್ದರೆ ಎಂದೆಲ್ಲಾ ಹೇಳಿ ಹಣವನ್ನು ಕಸಿದುಕೊಂಡು ಹೋಗುತ್ತಿದ್ದರು. ಹೀಗೆ ಸ್ವಲ್ಪ ದಿನಗಳ ನಂತರ ಆತನು ಕುಡಿಯುವುದನ್ನು ಕಲಿತು, ನಾನು ನಾಟಕಗಳಿಗೆ ಹೋದಾಗ ನನ್ನ ಜೊತೆಗೆ ಬರುತ್ತಿದ್ದ. ಅಲ್ಲಿ ನೀನು ಅವರನ್ನು ನೋಡುತ್ತಿಯಾ ಇವರನ್ನು ನೋಡುತ್ತಿಯಾ ಎಂದು ಸಂಶಯಪಡುತ್ತಾ, ಅಲ್ಲೇ ನನ್ನನ್ನು ಅಲ್ಲೇ ಬಡಿಯುವುದು ಮಾಡುತ್ತಿದ್ದ. ಇದನ್ನು ನೋಡಿ ಜನರು ನಾಟಕಕ್ಕೆ ಬಂದರೆ ನೀನೊಬ್ಬಳೇ ಬಾ ಆತನನ್ನು ಕರೆದುಕೊಂಡು ಬರಲೇಬೇಡ ಎಂದರು. ಜೀವನ ನಡೆಸಲು ಅನಿವಾರ್ಯವಾಗಿರುವುದರಿಂದ ಆತನನ್ನು ಮನೆಯಲ್ಲಿಯೇ ಬಿಟ್ಟು ಹೋಗಲು ಪ್ರಾರಂಭಿಸಿದೆ. ಅದನ್ನು ಸಹಿಸದೇ ಒಂದು ಹಳ್ಳಿಯಲ್ಲಿ ನಾಟಕವಿದ್ದಾಗ ಕುಡಿದು ಅಲ್ಲಿಗೆ ಬಂದು ಬಡಿಯುವುದು ವಲಸು ಮಾತು ಬೈಯುತ್ತಿದ್ದ. ನಾಟಕಕ್ಕೆ ಅಡ್ಡಿಪಡಿಸಿದ್ದಕ್ಕೆ ಊರಿನ ಜನರು ಆತನನ್ನು ಕಂಬಕ್ಕೆ ಕಟ್ಟಿ ಹಾಕಿದರು. ಬೆಳಿಗ್ಗೆ ಆ ಹಳ್ಳಿಯವರೇ ನನ್ನ ತವರೂರಿಗೆ ಬಿಟ್ಟು ಬಂದರು. ಅಲ್ಲಿಯೂ ಬಂದು ಕಾಟಕೊಡುತ್ತಿದ್ದ. ಅದಕ್ಕೆ ನನ್ನ ಗೆಳತಿಯ ಊರು ಗಂಗಾವತಿಗೆ ಹೋದೆ. ನಂತರ ನನ್ನ ತವರಿಗೆ ಬಂದು ಸೇರಿದೆ. ಇಲ್ಲಿಯೂ ಅಣ್ಣನ ಕಾಟವಿತ್ತು. ನನ್ನ ಸೀರೆಗಳನ್ನು ಒಡವೆಗಳನ್ನು ಮಾರುವುದು. ಮನೆಯಲ್ಲಿ ಪಾತ್ರೆಗಳನ್ನು ಮಾರಿ ಕುಡಿಯುತ್ತಿದ್ದನು. ನಾನು ನಾಟಕಕ್ಕೆ ಹೋಗುವ ಊರಿಗೆ ಹೋಗಿ ನನ್ನ ತಂಗಿಗೆ ಆರಾಮಿಲ್ಲ ತೋರಿಸಲು ಹಣ ಕೊಡಿ ಎಂದು ಕೇಳಿ ದುಡ್ಡು ಪಡೆದು ಕುಡಿಯುತ್ತಿದ್ದ. ಇದನ್ನು ಸಹಿಸದೆ ನಾನೇದಾರೂ ಪ್ರಶ್ನೆ ಮಾಡಿದರೆ ನನ್ನನ್ನು ವಲಸು ಮಾತು ಬೈಯುತ್ತಿದ್ದ. ನನ್ನ ಇಡೀ ಜೀವನ

ಪ್ರೀತಿ, ಪ್ರೇಮ, ವಾತ್ಸಲ್ಯಗಳಿಲ್ಲದೇ ಜೀವನವೇ ಬೇಸತ್ತು. ನಾನು ಬದುಕಿರಬಾರದೆಂದು ನಿರ್ಧರಿಸಿ ಸಾಯಿಲು ಬಾವಿಗೆ ಹಾರಲು ರಾತ್ರಿ ಹೋದೆ. ಪರಿಚಯವಿದ್ದ ಲಿಂಗಾಯತ ವ್ಯಕ್ತಿ ನನ್ನನ್ನು ತಡೆದು ಮನೆಗೆ ಕರೆತಂದು ಅಣ್ಣ – ಅತ್ತಿಗೆ ಬೈದು ಪುನಃ ಆತನ ಜೊತೆಯಲ್ಲಿ ನನ್ನನ್ನು ಕರೆದುಕೊಂಡು ಹೋಗಿ ಬೇರೆ ಮನೆ ಮಾಡಿ ಇಟ್ಟು, ಆತನೇ ನನ್ನನ್ನು ನೋಡಿಕೊಂಡ. ಸುಮಾರು ೪–೫ ವರ್ಷ ಆತ ಚೆನ್ನಾಗಿ ನೋಡಿಕೊಂಡಿದ್ದ. ಆದರೆ ಮಕ್ಕಳಾಗಲಿಲ್ಲ. ಒಂದು ದಿನ ರಾತ್ರಿ ನನಗೆ ತುಂಬ ಹೊಟ್ಟೆನೋವು ಎಂದು ಹೇಳಿದಾಗ ಆತನು ಗುಳಿಗೆ ತರಲು ಹೋದಾಗ ಎದೆನೋವುನಿಂದ ನೆಲದ ಮೇಲೆ ಬಿದ್ದು ಹೊರಳಾಡಿ ಪ್ರಾಣಬಿಟ್ಟನು. ಆತನ ಅಕ್ಕ–ತಮ್ಮಂದಿರು ಬಂದು ಶವ ತೆಗೆದುಕೊಂಡು ಹೋದರೆಂದರು. ನನಗೆ ತುಂಬ ದುಃಖವಾಯಿತು. ಈ ದಿನಗಳಾದರೂ ನನಗೆ ಸಂತೋಷವಾಗಿ ಕಳೆಯಬಹುದೆಂದುಕೊಂಡಿದ್ದೆ. ಆದರೆ ಆ ದೇವರು ಆತನನ್ನು ಕರೆದುಕೊಂಡನೆಂದು ತುಂಬ ಆಳುತ್ತಿದ್ದೆ. ನಮ್ಮ ಅಣ್ಣನೂ ಕೂಡ ಅತ್ತಿಗೆ ಮಕ್ಕಳೊಂದಿಗೆ ಹೆಂಡತಿ ಊರು ಸೇರಿದ್ದ. ಬೀಗ ಹಾಕಿದ ಮನೆಯ ಬೀಗ ತೆಗೆದು ಅಲ್ಲೆಯೇ ಜೀವನ ಮಾಡುತ್ತಿದ್ದೇನೆ. ಕೂಲಿ ಮಾಡಿಕೊಂಡು ಅವರಿವರು ಹೇಳಿದ ಕೆಲಸ ಮಾಡುತ್ತಾ ಬಂದ ಹಣದಲ್ಲಿಯೇ ಜೀವನ ಸಾಗಿಸುತ್ತಿದ್ದೇನೆ. ನನ್ನಂತಹ ಜೀವನ ನನ್ನ ಶತ್ರುವಿಗೂ ಬರಬಾರದು.

**ರೋಜಮ್ಮ, ವಯಸ್ಸು–೫೬ (ಎಸ್ ಟಿ)**

ನನಗೆ ನಾಲ್ಕು ಜನ ಮಕ್ಕಳು. ಒಬ್ಬತೆ ಮಗ, ಮೂರು ಜನ ಹೆಣ್ಣುಮಕ್ಕಳು. ನಾನು ಕೃಷಿ ಕೂಲಿ ಮಾಡುತ್ತಾ ಜೀವನ ಮಾಡುತ್ತಿದ್ದೇವೆ. ಹೊಲಗದ್ದೆಗಳಲ್ಲಿ ಕಳೆ ತೆಗೆಯುವುದು, ಕಬ್ ಕಡಿಯುವುದು, ಉತ್ತುವುದು, ಬಿತ್ತೋದು ಕೆಲಸ ಮಾಡುತ್ತೇವೆ. ಒಬ್ಬ ಮಗಳ ಮದುವೆ ಮಾಡಿಕೊಟ್ಟಿನಿ. ನನ್ನ ಯಾಕ ಬುಟ್ಟಾರೋ ಗೊತ್ತಿಲ್ಲ. ನಾನಿನ್ನು ಸಣ್ಣೊಳಿದ್ದೇ, ಅವಗೆ ನಮ್ಮ ಮನೆ ದೇವರಾದ ಕೂಲಹಳ್ಳಿ ಗೋಣಿಬಸಪ್ಪಗ ಚೌರಿ ಹೊಲಿಸುವ ಮೂಲಕ ದೇವದಾಸಿ ಬಿಟ್ಟಾರ. ಪ್ರತಿ ವರ್ಷ ಶಿವರಾತ್ರಿ ಆದ ೧೧ನೇ ದಿನದ ನಂತರ ಗೋಣಿಬಸಪ್ಪನ ಜಾತ್ರೆಗೆ ಎಲ್ಲರೂ ಹೋಗಿ ಹಣ್ಣುಕಾಯಿ ಮಾಡಿಸಿಕೊಂಡು ಬರುತ್ತೇವೆ. ನನಗೆ ನನ್ನ ಮಕ್ಕಳನ್ನು ಒಂದು ಒಳ್ಳೆ ದಾರಿಗೆ ತಬೇಕೆಂದು ಅಂತ ಎಷ್ಟೆಲ್ಲ ಕಷ್ಟ ಪಡುತ್ತಿದ್ದೇನೆ. ಮೊದಲು ಗುಡಿಸಲು ಮನೆ ಇತ್ತು. ಇವಾಗ ಸರ್ಕಾರದಿಂದ ಮನೆಗಳು ಬಂದವು. ಇವಾಗ ಆರ್‌ಸಿಸಿ ಮನೆ ಕಟ್ಟಿಕೊಂಡಿವೆ. ಆವಾಗ ನಮ್ಮನ್ನು ಬಿಟ್ಟಿರೋದೇ ಕೊನೆ. ಇವಾಗ ಯಾರನ್ನೂ ದೇವದಾಸಿ ಬಿಡಲ್ಲ.

ನಮ್ಮ ಮನೆಯಲ್ಲಿ ವಂಶಪಾರಂಪರ್ಯವಾಗಿ ಗೋಣಿಬಸವೇಶ್ವರಗ ಚೌರಿ ಸೇವೆಗೆಂದು ಬಿಡುತ್ತಲೇ ಬಂದಿದ್ದಾರೆ. ಹಾಗಾಗಿ ನನ್ನ ಕೂಡ ಬಿಟ್ಟಾರ. ನಾನು ಪಟ್ಟ ಕಷ್ಟವೇ ಸಾಕು, ನನ್ನ ಮಕ್ಕಳು ಈ ಪದ್ಧತಿ ಬಿಡಬಾರದು ಅಂತ ಎಷ್ಟೋ ಕಷ್ಟಪಟ್ಟೀನಿ. ಊರಲ್ಲಿ ನಮ್ಮನ್ನು ದೇವದಾಸಿ ಅಂತ ಕೀಳಾಗಿ ಏನು ನೋಡುತ್ತಿಲ್ಲ. ಇಷ್ಟೆಲ್ಲ ಇದ್ರು ನನ್ನ ಮಗಳು ನನ್ನ ವಿರೋಧವಾಗಿ ನಮಗೆ ಏನೂ ತಿಳಿಸದೆಯೋ, ಹಿರಿಯರನ್ನು ಕರೆದುಕೊಂಡು ಹೋಗಿ ಚೌರಿ ಹೊತ್ತುಕೊಂಡು ಬಂದಿದ್ದಾಳೆ. ಅದಕ್ಕಾಗಿ ಇವತ್ತಿಗೂ ನನಗೆ ನನ್ ಮಗಳಿಗೆ ಮಾತಿಲ್ಲ. ನನ್ ಮೂರನೇ ಮಗಳಿಗೆ ಇನ್ನೂ ಮದುವೆನೇ ಆಗಿಲ್ಲ. ದೇವದಾಸಿ

ಮಗಳು ಅನ್ನುವುದರ ಜೊತೆ ಇವರ ತಂಗಿ ಕೂಡ ದೇವದಾಸಿ ಆದಳು. ಯಾರು ವರ ಬರಲಿಲ್ಲ. ಕೆಲವು ಎರಡನೇ ಸಂಬಂಧದ ವರಗಳು ಬಂದವು. ಅದನ್ನು ನನ್ ಮಗಳು ಒಪ್ಪಲಿಲ್ಲ. ಇವರ ವಯಸ್ಸು ಮೀರಿದೆ. ಹೆಚ್ಚು ಹಣ ಖರ್ಚು ಮಾಡಿ ಮದುವೆ ಮಾಡುವ ಶಕ್ತಿಯೂ ನನ್ನಲ್ಲಿ ಇಲ್ಲ. ಹೊಟ್ಟೆ ಬಟ್ಟೆಗೇನು ಕೊರತೆ ಇಲ್ಲದೆ ಜೀವನ ನಡೆಸುತ್ತಿದ್ದೇನೆ. ನನ್ನ ಜೊತೆ ಸಂಬಂಧ ಹೊಂದಿರುವ ವ್ಯಕ್ತಿ ನಮ್ಮದೇ ಸಮುದಾಯದ ವ್ಯಕ್ತಿ ಆತನು ಮೊದಲು ಚೆನ್ನಾಗಿ ನೋಡಿಕೊಂಡಿದ್ದಾನೇ ನಂತರ ತೀರಿಕೊಂಡ. ಆತ ಇದ್ದಿದ್ದರೆ ಮಕ್ಕಳಿಗೆ ಒಂದು ದಾರಿ ಮಾಡುತ್ತಿದ್ದ. ಇವಾಗ ಬರೇ ಪಿಂಚಣಿ ಮತ್ತು ಕೂಲಿ ಮೇಲೆ ಜೀವನ ನಡೆಸುತ್ತಿದ್ದೇನೆ. ನನ್ನ ಮಗ ೧೦ ನೇ ತರಗತಿ ಮುಗಿಸಿದ್ದಾನೆ. ಅವನಿಗೆನಾದ್ರು ಸರ್ಕಾರ ದೇವದಾಸಿ ಮಗ ಅಥವಾ ಮಕ್ಕಳು ಅಂತ ದಾರಿ ಮಾಡಿಕೊಡುವ ದೊಡ್ಡ ಮನಸ್ಸು ಮಾಡಬೇಕು. ಭೂಮಿನಾದ್ರು ಕೊಡಬೇಕು ದುಡಿದುಕೊಂಡು ತಿನ್ನಕಾ.

**ಉಷ,ವಯಸ್ಸು–೭೫ (ಒ ಬಿ ಸಿ)**

ನಾನು ನನ್ನ ಮಗ ಇಬ್ಬರು ಇದ್ದೀವಿ. ನಾನು ನಮ್ಮ ತಂದೆ ತಾಯಿಗೆ ಒಬ್ಬಳೇ ಮಗಳು ಅಂತ ನನ್ನ ಬಿಟ್ಟಾರ. ಮನೆಗಾ ದೊಡ್ಡೊರು ಹೇಳಿದ ಮಾತು ಕೇಳೋ ಕಾಲ ಅದು ಎದುರು ಮಾತಾಡೋ ಹಾಗಿದ್ದಿಲ್ಲ. ನನ್ನ ಹಣೆಬರಹ ಇದೇ ಅಂದುಕೊಂಡು ಹಾಗೆ ಕೂಲಿ ನಾಲಿ ಮಾಡಿಕೊಂಡು ಜೀವನ ನಡೆಸಿದ್ದೇನೆ. ಆಗೀನ ಕಾಲಕ್ಕಾ ಮೀನು ಇಡಿದು ಜೀವನ ಮಾಡಿದ್ದಾರೆ ನಮ್ಮ ತಂದೆ ತಾಯಿಗಳು. ನಾವು ಈಗ ಹೊಲ ಮನೆ ಮಾಡಿಕೊಂಡಿವಿ. ನಮ್ಮ ಜನಕ್ಕೆ ಈ ಪದ್ಧತಿಯಾಂಗ ಬಂತೋ ಗೊತ್ತಿಲ್ಲ. ನಮ್ಮ ವಂಶ ಬೆಳೆಲಿ ಅಂತ ಉಚ್ಚಂಗೆಮ್ಮಗ ಮುತ್ತು ಕಟ್ಟಿಸಿದರು. ನಾನು ಆಗ ಸಣ್ಣೊಳು ಇದ್ದೆ. ಈ ಕಾರ್ಯನ ಮದುವೆ ಮಾಡಿದಂಗೆ ಮಾಡಿದ್ದಾರೆ. ಸುರಿಗಿ ಸುತ್ತಿ ಅದರಲ್ಲಿ ಕುಡಿಸಿ ನೀರು ಹಾಕಿ, ಉಡಕ್ಕಿ ಹಾಕಿ, ಪಡಲಿಗೆ ತುಂಬಿಸಿ ದೇವರ ಮಣಿಕಟ್ಟುತ್ತಾರೆ. ಆಮೇಲೆ ತಾಳಿ ಕಟ್ಟಿದರು. ನಮಗೆ ಸಾಯುವವರೆಗೆ ಮುತ್ತೈದೆತನ ಇರುತ್ತೇ. ಹುಲಿಗೆಮ್ಮನ ಒಕ್ಕಲು ಇದ್ದರೆ ಪದಕ, ದೇವರ ಮುಖ, ನಾಲಿಗೆ ಇವುಗಳನ್ನು ಹಾಕಿಕೊಳ್ಳುತ್ತಾರೆ. ನಮ್ಮದು ಉಚ್ಚಂಗೆಮ್ಮನ ಒಕ್ಕಲು ನಮ್ಮಲ್ಲಿ ೫ – ೯ ಬಿಳಿಮುತ್ತು(ಮಣಿ) ಅಷ್ಟೇ ಕಟ್ಟಿಕೊಳ್ಳುದೋ ಇರುದೋ. ನಮ್ಮ ಒಕ್ಕಲಿನಲ್ಲಿ ಗಂಡುಮಕ್ಕಳಿಗೂ ಈ ಮುತ್ತುಗಳನ್ನು ಕಟ್ಟುತ್ತಾರೆ. ಆದರೆ ಅವರಿಗೆ ಅಮೇಲೆ ಮದುವೆ ಮಾಡುತ್ತಾರೆ. ನಾವು ಹೆಣ್ಣುಮಕ್ಕಳು ಮಾತ್ರ ಮದುವೆ ಮಾಡಿಕೊಳ್ಳುವಂತಿಲ್ಲ. ಆಕಿ ದೇವರು ಮಾಡಿದ ತಪ್ಪು ಹೆಣ್ಣುಮಕ್ಕಳನ್ನು ಬಿಡು ಅಂತ ಹೇಳ್ಯಾಲಲ್ಲ ಅದಕ್ಕೆ ಆಕಿನ ಇಡಕೊಂಡು ಬಡಿಬೇಕು. ಹಾಕಿನ ಯಾಕಾಗಿ ದೇವದಾಸಿ ಮಾಡ್ರಿ ಅಂತ ಕೇಳಬೇಕು. ಆದರೆ ಏನು ಮಾಡುಬೇಕು ಆಕಿ ದೇವರು ಕೈಗೆ ಸಿಗಲ್ಲ, ಅದಕ್ಕೆ ಸುಮ್ಮನಿರಬೇಕು. ಬಿಟ್ಟಾಗಿನಿಂದ ಅದೇ ಕೂಲಿ ಮಾಡಿಕೊಂಡು ತಿನ್ನಬೇಕು. ಹೊಲಗಳಲ್ಲಿ ಕಳೆ–ಕಡಿಗಿ ಮಾಡಿಕೊಡು ತಿನ್ನಬೇಕು. ಬಂದತಾ ಎಷ್ಟೋ ನೋಡುತ್ತಾನೆ. ಆತ ನೋಡಿದಷ್ಟು ಅಷ್ಟೇ ದೇವದಾಸಿ ಹೆಣ್ ಮಕ್ಕಳಿಗೆ ಸರ್ಕಾರ ಕೊಡೊ ಸಂಬಳನೇ ಗಂಡ ಇದ್ದಾಂಗ. ರೆಡ್ಡಿರಾತ ಇದ್ದ ನನ್ನ ಹತ್ತಿರ ಅಷ್ಟೇ ಹೆಂಡರು ಮಕ್ಕಳು ಇದ್ದೊರು ನಮ್ಮನ್ನು ಎಷ್ಟು ನೋಡಿಕೊಂತಾರ. ಆದರೂ ಪರವಾಗಿಲ್ಲ ಇರೋತನಕ ನೋಡಿದ್ದಾನೆ. ಆತ ಇವಾಗ ಸತ್ತಾನ. ಒಬ್ಬ ಮಗ ಇದ್ದಾನೆ, ಅವಗಿನಿಂದ ದುಡಿದುಕೊಂಡು ಜೀವನ

ಮಾಡಿನಿ. ಇವಾಗ ಸರ್ಕಾರ ಪಿಂಚಣಿ ಕೊಟ್ಟಾತೆ, ಅದರಾಗ ಜೀವನ. ನನ್ನ ಮಗ ಹತ್ತನೆದು ಓದಿ ಬಿಟ್ಟ. ಓದು ಅಂದ್ರೆ ಓದಲಿಲ್ಲ. ಇವಾಗ ಕೆಲಕ್ಕೆ ಹೋಗುತ್ತಾನೆ. ನನಗೆ ಕಾಲು ಮುರಿದಿದೆ. ಇವಾಗ ಮನೆಯಲ್ಲಿಯೇ ಇರುತ್ತೇನೆ. ಒಂದು ಸಾರಿ ಲೋನ್ ತಗಂಡಿನಿ. ಅದರಲ್ಲೆ ಬೆಂಡೊಲೆ ತಗಂಡೆ.ಮುದುಕರು ಆದರೂ ಕಿವಿಯಾಗ ಬೆಂಡಾಲಿ ಇದ್ದಿಲ್ಲ. ನನಗೆ ದೇವರು ಕಟ್ಟೋವಾಗ ಇದ್ದ ತಾಳಿ ಎಲ್ಲಾ ಮುರುದೊಯಿತು. ತಾಳಿ ತಗೆಂಡಿನಿ ಅಷ್ಟೇ. ಇವಾಗ ಕುರಿ ಇದೆ ಒಂದು ಆಕಳು ಇದೇ ಅದನ್ನು ನೋಡಿಕೊಂತ್ತಿದಿನಿ. ಎಲ್ಲರಂತೆ ಮದುವೆಯಾಗಿದ್ದರೆ, ಗಂಡ ಅನ್ನೋನು ಮೊಗ್ಗಲಲ್ಲಿ ಇದ್ದರೆ ಬೇನೆ ಬೆಸರಿಕೆ ಕಳೆಯಿತಿತ್ತು. ಏನು ಮಾಡಬೇಕು, ಆ ದೇವರು ಗಂಡ ಅನ್ನೋದು ನಮ್ಮ ಹಣೆಬರದಲ್ಲಿ ಬರೆದಿಲ್ಲ. ತಂದೆ ತಾಯಿ ಮಾಡಿದ ತಪ್ಪಿಗೆ ನಾನು ಅನುಭವಿಸುತ್ತಿದ್ದೇನೆ. ನಾನು ಊರಾಗ ಹಡಲಿಗೆ ಇಡುಕೊಂಡು ಊರಾಡಕ ಹೋಗಲ್ಲ. ಇದ್ದದ್ದು ಕೂಲಿ ನಾಲಿ ಮಾಡಿನಿ. ಮನೆಯಲ್ಲಿ ಪೂಜೆ ಮಾಡಿಕೊಂಡಿನಿ. ಊರಾಗ ಪೂಜೆ–ಪುಪ್ಪಕ್ಕೆಲ್ಲ ಹೋಗುತ್ತಿದ್ದಿಲ್ಲ. ನನ್ ಜೀವನ ಏನಿದ್ರು ಕೂಲಿ ಮಾಡಿಕೊಂಡು ಬದುಕಿನಿ. ಇವಾಗ ಯಾರು ದೇವದಾಸಿಯರನ್ನ ಬಿಡಲ್ಲ ನಮ್ಮ ಜನದಲ್ಲಿ. ನಾವು ಈ ಊರಾಗ ೫ ಜನ ಇದ್ದೇವೆ. ನಾವೆ ಕಡೆ ಇನ್ಯಾರನ್ನು ಬಿಟ್ಟಿಲ್ಲ. ನಮ್ಮ ಜೀವನ ಯಾರಿಗೂ ಬೇಡ ಅನ್ನಿಸುತ್ತೆ.

**ರಂಜಿತ, ವಯಸ್ಸು–೩೮ (ಒ ಬಿ ಸಿ)**

ನಮ್ಮ ತಂದೆ – ತಾಯಿಗೆ ಐದು ಜನ ಮಕ್ಕಳು. ನಾಲ್ಕು ಹೆಣ್ಣುಮಕ್ಕಳು, ಒಬ್ಬರು ಗಂಡು ಮಗ. ನನಗೆ ಜಡೆ ಬಂದಿರುವ ಕಾರಣಕ್ಕೆ ಮನೆಯಲ್ಲಿ ಬಿಟ್ಟಾರಾ. ನನಗೆ ಹುಲಿಗೆಮ್ಮನ ಒಲಿಸಿದ್ದಾರೆ. ನಾನು ಸಣ್ಣಕೆ ಇದ್ದಾಗ ನನಗೆ ಜಡೆ ಬಂದಿತ್ತು. ನಮ್ಮ ತಂದೆ ನಾವು ಸಣ್ಣೋರು ಇದ್ದಾಗಲೇ ತೀರಿಕೊಂಡಿದ್ದರು. ನಮ್ಮ ತಾಯಿ ಒಬ್ಬಳೇ ಆಕೆಗೆ ಅಷ್ಟೊಂದು ತಿಳುವಳಿಕೆ ಇದ್ದಿಲ್ಲ. ನಮ್ಮದು ಹಳ್ಳಿ ಊರು ಬ್ಯಾರೇ, ನಮ್ಮ ಚಿಕ್ಕಪ್ಪ ದೊಡ್ಡಪ್ಪರು ಹೀಗೆ ಹೇಳೀದರು ನೋಡವ್ವ ಆಕೆಗೆ ಜಡೆ ಬಂದಾತೆ, ನಿನಗೂ ಒಬ್ಬತೇ ಮಗ ಇದಾನೆ ದೇವರು ಕಟ್ಟಿಕೊಂಡುಬೀಡು ಅಂತೆಲ್ಲಾ ಹೇಳಿದರು. ಅಷ್ಟಾಕು ಮದುವೆ ಮಾಡಿ ಕೊಟ್ಟರೇ ನಿಮಗೆ ಒಳ್ಳೆದು ಆಗಲ್ಲ ಅಂತ ಹೇಳಿದರು. ಅದಕ್ಕೆ ನನಗೆ ಹುಲಿಗೆಮ್ಮಗ ಬಿಟ್ಟರು. ನನ್ನ ಬಿಟ್ಟಾಗ ನನಗೆ ಅಷ್ಟೊಂದು ತಿಳುವಳಿಕೆ ಇದ್ದಿಲ್ಲ. ದೇವದಾಸಿ ಪದ್ಧತಿಯ ಬಗ್ಗೆ ತಿಳುವಳಿಕೆ ಇದ್ದಿಲ್ಲ. ನನ್ನ ತಾಯಿಯ ತಮ್ಮ ಮಗನೇ ನನ್ನ ಹತ್ತಿರ ಇದ್ದಾರೆ. ನನಗೆ ಒಬ್ಬ ಹೆಣ್ಣು ಮಗಳು ಇದ್ದಾಳೆ. ಅವಳನ್ನು ಚೆನ್ನಾಗಿ ಓದಿಸುತ್ತಿದ್ದೇನೆ. ಪರವಾಗಿಲ್ಲ ಆತ ನನ್ನ ಚೆನ್ನಾಗಿಯೇ ನೋಡಿಕೊಂತನಾ. ಆದರೆ ಮನೆಯಲ್ಲಿ ನಮ್ಮ ಅಣ್ಣಗ ಆ್ಯಕ್ಸಿಡೆಂಟ್ ಆಗಿ ಕಾಲು ಮುರಿದು ಮನೆಯಲ್ಲಿ ಸಮಸ್ಯೆ ಅದಕ್ಕೆ ಕಷ್ಟ. ನಮ್ಮ ಅಮ್ಮನ್ನ, ಅಣ್ಣನ್ನು ಅಣ್ಣನ ಮಕ್ಕಳನ್ನು ನೋಡಿಕೊಳ್ಳಬೇಕು. ೪ ಎಕರೆ ಭೂಮಿ ಇದೇ. ಮಳೆಯಲ್ಲಿ ಮಾತ್ರ ಬೆಳೆಯೋಕೆ ಆಗುತ್ತೇ ಅಷ್ಟೇ. ಇಲ್ಲಿ ನಮ್ಮೂರಗ ಕೂಲಿ ಕೆಲಸ ಕಡಿಮೆ. ಅದಕ್ಕೆ ನಾನು ಚಿತ್ರದುರ್ಗದಲ್ಲಿ ಹೋಟಲ್‌ನಲ್ಲಿ ಕೆಲಸ ಮಾಡಿ ಜೀವನ ಮಾಡುತ್ತಿದ್ದೇನೆ. ನನ್ನ ಮಗಳನ್ನು ಶಾಲೆಯಲ್ಲಿ ಸೇರಿ ಸೋಕೆ ದೇವದಾಸಿ ಅಂತ ಬರೆಸಿಲ್ಲ. ಯಾಕಂದ್ರೆ ನಮ್ಮ ಜನದಾಗ ಹೀಗೆ ದೇವದಾಸಿ ಅಂತ ಬಿಡೋದು ಕಡಿಮೆ. ಅಸಲು ಬಿಡೋದೆ ಇಲ್ಲ. ಬಿಟ್ರೂ ಕೂಡ ಗರತಿ ಮುತ್ತು

ಹೆಚ್ಚಾಗಿ ನಮ್ಮಲ್ಲಿ ಕಟ್ಟಿಕೊಳ್ಳುತ್ತಾರೆ. ನನಗೆ ಈ ದೇವರು ಕಟ್ಟಿ ದೇವದಾಸಿ ಮಾಡಿದ್ದಾರೆ. ನಮ್ ಅಪ್ಪ ಇದ್ದಿದ್ರೆ ನನ್ನ ಮನಿತನಕ್ಕೆ ಬಿಡುತ್ತಿರಲಿಲ್ಲ. ಅಲ್ಲದೆಯೇ ಜಡೆ ಬಂದಿರುವ ನನ್ನನ್ನು ಮದುವೆ ಮಾಡಿಕೊಳ್ಳಲು ಮುಂದೆ ಬರಲಿಲ್ಲ. ಅದಕ್ಕೆ ಮುತ್ತು ಕಟ್ಟಿಸಿದರು. ಆಮೇಲೆ ಆ ಜಡೆ ಉದುರಿಹೋಯಿತು. ಈವಾಗ ಪಿಂಚಣಿ ಬರುತ್ತೆ. ಲೋನ್ ತಗಂಡಿನಿ ಅದರಲ್ಲಿ ೧೦,೦೦೦ ನನ್ ಮಗಳ ಹೆಸರಿಗೆ ಇಟ್ಟೀನಿ. ೫,೦೦೦ ಸಾಲ ತೀರಿಸಿನಿ. ಮನೆಯಲ್ಲೆಲ್ಲಾ ನಾನೇ ನೋಡಿಕೊಳ್ಳಬೇಕು. ನನ್ನ ಮಗಳನ್ನು ಶಾಲೆ ದಾಖಲೆಯಲ್ಲಿ ನಮ್ಮ ಅಣ್ಣ-ಅತ್ತಿಗೆಯ ಹೆಸರನ್ನು ಬರೆಸಿನಿ. ಮತ್ತೆ ಯಾಕ ಸುಮ್ನೆ ಆ ಹುಡುಗಿಗೆ ಅವಮಾನ ರೀತಿ ಆಗಬಾರದು ಅಂತ. ನಾನು ಇಲ್ಲಿ ಕೆಲಸಕ್ಕೆ ಬಂದಲ್ಲಿ ಕೂಡ ನಾನು ದೇವದಾಸಿ ಅಂತ ಗುರುತಿಸಿಕೊಂಡಿಲ್ಲ. ನಾನು ದೇವರು ಕಟ್ಟಿರುವ ಮುತ್ತು. ತಾಳಿಯನ್ನು ಯಾರಿಗೂ ಕಾಣದಂತೆ ಒಳಗೆ ಹಾಕಿಕೊಂಡಿದ್ದೇನೆ, ಹೊರಗೆ ತೆಗೆಯುವುದಿಲ್ಲ. ನಾನು ಮದುವೆಯಾಗಿದೆ ಅಂತ ತಿಳಿದಿದ್ದಾರೆ. ನಮ್ಮ ಮಾವನನ್ನು ಗಂಡ ಎಂದು ಪರಿಚಯ ಮಾಡಿಕೊಂಡಿದ್ದೇನೆ. ನನ್ನನ್ನೂ ಯಾರೂ ಕೂಡ ದೇವದಾಸಿ ಅಂತ ಕೀಳಾಗಿ ಕಾಣಲ್ಲ. ನನ್ನ ದೇವಿ ಮೀಸಲು ಬುತ್ತಿ ಇರಿಸಿದ್ದಾಳೆ ಎಂಬುದೇ ಜನರಿಗೆ ಇರೋದು. ಇವತ್ತಿಗೂ ನಮ್ಮ ಮಾವ ಒಬ್ಬಾತೆ ಇರೂದು. ನಮ್ಮ ಮಾವ ಮದುವೆ ಅಗನ ಅಂದ್ರು ನಾನೆ ಬೇಡ ಅಂದೆ. ಏನಂದ್ರೆ, ಒಂದು ಮದುವೆ ಅಷ್ಟೇ ಸಾಕು ಅಂತ ನಾನು ಕೊಡ ಸುಮ್ನಾನಿಗಿನಿ. ಇಲ್ಲಂದ್ರೆ ಮದುವೆ ಆಗುತ್ತಿದ್ದೆ. ನನ್ನ ಹತ್ತಿರ ಬರುವ ಮೊದಲೇ ನಮ್ಮ ಮಾವನಿಗೆ ಮದುವೆಯಾಗಿತ್ತು. ಅದಕ್ಕೆ ಅವರಿಗೆ ಅನ್ಯಾಯ ಆಗಬಾರದು ಈ ದೇವರು ಕಟ್ಟಿದ್ದಾರೆ. ಜೀವನ ಆಗಿದೆ. ಮುಗಿತು ಅಂತ ಸುಮ್ನಾದೆ. ಇನ್ನೇನು ಪಟ್ಟಿಯಲ್ಲಿ ಹೆಸರು ಸೇರಿಸಿನಿ ಪಿಂಚಣಿ ಸರ್ಕಾರದ ಸೌಲಭ್ಯದಲ್ಲಿ ಜೀವನ ಕಳೆಯುತ್ತೇನೆ. ನೆರಳಲ್ಲಿ ದುಡಿದು ತಿನ್ನುತ್ತಿದ್ದೇನೆ. ಏನು ಸರ್ಕಾರ ನಮ್ಮ ಮಕ್ಕಳ ಮೇಲೆ ಇನ್ನಷ್ಟು ಕಣ್ಣು ತೆರೆದು ನೋಡಬೇಕು.

ಹೀಗೆ ದೇವದಾಸಿಯರ ಬದುಕಿನ ಚಿತ್ರಣವನ್ನು ಕಂಡಾಗ ಎಲ್ಲರಲ್ಲಿಯೂ ಕಂಡು ಬರುವುದೇನೆಂದರೆ ಹಸಿವು, ಬಡತನ, ಮೂಢನಂಬಿಕೆ, ಬಾಹ್ಯ ಪ್ರಚೋದನೆಗೆ ಒಳಗಾಗಿ ಈ ದೇವದಾಸಿ ಪದ್ಧತಿಗೆ ಒಳಗಾದವರು ಇವರಾಗಿದ್ದಾರೆ. ದೇವದಾಸಿಯ ಜೀವನವೆ ಸಿಹಿ, ಕಹಿಯನ್ನು ಹಂಚಿಕೊಂಡು ಮುನ್ನಡೆಯುವ ಸಂಗಾತಿ ಇಲ್ಲದೆ ವ್ಯವಹಾರಿಕವಾಗಿ ತಮ್ಮ ದೇಹವನ್ನು ಅಡವಿಡುವುದು. ಭಾವನೆಗಳನ್ನು ಒತ್ತಿಸಿಕೊಂಡು ಹಾಸುಂಡು ಬೀಸಿ ಎಸೆಯುವ ಬಾಳೆ ಎಲೆಯಂತೆ ಇವರ ಜೀವನಗಳಾಗಿವೆ. ಪರಿಶಿಷ್ಟ ಜಾತಿಯ ಸಮುದಾಯದ ದೇವದಾಸಿಯರ ಬದುಕು ಬಹಳ ನಿಕೃಷ್ಟವಾಗಿವೇ. ಇವರು ಜಾತಿಯಿಂದಾಗಿ, ಮಹಿಳೆಯಾಗಿ, ದೇವದಾಸಿಯಾಗಿ ಶೋಷಣೆಯ ಸಂಕಷ್ಟಗಳಿಗೆ ಗುರಿಯಾಗಿದ್ದಾರೆ. ಇನ್ನೂಳಿದಂತೆ ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳ ದೇವದಾಸಿಯರು ಬಡತನ ಮತ್ತು ಆರ್ಥಿಕವಾಗಿ ಸಂಕಷ್ಟಗಳನ್ನು ಅನುಭವಿಸುತ್ತಿದ್ದಾರೆ. ಒಟ್ಟಾರೆಯಾಗಿ ಒಬ್ಬಂಟಿಯಾಗಿ ಎಲ್ಲಾ ದೇವದಾಸಿಯರು ಜೀವನ ನಿಭಾಯಿಸಿಕೊಂಡು ಹೋಗುವ ಅನಿವಾರ್ಯತೆ ಕಂಡುಬಂದಿದೆ. ವಯಸ್ಸು ಇರುವತನಕ ಮಾತ್ರ ಜೀವನ ಸ್ವಲ್ಪಮಟ್ಟಿಗೆ ಸುಗಮವಾಗಿರುತ್ತದೆ. ನಂತರ ಹಲವಾರು ಸಂಕಷ್ಟಗಳ ಮಧ್ಯ ನಿರ್ದಯಿ ಸಮಾಜದೊಳಗೆ ಬದುಕು ಬವಣೆಗಳಿಂದ ಕೊನೆಗಾಣುವುದು ಕಂಡುಬರುತ್ತದೆ. ಎಲ್ಲಾ

ದೇವದಾಸಿಯರಿಗೂ ಹೃದಯ, ಮನಸ್ಸುಗಳಿವೆ, ನೋವು – ಸಮಸ್ಯೆಗಳಿವೆ. ಅವುಗಳನ್ನು ತಿಳಿದುಕೊಂಡು ಈ ಬಗ್ಗೆ ಸಮಾಜದ ಪ್ರತಿಯೊಬ್ಬರು ಅವರನ್ನು ಕೀಳಾಗಿ ಕಾಣುವ ಬದಲು ಮಾನವೀಯತೆಯಿಂದ ನಡೆದುಕೊಳ್ಳಬೇಕಾದ ಅಗತ್ಯ ತುಂಬಾ ಇದೆ.

**ಆಧಾರ ಗ್ರಂಥಗಳು**


ಕೃಷ್ಣವೇಣಿ ಆರ್, *ಹುಲಿಗೆಮ್ಮ ಜಾನಪದದಲ್ಲಿ ಮಹಿಳಾ ಪ್ರತಿನಿಧಿಕರಣ*. ೨೦೦೭

ಕೊಟ್ರೇಶ ಎಂ, *ಉಚ್ಚಂಗಿದುರ್ಗ*, ೧೯೬೬

ಕೊತ್ಲಮ್ಮ, *ಬಳ್ಳಾರಿ ಜಿಲ್ಲೆಯ ಬುಡಕಟ್ಟು ದೇವದಾಸಿಯರ ಅಧ್ಯಯನ*, ೨೦೦೮

ಗುಡಿಹಳ್ಳಿ ನಾಗರಾಜ ಕೆ, *ರಂಗಸಿರಿ*, ೨೦೧೫

ಚಂದ್ರಶೇಖರ್ ಟಿ ಆರ್, *ಮಹಿಳೆ: ಆರ್ಥಿಕತೆ ಮತ್ತು ಅಭಿವೃದ್ಧಿ*, ೨೦೦೧

ಜ್ಯೋತಿ ಶಶಿಕುಮಾರ್, *ಶಿಕ್ಷಣ ವ್ಯವಸ್ಥೆ ಮತ್ತು ಮಹಿಳೆ*, ೨೦೦೭

ನಾರಾಯಣ ಗಿರಿಯಪ್ಪ, *ಕನಕಗಿರಿ ಸಂಕಥನ*, ೨೦೦೯

ನೇಗಿನಹಾಳ ಎಂ ಬಿ, *ಮೈಲಾರಲಿಂಗ–ಖಂಡೋಬಾ*, ೧೯೯೨

ಪುತ್ತಿ ವಸಂತಕುಮಾರ, *ಬಸ್ರೂರಿನ ದೇವದಾಸಿ ಪದ್ಧತಿ*, ೨೦೦೨

ಪೂರ್ವಾಚಾರ್ ಎಂ(ಸಂ), *ಸ್ತ್ರೀ ಪಂವೇದನೆ*, ೨೦೧೪

ಪ್ರಸನ್ನ ಕುಮಾರ್, *ಬದಲಾವಣೆಯ ಹಾದಿಯಲ್ಲಿ ದೇವದಾಸಿಯರು*, ೨೦೧೪

ಮರುಳಸಿದ್ದಪ್ಪ, *ಸಮಾಜಕಾರ್ಯ ವಿಶ್ವಕೋಶ*, ೧೯೮೩

ವೀರೇಂದ್ರ ಶೀಲವಂತ, *ಕೃಷಿ ಆಚರಣೆಗಳು*, ೨೦೧೦

ಸಂತೋಷ್‌ಕುಮಾರ್ ಎಚ್ ಬಿ, *ಹೈದ್ರಾಬಾದ್ ಕರ್ನಾಟಕದಲ್ಲಿ ಸಾಮಾಜಿಕ ಚಳುವಳಿ*,೨೦೧೨

ಸಣ್ಣವೀರೇಶ್ ಪಿ, *ಬೇಡ ಮಹಿಳೆಯರ ಆರ್ಥಿಕತೆ*, ೨೦೧೬

ಸುಜಾತ ಕುಮುಟಾ, *ಮಹಿಳೆ ಮತ್ತು ರಂಗಭೂಮಿ*, ೨೦೦೦

ಸುಜಾತ ಅಕ್ಕಿ, *ಬಳ್ಳಾರಿ ಜಿಲ್ಲೆಯ ರಂಗ ನಟಿಯರ ಅಧ್ಯಯನ*, ೨೦೦೪

# ಅಧ್ಯಾಯ: ಆರು
# ದೇವದಾಸಿಯರು ಮತ್ತು ಪುನರ್ವಸತಿ ಯೋಜನೆಗಳು

# ಅಧ್ಯಾಯ: ಆರು

## ದೇವದಾಸಿಯರು ಮತ್ತು ಪುನರ್ವಸತಿ ಯೋಜನೆಗಳು

ಭಾರತವು ಪ್ರಪಂಚದಲ್ಲಿಯೇ ಅಧಿಕ ಸಂಖ್ಯೆಯಲ್ಲಿ ದೇವ-ದೇವತೆಗಳನ್ನು ಹೊಂದಿರುವ ರಾಷ್ಟ್ರವಾಗಿದೆ. ಭಾರತವು ದೇವಾಲಯಗಳ ತವರೂರು ಎಂದು ಪ್ರಸಿದ್ಧವಾಗಿದೆ. ಈ ದೇಶ'ದಲ್ಲಿ ೩೩ ಕೋಟಿ ದೇವತೆಗಳಿದ್ದಾರೆ ಎಂಬ ನಂಬಿಕೆ ಇದೆ. ಅಲ್ಲದೆ ಗ್ರಾಮಗಳಲ್ಲಿ ವಿಶಿಷ್ಟವಾದ ದೇವತೆಗಳು ಎಣಿಕೆ ಇಲ್ಲದಷ್ಟಿವೆ. ದೇವಾಲಯಗಳಲ್ಲಿ ದೇವರ ಸೇವೆಗೆಂದು ಹೆಣ್ಣು ಮಕ್ಕಳನ್ನು ಬಿಡುವ ಪದ್ಧತಿಯನ್ನು ಕಾಣಲಾಗುತ್ತದೆ. ಕರ್ನಾಟಕದಲ್ಲಿ ದೊರೆಯುವ ಅನೇಕ ಶಾಸನಗಳು ದೇವಾಲಯಗಳಿಗೆ ಅಂಗಭೋಗ ಮತ್ತು ರಂಗಭೋಗ ಎಂಬ ಎರಡು ಬಗೆಯ ಸೇವೆಯನ್ನು ಅರ್ಪಿಸುವುದನ್ನು ತಿಳಿಸುತ್ತವೆ. ಅಂಗಭೋಗ ಸೇವೆ ಎಂದರೆ? ದೇವರ ಗರ್ಭಗೃಹಕ್ಕೆ ಸಂಬಂಧಿಸಿದ ಕಾರ್ಯಗಳನ್ನು ಮಾಡುವ ವರ್ಗದವರಾಗಿದ್ದಾರೆ. ದೇವರ ಸ್ನಾನ, ಅಭಿಷೇಕ, ಗಂಧದ ಲೇಪನ, ಧೂಪ, ದೀಪ, ಪೂಜೆ, ನೈವೇದ್ಯ ಸಮರ್ಪಣ ಕಾರ್ಯ ಅಂಗಭೋಗದವರ ಕರ್ತವ್ಯವಾಗಿದೆ. ಇವರನ್ನು ಪೆರಿಯರವಾಳ, ತೆರೆಯಸೂಳೆ, ತೆರೆಯ ಮರೆಯಸೂಳೆ ಹೀಗೆ ಪರ್ಯಾಯ ನಾಮಗಳನ್ನು ಶಾಸನಗಳು ಬಳಸಿವೆ. ರಂಗಭೋಗದ ಸೇವೆಗಿಂತ ಇವರಿಗೆ ಕೊಟ್ಟದಾನ ಪ್ರಮಾಣ ಅಧಿಕವಾಗಿರುವುದರಿಂದ ಇವರು ಅವರಿಗಿಂತ ಸ್ವಲ್ಪ ಮೇಲ್ಮಟ್ಟದವರಾಗಿರಬೇಕೆಂದು ತಿಳಿಯುತ್ತದೆ. ದೇವರ ಗರ್ಭಗೃಹದಲ್ಲಿ ಅಂಗಭೋಗದ ಸೇವಕರಿಗೆ ಮಾತ್ರ ಪ್ರವೇಶವಿದ್ದಂತೆ ಕಂಡುಬರುತ್ತದೆ. ರಂಗಭೋಗದ ಸೇವೆ ಎಂದರೆ? ಗರ್ಭಗುಡಿಯ ಮುಂದೆ ನವರಂಗದಲ್ಲಿ ನಡೆಯುವ ಮಂತ್ರದ, ಚಾಮರದ, ಜಗಲದ ಮತ್ತು ಕಂಬದ ಸೇವಕರೆಂದು ಕರೆಯುತ್ತಿದ್ದರು. ಈ ಹಿನ್ನೆಲೆಯಲ್ಲಿ ದೇವದಾಸಿ ಸಂಪ್ರದಾಯ ಬೆಳೆದುಬಂದಿದೆ ಎಂದು ಹೇಳಬಹುದು.

ಹಿಂದಿನ ಕಾಲದಲ್ಲಿ ದೇವಾಲಯದಲ್ಲಿರುವ ದೇವದಾಸಿಯರಿಗೆ ಸಮಾಜವು ವಿಶೇಷವಾದ ಸ್ಥಾನಮಾನ ಗೌರವ ನೀಡುತ್ತಿದ್ದರು. ದೇವರ ಪೂಜಾ ಕಾರ್ಯ, ಮದುವೆ ಹೀಗೆ ಶುಭಸಮಾರಂಭಗಳಲ್ಲಿ ಅವರಿಗೆ ಪ್ರಧಾನ ಸ್ಥಾನವನ್ನು ನೀಢುತ್ತಿದ್ದರು. ಅಲ್ಲದೆ ಆ ಕಾಲದ ದೇವದಾಸಿಯರು ಅನೇಕ ದಾನದತ್ತಿಗಳನ್ನು ನೀಡಿ ಕೆರೆಗಳನ್ನು ಕಟ್ಟಿಸಿರುವುದನ್ನು ನಾವು ಶಾಸನಗಳಿಂದ ತಿಳಿಯಬಹುದು.

ದೇವದಾಸಿಯರು ದೇವಾಲಯಕ್ಕೆ ಅಷ್ಟೇ ಮೀಸಲಾಗಿರದೆ ರಾಜರ ಆಸ್ಥಾನದಲ್ಲಿಯೂ ಇರುತ್ತಿದರು. ಹಾಗಾಗಿ ದೇವದಾಸಿಯರ ಮತ್ತು ದೇವಾಲಯದ ಪೋಷಣೆಯ ಹೊಣೆಗಾರಿಕೆ ಆ ರಾಜ್ಯದ ರಾಜನದಾಗಿತ್ತು. ಕಾಲಕ್ರಮೇಣ ರಾಜಮನೆತನಗಳು ಅವನತಿಗೊಂಡತೆ ದೇವಾಲಯ ಮತ್ತು ದೇವದಾಸಿಯರ ಪೋಷಣೆ ನಿಂತುಹೋಗಿ, ದೇವಾಲಯದಲ್ಲಿರುವ ದೇವದಾಸಿಯರು ಹೊರಬಂದರು. ಅಲ್ಲಿಂದ ಅವರ ಸ್ಥಿತಿ ಚಿಂತಾಜನಕವಾಯಿತು ಎನ್ನಬಹುದು. ಕಾಲಾಂತರದಲ್ಲಿ ದೇವದಾಸಿ ಪದ್ಧತಿಯು ರಾಜಕೀಯ, ಸಾಮಾಜಿಕ, ಮತ್ತು ಆರ್ಥಿಕ ಕಾರಣಗಳಿಂದಾಗಿ ರೂಪಾಂತರ ಹೊಂದಿ, ಹಲವಾರು ಬದಲಾವಣೆಗಳಿಂದ ವಾಣಿಜ್ಯ ವ್ಯವಹಾರಿಕ ಸ್ವರೂಪವನ್ನು ಪಡೆಯಿತು. ಜೊತೆಗೆ ದೇವದಾಸಿ ಮಹಿಳೆಯರು ಸಾಕಷ್ಟು ಆಯಾಮಗಳಿಂದ ಶೋಷಣೆಗೆ ಒಳಗಾಗಿರುವುದನ್ನು ನೋಡಬಹುದಾಗಿದೆ. ಹೀಗೆ ಶೋಷಣೆಗೆ ಒಳಾಗಾಗಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ದುರ್ಬಲರಾಗಿರುವ ದೇವದಾಸಿಯರಿಗೆ ಪುನರ್ವಸತಿ ಯೋಜನೆಗಳನ್ನು ಕಲ್ಪಿಸಿದ್ದಾರೆ. ಬಳ್ಳಾರಿ ಜಿಲ್ಲೆನ್ನು ವ್ಯಾಪ್ತಿಯನ್ನಾಗಿಟ್ಟುಕೊಂಡು ದೇವದಾಸಿಯರು ಪುನರ್ವಸತಿ ಯೋಜನೆಗಳನ್ನು ಪಡೆಯುವಲ್ಲಿ ಎದುರಾಗುವ ಸಮಸ್ಯೆಗಳ ಕುರಿಯಾಗಿ ತಿಳಿಯುವ ಅವಶ್ಯಕತೆ ಇದೆ.

**೬.೧ ದೇವದಾಸಿಯರ ಸ್ಥಿತಿ**

ದೇವರ ಹೆಸರಿನಲ್ಲಿ ಹೆಣ್ಣು ಮಕ್ಕಳನ್ನು ಬಿಡುವ ಸಂಪ್ರದಾಯ ಈಗಲೂ ಸಮಾಜದಲ್ಲಿ ಕಾಣುವಂತದ್ದಾಗಿದೆ. ಪ್ರಸ್ತುತ ಸಂಧರ್ಭದಲ್ಲಿ ಕೆಲವು ಜಾತಿಗಳಲ್ಲಿ ಈ ಪದ್ಧತಿ ಇದೆ. ಅವುಗಳೆಂದರೆ ಚಲುವಾದಿಗರು, ಚೆನ್ನದಾಸರು, ಡೊಂಬರು, ಕೊರವರು, ವಡ್ಡರು, ನಾಯಕರು, ಗಂಗಾಮತಸ್ಥರು ಮತ್ತು ಕುರುಬರು. ವಿಶೇಷವಾಗಿ ಮಾದಿಗರಲ್ಲಿ ಹೆಚ್ಚಾಗಿ ಈ ಪದ್ಧತಿ ಇರುವುದನ್ನು ಕಾಣುತ್ತೇವೆ. ಹೀಗೆ ದೇವರಿಗೆ ಬಿಡುವುದು ಹೆಣ್ಣು ಮತ್ತು ಗಂಡು ದೇವರುಗಳಿಗೆ ಹೆಣ್ಣನ್ನು ಅರ್ಪಿಸುವ ಸಂಪ್ರದಾಯವಿದೆ. ಹೆಣ್ಣು ದೇವತೆಗೆ ಸೇರಿದ ಸವದತ್ತಿ ಎಲ್ಲಮ್ಮ, ಗುಲ್ಬರ್ಗದ ಆಳಂದ ತಾಲೂಕಿನ ಚುಂಚುರು ಮಾಪುರ ತಾಯಿ, ಹಡಗಲಿಯ ಎಲ್ಲಮ್ಮ, ರಾಯಚೂರು ಜಿಲ್ಲೆಯ ಅರೋಲಿ ಹುಲಿಗೆಮ್ಮ, ಕೊಪ್ಪಳ ತಾಲೂಕಿನ ಹುಲಿಗೆಮ್ಮ, ಹರಪ್ಪನಹಳ್ಳಿಯ ಉಚ್ಚಂಗಿದುರ್ಗ, ಚಂದ್ರಗುತ್ತಿ ಮುಂತಾದವುಗಳ ಮೂಲ ಒಂದೇ ಆಗಿವೆ. ಇವುಗಳೆಲ್ಲವು ದೇವದಾಸಿಯರನ್ನು ಹುಟ್ಟಿಸುವ ಕೇಂದ್ರ ಸ್ಥಳಗಳಾಗಿವೆ. ಈ ಎಲ್ಲ ದೇವತೆಗಳ ದೇವಸ್ಥಾನಗಳ ಪಕ್ಕದಲ್ಲಿ ನದಿ ಇಲ್ಲವೆ ಹಳ್ಳಗಳು ಹರಿಯುತ್ತಿವೆ. ಹಾಗಾಗಿ ಜಲ ಪರಂಪರೆ ಸೇರಿದೆ ಎಂದು ಹೇಳಬಹುದು. ದೇವತೆಗಳಿಗೆ ಮುತ್ತು ಕಟ್ಟುವ ಸಂಪ್ರದಾಯದ ಮೂಲಕ ಹೆಣ್ಣನ್ನು ದೇವರಿಗೆ ಬಿಡುತ್ತಾರೆ. ಗಂಡು ದೇವರುಗಳಾದ ಹನುಮಂತ, ಈರಣ್ಣ, ಕನಕರಾಯ, ಮತ್ತು ಮಲ್ಲಯ್ಯ ಇವರಿಗೆ ಮುದ್ರೆ ಹಾಕುವ ಮೂಲಕ ದೇವರಿಗೆ ಬಿಡುತ್ತಾರೆ. ಹಾಗಾಗಿ ಇದು ಅಗ್ನಿ ಪರಂಪರೆಗೆ ಸೇರುತ್ತದೆ ಎಂದು ಹೇಳಬಹುದು.ಹೀಗೆ ದೇವರ ಹೆಸರಿನಲ್ಲಿ ಹೆಣ್ಣು ಮಕ್ಕಳನ್ನು ಅರ್ಪಿಸಿ ದೇವದಾಸಿಯನ್ನಾಗಿ ಮಾಡಲು ಆನೇಕ ಕಾರಣಗಳನ್ನು ನೋಡಬಹುದು. ದೇವದಾಸಿ ಪದ್ಧತಿಗೆ ಬಿಡಲು ಕಾರಣಗಳನ್ನು ಎರಡು ಅಂಶಗಳಲ್ಲಿ ನಾವು ನೋಡಬಹುದು. ೧. ಧಾರ್ಮಿಕ ಅಂಶ ೨. ಸಾಮಾಜಿಕ ಅಂಶಗಳು. ಪ್ರಾಚೀನ ಕಾಲದಲ್ಲಿ ದೇವಾಲಯದಲ್ಲಿ ಸಂಗೀತ, ನೃತ್ಯ ಮತ್ತು ಇತರೆ ಕಾರ್ಯಗಳಿಗಾಗಿ

ದೇವದಾಸಿಯನ್ನಾಗಿ ಮಾಡುತ್ತಿದ್ದರು. ಆದರೆ ಆಧುನಿಕ ಕಾಲದಲ್ಲಿ ದೇವದಾಸಿಯಾಗಿ ಬಿಡಲು ಕಾರಣಗಳು ಬೇರೆಯಾಗಿವೆ. ಧಾರ್ಮಿಕ ಅಂಶಗಳಲ್ಲಿ ನೋಡುವುದಾದರೆ ಜಡೆ ಕಟ್ಟುವುದು, ದೇವರು ಮೈಮೇಲೆ ಬರುವುದು, ದೇವರಿಗೆ ಹರಕೆ ತೀರಿಸುವುದು, ಗಂಡು ಸಂತಾನ ಇಲ್ಲದಿರುವುದು, ಮುಪ್ಪಿನಲ್ಲಿ ತಂದೆ ತಾಯಿಗೆ ಆಸರೆಯಾಗಿರಲು, ತುಂಬ ದಿನಗಳಾದರೂ ಮದುವೆಯಾಗದಿರುವುದು, ವಿಕಲಚೇತನರಾಗಿರುವುದು, ಬುದ್ಧಿ ಮಾಂದ್ಯಮಂದವಾಗಿರುವುದು, ವಂಶ ಪಾರಂಪರ್ಯವಾಗಿ ಈ ತೆರೆನಾದ ಸಾಮಾಜಿಕ ಕಾರಣಗಳಿಂದ ಹೆಣ್ಣನ್ನು ದೇವರ ಹೆಸರಿನಲ್ಲಿ ಶೋಷಣೆಗೊಳಪಡಿಸಿದ್ದಾರೆ.

ಪ್ರಾರಂಭದಲ್ಲಿ ದೇವದಾಸಿಯರನ್ನು ಸಾಮಾಜವು ಗೌರವ, ದೈವಭಾವನೆಯಿಂದ್ ನೋಡುತ್ತಿತ್ತು. ದೇವದಾಸಿಯರನ್ನು ಹಬ್ಬದ ಆಚರಣೆ, ಜಾತ್ರೆ ಉತ್ಸವ ಮತ್ತು ಮದುವೆಯಂತಹ ಶುಭ ಕಾರ್ಯಗಳಿಗೆ ಆಹ್ವಾನಿಸುತ್ತಿದ್ದರು. ಯಾವುದೇ ಶುಭ ಸಮಾರಂಭಗಳಲ್ಲಿ ಮೊದಲನೇ ಆದ್ಯತೆ ನೀಡಿ ಇವರಿಗೆ ಮೊದಲು ಊಟ ಬಡಿಸುತ್ತಾರೆ. ನಂತರ ಉಳಿದವರಿಗೆ ಊಟೋಪಾಚರಗಳು ನಡೆಯುತ್ತಿದವು. ಈಗಲೂ ಕೆಲವು ಧಾರ್ಮಿಕ ಕಾರ್ಯಗಳಲ್ಲಿ ದೇವದಾಸಿಯರು ಪ್ರಮುಖ ಪಾತ್ರ ವಹಿಸುತ್ತಾರೆ. ಹೀಗೆ ಶೋಷಣೆಗಳ ಮಧ್ಯದಲ್ಲಿಯು ಸಮಾಜದಲ್ಲಿ ಇವರಿಗಾಗಿ ಗೌರವ ಭಾವನೆ ಇತ್ತೆಂದು ಹೇಳಬಹುದು. ಕಲಾಂತರದಲ್ಲಿ ಅದರ ಸ್ವರೂಪವೇ ಬದಲಾಗುತ್ತಾ ಹೋದಂತೆಲ್ಲ ಅದು ಒಂದು ಕಸುಬಾಗಿ ಮಾರ್ಪಟ್ಟಿತು. ಇದರಿಂದ ಹಲವಾರು ಮಹಿಳೆಯರು ರೋಗಗಳಿಗೆ ತುತ್ತಾಗಿ ಅನಾರೋಗ್ಯದಿಂದ ಬಳಲಿ ಮರಣ ಹೊಂದಿದರು. ಇನ್ನು ಉಳಿದ ದೇವದಾಸಿಯರಿಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಗೌರವ ಸ್ಥಾನಮಾನ ಇಲ್ಲದಂತಾಗಿ ಕೇವಲವಾಗಿ ಕಾಣಲಾರಂಭಿಸಿದರು. ದೇವದಾಸಿಯರನ್ನು ಕಂಡರೆ ಸಾಕು ಕಾಮದ ದೃಷ್ಟಿಕೋನದಿಂದಲೇ ನೋಡಲಾರಂಭಿಸುವರು. ದೇವದಾಸಿ ಮಹಿಳೆಯನ್ನು ಇಟ್ಟುಕೊಂಡವರು ಕೊನೆಯ ತನಕ ಇಟ್ಟುಕೊಳ್ಳುತ್ತಿದ್ದರು. ಕೆಲವರು ಬೇಡವೆನ್ನಿಸಿದಾಗ ಬಿಡುತ್ತಿದ್ದರು. ಹಾಗಾಗಿ ಒಬ್ಬರ ನಂತರ ಇನ್ನೊಬ್ಬರ ಜೋತೆ ಸಂಬಂಧ ಬೆಳೆಸುತ್ತ ಜೀವನ ಸಾಗಿಸುತ್ತಿದ್ದರು. ಆದ್ದರಿಂದ ಸಮಾಜ ಅವಳನ್ನು ಸೂಳೆ ಎನ್ನುವ ಮೂಲಕ ಗುರುತಿಸತೊಡಗಿತ್ತು. ಹೀಗೆ ಸಮಾಜವು ಕಳಂಕಿತಳಾಗಿ, ಅನಿಷ್ಟ ರೀತಿಯಲ್ಲಿ ದೇವದಾಸಿಯನ್ನು ಕಾಣುತ್ತದೆ. ಇನ್ನು ದೇವದಾಸಿ ಮಕ್ಕಳ ಪಾಡು ನೋಡಿದರೆ ತಂದೆ ಯಾರು ಎಂದು ಸಮಾಜಕ್ಕೂ ಮಕ್ಕಳಿಗೂ ಗೊತ್ತಿದ್ದರೂ, ಅಪ್ಪ ಎಂದು ಹೆಸರು ತೆಗೆಯುವಂತಿಲ್ಲ. ಆಸ್ತಿಯಲ್ಲಿ ಪಾಲು ಕೇಳುವಂತಿಲ್ಲ, ಹಾಗಾಗಿ ಅವರ ಮಕ್ಕಳಿಗೆ ದೇವದಾಸಿ ಮಹಿಳೆಯೇ ತಾಯಿಯಾದವಳು ತಂದೆ ಸ್ಥಾನವನ್ನ ತುಂಬಿ ಮಕ್ಕಳನ್ನು ಬೆಳೆಸುತ್ತಾಳೆ. ಶಾಲೆಗೆ ಹೆಸರು ಸೇರಿಸುವಾಗ ತಂದೆ ಹೆಸರಿನ ಬದಲಾಗಿ ತಾಯಿಯ ಹೆಸರನ್ನು ಬರೆಸುತ್ತಾರೆ. ಅಲ್ಲಿಂದ ಮಕ್ಕಳು ಕೂಡ ಅಪಮಾನಕ್ಕೆ ಗುರಿಯಾಗುತ್ತಾರೆ. ಈ ಸಮಾಜವು ದೇವದಾಸಿರಯನ್ನು ಮತ್ತು ಅವರ ಮಕ್ಕಳನ್ನು ಹೀನವಾದ ದೃಷ್ಟಿಕೋನದಲ್ಲಿ ನೋಡುತ್ತದೆ.

ದೇವದಾಸಿಯರು ಹಲವಾರು ವರ್ಷಗಳ ಕಾಲ ತಮ್ಮ ಹೊಟ್ಟೆಪಾಡಿಗೋಸ್ಕರ ಕೆಲಸ ಮತ್ತು ಮೇಲ್ವರ್ಗದ ಜನರ ಲೈಂಗಿಕ ಶೋಷಣೆಗೆ ಗುರಿಯಾಗಿ ಮೋಸಗೊಂಡು ಸಮಾಜದಲ್ಲಿ ಉತ್ತಮ ಸ್ಥಾನಮಾನ ಇರಲಾರದೆ ಒಂದು ರೀತಿ ನಿರ್ಗತಿಕರಾಗಿ ಬದುಕು ನಡೆಸುವುದು ಅನಿವಾರ್ಯವಾಗಿತ್ತೆಂದು

ಹೇಳಲಾಗುವುದು. ಸಾವಿರಾರು ವರ್ಷಗಳ ಕಾಲ ಸಾಮಾಜದ ನಿಂದನೆಗೆ ಗುರಿಯಾಗಿರುವ ಇವರನ್ನು ಸರ್ಕಾರ ಸಂಘ ಸಂಸ್ಥೆಗಳು ದೇವದಾಸಿಯರ ಸುಧಾರಣೆಗೋಸ್ಕರ ಹಲವಾರು ಹೋರಾಟ, ಪ್ರತಿಭಟನೆ ಮಾಡುತ್ತಾ ಅನೇಕ ರೀತಿಯ ಜಾಗೃತಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದರ ಮೂಲಕ ಮತ್ತು ಸರ್ಕಾರ ೧೯೮೨ರಲ್ಲಿ ದೇವದಾಸಿ ಸಮರ್ಪಣಾ ನಿಷೇದ ಕಾಯ್ದೆ ಜಾರಿಗೆ ತಂದಿರುವುದರ ಪ್ರಯುಕ್ತ ಅವರಲ್ಲಿ ದೇವದಾಸಿ ಪದ್ಧತಿ ಕಣ್ಮರೆಯಾಗುತ್ತಿದೆ. ಆದರೂ ಸರ್ಕಾರ ಮತ್ತು ಕಾನೂನು ಕಣ್ಣು ತಪ್ಪಿಸಿ ತೆರೆ ಮರೆಗಳಲ್ಲಿ ಇನ್ನು ಈ ಪದ್ಧತಿ ನಡೆಯುವುದನ್ನು ಪ್ರಸ್ತುತ ಕಾಣಬಹುದಾಗಿದೆ.

ದೇವದಾಸಿಯರು ಆರ್ಥಿಕವಾಗಿ ದುರ್ಬಲರಾಗಿದ್ದಾರೆ. ಯಾವುದೇ ರೀತಿಯ ಆಸ್ತಿ ಅಂತಸ್ತು ಇರದೇ ಕೃಷಿ ಕೂಲಿಯ ಮೇಲೆ ಅವಲಂಬಿತರಾಗಿದ್ದಾರೆ. ಹಾಗಾಗಿ ಇವರ ಆದಾಯ ತುಂಬಾ ಕಡಿಮೆಯಾಗಿದೆ. ಬಡತನದ ಜೀವನ ಸಾಗಿಸುತ್ತಾ ಒಂದೊತ್ತು ಊಟಕ್ಕೆ ಗತಿಯಿಲ್ಲದೇ ಪರದಾಡುವ ಸ್ಥಿತಿಯಿದೆ. ಇವರ ಬದುಕನ್ನು ಸುಧಾರಿಸಲು ಡಾ.ಜೋಗನ್ ಶಂಕರ್‌ರವರು ಸಾಮಾಜಿಕ ಕಳಕಳಿಯನ್ನು ಹೊಂದಿರುವ ಅಥಣಿಯ ನ್ಯಾಯವಾದಿ ಬಿ.ಎಲ್.ಪಾಟೀಲರಲ್ಲಿ ಈ ಪದ್ಧತಿಯ ನಿರ್ಮೂಲನೆಗೆ ಸಂಬಂಧಿಸಿದ ಅಂಶಗಳನ್ನು ಚರ್ಚಿಸಿದರು. ಪಾಟೀಲರು ೧೯೮೫ ಮಾರ್ಚ್ ೨೪ ರಂದು ವಿಮೋಚನಾ ದೇವದಾಸಿ ಪುನರ್ವಸತಿ ಸಂಘವನ್ನು ಸ್ಥಾಪಿಸಿದರು. ಈ ಸಂಘವು ದೇವದಾಸಿಯರ ಬದುಕನ್ನು ಸುಧಾರಿಸಲು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಮಹಿಳೆಯರಿಗೆ ಆದಾಯ ಉತ್ಪಾದನಾ ಚಟುವಟಿಕೆಗಳಾದ ಕೈಮಗ್ಗದಲ್ಲಿ ನೇಯ್ಗೆ ಅರಿವು ಮೂಡಿಸುವ ಶಿಬಿರಗಳು, ಆರೋಗ್ಯ ತಪಾಸಣೆ ಶಿಬಿರಗಳು, ಆರ್ಥಿಕ ಸಬಲತೆಗಾಗಿ ಹೈನುಗಾರಿಕೆ, ಸಾಲ ನೀಡಿಕೆ, ಮನೆ ಕಟ್ಟಿಸಿ ಕೊಡುವುದು ಮುಂತಾದ ಸೌಲಭ್ಯಗಳನ್ನು ನೀಡಲಾಗಿದೆ. ದೇವದಾಸಿಯರಾಗುವ ಆಚರಣೆ ಮತ್ತು ಸಂಪ್ರದಾಯವನ್ನು ನಿಲ್ಲಿಸುವುದು. ಭಿಕ್ಷೆ ಬೇಡುವುದನ್ನು ನಿಲ್ಲಿಸಿ, ಸ್ವಾಭಿಮಾನದಿಂದ ಬದುಕು ನಡೆಸುವಂತೆ ಪ್ರೇರೇಪಿಸಿ ನೆರವಾಗಲು ದೇವದಾಸಿ ಮಹಿಳೆಯರಿಂದ ಸ್ವಸಹಾಯ ಸಂಘಗಳನ್ನು ಸ್ಥಾಪಿಸಲಾಗಿದೆ. ದೇವದಾಸಿ ಮಹಿಳೆಯರಿಗೆ ವೃದ್ಧಾಪ್ಯ ವೇತನ, ತಿಂಗಳಿಗೆ ೧೫೦೦ ರೂಪಾಯಿ ಮಾಸಿಕ ವೇತನ, ಅವರ ಮಕ್ಕಳಿಗೆ ಆಶ್ರಯ ಶಾಲೆಗಳಲ್ಲಿ ಶಿಕ್ಷಣ ಕೊಡಿಸುವುದು, ದೇವದಾಸಿ ಮಹಿಳೆಯರನ್ನು ಮದುವೆಯಾಗಿ ಹೊಸಬಾಳು ನೀಡುವವರಿಗೆ ಪ್ರೋತ್ಸಾಹ ಧನವನ್ನು ನೀಡುವುದು. ಇದರ ಮೂಲಕ ದೇವದಾಸಿ ಮತ್ತು ಅವರ ಮಕ್ಕಳ ಬದುಕನ್ನು ರೂಪಿಸುವ ಜೊತೆಗೆ ಆರ್ಥಿಕವಾಗಿ ದೇವದಾಸಿಯರನ್ನು ಬಲಪಡಿಸುವ ನಿಟ್ಟಿನಲ್ಲಿ ಕೆಲಸ ನಿರ್ವಹಿಸುತ್ತಿದೆ.

**೬.೨ ಪುನರ್ವಸತಿ ಯೋಜನೆಗಳು**

ಪುನರ್ವಸತಿ ಪದದ ಅರ್ಥವನ್ನು ನಿಘಂಟಿನಲ್ಲಿ ಪುನಃಸ್ಥಾಪನೆ, ಮರುವಸತಿ, ಮತ್ತೆವಾಸ ಮಾಡುವುದು ಎಂದು ಹೇಳಿದ್ದಾರೆ. ದೇವದಾಸಿಯರಿಗೆ ಪುನರ್ವಸತಿ ಯೋಜನೆಗಳು ರೂಪುಗೊಂಡಾಗ ದೇವದಾಸಿ ಮಹಿಳೆಯರ ಸದ್ಯದ ಜೀವನೋಪಾಯ ಸ್ಥಿತಿಯನ್ನು ಬದಲಾಯಿಸಿ ಉತ್ತಮ ಸ್ಥಿತಿಯ ಜೀವನೋಪಾಯ ಕಲ್ಪಿಸುವ ಉದ್ದೇಶ ಹೊಂದಿತ್ತು. ಅಂದರೆ ವ್ಯವಸಾಯಕ್ಕೆ ಭೂಮಿ, ವಸತಿಗೆ ಮನೆ, ಕೈಗೊಂದು ಕಸುಬು, ಮಕ್ಕಳಿಗೊಂದು ಶಾಲೆ ಇವುಗಳು ದೇವದಾಸಿಯರ ಬದುಕನ್ನು ರೂಪಿಸಲು

ಉತ್ತಮ ಮಾರ್ಗಗಳು ಎಂಬುದರಲ್ಲಿ ಅನುಮಾನವಿಲ್ಲ. ಆದರೆ ಈ ಯೋಜನೆಯ ಮಾರ್ಗಗಳು ದೇವದಾಸಿ ಪದ್ಧತಿಯ ಮೂಲ ಕಾರಣವನ್ನು ತಲುಪುತ್ತವೆಯೇ? ದೇವದಾಸಿ ಮಹಿಳೆಯರು ಈ ದೇವದಾಸಿ ಪದ್ಧತಿಯ ವಿರುದ್ಧ ಮತ್ತು ಶೋಷಣೆಯ ವಿರುದ್ಧ ಪ್ರಶ್ನಿಸುವ ಆತ್ಮಸ್ಥೈರ್ಯವನ್ನು ಬೆಳೆಸಿಕೊಳ್ಳಲು ಅವಕಾಶಗಳನ್ನು ಸೃಷ್ಟಿಸುತ್ತವೆಯೇ? ದೇವರ ಮೇಲಿನ ನಂಬಿಕೆ ಭಯ(ಮೂಢನಂಬಿಕೆ)ಗಳನ್ನು ಮೆಟ್ಟಿ ನಿಲ್ಲುವಂತಹ ಮಾನಸಿಕ ಸ್ಥೈರ್ಯವನ್ನು ಇವು ನೀಡುತ್ತವೆಯೇ? ಈ ಪದ್ಧತಿಯನ್ನು ತೊಡೆದು ಹಾಕಲು ನಡೆಸುವ ಮಹಿಳೆಯರ ಪ್ರಯತ್ನಗಳಿಗೆ ಬೆಂಬಲಿತ ಪರಿಸರವನ್ನು ನಿರ್ಮಿಸಬಲ್ಲದೇ? ಹೀಗೆ ಇವುಗಳ ಕುರಿತಾಗಿ ಚರ್ಚಿಸತೊಡಗಿದ ಕಾರಣಕ್ಕಾಗಿ ಈ ಯೋಜನೆಗಳು ಬದಲಾವಣೆ ತಂದುಕೊಳ್ಳಲು ಸಾಧ್ಯವಾಯಿತು. ಯಾವುದರಲ್ಲಾದರೂ ಬದಲಾವಣೆಗಳು ಅಲ್ಪಾವಧಿಯಲ್ಲಿ ಆಗುವ ಕ್ರಿಯೆಗಳಲ್ಲ. ಹಾಗಾಗಿ ನಿಧಾನವಾಗಿ ಬದಲಾವಣೆಗಳು ಅನುಭವಗಳ ಆಧಾರದ ಮೇಲೆ ಅವಶ್ಯಕತೆಗಳಿಗೆ ತಕ್ಕಂತೆ ಆಗಿವೆ.

**ದೇವದಾಸಿ ಪುನರ್ವಸತಿ ಯೋಜನೆಯ ಹುಟ್ಟಿನ ಹಿನ್ನೆಲೆ**

ದೇವರ ಹೆಸರಿನಲ್ಲಿ ಹೆಣ್ಣುಮಕ್ಕಳನ್ನು ಬಿಡುವ ಸಂಪ್ರದಾಯ ಇಂದಿಗೂ ತೆರೆಮರೆಯಲ್ಲಿ ನಡೆಯುತ್ತದೆ. ನಮ್ಮೆಲ್ಲರ ಮಧ್ಯದಲ್ಲಿಯೇ ದೇವದಾಸಿ ಪದ್ಧತಿ ಚಾಲ್ತಿಯಲ್ಲಿದೆ. ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಯ ಅಂಚಿನಲ್ಲಿದ್ದ ಅನೇಕ ಸಮುದಾಯಗಳ ಕುಟುಂಬಗಳು ಈ ವ್ಯವಸ್ಥೆಗೆ ಸುಲಭವಾಗಿ ಬಲಿಯಾಗುತ್ತಿರುವುದು ಶೋಚನೀಯ. ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳ ಸಮುದಾಯದವರು ಹೆಣ್ಣುಮಗುವನ್ನು ತಿಳಿಯದ ವಯಸ್ಸಿನಲ್ಲಿಯೇ ದೇವರಿಗೆ ಬಿಟ್ಟಿರುವ ಕುರಿತಾಗಿ ವಿಚಾರಿಸಿದಾಗ ಸುಮಾರು ದಿನ ನನ್ನನ್ನು ದೇವರಿಗೆ ಬಿಟ್ಟಿರೋದೆ ನನಗೆ ಗೊತ್ತಿರಲಿಲ್ಲ. ನಾನು ಯೌವನಕ್ಕೆ ಬಂದಾಗ ನೆರೆಹೊರೆಯವರು ಮಾತಾಡುವಾಗ ನನಗೆ ದೇವರಿಗೆ ಬಿಟ್ಟಿರುವ ಸಂಗತಿ ತಿಳಿದಿದೆ ಎಂದು ಹೇಳಿಕೊಂಡಿದ್ದಾರೆ.

ಈ ದೇವದಾಸಿ ಪದ್ಧತಿಯು ಪ್ರಮುಖವಾಗಿ ಉತ್ತರ ಕರ್ನಾಟಕ ಮತ್ತು ಮಹಾರಾಷ್ಟ್ರದ ದಕ್ಷಿಣ ಜಿಲ್ಲೆಗಳಲ್ಲಿ ಆಚರಣೆಯಲ್ಲಿದೆ. ಸಾಮಾಜಿಕ ಕಳಕಳಿ ಇರುವ ಜನರ ಪ್ರಯತ್ನದಿಂದಾಗಿ ೧೯೮೨ರಲ್ಲಿ ಈ ಪದ್ಧತಿಯ ಆಚರಣೆಯನ್ನು ನಿಷೇಧಿಸಲು ಕಾಯ್ದೆಯನ್ನು ರೂಪಿಸಿ ಅದನ್ನು ೧೯೮೪ರಿಂದ ಜಾರಿಗೆ ತಂದಿತು. ಆದರೆ ಧಾರ್ಮಿಕ ನಂಬಿಕೆ ಕವಚವಿದ್ದ ಈ ವ್ಯವಸ್ಥೆಯನ್ನು ಸರ್ಕಾರದ ಕಾಯ್ದೆ ಕಾಯುವುದೆ? ಇಲ್ಲಿ ಈ ಕಾನೂನು ಬಂದ ನಂತರ ಬಯಲಲ್ಲಿ ನಡೆಯುವ ಆಚರಣೆ ಸಂಪ್ರದಾಯ ಗೌಪ್ಯವಾಗಿ ನಡೆಯುತ್ತಾ ಇನ್ನೂ ಜೀವಂತವಾಗಿವೆ.

"ದಿನಾಂಕ ೧ನೇ ಅಕ್ಟೋಬರ್ ೧೯೮೭ರಂದು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ದೇವದಾಸಿಯರ ಕಿರು ಘಟಕವನ್ನು ತೆರೆಯಿತು. ಘಟಕವು ದೇವದಾಸಿ ಪದ್ಧತಿಯ ಜೊತೆಗೆ ಇತರ ಸಾಮಾಜಿಕ ಪಿಡುಗುಗಳನ್ನು ನಿರ್ಮೂಲನೆ ಮಾಡುವ ಉದ್ದೇಶ ಹೊಂದಿದ್ದು, ಕರ್ನಾಟಕದ ಸುಮಾರು ಏಳು ಜಿಲ್ಲೆಗಳಲ್ಲಿ ತನ್ನ ಸಿಬ್ಬಂದಿಯ ಮೂಲಕ ಕೆಲವು ಜಾಗೃತಿ ಕಾರ್ಯಗಳನ್ನು ನಡೆಸಿತು" *(ಹೀಗೊಂದು ಪಯಣ:೨೦೦೦:೮೨).* ದೇವದಾಸಿ ಪದ್ಧತಿಯು ಸಮಾಜದಲ್ಲಿ ಪಿಡುಗಾಗಿ ಪರಿಣಮಿಸಿದರ

ಪರಿಣಾಮವಾಗಿ ನಿಷೇಧ ಕಾನೂನು ಜಾರಿಗೆ ತಂದರು. ಈ ರೀತಿಯಾಗಿ ಕಳಂಕಿತ ೪ ಅನಿಷ್ಟ ರೂಪವನ್ನು ಪಡೆದಿರುವ ಈ ಪದ್ಧತಿಯು ನಿರ್ಮೂಲನೆ ಮಾಡುವ ಉದ್ದೇಶ ಹೊಂದಿದೆ. ಈ ಮೂಲಕ ದೇವದಾಸಿಯರ ಆರ್ಥಿಕ ಹಾಗೂ ಸಾಮಾಜಿಕ ಸ್ಥಿತಿಗಳನ್ನು ಸುಧಾರಿಸಿ ಅವರೂ ಸಮಾಜದಲ್ಲಿ ಇತರರಂತೆ ಒಳ್ಳೆಯ ಜೀವನವನ್ನು ಮರ್ಯಾದೆಯಿಂದ ಸರಿ ಸಮಾನರಾಗಿ ಬಾಳುವಂತೆ ಮಾಡಲು ಸರ್ಕಾರವೂ ಅನೇಕ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೊಳಿಸುತ್ತಿದೆ. ಆರ್ಥಿಕವಾಗಿ ಸಬಲರನ್ನಾಗಿ ಮಾಡುವುದರ ಜೊತೆಗೆ ಸಾಮಾಜಿಕ ಜೀವನದಲ್ಲಿ ಬದುಕಲು ಆತ್ಮಸ್ಥೈರ್ಯವನ್ನು ಮತ್ತು ಇಂತಹ ಪದ್ಧತಿಯ ವಿರುದ್ಧವಾಗಿ ಧ್ವನಿ ಎತ್ತಲೂ ಜಾಗೃತಿ ಮೂಡಿಸುವಂತಹ ಕಾರ್ಯಕ್ರಮಗಳನ್ನು ರೂಪಿಸಿತು. ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು ಇವರಿಂದ ದೇವದಾಸಿಯರ ಸ್ಥಿತಿಗತಿಗಳನ್ನು ಸುಧಾರಿಸಿ ತನ್ಮೂಲಕ ದೇವದಾಸಿ ಪದ್ಧತಿಯನ್ನು ನಿರ್ಮೂಲನೆ ಮಾಡಲು ದೇವದಾಸಿ ಪುನರ್ವಸತಿ ಯೋಜನೆಯನ್ನು ಪ್ರಾರಂಭಿಸಲಾಯಿತು. ಬಳ್ಳಾರಿ ಜಿಲ್ಲೆಯಲ್ಲಿಯೂ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ದೇವದಾಸಿ ಪುನರ್ವಸತಿ ಯೋಜನಾ ಕಛೇರಿ ಪ್ರಾರಂಭಿದ್ದಾರೆ.

"ಕರ್ನಾಟಕ ರಾಜ್ಯದಲ್ಲಿ ೧೯೯೦-೯೧ನೇ ಸಾಲಿನಲ್ಲಿ ದೇವಾದಾಸಿಯರ ಪುನರ್ವಸತಿಗಾಗಿ ೫ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದ್ದು ಅದಕ್ಕಾಗಿ ೧.೫ ಕೋಟಿ ರೂ ವೆಚ್ಚ ಮಾಡಲಾಗಿದೆ. ಬಳ್ಳಾರಿ ರಾಯಚುರು, ಧಾರವಾಡ, ಬೆಳಗಾವಿ, ಬಿಜಾಪುರ ಜಿಲ್ಲೆಗಳು ಈ ಯೋಜನೆಯ ವ್ಯಾಪ್ತಿಯಡಿಗೆ ಸೇರಿದವು" *(ಪ್ರಸನ್ನ ಕುಮಾರ್:೨೦೧೪:೨೦೧).* ದೇವದಾಸಿಯರಿಗೆ ಸ್ವಯಂ ಉದ್ಯೋಗ ಯೋಜನೆಯಡಿಯಲ್ಲಿ ಟ್ರೈನಿಂಗ್ ನೀಡುವುದು ಮತ್ತು ಪುರ್ನವಸತಿಕಲ್ಪಿಸುವುದು ಇದರ ಮುಖ್ಯ ಉದ್ದೇಶವಾಗಿದೆ ಎಂದು ಹೇಳಬಹುದು. ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿನಿಗಮ, ದೇವದಾಸಿಯ ಪುನರ್ವಸತಿ ಯೋಜನೆ ಘಟಕದಿಂದ ವಿಶೇಷವಾಗಿ ದೇವದಾಸಿ ಪುನರ್ವಸತಿ ಕಾರ್ಯಕ್ರಮಗಳ ವಿವರ ಈ ಮುಂದಿನಂತಿದೆ.

- ಪ್ರತಿ ಜಿಲ್ಲೆಯಲ್ಲಿ ಯೋಜನಾ ಅನುಷ್ಠಾನ ಕಛೇರಿಗಳನ್ನು ತೆರೆಯಲಾಗಿದೆ.
- ದೇವದಾಸಿ ಪದ್ಧತಿಯನ್ನು ಸಂಪೂರ್ಣ ತಡೆಗಟ್ಟುವಿಕೆ ಹಾಗೂ ಮಾಜಿ ದೇವದಾಸಿಯರ ಆರ್ಥಿಕ ಮತ್ತು ಸಾಮಾಜಿಕ ಆಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನ ನಿಗಮನ ಮುಖ್ಯ ಕಾರ್ಯಕ್ಷೇತ್ರವಾಗಿದೆ.
- ಈ ಪದ್ಧತಿಯ ವಿರುದ್ಧ ವ್ಯಾಪಕ ಪ್ರಚಾರ, ಜನಾಂದೋಲನ, ಮಾಜಿ ದೇವದಾಸಿಯರ ಸ್ವಸಹಾಯ ಗುಂಪುಗಳ ರಚನೆ, ಜಾಗೃತಿ ಶಿಬಿರ, ಜಾತ್ರಾ ಜಾಗೃತಿ ಶಿಬಿರ, ಆರೋಗ್ಯ ತಪಾಸಣೆ ಮುಂತಾದ ಸಾಮಾಜಿಕ ಕಾರ್ಯಕ್ರಮಗಳ ಮೂಲಕ ಅರಿವು ಮೂಡಿಸುವಿಕೆ.
- ಆದಾಯ ಉತ್ಪನ್ನಕರ ಚಟುವಟಿಕೆಗಳಿಗಾಗಿ ಯೋಜನಾ ವೆಚ್ಚ ರೂ. ೨೦,೦೦೦ ರೂಗಳಲ್ಲಿ ಶೇ.೫೦% ರಷ್ಟು ನಿಗಮದಿಂದ ಸಹಾಯಧನ ಹಾಗೂ ಉಳಿದ ಮೊತ್ತ ಬ್ಯಾಂಕ್ ಮುಖಾಂತರ ಸಾಲ ನೀಡಲಾಗುವುದು.
- ೨೦೦೭-೦೮ ನೇ ಸಾಲಿನ ಸಮೀಕ್ಷಾ ಪಟ್ಟಿಯೂ ಸರ್ಕಾರದ ಹಂತದಲ್ಲಿ ಅನುಮೋದನೆಗೊಂಡ ನಂತರ ಹಂತ ಹಂತವಾಗಿ ಮಾಜಿ ದೇವದಾಸಿಯರಿಗೆ ಆದಾಯ ಉತ್ಪನ್ನಕರ ಚಟುವಟಿಕೆಗಳಿಗೆ ಸಹಾಯಧನ, ಮಾಸಾಶನ ಮತ್ತು ವಸತಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತದೆ.

- ಕಿರುಸಾಲ ಯೋಜನೆ: ಮಾಜಿ ದೇವದಾಸಿ ಮಹಿಳೆಯರಿಂದ ರಚಿತವಾದ ಸ್ವಸಹಾಯ ಗುಂಪಿನ ಸದಸ್ಯರಿಗೆ ರೂ.೫೦೦೦ (ಗರಿಷ್ಠ) ಶೇ. ೬ರ ಬಡ್ಡಿದರದಲ್ಲಿ ೨೪ ತಿಂಗಳುಗಳ ಮರುಪಾವತಿಯ ಷರತ್ತಿನೊಂದಿಗೆ ನೀಡಲಾಗುವುದು.

- ಮಾಜಿ ದೇವದಾಸಿ ಮಹಿಳೆಯರಿಗೆ ಮಾಸಾಶನ: ಮಾಜಿ ದೇವದಾಸಿಯರ ಪುನರ್ವಸತಿಗಾಗಿ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ದೇವದಾಸಿ ಪುನರ್ವಸತಿ ಕಾರ್ಯಕ್ರಮ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದೆ. ೨೦೦೭-೦೮ನೇ ಸಾಲಿನ ಸಮೀಕ್ಷೆಯಲ್ಲಿ ಗುರುತಿಸಿದ ದೇವದಾಸಿಯ ಮಹಿಳೆಯರ ಪೈಕಿ ೪೫ ವರ್ಷ ವಯಸ್ಸು ಮೀರಿದ ಮಾಜಿ ದೇವದಾಸಿಯರಿಗೆ ಮಾತ್ರ ಪ್ರತಿ ತಿಂಗಳು ೪೦೦ ರೂಪಾಯಿಗಳ ಮಾಸಾಶನವನ್ನು ನೀಡಲಾಗುತಿತ್ತು. ನಂತರ ೧೦೦೦ ರೂಗಳನ್ನು ನೀಡುತ್ತಿದ್ದರು. ಪ್ರಸ್ತುತದಲ್ಲಿ ೧೫೦೦ ರೂಗಳನ್ನು ನೀಡುತ್ತಿದ್ದಾರೆ.

- ಮಾಜಿ ದೇವದಾಸಿ ಮಹಿಳೆಯರಿಗೆ ವಸತಿ ನಿರ್ಮಾಣ: ಕರ್ನಾಟಕ ರಾಜ್ಯ ಅಭಿವೃದ್ಧಿ ನಿಗಮವು ವಿಶೇಷ ಅಭಿವೃದ್ಧಿ ಯೋಜನೆಯಡಿಯಲ್ಲಿ ಉತ್ತರ ಕರ್ನಾಟಕದ ೧೨ ಜಿಲ್ಲೆಗಳಲ್ಲಿ ವಸತಿ ರಹಿತ ಮಾಜಿ ದೇವದಾಸಿ ಮಹಿಳೆಯರಿಗೆ ವಿಶೇಷ ಅಭಿವೃದ್ಧಿ ಯೋಜನೆಯಡಿ ವಸತಿ ನಿರ್ಮಾಣ ಯೋಜನೆಯನ್ನು ೨೦೦೯-೧೦ನೇ ಸಾಲಿನಿಂದ ಘಟಕ ವೆಚ್ಚ ೪೦,೦೦೦ ರೂಪಾಯಿಗಳಲ್ಲಿ ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮದ ಮೂಲಕ ನಿವೇಶನ ಇದ್ದವರಿಗೆ ಮನೆಗಳನ್ನು ನಿರ್ಮಿಸಿಕೊಡಲಾಗುತ್ತದೆ.

**೬.೩ ದೇವದಾಸಿಯರು ಮತ್ತು ಪುನರ್ವಸತಿ ಯೋಜನೆಗಳು**

ದೇವದಾಸಿ ಪದ್ಧತಿಯು ಜೀವಂತವಾಗಿರಲು ಮೇಲ್ಜಾತಿಯ ಕೊಡುಗೆ ಅಪಾರವಾಗಿದೆ. ಮೇಲ್ಜಾತಿಯ ಜನರು ಎಲ್ಲಾ ವಿಷಯದಲ್ಲಿ ದಲಿತರನ್ನು ಅಸ್ಪೃಶ್ಯರನ್ನಾಗಿ ಪರಿಗಣಿಸಿದ್ದಾರೆ. ಆದರೆ ತಮ್ಮ ವೈಯಕ್ತಿಕ ಹಿತಾಸಕ್ತಿ ಮತ್ತು ಲಾಭದ ಸಂದರ್ಭಗಳಲ್ಲಿ ಮಾತ್ರ ದೇವರು ಧರ್ಮದ ಹೆಸರಿನಲ್ಲಿ ದಲಿತರನ್ನು ಮತ್ತು ಹಿಂದುಳಿದ ವರ್ಗಗಳಲ್ಲಿನ ವಿಶೇಷವಾಗಿ ಅದರಲ್ಲಿನ ಮಹಿಳೆಯರನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿದ್ದಾರೆ. ಅದಕ್ಕೆ ಸಾಕ್ಷಿಯಾಗಿಯೇ ಇವತ್ತು ದೇವದಾಸಿ ಪದ್ಧತಿ ನಮ್ಮ ಕಣ್ಣಮುಂದೆ ಗ್ರಾಮ ಮತ್ತು ಕುಟುಂಬದ ಒಳಿತಗಾಗಿ ಎಂಬುವಂತಹ ಮೂಢನಂಬಿಕೆಯ ಮೌಲ್ಯಗಳನ್ನು ಇದರಲ್ಲಿ ತುಂಬಿ ದೇವಸ್ಥಾನದ ಪೂಜಾರಿಗಳಲ್ಲಿ ಮುತ್ತು ಕಟ್ಟುವ ಅಥವಾ ಇತರೆ ದೀಕ್ಷೆಗಳ ಮೂಲಕ ದೇವದಾಸಿ ಪದ್ಧತಿಯನ್ನು ಜಾರಿಗೆ ತಂದಿದ್ದಾರೆ. ಪೂಜಾರಿ ವರ್ಗ ಸದಾ ದೇವರ ಪೂಜಾ ಕಾರ್ಯಗಳನ್ನು ಕೈಗೊಳ್ಳುವುದರಿಂದ ಹಾಗೂ ದೇವರ ಸಮೀಪದಲ್ಲೆ ಇರುತ್ತಾನೆ ಎಂಬ ನಂಬಿಕೆ ಪರಿಶಿಷ್ಟ ಮತ್ತು ಹಿಂದುಳಿದ ವರ್ಗಗಳಲ್ಲಿ ಮನೆ ಮಾಡಿರುವುದರಿಂದ ಪೂಜಾರಿ ಏನೂ ಹೇಳಿದರೂ ಅದು ದೇವರಿಂದ ಬಂದಿರು ಆಜ್ಞೆ ಎಂಬಂತೆ ನಡೆದುಕೊಳ್ಳುತ್ತಾರೆ. ಮೈಮೇಲೆ ದೇವರು ಬರುವುದು, ತಲೆಯಲ್ಲಿ ಜಡೆ ಕಾಣಿಸಿಕೊಳ್ಳವುದು, ದೇವಿಗೆ ಮಹಿಳೆಯರನ್ನು ಮೀಸಲು ಬಿಡುವ ಲಕ್ಷಣಗಳೆಂದೇ ಶತಮಾನಗಳಿಂದ ಸಮುದಾಯಗಳಲ್ಲಿ ಆಳವಾದ ಭಾವನೆ ಬೇರೂರಿದೆ. ಮೊದಲೇ ಶಿಕ್ಷಣದಲ್ಲಿ ಹಿಂದುಳಿದಿರುವ ಈ ಸಮುದಾಯವು ಬಹು ಬೇಗನೆ ಮೌಢ್ಯಗಳಿಗೆ

ಬಲಿಯಾಗುತ್ತದೆ. ಬಡತನ, ಅನಕ್ಷರತೆ, ತಿಳುವಳಿಕೆ ಮತ್ತು ವೈಜ್ಞಾನಿಕ ಮನೋಭಾವದ ಕೊರತೆಯಿಂದ ಬಳಲುತ್ತಿರುವ ಈ ಸಮುದಾಯವು ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳಿಂದಾಗಿ ದೇವದಾಸಿ ಪದ್ಧತಿಗೆ ಬಲಿಯಾಗುತ್ತಲೇ ಬಂದಿದೆ. ಪ್ರಾರಂಭದಲ್ಲಿ ಊರಿನ ಗೌಡ, ಪಟೇಲ, ಶಾನುಭೋಗ ಇತರೆ ಮುಖಂಡರ ಆಸೆಗಳಿಗಾಗಿ ಬಲಿಯಾಗುತ್ತಾರೆ. ಇವರೆಲ್ಲರೂ ಯೌವನವಿದ್ದಾಗ ದೇವದಾಸಿಯರನ್ನು ಅನುಭವಿಸಿ ಅವಳಿಗೆ ವಯಸ್ಸಾಗುತ್ತಿದ್ದಂತೆ ಮತ್ತೊಬ್ಬಳು ದೇವದಾಸಿಯನ್ನು ಬಲಿ ಪಡೆಯಲು ಸಿದ್ಧರಾಗುತ್ತಾರೆ. ಯೌವನವು ಕಳೆದು ಹೋಗುವ ಸಮಯಕ್ಕೆ ಸಂತಾನ ಪಡೆದಿರುವ ದೇವದಾಸಿಯರು ತಮ್ಮ ಹಾಗೂ ತಮ್ಮ ಮಕ್ಕಳ ಜೀವನಕ್ಕಾಗಿ ಕೆಲವೊಮ್ಮೆ ಅನೈತಿಕ ಹಾದಿ ಹಿಡಿಯತ್ತಾರೆ. ಕೆಲವರು ಹೊಟ್ಟೆಗೆ ಹಿಟ್ಟಿಲ್ಲದೆಯೇ ಆ ಹಸಿವಲ್ಲೇ ಜೀವನ ನೀಗಿಸಲು ಪ್ರಯತ್ನಿಸುತ್ತಲೇ ಮರಣ ಹೊಂದುತ್ತಾರೆ. ಇನ್ನೂ ಕೆಲವರು ಭಿಕ್ಷಾಟನೆಯಲ್ಲಿ ತೊಡಗುತ್ತಾರೆ. ಮತ್ತೆ ಕೆಲವರು ಧಾರ್ಮಿಕ ಆಚರಣೆಗಳಲ್ಲಿ ಭಾಗಿಯಾಗುತ್ತಾ ಮತ್ತೆ ಹೆಣ್ಣುಮಕ್ಕಳನ್ನು ಮುತ್ತು ಕಟ್ಟಿಸುವ ಕಾರ್ಯದಲ್ಲಿ ಮಧ್ಯವರ್ತಿಗಳಾಗಿ ಕೆಲಸ ಮಾಡುತ್ತಾರೆ. ಒಟ್ಟಾರೆ ಇದೊಂದು ಬಗೆಯ ಸರಪಳಿಯಂತೆ ನಿರಂತರವಾಗಿ ದೇವದಾಸಿ ಪದ್ಧತಿಯ ಜೀವಂತಿಕೆಗೆ ಕಾರಣವಾಗುತ್ತದೆ. ದೇವದಾಸಿ ಪದ್ಧತಿಯ ವಿರುದ್ಧ ಸ್ವತಂತ್ರ ಪೂರ್ವಕಾಲದಿಂದಲೂ ಹಿಡಿದು ಸ್ವಾತಂತ್ರ ನಂತರದ ಕಾಲದವರೆಗೆ ಅನೇಕ ರೀತಿಯ ಕಾಯ್ದೆಗಳು ಜಾರಿಯಾಗಿವೆ. ಅವುಗಳು ಈ ಕೆಳಗಿನಂತಿವೆ.

೧. ದೇವದಾಸಿಯರು ದೇವಾಲಯಗಳಲ್ಲಿ ಕಡ್ಡಾಯವಾಗಿ ನೃತ್ಯ ಮಾಡುವುದನ್ನು ರದ್ದುಪಡಿಸಿದ ಮೈಸೂರು ಸರ್ಕಾರದ ಕಾಯ್ದೆ – ೧೮೯೩

೨. ದೇವದಾಸಿ ನೃತ್ಯ ಪ್ರತಿಬಂಧ ಕಾಯ್ದೆ, ಮೈಸೂರು ಸರ್ಕಾರ – ೧೯೧೦

೩. ದೇವದಾಸಿ ಪದ್ಧತಿ ನಿರ್ಮೂಲನಾ ಕಾಯ್ದೆ, ಮೈಸೂರು ಸರ್ಕಾರ – ೧೯೨೨

೪. ದೇವದಾಸಿ ಪದ್ಧತಿ ಉಚ್ಚಾಟನೆ ಕಾಯ್ದೆ, ಮೈಸೂರು ಸರ್ಕಾರ – ೧೯೧೦

೫. ಮುಂಬಯಿ ದೇವದಾಸಿ ಸಂರಕ್ಷಣೆ ಮತ್ತು ದೇವದಾಸಿ ಪದ್ಧತಿ ನಿರ್ಮೂಲನಾ ಕಾಯ್ದೆ – ೧೯೮೪

೬. ದೇವದಾಸಿ ಪದ್ಧತಿ ಪ್ರತಿಬಂಧ ಮತ್ತು ಪದ್ಧತಿಯಲ್ಲಿ ಭಾಗಿಯಾದವರಿಗೆ ಶಿಕ್ಷೆ ಮತ್ತು ದಂಡ. ಕರ್ನಾಟಕ ಸರ್ಕಾರ – ೧೯೮೩ *(ಸಿದ್ರಾಮ ಕಾರಣಿಕ:೨೦೧೩:೭೩).*

ಹೀಗೆ ಕಳೆದ ಸುಮಾರು ವರ್ಷಗಳಿಂದ ದೇವದಾಸಿ ಪದ್ಧತಿಯ ವಿರುದ್ಧ ಆರು ಕಾಯ್ದೆಗಳು ಬಂದಿವೆ. ಆದರೆ ಈ ಕಾಯ್ದೆಗಳಿಂದ ಕನಿಷ್ಟ ಪ್ರಮಾಣದಲ್ಲಾದರೂ ಶಿಕ್ಷೆಗೆ ಒಳಪಡಿಸಲಾಗಿಲ್ಲ. ದೇವದಾಸಿಯಾರನ್ನು ಪದ್ಧತಿಯೂ ಕೂಡ ನಿಂತಿಲ್ಲ. ಹಾಗಾಗಿ ಈ ಎಲ್ಲಾ ಕಾಯ್ದೆಗಳು ವಿಫಲವಾಗಿವೆ.

ದೇವದಾಸಿ ಪದ್ಧತಿಯು ಈ ಮೇಲಿನಂತೆ ಸುಮಾರು ದಶಕಗಳ ಕಾಲ ನಡೆದುಕೊಂಡು ಬಂದಿದೆ. ಇಂತಹ ಪದ್ಧತಿಗಳನ್ನು ಸಮಾಜದಿಂದ ತೆಗೆದುಹಾಕಬೇಕು ಎಂಬ ಆಲೋಚನೆಯ ನಿಟ್ಟಿನಲ್ಲಿ

ಸ್ವತಂತ್ರ ಪೂರ್ವದಿಂದಲೇ ಅನೇಕರು ಶ್ರಮಿಸಿದ್ದಾರೆ. "ಮಹಾರಾಷ್ಟ್ರದಲ್ಲಿರುವ ಕೊಲ್ಲಾಪುರದ ಶಾಹು ಮಹಾರಾಜ ೧೯೨೧ರ ಜನವರಿ ೧೭ರಂದು ದೇವದಾಸಿಯರ ಕುರಿತು ಕಾಯ್ದೆಯ ಜಾರಿಗೆ ಆದೇಶಿಸಿದ್ದನು. ಈ ಕಾಯ್ದೆ ಎರಡನೇ ಕಲಂನಲ್ಲಿ ಜೋಗತಿಯರ ಕುರಿತು ಪ್ರಸ್ತಾಪಿಸಲಾಗಿದೆ." *(ಮಂಜುಶ್ರೀ ಕಡಕೋಳ:೨೦೧೪:೨೨೨.)*. ಇಲ್ಲಿ ಜೋಗತಿ, ದೇವದಾಸಿ, ಬಸವಿ ಹೀಗೆ ಮೊದಲಾದ ಹೆಸರುಗಳಲ್ಲಿ ದೇವಸ್ಥಾನಗಳಲ್ಲಿ ಮೀಸಲು ಬಿಟ್ಟ ಹೆಣ್ಣುಮಕ್ಕಳಿಗೆ ಆಸ್ತಿಯ ಹಕ್ಕನ್ನು ಗಂಡುಮಗನಂತೆ ನೀಡಬೇಕು. ಆದರೆ ಈ ಆಸ್ತಿಯ ಹಕ್ಕನ್ನು ೧೯೨೧ರಲ್ಲಿ ನೀಡಿದರೂ ಕೂಡ ಇವತ್ತಿನ ೨೦೧೭ರ ಸಂದರ್ಭದಲ್ಲಿಯೂ ದೇವದಾಸಿ ಮಹಿಳೆಯರಿಗೆ ತಮ್ಮ ತಂದೆ ಅಥವಾ ತಾಯಿಯ ಆಸ್ತಿಯಲ್ಲಿ ಪಾಲು ಸಿಗುತ್ತಿಲ್ಲ. ಇದು ಪ್ರಸ್ತುತ ಸಂದರ್ಭಗಳಲ್ಲಿ ಕಂಡುಬರುವ ದೇವದಾಸಿಯರ ಒಂದು ಕೌಟುಂಬಿಕ ಸಮಸ್ಯೆಯಾಗಿ ಕಂಡುಬರುತ್ತದೆ.

ಶಾಹು ಮಹಾರಾಜರಿಗಿಂತಲೂ ಪೂರ್ವದಲ್ಲಿ ಅಂದರೆ ೧೮೯೨ರಲ್ಲಿಯೇ ದೇವದಾಸಿಯರು ಕೈಗೊಳ್ಳುತ್ತಿದ್ದ ನೃತ್ಯ ಪ್ರಕಾರಗಳಿಗೆ ವಿರೋಧವನ್ನು ವ್ಯಕ್ತಪಡಿಸುತ್ತಿದ್ದರು. ಇದರ ಕುರಿತಾಗಿ ನೃತ್ಯ ವಿರೋಧಿ ಪ್ರತಿಭಟನೆಗಳು ಕೂಡ ನಡೆದಿದ್ದವು. "ಸುಧಾರಣಾವಾದಿ ರಾಮಸ್ವಾಮಿ ನಾಯ್ಕರ್ ಅವರ ನೇತೃತ್ವದಲ್ಲಿ ಕೆಲವು ಸಂಘಟನೆಗಳು ಭಾರತದ ವೈಸ್‌ರಾಯ್ ಹಾಗೂ ಮದ್ರಾಸಿನ ಗವರ್ನರ್‌ಗಳಲ್ಲಿ ಈ ಪದ್ಧತಿ ನಿರ್ಮೂಲನೆಗೆ ಮನವಿ ಮಾಡಿದ್ದವು. ಮುಂದೆ ೧೯೧೧ರ ಸುಮಾರಿಗೆ ಈ ಚಳವಳಿ ರಾಷ್ಟ್ರವ್ಯಾಪಿಯಾಗಿ ಪಸರಿಸಿತು. ಇದರ ಪರಿಣಾಮ ೧೯೪೭ರಲ್ಲಿ ದೇವದಾಸಿ ಪದ್ಧತಿ ವಿರುದ್ಧ ಕಾಯ್ದೆಯು ಜಾರಿಗೆ ತರಲಾಯಿತು *(ಮಂಜುಶ್ರೀ ಕಡಕೋಳ:೨೦೧೪:೨೨೩)*. ಈ ಕಾಯ್ದೆಯು ಅಲ್ಲಿಯವರೆಗೂ ನಿರಾಕರಿಸಲಾಗಿದ್ದ ಮದುವೆ ಅವಕಾಶವನ್ನು ದೇವದಾಸಿಯರಿಗೆ ನೀಡಿತು. ಇದರಿಂದಾಗಿ ಸುಪ್ರಸಿದ್ಧ ಗಾಯಕಿಯಾಗಿದ್ದ ಎಂ.ಎಸ್. ಸುಬ್ಬುಲಕ್ಷ್ಮೀಯವರು ಒಬ್ಬ ಬ್ರಾಹ್ಮಣನೊಂದಿಗೆ ವಿವಾಹವಾದರು. ಅಂತೆಯೇ ಪಂದನಲ್ಲೂರಿನ ಪ್ರಸಿದ್ಧ ನರ್ತಕಿಯಾಗಿದ್ದ ಜಯಲಕ್ಷ್ಮೀ ಎಂಬುವರು ವಿವಾಹವಾಗಿದ್ದರೆಂದು ಮಂಜುಶ್ರೀ ಕಡಕೋಳ ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ. ಹೀಗೆ ೧೯೪೭ರಿಂದಲೇ ಇಡೀ ಭಾರತದಾದ್ಯಂತ ಸುಧಾರಣೆ ಮತ್ತು ನಿರ್ಮೂಲನೆಯ ಕರ್ಯಕ್ರಮಗಳು ನಡೆದಿರುವುದಕ್ಕೆ ಎಂ.ಎಸ್.ಸುಬ್ಬಲಕ್ಷ್ಮಿ ಮತ್ತು ಜಯಲಕ್ಷ್ಮಿಯವರೇ ಸಾಕ್ಷಿಯಾಗಿದ್ದಾರೆ. ಇಷ್ಟು ವರ್ಷಗಳು ಕಳೆದರೂ ಈ ಪದ್ಧತಿಯು ಇನ್ನೂ ಜೀವಂತವಾಗಿರುವುದು ಸರ್ಕಾರ ಮತ್ತು ಸಮಾಜವನ್ನು ನಾಚಿಕೆಗೆ ಈಡುಮಾಡುತ್ತದೆ ಎಂದೇ ಹೇಳಬಹುದು. ಅಲ್ಲದೆಯೆ ಡಾ.ಬಿ.ಆರ್. ಅಂಬೇಡ್ಕರ್‌ರವರು ಸ್ವತಂತ್ರ ಪೂರ್ವಕ್ಕೂ ಅಂದರೆ ೧೯೩೬ರಲ್ಲಿ ದೇವದಾಸಿಯರು ಮತ್ತು ವೇಶ್ಯೆಯರಿಗಾಗಿ ನಡೆದ ಸಮಾವೇಶದಲ್ಲಿ ಮಾಡಿರುವ ಭಾಷಣದಲ್ಲಿ ಮಹಾರ್ ಜಾತಿಗೆ ಕಳಂಕ ತರುವ ಈ ಕಾರ್ಯವನ್ನು ಬಿಡದಿದ್ದರೆ ನಿಮಗೊಂದು ಏಟು ಬಾರಿಸಿಯೇ ಹೇಳಬೇಕಾಗುತ್ತದೆ ಎಂದು ಎಚ್ಚರಿಸಿದ್ದರು. ಅಲ್ಲದೇ ಸಾವಿರಾರು ಸ್ವಯಂ ಸೇವಕರನ್ನು ತಯಾರು ಮಾಡಿ ನಿಮ್ಮನ್ನು ಅಲ್ಲಿಂದ ಹೊರಗೆಸೆಯುವೆ ಎಚ್ಚರವಿರಲಿ ಎಂದು ಹೇಳಿದರು ಸಹ ಇನ್ನೂ ಈ ಪದ್ಧತಿ ಉಳಿದುಕೊಂಡಿದೆ.

ಕರ್ನಟಕ ರಾಜ್ಯದಲ್ಲಿ ಅನೇಕ ಚಳವಳಿ ಮತ್ತು ಚಿಂತಕರ ಅಭಿಪ್ರಾಯಗಳ ಪರಿಣಾಮವಾಗಿ ೧೯೮೪ರಲ್ಲಿ ದೇವದಾಸಿ ಪದ್ಧತಿ ನಿಷೇಧ ಕಾಯ್ದೆಯು ಸಮರ್ಪಕವಾಗಿ ಜಾರಿಗೆ ಬಂದಿದೆ. ಆದರೆ

ಮೂರು ದಶಕಗಳೇ ಕಳೆದರೂ ಈ ಕಾಯ್ದೆಯು ಸಮರ್ಪಕವಾಗಿ ಅನುಷ್ಠಾನ ಆಗಿಲ್ಲ. ಇದಕ್ಕೆ ಸರ್ಕಾರವೇ ನೀಡಿರುವ ಅಂಕಿ ಅಂಶಗಳೇ ಸಾಕ್ಷಿಯಾಗಿ ಕಾಣುತ್ತವೆ. ಸರ್ಕಾರ ಮೊದಲ ಬಾರಿಗೆ ೧೯೯೩ – ೯೪ರಲ್ಲಿ ಸಮೀಕ್ಷೆ ನಡೆಸಿದಾಗ ಸುಮಾರು ೨೨,೮೭೩ ದೇವದಾಸಿಯರಿದ್ದರು. ನಂತರ ನಡೆದ ೨೦೦೭ – ೦೮ರ ಸಮೀಕ್ಷೆಯಲ್ಲಿ ೪೬,೬೬೦ ದೇದಾಸಿಯರಿದ್ದಾರೆಂದು ತಿಳಿಸಲಾಗಿದೆ. ಆದರೆ ರಾಜ್ಯ ದೇವದಾಸಿ ಮಹಿಳಾ ವಿಮೋಚನಾ ಸಂಘದ ಸಮೀಕ್ಷೆ ಪ್ರಕಾರ ಒಟ್ಟಾರೆ ರಾಜ್ಯದಲ್ಲಿ ೮೦ ಸಾವಿರಕ್ಕೂ ಹೆಚ್ಚು ದೇವದಾಸಿ ಮಹಿಳೆಯರಿರುವುದು ಕಂಡುಬರುತ್ತದೆ. ಅಂದರೆ ಸ್ವತಂತ್ರಪೂರ್ವದಿಂದಲೂ ದೇವದಾಸಿ ಪದ್ಧತಿಯ ನಿರ್ಮೂಲನೆಗಾಗಿ ಅನೇಕ ಕಾಯ್ದೆಗಳು ಜಾರಿಯಲ್ಲಿದ್ದರೂ ಈ ಪದ್ಧತಿ ಇನ್ನೂ ಜೀವಂತವಾಗಿದೆ.

ಕರ್ನಾಟಕದಲ್ಲಿ ೨೦೦೭ರಲ್ಲಿ ದೇವದಾಸಿ ಪುನರ್ವಸತಿ ಯೋಜನೆ ಜಾರಿಗೆ ತರಲಾಗಿದೆ. ಕರ್ನಾಟಕ ಸರ್ಕಾರದ ಮಹಿಳಾ ಅಭಿವೃದ್ಧಿ ನಿಗಮ ಈ ಯೋಜನೆಯ ಅನುಷ್ಠಾನದ ಜವಾಬ್ದಾರಿಯನ್ನು ಹೊತ್ತುಕೊಂಡಿದೆ. ೨೦೦೭–೦೮ನೇ ಸಾಲಿನ ಸಮೀಕ್ಷೆಯಲ್ಲಿ ಗುರುತಿಸಲ್ಪಟ್ಟಿರುವ ೪೫ ವರ್ಷ ಮೀರಿರುವ ದೇವದಾಸಿಯರಿಗೆ ತಿಂಗಳಿಗೆ ೪೦೦ ರೂಪಾಯಿಯಂತೆ ಮಾಶಾಸನ ನೀಡಲಾಗುತ್ತಿತ್ತು. ರಾಜ್ಯ ಸರ್ಕಾರ ೨೦೧೩ – ೧೪ರ ಬಜೆಟ್‌ನಲ್ಲಿ ಘೋಷಿಸಿದಂತೆ ಸೆಪ್ಟಂಬರ್ ೨೦೧೩ರಿಂದ ಮಾಸಾಶನವನ್ನು ೫೦೦ ರೂಪಾಯಿಗೆ, ನಂತರ ೨೦೧೪ – ೧೫ನೇ ಸಾಲಿನಲ್ಲಿ ೧೦೦೦ ರೂಪಾಯಿಗಳಿಗೆ, ಈಗ ೨೦೧೭ರಲ್ಲಿ ೧೫೦೦ ರೂಪಾಯಿಗಳಿಗೆ ಹೆಚ್ಚಿಸಿದೆ. ಆದರೆ ಈ ಏರಿಕೆ ಮೊತ್ತವಿರಲಿ, ಕಳೆದ ೪–೫ ತಿಂಗಳಿಂದ ಮಾಶಾಸನ ಕೈ ಸೇರಿಲ್ಲ. ಈ ಮಾಸಾಶನಕ್ಕಾಗಿ ಅವರಿವರನ್ನು ಯಾವಾಗ ಬರುತ್ತದೆ ಎಂದು ಕೇಳುತ್ತಾ ನಿರೀಕ್ಷೆಯಲ್ಲೇ ದೇವದಾಸಿಯರು ದೂಡುತ್ತಿದ್ದಾರೆ. ನಾನು ಕ್ಷೇತ್ರಕಾರ್ಯಕ್ಕೆ ಹೋದ ನನ್ನನ್ನು ದೇವದಾಸಿ ಅಭಿವೃದ್ಧಿ ನಿಗಮದ ನೌಕರಳೆಂದು ತಿಳಿದು ಕೋಪದಿಂದ ಮಾಸಾಶನಕ್ಕಾಗಿ ಪ್ರಶ್ನಿಸಿದ್ದಾರೆ. ನಂತರ ಸಂಶೋಧನಾ ವಿದ್ಯಾರ್ಥಿ ಎಂದು ತಿಳಿದು ನಿಗಮದ ಕಛೇರಿಗೆ ಹೋದರೆ ಮಾಸಾಶನದ ಕುರಿತು ಮಾತಾಡುವಂತೆ ತಪ್ಪದೇ ಪ್ರಸ್ತಾಪ ಮಾಡುತ್ತಾರೆ. ಹೀಗೆ ಬೆಲೆ ಏರಿಕೆಯ ಈ ದಿನಗಳಲ್ಲಿ ಸರ್ಕಾರ ಕೊಡುವ ಮಾಸಾಶನದಿಂದ ಹೊಟ್ಟೆ ತುಂಬದೇ ಹೋಗುತ್ತಿದೆ. ಅದರಲ್ಲೂ ೪೫ ವರ್ಷ ಮೀರಿದ ೧೩,೭೮೧ ದೇವದಾಸಿಯರಿಗೆ ಮಾತ್ರ ಮಾಶಾಸನ ಸೌಲಭ್ಯ ದೊರೆಯತ್ತಿದ್ದು, ಸಮೀಕ್ಷೆಯ ಅನ್ವಯ ಉಳಿದ ೩೨,೭೮೧ ದೇವದಾಸಿಯರ ಬದುಕು ಆತಂಕದ ಸ್ಥಿತಿಯಲ್ಲಿದೆ. ಅತ್ತ ಸರ್ಕಾರದಿಂದ ಮಾಶಾಸನವೂ ಸಿಗದೇ ಇತ್ತ ಕೂಲಿ ಮಾಡಲು ಹೋದಾಗ ನಡೆಯುವ ನಿರಂತರ ದೌರ್ಜನ್ಯಗಳಿಂದಲೂ ಮುಕ್ತಿ ಹೊಂದದೆ ಈ ದೇವದಾಸಿ ಮಹಿಳೆಯರ ಬದುಕು ಚಿಂತಾಜನಕವಾಗಿದೆ.

ದೇವದಾಸಿ ಪದ್ಧತಿಗೆ ಪ್ರಚೋದನೆ ನೀಡುವವರಿಗೆ ಕಾನೂನು ೫೦೦೦ ರೂಪಾಯಿಗಳು ದಂಡ ಹಾಗೂ ೫ವರ್ಷ ಜೈಲು ಶಿಕ್ಷೆ ನಿಗಧಿಪಡಿಸಲಾಗಿದೆ. ಆದರೆ ಈ ದೇವದಾಸಿ ಪದ್ಧತಿಯನ್ನು ಮತ್ತೆ ಮತ್ತೆ ಜೀವಂತವಾಗಿಡುವವರು ಕಾನೂನಿಗೆ ಸೆಡ್ಡುಹೊಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಸರ್ಕಾರದ ಕಾನೂನು ವ್ಯವಸ್ಥೆಗಳು ಕಣ್ಣುಮುಚ್ಚಿ ಕುಳಿತಿವೆ ಎನ್ನಲು ಅನೇಕ ಸಾಕ್ಷಿಗಳು ದೊರೆಯುತ್ತವೆ.

ಕಳೆದ ವರ್ಷಗಳಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ನಡೆದ ಘಟನೆಗಳೆಂದರೆ ಹೂವಿನಹಡಗಲಿ ಮೊರಿಗೇರಿಯಲ್ಲಿ ಒಬ್ಬ ದಲಿತ ಮಹಿಳೆಯನ್ನು ದೇವದಾಸಿಯನ್ನಾಗಿಸಲು ಹೊರಟಿರುವುದು. ಇವತ್ತಿಗೂ ಯಾರಿಗೂ ಕಾಣದೇ ಮನೆಯಲ್ಲಿಯೇ ಮುತ್ತು ಕಟ್ಟಿಸಿಕೊಂಡಿರುವ ಹೊಸಪೇಟೆಯ ಕೆಲವು ಗ್ರಾಮಗಳಲ್ಲಿನ ದೇವದಾಸಿಯರು, ಅಲ್ಲದೆಯೇ ದಾವಣಗೆರೆ ಜಿಲ್ಲೆಯಲ್ಲಿ ಕದ್ದುಮುಚ್ಚಿ ನಡೆಯುತ್ತಿರುವ ಮುತ್ತು ಕಟ್ಟುವ ಪದ್ಧತಿ, ದೇವದಾಸಿ ಮಹಿಳೆಯರಿಂದ ನಡೆಯುವ ಸಿಡಿ ಆಟ, ಕೊಪ್ಪಳ ಜಿಲ್ಲೆಯ ಹಿರೆಸಿಂಧೋಗಿಯಲ್ಲಿರುವ ದೇವದಾಸಿ ಕುಟುಂಬಗಳೇ ಇದಕ್ಕೆ ಸಾಕ್ಷಿಯಾಗಿವೆ. ದೇವದಾಸಿ ಪದ್ಧತಿಯ ನಿರ್ಮೂಲನೆಗಾಗಿ ಕಾನೂನು ಜಾರಿಯಲ್ಲಿದ್ದರೂ ಕೂಡ ಇವತ್ತಿಗೂ ೨೦-೨೫ ವಯಸ್ಸಿನ ದೇವದಾಸಿಯರನ್ನು ಕಾಣುತ್ತೇವೆ. ಅಂದರೆ ಸರ್ಕಾರದ ಕಾಯ್ದೆ ಕಾನೂನುಗಳು ವಿಫಲವಾಗಿವೆ ಎನ್ನಬಹುವುದು. ದೇವಸ್ಥಾನ ಅಥವಾ ಧಾರ್ಮಿಕ ಕೇಂದ್ರಗಳಲ್ಲಿ ನಡೆಯುವ ದೇವದಾಸಿ ಪದ್ಧತಿಯೂ ಇಂದು ಕಳ್ಳತನದಿಂದ ಹೆಣ್ಣುಮಕ್ಕಳನ್ನು ದೇವದಾಸಿಯಾಗಿಸುವ ಕಾರ್ಯಗಳು ಇನ್ನೂ ನಡೆಯುತ್ತಲೇ ಇವೆ. ಇದು ಕಾಯ್ದೆಯಿಂದಾಗಿ ಬದಲಾಗಿದೆಯೇ ಹೊರತು ದೇವದಾಸಿ ಪದ್ಧತಿ ನಿರ್ಮೂಲನೆಯಾಗಿಲ್ಲ. ದೇವದಾಸಿ ಪದ್ಧತಿ ಕಣ್ಮರೆಯಲ್ಲಿ ಜೀವ ತುಂಬಿಕೊಂಡಿದೆ. ಈ ಮೊದಲು ದೇವದಾಸಿ ಪದ್ಧತಿ ಆಚರಣೆ ದೇವಲಯಗಳಲ್ಲಿ ವಿಜೃಂಭಣೆಯಿಂದ ನಡೆಯುತ್ತಿದ್ದವು. ಆದರೆ ಇಂದು ಕಳ್ಳತನದಿಂದ ಮನೆಗಳಲ್ಲಿ ನಡೆಯುತ್ತವೆ.

ಗ್ರಾಮೀಣ ಪ್ರದೇಶಗಳಲ್ಲಿ ದೇವಾಲಯದ ಪೂಜಾರಿ ಇಲ್ಲವೇ ಹಿರಿಯ ದೇವದಾಸಿಯ ಮನೆಯಲ್ಲಿ ದೇವದಾಸಿ ಬಿಡುವ ಆಚರಣೆಯನ್ನು ಗುಟ್ಟಾಗಿ ನಡೆಸುತ್ತಾರೆ. ನಂತರದ ದೇವತೆ ಅಥವಾ ದೇವರ ವಾರದ ದಿನದಂದು ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ದರ್ಶನ ಮಾಡಿಸಿಕೊಂಡು ಪೂಜೆ ಮತ್ತು ಕಾಯಿ ಕರ್ಪೂರ ಅರ್ಪಿಸಿ ಬರುತ್ತಾರೆ. ಇನ್ನೂ ಕೆಲವರು ಜಾತ್ರೆ ಉತ್ಸವ ಸಂದರ್ಭಗಳಲ್ಲಿ ಈ ವಿಧಿಯನ್ನು ನೆರವೇರಿಸುತ್ತಾರೆ. ಹಾಗಾಗಿ ಸಾಮಾನ್ಯ ಜನರ ಮನಸ್ಸಿನಲ್ಲಿ ಯಾವ ರೀತಿ ಮೂಢನಂಬಿಕೆಗಳು ಇರುತ್ತವೆಯೋ ಹಾಗೆಯೇ ಆಡಳಿತದಲ್ಲಿರುವ ಅಧಿಕಾರಿಗಳ ಮನಸ್ಸಿನಲ್ಲಿಯೂ ಇರುತ್ತದೆ. ದೇವದಾಸಿ ಪದ್ಧತಿ ಧಾರ್ಮಿಕ ಸಮಸ್ಯೆ, ದೇವರಿಗೆ ಸಂಬಂಧಿಸಿದ್ದು ಎಂದು ಸರ್ಕಾರಿ ಆಡಳಿತಾಂಗವೂ ಈ ಕಾರ್ಯವನ್ನು ಕಾಯ್ದೆ ಕಾಗದದಿಂದ ಹೊರತೆಗೆಯಲು ಧೈರ್ಯ ಮಾಡುವುದಿಲ್ಲ. ಸವದತ್ತಿ, ಹುಚ್ಚಂಗಿದುರ್ಗ, ಹುಲಿಗಿಗಳಂತಹ ದೇವಾಲಯಗಳಲ್ಲಿ ಪೋಲಿಸರು ನಡುವಿಗೆ ಬೆಲ್ಟ್, ತಲೆಗೆ ಟೋಪಿ ಮತ್ತು ಕಾಲಿಗೆ ಬೂಟು ಸಹ ಧರಿಸಲು ದೈವದ ಭಯದಿಂದ ಹೆದರುತ್ತಾರೆ. ಕಣ್ಣೆದುರಿಗೆ ಪ್ರಾಣಿಬಲಿ, ಬೇವಿನ ತೊಪ್ಪಲು ಉಡುಗೆಯಂತಹ ಕಾರ್ಯಕ್ರಮಗಳು ಕಾನೂನಿಗೆ ವಿರುದ್ಧವಾಗಿ ನಡೆದರೂ ಅವು ದೇವರ ಕಾರ್ಯವೆಂದು ತಡೆಯುವ ಧೈರ್ಯ ಮಾಡುವುದಿಲ್ಲ. ಕಾರಣ ದೇವಿಯ ಅಥವಾ ದೇವರ ವಿರುದ್ಧ ನಡೆದುಕೊಂಡರೆ ಆ ದೇವರು ಮುನಿಸಿಕೊಂಡು ಕಾಡುವುದು, ಗಂಡಸರಿಗೆ ಸೀರೆಯುಡಿಸುವಳು ಎಂಬ ತಪ್ಪು ತಿಳುವಳಿಕೆ ಸರ್ಕಾರಿ ಅಧಿಕಾರಿಗಳಲ್ಲಿಯೂ ಇರುತ್ತದೆ. ಇದರಿಂದಾಗಿ ಸ್ವಾಭಾವಿಕವಾಗಿಯೇ ಕಾಯ್ದೆ ಜಾರಿಯಾದರೂ ಅನುಷ್ಠಾನ ಆಗುತ್ತಿಲ್ಲ ಎಂಬುದನ್ನು ಪ್ರಸ್ತುತದಲ್ಲಿ ನೋಡಲಾಗುವುದು.

**ಪುನರ್ವಸತಿ ಯೋಜನೆ ಪಡೆಯುವಲ್ಲಿ ದೇವದಾಸಿಯರ ಸಮಸ್ಯೆಗಳು**

ದೇವದಾಸಿ ಪುರ್ನವಸತಿ ಯೋಜನೆಯು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವತಿಯಿಂದ ಈ ಮೇಲಿನ ಎಲ್ಲಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಈ ಮಾಹಿತಿಯನ್ನು ಪುನರ್ವಸತಿ ಯೋಜನೆಯ ಕೇಂದ್ರದಿಂದ ಪಡೆಯಲಾಗಿದೆ. ಈ ಯೋಜನೆಗಳ ಕುರಿತಾಗಿ ದೇವದಾಸಿಯರಿಗೆ ಅಷ್ಟಾಗಿ ಮಾಹಿತಿ ದೊರೆತಿಲ್ಲ. ಸರ್ಕಾರ ಅವರನ್ನು ಅಭಿವೃದ್ಧಿ ಪಡಿಸಲು ಏನೆಲ್ಲ ಯೋಜನೆಗಳನ್ನು ಹಾಕಿಕೊಂಡಿದೆ ಅವುಗಳನ್ನು ಪಡೆಯುವ ಮಾರ್ಗ ಏನೆಂಬುದನ್ನು ಮುಖ್ಯವಾಗಿ ದೇವದಾಸಿಯರಿಗೆ ತಿಳಿಸಬೇಕಾಗಿದೆ. ಈ ಯೋಜನೆಗಳೆಲ್ಲವು ದೇವದಾಸಿಯರಿಗೆ ತಿಳಿದಿಲ್ಲ. ಕೇವಲ ಸಬ್‌ಸಿಡಿ, ಲೋನ್ ಮತ್ತು ಪಿಂಚಣಿ ಕುರಿತಾಗಿ ಅಷ್ಟೇ ಅವರಿಗೆ ತಿಳಿದಿದೆ. ದೇವದಾಸಿ ಬದುಕು ಸ್ವತಂತ್ರವಾಗಿದ್ದರೂ, ಅವರು ಕುಟುಂಬದ ಮೇಲೆ ಅವಲಂಭಿತರಾಗಿರುತ್ತಾರೆ. ಅಂದರೆ ಬಾಳ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವತಂತ್ರ ಇದೆ. ಆದರೆ ಅವಳ ಆರ್ಥಿಕ ಜೀವನದ ವಿಚಾರದಲ್ಲಿ ಕುಟುಂಬದಲ್ಲಿನ ಪುರುಷರಿಗೆ (ಸಹೋದರರು,ತಂದೆ) ಹೆಚ್ಚಿನ ಅಧಿಕಾರ ಇರುತ್ತದೆ. ಕೆಲವೊಂದು ಕುಟುಂಬದಲ್ಲಿ ದೇವದಾಸಿ ಜೊತೆ ಇರುವ ಪುರುಷನನ್ನು ಕುಟುಂಬದ ಹಿರಿಯರೇ ಆಯ್ಕೆ ಮಾಡುತ್ತಾರೆ. ಹೀಗಿರುವಾಗ ಪುನರ್ವಸತಿ ಯೋಜನೆ ಅಡಿಯಲ್ಲಿ ಬರುವ ಎಲ್ಲಾ ಸೌಲಭ್ಯಗಳು ದೇವದಾಸಿಯರದ್ದೇ ಆಗಿದ್ದು, ಅದರ ಫಲಾನುಭಾವಿಗಳು ಕುಟುಂಬದ ಪುರುಷರಾಗಿದ್ದಾರೆ. ಪುನರ್ವಸತಿ ಯೋಜನೆಗಳಲ್ಲಿ ಒಂದಾದ ಸಬ್‌ಸಿಡಿಯಲ್ಲಿ ತೆಗೆದುಕೊಳ್ಳುವ ಲೋನ್ ಕುರಿತಾಗಿ ಕ್ಷೇತ್ರದಲ್ಲಿ ಕಂಡ ವಿಚಾರವೆಂದರೆ, ಲೋನ್ ತೆಗೆದು ಕೊಂಡಗಾ ಅದನ್ನು ಸರಿಯಾದ ರೀತಿಯಲ್ಲಿ ದೇವದಾಸಿಯು ಬಳಸುವುದಿಲ್ಲ. ಕುಟುಂಬದಲ್ಲಿರುವ ಸಹೋದರ ಮತ್ತು ತಂದೆಯಾಗಿರುವವರು ಅದನ್ನು ಖರ್ಚುಮಾಡುವವರಾಗಿರುತ್ತಾರೆ. ಈಗಿರುವಾಗ ದೇವದಾಸಿಯರು ಆರ್ಥಿಕವಾಗಿ ಸಭಲರಾಗಲು ಸಾಧ್ಯವಾಗುವುದೆ? ಅಲ್ಲದೆ ಬ್ಯಾಂಕ್‌ನಿಂದ ಸಾಲ ಪಡೆಯಲು ಸುಮಾರು ಖರ್ಚು ಮಾಡಿರುತ್ತಾಳೆ. ಅಲ್ಲೂ ಕೂಡ ಸಾಲ ಪಡೆದು ಲೋನ್ ತೆಗೆದುಕೊಳ್ಳುವ ಪ್ರಯತ್ನ ಮಾಡುತ್ತಾಳೆ. ಇದರ ಜೊತೆಗೆ ಲೋನ್ ಕೊಡಿಸಲು ಮಧ್ಯವರ್ತಿಯವರಿಗೆ ಇಂತಿಷ್ಟು % ಹಣ ನೀಡಬೇಕು. ಇನ್ನು ಈ ಲೋನ್‌ನಲ್ಲಿ ಉಳಿದ ದುಡ್ಡಿನಲ್ಲಿ ಅವಳ ಆರ್ಥಿಕ ಸಭಲತೆ ಹೇಗೆ ಸಾಧ್ಯವಾವಾಗುತ್ತದೆ ಎಂಬ ಪ್ರಶ್ನೆ ಕಾಡುತ್ತದೆ. ಹಾಗೆ ಮುಂದುವರೆದು ಪಿಂಚಣಿ ವಿಷಯಕ್ಕೆ ಬಂದಾಗ ೪೫ ವರ್ಷ ವಯಸ್ಸಿನ ದೇವದಾಸಿಯರಿಗೆ ೧೫೦೦ ರೂ ಗಳನ್ನು ತಿಂಗಳಿಗೆ ಪಿಂಚಣಿ ನೀಡುತ್ತಾರೆ. ಈ ಪಿಂಚಣಿಯು ತಿಂಗಳಿಗೊಮ್ಮೆ ಸರಿಯಾಗಿ ದೇವದಾಸಿ ಕೈಗೆ ಸಂಪೂರ್ಣವಾಗಿ ದೊರೆಯುವುದಿಲ್ಲ. ಇದನ್ನು ನಂಬಿಕೊಂಡಿರುವ ದೇವದಾಸಿಯರು ಪಿಂಚಣಿ ಬರುತನಕ ಸಾಲ ಮಾಡಿ ಜೀವನ ನಡೆಸುತ್ತಾರೆ. ಪಿಂಚಣಿ ಬಂದ ಮೇಲೆ ಸಾಲ ತಿರಿಸಿ ಮತ್ತೆ ಪಿಂಚಣಿ ಬರುವ ತನಕ ಬರಿಗೈನಿಂದ ಕಾಯುತ್ತಿರುತ್ತಾರೆ. ಪಿಂಚಣಿಯು ೩ ರಿಂದ ೪ ತಿಂಗಳಿಗೊಮ್ಮೆ ಬರುತ್ತದೆ. ಇದನ್ನು ನೀಡುವ ಮಧ್ಯವರ್ತಿಗಳಿಗೆ ೨೦ ರೂ ಕೊಡಬೇಕು. ಅಷ್ಟೇ ಅಲ್ಲದೆ ಈ ಕಾಲದಲ್ಲಿ ಕೇವಲ ೧೫೦೦ ರೂ ಗಳಲ್ಲಿ ಕುಟುಂಬವನ್ನು ಹೊಂದಿರುವ ದೇವದಾಸಿ ಮಹಿಳೆಯರಿಗೆ ಸಾಕಾಗುವುದಿಲ್ಲ. ಹಾಗಾಗಿ ಪಿಂಚಣಿ ಹೆಚ್ಚಿಸುವ ಕೂರಿತಾಗಿ ಸಂಘಟನಾಕಾರರು

ಹಲವು ಬಾರಿ ಹೋರಾಟಗಳನ್ನು ಮಾಡಿದ್ದಾರೆ. ಆದರೆ ಹೋರಾಟದ ಪ್ರತಿಫಲ ಮಾತ್ರ ದೊರೆತ್ತಿಲ್ಲ, ಇದರಿಂದ ಸರ್ಕಾರ ದೇವದಾಸಿಯರನ್ನು ನಿರ್ಲಕ್ಷಿಸುತ್ತಿದೆ ಎಂದು ಹೇಳಬಹುದು.

ಕರಕುಶಲ ಕೆಲಸಗಳ ಕುರಿತಾದ ತರಬೇತಿ ಕಾರ್ಯಕ್ರಮಗಳು ಸ್ವತಃ ಇವರೆ ಪೂನರ್ವಸತಿ ಯೋಜನೆ ಅಡಿಯಲ್ಲಿ ನಡೆಸುವುದಿಲ್ಲ. ಆಸಕ್ತರು ಬಂದು ಕೇಳಿದಾಗ ಯಾವುದಾದರೂ ಎನ್.ಜಿ.ಓ. ಕಡೆಯಿಂದ ತರಬೇತಿ ಕಾರ್ಯಕ್ರಮಗಳನ್ನು ನಡೆಸುತ್ತಾರೆ. ತರಬೇತಿ ಪಡೆದ ನಂತರ ಅದನ್ನು ಮುಂದುವರಿಸಲು ಬೇಕಾದ ಅನುಕೂಲಗಳು ಅವರಿಗಿಲ್ಲದ ಕಾರಣ, ಇದರಿಂದ ಯಾವ ಆದಾಯವು ಇವರಿಗೆದೊರೆಯುವುದಿಲ್ಲ. ಯಾವ ಕೆಲಸದ ಕುರಿತಾಗಿ ತರಬೇತಿಯನ್ನು ನೀಡುತ್ತಿದ್ದಾರೋ ಆ ಕೆಲಸಕ್ಕೆ ಅನುಕೂಲವಾಗುವಂತೆ ಒಂದಿಷ್ಟು ಸಲಕರಣೆ ಅಥವಾ ವಸ್ತುಗಳನ್ನು ಕೊಡಿಸುವುದು ಸೂಕ್ತ ವೆನಿಸುತ್ತದೆ. ಕ್ಷೇತ್ರಕಾರ್ಯದಲ್ಲಿ ಒಬ್ಬ ದೇವದಾಸಿ ಮಹಿಳೆಯು ತಿಳಿಸಿದ ಮಾಹಿತಿ ಎಂದರೆ 'ಬಟ್ಟೆ ಹೊಲಿಯುವ ತರಬೇತಿ ನೀಡಿದ ನಂತರ ಹೊಲಿಗೆ ಯಂತ್ರ ಕೊಟ್ಟಿದ್ದರೆ. ಆ ವೃತ್ತಿಯನ್ನು ಮುಂದುವರೆಸಿ ಏನಾದರೂ ಹಣ ಸಂಪಾದಿಸಬಹುದು. ಬರೀ ತರಬೇತಿ ನೀಡಿದರೆ ಹೇಗೆ? ನಮ್ಮತ್ರ ಹೊಲಿಗೆ ಯಂತ್ರ ಇಲ್ಲದೆ ಕಲಿತಿದ್ದನ್ನು ಮರೆತು ಹೋಗಿದ್ದೇನೆ' ಎಂದು ಹೇಳಿದಳು. ಹಾಗಾಗಿ ತರಬೇತಿ ನೀಡಿದ ನಂತರ ಆ ಕೆಲಸ ಮುಂದುವರೆಸುವ ದಾರಿಯನ್ನು ತೋರಿಸಬೇಕು. ಬಳ್ಳಾರಿಯಲ್ಲಿ ವಿಶೇಷವಾಗಿ ದೇವದಾಸಿ ಮಕ್ಕಳಿಗೆ ಶಾಲೆಗಳೇನು ಇಲ್ಲ. ಶಾಲೆಗೆ ಸೇರಿಸಬೇಕಾದಲ್ಲಿ ಪುನರ್ವಸತಿ ಅಧಿಕಾರಿಗಳು ಪಟ್ಟಿಯಲ್ಲಿ ಇರುವ ದೇವದಾಸಿಯೇ ಎಂಬುದನ್ನು ಖಚಿತ'ಪಡಿಸಿಕೊಂಡು ಅವರಿಗೆ ದೇವದಾಸಿ ಮಗ ಎಂದು ಪತ್ರವನ್ನು ನೀಡುತ್ತಾರೆ. ಅದನ್ನು ತೆಗೆದುಕೊಂಡು ಶಿಕ್ಷಣ ಮುಂದುವರೆಸಲು ಸಹಾಯವಾಗಿದೆ.

ಪುನರ್ವಸತಿ ಯೋಜನೆಯ ಅಡಿಯಲ್ಲಿ ವರ್ಷದಲ್ಲಿ ಇಂತಿಷ್ಟು ಎಂದು ಯೋಜನೆಗಳನ್ನು ಹಾಕಿಕೊಳ್ಳುತ್ತಾರೆ. ಅದನ್ನು ಜನರಿಗೆ ಪತ್ರಿಕೆಯ ಮೂಲಕ ತಿಳಿಸುತ್ತಾರೆ. ಯೋಜನೆಗಳನ್ನು ಕೆಲವರು ಮಾತ್ರ ಸರ್ಮಪಕವಾಗಿ ಪಡೆಯುತ್ತಿದ್ದಾರೆ. ಕಾರಣ ಎಲ್ಲರು ಸೌಲಭ್ಯಗಳನ್ನು ಪಡೆಯಲು ಸಮರ್ಥರಾಗಿರುವುದಿಲ್ಲ. ಉದಾ: ದೇವದಾಸಿ ಮಹಿಳೆಗೆ ಮನೆಗಳು ಬಂದಾಗ ಅವರ ಹೆಸರಿನಲ್ಲಿ ಸ್ಥಳವಿರಬೇಕು ಎಂಬ ನಿಯಮ ವಿದೆ. ಆದರೆ ದೇವದಾಸಿಯ ಹೆಸರಿನಲ್ಲಿ ಸ್ಥಳ ಇಲ್ಲದಿರುವುದು ಸಮಸ್ಯೆಯಾಗಿದೆ. ಹಾಗಾಗಿ ಅವರಿಗೆ ವಾಸಕ್ಕೆ ಸ್ಥಳ ನೀಡಿ ಅಲ್ಲಿಯೇ ಮನೆಕಟ್ಟಿಸಿ ಕೊಡಬೇಕು. ಆಗ ಮಾತ್ರ ದೇವದಾಸಿಯರಿಗೆ ನಿಜವಾದ ಪುನರ್ವಸತಿ ಕಲ್ಪಿಸಿದಂತಾಗುವುದು. ಬ್ಯಾಂಕ್ ಮೂಲಕ ಸಾಲವನ್ನು ಪಡೆದು ಮಹಿಳೆಯರು ಎಮ್ಮೆ ಮತ್ತು ಹಸು ಸಾಕಾಣಿಕೆ, ತರಕಾರಿ ವ್ಯಾಪಾರ ಅಥವಾ ಇತರೆ ವ್ಯಾಪಾರ ಹೀಗೆ ಯಾವುದಾದರೊಂದು ಪರ್ಯಾಯ ಜೀವನೋಪಾಯ ಹೊಂದಲಿ ಎಂಬುದು ಈ ಸಾಲದ ಮುಖ್ಯ ಆಶಯವಾಗಿತ್ತು. ದೇವದಾಸಿ ಮಹಿಳೆಯರು ಸಾಲ ಮತ್ತು ಸಹಾಯಧನ ಪಡೆದು ಮನೆಯಲ್ಲಿ ನಡೆಯಬೇಕಾದ ಅವರ ಆಚರಣೆಗಳನ್ನು ಮಾಡುತ್ತಾರೆ. ಅವುಗಳೆಂದರೆ ಜೋಗ ಪಣತಿ ನೀಡುವುದು, ದೇವರಿಗೆ ಕುರಿ ಬಲಿ ಆಚರಣೆ ಮತ್ತು ಅವರ ಆರೋಗ್ಯ ಸಂಬಂಧಿಸಿದಂತೆ ಬಳಸಿಕೊಳ್ಳುತ್ತಿದ್ದಾರೆ. ಹೀಗಿರುವಾಗ ಅವರ ಆರ್ಥಿಕ ಸುಧಾರಣೆ ಆಗುವುದಿಲ್ಲ. ಈ ಸಾಲ ಮತ್ತು

ಸಹಾಯಧನದ ವಿಚಾರದಲ್ಲಿ ಇದರ ಮಧ್ಯವರ್ತಿಗಳಿಗೆ ಅದೆಷ್ಟೋ ಹಣವನ್ನು ದೇವದಾಸಿಯರು ನೀಡಿದ್ದಾರೆ. ಕಾರಣ ಇವರಲ್ಲಿ ಅನೇಕರು ಅನಕ್ಷರಸ್ಥರಿದ್ದಾರೆ. ಮಧ್ಯವರ್ತಿಗಳು ಇವರ ಅನಕ್ಷರತೆಯನ್ನೇ ಬಂಡವಾಳ ಮಾಡಿಕೊಂಡು ಸಾಲ ಸಹಾಯಧನ ಕೊಡಿಸುವುದಾಗಿ ಸುಲಿಗೆ ಮಾಡಿದ ಉದಾಹರಣೆಗಳು ಸಾಕಷ್ಟಿವೆ. "ಸಂಘದ ಅಧ್ಯಕ್ಷ ತಾಲೂಕು ಗೌರವ ಅಧ್ಯಕ್ಷ ಎ.ಸ್ವಾಮಿ ಮಾತನಾಡಿ, ದೇವದಾಸಿ ಪುನರ್ವಸತಿ ನಿಗಮದ ನೋಡಲ್ ಅಧಿಕಾರಿಗೆ ೩೦೦೦ದ ೫ಸಾವಿರ ಲಂಚ ಕೊಟ್ಟವರಿಗೆ ಮಾತ್ರ ಸಹಾಯಧನ ಆಧರಿತ ಸಾಲ ಮಂಜೂರು ಮಾಡುತ್ತಾರೆ. ಇದರಿಂದಾಗಿ ಬಡ ದೇವದಾಸಿಯರ ಕುಟುಂಬಗಳು ಸೌಲಭ್ಯ ವಂಚಿತವಾಗುತ್ತಿವೆ. ನಿಗಮ ಎಲ್ಲಾ ಸೌಲಭ್ಯ ನೀಡುತ್ತಿದೆ, ಇನ್ನು ಹೋರಾಟ ಯಾಕೆ ಬೇಕು ಎಂದು ಸಂಘಟನೆ ಒಡೆಯುವ ಪ್ರಯತ್ನ ನಡೆಸಿದ್ದಲ್ಲದೆ ದೌರ್ಜನ್ಯಕೊಳಗಾದ ದೇವದಾಸಿಯರಿಂದ ಲಂಚ ಪಡೆಯುವ ಕೀಳುಮಟ್ಟಕ್ಕಿಳಿದಿದ್ದಾರೆ" *(ವಿಜಯಕರ್ನಾಟಕ, ಬಳ್ಳಾರಿ ಆವೃತ್ತಿ, ಪು. ೧ ದಿನಾಂಕ: ೨೪.೮.೨೦೧೮).* ಎಂದು ತಿಳಿಸಿದ್ದಾರೆ. ಅಲ್ಲದೇ ಅವಶ್ಯಕತೆ ಇಲ್ಲದಿದ್ದರೂ ತಮ್ಮ ಕಮಿಷನ್ ಆಸೆಗೆ ಈ ಮಹಿಳೆಯರನ್ನು ಸಾಲಗಾರರನ್ನಾಗಿ ಮಾಡಿದ ಕುರಿತು ಅನೇಕ ದೇವದಾಸಿ ಮಹಿಳೆಯರು ನೊಂದು ನುಡಿಯುತ್ತಾರೆ. ಅಲ್ಲದೇ ಸಾಲ ಪಡೆದುಕೊಂಡ ಮಹಿಳೆಯರಿಗೆ ಸರಿಯಾದ ಮಾರ್ಗದರ್ಶನ ನೀಡಿ, ಸಾಲವನ್ನು ಸದುಪಯೋಗಪಡಿಸಿಕೊಂಡು ಆರ್ಥಿಕವಾಗಿ ಸಬಲರಾಗುವ ಕುರಿತು ತರಬೇತಿ ನೀಡಬೇಕು. ಅಲ್ಲದೇ ಆರ್ಥಿಕವಾಗಿ ಸಬಲರಲ್ಲದ ಇಂತಹ ಜನರಿಗೆ ಸಾಲ ಕೊಡಲು ಬ್ಯಾಂಕ್‌ಗಳು ಹಿಂದೇಟು ಹಾಕುತ್ತವೆ. ಎಷ್ಟೋ ದೇವದಾಸಿಯರು ಸಹಾಯಧನ ಮತ್ತು ಸಾಲ ಪಡೆದು ಮಕ್ಕಳ ಮದುವೆ ಅಥವಾ ಇತರೆ ಕಾರ್ಯಗಳನ್ನು ಮಾಡಿ ಕೈತೊಳೆದುಕೊಳ್ಳುತ್ತಾರೆ ಅಷ್ಟೇ. ಬೇರೆ ಯಾವ ರೀತಿಯಲ್ಲೂ ಆರ್ಥಿಕವಾಗಿ ಬೆಳೆಯಲು ಸಹಾಯವಾಗುವುದಿಲ್ಲ. ಹಾಗಾಗಿ ದೇವದಾಸಿ ಮಕ್ಕಳ ಮದುವೆ ಕಾರ್ಯಗಳಲ್ಲಿ ಸರ್ಕಾರ ಆರ್ಥಿಕವಾಗಿ ಧನ ಸಹಾಯ ಮಾಡಬೇಕು.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಕಲ್ಯಾಣ ಇಲಾಖೆಯ ವತಿಯಿಂದ ದೇವದಾಸಿಯರಿಗೆ ಮರು ಮದುವೆಯನ್ನು ಮಾಡುವ ಯೋಜನೆಯನ್ನು ತಂದರು. ಎಷ್ಟೋ ದೇವದಾಸಿಯರಿಗೆ ಮದುವೆಯಾಗಿದೆ. ಆದರೆ ಅವರ್‍ಯಾರು ಒಟ್ಟಿಗೆ ಜೀವನ ನಡೆಸುತ್ತಿಲ್ಲ. ಮರು ಮದುವೆಯಾದರೆ ಪ್ರೋತ್ಸಾಹಧನ ನೀಡುತ್ತಿದ್ದರು. ಈ ಹಣದ ಆಸೆಗಾಗಿ ಮರುಮದುವೆ ಮಾಡಿಕೊಂಡಿದ್ದಾರೆ. ಕ್ಷೇತ್ರದಲ್ಲಿ ಕಂಡ ಘಟನೆ ಎಂದರೆ ದೇವದಾಸಿ ಮಹಿಳೆ ಒಬ್ಬ ಪುರುಷನೊಂದಿಗೆ ಷರತ್ತಿನ ಮೇರೆಗೆ ಮದುವೆಯಾಗುತ್ತಾಳೆ, ಬಂದ ಹಣದಲ್ಲಿ ಇಬ್ಬರು ಹಂಚಿಕೊಳ್ಳುತ್ತಾರೆ. ನಂತರ ಆ ಕುಡುಕ ಪುರುಷ ದಿನಾಲೂ ಕಿರುಕುಳ ನೀಡಿ ದೇವದಾಸಿ ಮಹಿಳೆಯಿಂದ ಹಣ ಪಡೆಯುತ್ತಿದ್ದ. ಆ ಮಹಿಳೆ ಬೇಸತ್ತು ಹಣ ಕೊಡುವುದಿಲ್ಲ ಎಂದು ಹೇಳಿದರೆ, ಇವರು ನನ್ನ ಸುಮ್ನೆ ಮದುವೆಯಾಗಿದ್ದಾಳೆ, ಇವಳಿಗೆ ನಾನು ಗಂಡನಲ್ಲ ಎಂದು ಆಫೀಸರ್‌ಗೆ ಹೇಳುತ್ತೆನೆಂದು ಬ್ಲಾಕ್ ಮೇಲ್ ಮಾಡುತ್ತೇನೆ ಎಂದು ಹೇಳುತ್ತಾನೆ. ಹೀಗೆ ಹೆದರಿಸಿ ಅವಳಿಂದ ಪ್ರತಿದಿನ ಹಣ ಪಡೆಯುತ್ತಾನೆ. ಹೀಗೆ ಯಾವುದೇ ಸರ್ಕಾರ ಅಥವಾ ಪುನರ್ವಸತಿ ಯೋಜನೆಗಳು ದೇವದಾಸಿಯರಿಗೆ ಸರಿಯಾದ ರೀತಿಯಲ್ಲಿ ಆರ್ಥಿಕವಾಗಿ

ನೆರವಾಗುವುದಿಲ್ಲ ಎಂದು ಹೇಳಬಹುದು. ಆರೋಗ್ಯ ತಪಾಸಣೆಯ ಸಂದರ್ಭದಲ್ಲಿ ದೇವದಾಸಿಯರು ಚಿಕಿತ್ಸೆಗೆ ಬರುವುದಿಲ್ಲ. ಕಾರಣ ಅವರು ರಕ್ತ ಪರೀಕ್ಷೆಯಂತಹ ಹತ್ತು ಹಲವು ಪರೀಕ್ಷೆಗಳನ್ನು ಮಾಡುತ್ತಾರೆ. ಯಾರಾದರೂ ನೋಡಿದರೆ ನಮಗೆ ಏಡ್ಸ್ ಬಂದಿದೆ ಅದಕ್ಕೆ ಡಾಕ್ಟರ್ ಹತ್ತಿರ ರಕ್ತ ಪರೀಕ್ಷೆಗೆ ಬಂದಿದ್ದಾರೆ ಎಂದು ಬೇರೆ ಜನರು ಭಾವಿಸುತ್ತಾರೆ. ಅಲ್ಲದೇ ನಾನೇನು ಕಂಡೋನ ಜೊತೆ ಸಂಬಂಧ ಹೊಂದಿಲ್ಲ, ಒಬ್ಬನಿಗಾಗಿಯೇ ಇದ್ದೇನೆ. ಅವನು ಸತ್ರು ಇನ್ನೊಬನನ್ನು ನೋಡಿಲ್ಲ ಎಂದು ತಮ್ಮ ಪಾವಿತ್ರ್ಯ ಕಾಪಾಡಿಕೊಂಡಿದ್ದರ ಬಗ್ಗೆ ಹೇಳಿಕೊಳ್ಳುತ್ತಾರೆ. ಅಲ್ಲದೇ ಅವೆಲ್ಲವೂ ಗೌಪ್ಯವಾಗಿ ನಡೆಯುವಂತಿರಬೇಕು. ಹಾಗಾಗಿ ಇಲ್ಲಿಯವರೆಗೆ ಆರೋಗ್ಯ ತಪಾಸಣಾ ಶಿಬಿರಗಳು ಜ್ವರ, ತಲೆನೋವುಗಳಂತಹ ಸಣ್ಣಪುಟ್ಟ ಖಾಯಿಲೆಗಳಿಗೆ ಮಾತ್ರ ಸೀಮಿತವಾಗಿ ಕಾರ್ಯನಿರ್ವಹಿಸುತ್ತಿವೆ. ಇಂತಹ ಶಿಬಿರಗಳ ಕುರಿತು ದೇವದಾಸಿ ಮಹಿಳೆಯರಲ್ಲಿ ಮುಜುಗರದ ಭಾವನೆಗಳು ಹೆಚ್ಚಾಗಿ ಕಂಡುಬರುತ್ತವೆ.

"ವಿಚಿತ್ರವೆಂದರೆ ದೇವದಾಸಿಯಲ್ಲದವರೂ ದೇವದಾಸಿಯರಂತೆ ಸೋಗು ಹಾಕಿ ಜೋಗಾ ಬೇಡಿ ಬದುಕುವುದು ಕಂಟುಬರುತ್ತದೆ. ಕೆಲವರು ದೇವದಾಸಿಯರ ಹೆಸರಿನಲ್ಲಿ ಸಂಸ್ಥೆಯನ್ನು ಆರಂಭಿಸಿ ತುಂಬಾ ದುಡ್ಡು ಮಾಡಿಕೊಂಡಿದ್ದಾರೆ" *(ಸಿದ್ರಾಮ ಕಾರಣಿಕ:೨೦೧೩:೮೨).* ಬಳ್ಳಾರಿ ಜಿಲ್ಲೆಯ ಭಾಗದಲ್ಲಿ ಇಂತಹವರು ಯಾರೂ ಕಂಡುಬಂದಿಲ್ಲ. ಗಂಡ ಸತ್ತ ನಂತರ ನಿರ್ಗತಿಕರು, ದಿಕ್ಕಿಲ್ಲದವರು, ಅನಾಥರು ಮತ್ತು ದೇವರು ಮೈಮೇಲೆ ಬಂದ ಕಾರಣಕ್ಕೆ ಮುತ್ತು ಕಟ್ಟಿಕೊಂಡವರು ಮಾತ್ರ ಜೋಗಾ ಬೇಡಿ ಜೀವನ ನಡೆಸಲು ದೇವರ ಗುಡಿಗಳನ್ನು ಅವಲಂಭಿಸಿರುವುದು ಕಂಡುಬರುತ್ತದೆ. ದೇವದಾಸಿಯರಿಗೆ ಪುನರ್ವತಿ ಯೋಜನೆಯಡಿಯಲ್ಲಿ ಬರುವ ಎಲ್ಲ ಸೌಲಭ್ಯಗಳನ್ನು ಪಡೆಯುವಲ್ಲಿ ಮತ್ತು ಅನುಭವಿಸುವಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಸಮಸ್ಯೆಗಳನ್ನು ಎದುರಿಸುತ್ತಲೆ ಬಂದಿದ್ದಾರೆ.

ಕೊನೆಯದಾಗಿ ಹೇಳಬೇಕಾದುದ್ದೇನೆಂದರೆ ೨೦೦೭-೦೮ನೇ ಸಾಲಿನಲ್ಲಿ ನಗರ ಸರ್ವೆಪಟ್ಟಿಯಲ್ಲಿರುವ ದೇವದಾಸಿಯರಿಗೆ ಮಾತ್ರ ಈ ಯೋಜನೆಗಳನ್ನು ನೀಡುತ್ತಿದ್ದಾರೆ. ಪಟ್ಟಿಯಲ್ಲಿ ಇಲ್ಲಿಯವರೆಗೆ ಮರಣ ಹೊಂದಿದ ಸಂಖ್ಯೆ ಮತ್ತು ಪಟ್ಟಿ ಬಿಟ್ಟು ಹೋಗಿರುವ ದೇವದಾಸಿಯರ ಪ್ರಮಾಣವನ್ನು ತಿಳಿಯುವ ಅಗತ್ಯವಿದೆ. ದೇವದಾಸಿಯರಿಗೆ ಅಭಿವೃದ್ಧಿ ಕುರಿತು ವಿಶೇಷ ಯೋಜನೆಗಳನ್ನು ಆರ್ಥಿಕವಾಗಿ ಸಹಕಾರಿಯಾಗುವಂತಹ ರೀತಿಯಲ್ಲಿ ರೂಪಿಸಬೇಕು. ಬ್ಯಾಂಕ್, ಸಹಕಾರ ಸಂಘದಿಂದ ಸೌಲಭ್ಯಗಳು ಸಿಗಬೇಕು ಹಾಗೂ ಗೃಹ ಕೈಗಾರಿಕೆಗೆ ಆದ್ಯತೆ ನೀಡಬೇಕು, ಪ್ರತಿಯೊಬ್ಬರಿಗೆ ಮಾಸಾಶನವನ್ನು ಹೆಚ್ಚಿಸಿ ಪ್ರತಿ ತಿಂಗಳಿಗೆ ಒಮ್ಮೆ ದೇವದಾಸಿಯ ಕೈಗೆ ನೇರವಾಗಿ ಸೇರುವಂತಾಗಬೇಕು. ದೇವದಾಸಿ ಮಕ್ಕಳಿಗೆ ಶಿಕ್ಷಣದಲ್ಲಿ ಹೆಚ್ಚಿನ ಅವಕಾಶ ನೀಡಲು ವಿಶೇಷವಾದ ಯೋಜನೆಗಳನ್ನು ಹಾಕಿಕೊಳ್ಳಬೇಕು. ಅಲ್ಲದೆ ಉದ್ಯೋಗಗಳಲ್ಲಿ ಮೀಸಲಾತಿ ನೀಡಬೇಕಾದ ಅವಶ್ಯಕತೆ ಇದೆ. ದೇವದಾಸಿ ಹೆಣ್ಣು ಮಕ್ಕಳ ಮದುವೆಗೆ ಧನಸಹಾಯ ನೀಡಿ ದೇವದಾಸಿಯರ ಆರ್ಥಿಕ ದುಸ್ಥಿತಿಗೆ ಮಂಗಳ ಹಾಡಬೇಕಾಗಿದೆ. ಸೌಲಭ್ಯಗಳಿಂದ ದೇವದಾಸಿಯರು ಈ ಪದ್ಧತಿಯಿಂದ ವಿಮೋಚನೆ ಹೊಂದುತ್ತಾರೆ. ಸಮಾಜದಲ್ಲಿರುವ ಎಲ್ಲರಂತೆ ಅವರು ಜೀವನ ನಡೆಸಲು ದಾರಿ ತೋರಿಸಿದಂತಾಗುತ್ತದೆ.

### ೬.೪ ಸಂಘಟನೆ – ಹೋರಾಟಗಾರರು ಮತ್ತು ದೇವದಾಸಿ ಹೋರಾಟಗಾರರು

ಸಮಾಜದಲ್ಲಿ ಇಂದು ಏನಾದರೂ ತೆಗೆದುಕೊಂಡ ನಿರ್ಣಯಗಳು ಕಾರ್ಯರೂಪಕ್ಕೆ ಬರಬೇಕಾದರೆ ಅದು ಯಾರೋ ಒಬ್ಬರಿಂದ ಸಾಧ್ಯವಾಗುವುದಿಲ್ಲ. ಸಂಘ ಶಕ್ತಿ ಸಂಘಟನೆಗಳಿಂದ ಸಾಧ್ಯವಾಗುತ್ತದೆ. ಸಂಘ ಸಂಸ್ಥೆ ಎಂದರೆ ಹತ್ತಾರು ಮಂದಿ ಇರುವ ನೆಲೆ. ಒಗ್ಗಟ್ಟಿನಲ್ಲಿ ಬಲವಿದೆ, ಐಕ್ಯವೊಂದೇ ಮೂಲಮಂತ್ರ, ಐಕ್ಯದಿಂದ ಸ್ವಾತಂತ್ರ ಎನ್ನುವಂತೆ ಯಾವ ಕೆಲಸವಾಗಬೇಕಾದರೂ ಹತ್ತು ಜನ ಕೂಡಿದಾಗ ಸುಲಭವಾಗಿ ವ್ಯವಸ್ಥಿತವಾಗಿ ಆಗುತ್ತದೆ. ಒಬ್ಬ ವ್ಯಕ್ತಿ ಏನು ಮಾಡಲಾಗುವುದಿಲ್ಲ. ಸಂಸ್ಥೆಗಳಲ್ಲಿ ಜನರು ಸದಸ್ಯರಾಗಿರುತ್ತಾರೆ. ಹಮ್ಮಿಕೊಂಡ ಕಾರ್ಯಕ್ರಮಗಳನ್ನು ನೆರವೇರಿಸುವುದು ಒಂದು ತಂಡವಾಗಿ ಸುಲಭವಾಗುತ್ತದೆ. ಕೈ ಕೈ ಸೇರಿದರೆ ಚಪ್ಪಾಳೆ ಎನ್ನುವಂತೆ ಅನ್ಯಾಯ ಅಕ್ರಮಗಳಾದಾಗ ಅದನ್ನು ನೋಡಿಕೊಂಡು ಜನ ಸುಮ್ಮನಿರದೇ ಅಂತಹ ಅನ್ಯಾಯದ ವಿರುದ್ಧ ತಿರುಗಿ ಬೀಳುತ್ತಾರೆ. ಅಂತಹ ಸಮಯದಲ್ಲಿ ಸಂಘಟನೆಯ ಅಗತ್ಯತೆ ಹೆಚ್ಚಾಗಿ ಕಂಡು ಬರುತ್ತದೆ. ಯಾರೇ ಆಗಲಿ ಸಂಘಟನೆ ಅಡಿ ಕೆಲಸ ಮಾಡುವವರಿಗೆ ಸ್ವಲ್ಪಮಟ್ಟಿನ ಕಾನೂನಿನ ಅರಿವು ಇರುತ್ತದೆ. ಆದ್ದರಿಂದ ಯಾರೂ ಸಹ ಕಾನೂನನ್ನು ಕೈಗೆತ್ತಿಕೊಳ್ಳುವ ಕೆಲಸ ಮಾಡುವುದಿಲ್ಲ, ಆದರೆ ಸಾಂವಿಧಾನಿಕವಾಗಿ ತಮ್ಮ ಪ್ರತಿಭಟನೆ ದಾಖಲಿಸುತ್ತಾರೆ. ಇದೇ ಮುಂದೆ ಚಳವಳಿ ಎಂಬ ಹೆಸರಿನಲ್ಲಿ ಒಂದು ಸಂಘಟನೆಯಾಗಿ ರೂಪುಗೊಳ್ಳುತ್ತದೆ. ಸಂಘ – ಸಂಸ್ಥೆಗಳು ಚೆನ್ನಾಗಿ ನಡೆದುಕೊಂಡು ಹೋಗಬೇಕಾದರೆ ಸಂಘದ ಸದಸ್ಯರು ಭಿನ್ನಾಭಿಪ್ರಾಯಗಳಿಂದ ಮುಕ್ತವಾಗಿ ನಿಸ್ವಾರ್ಥದಿಂದ ಶ್ರಮಿಸಿ ಸಂಘದ ಧ್ಯೇಯ ಸಾಧನೆಗೆ ಕಟಿಬದ್ಧರಾಗಿ ದುಡಿಯಬೇಕು. ಯಾವ ಉದ್ದೇಶಕ್ಕಾಗಿ ಸಂಘವನ್ನು ಸಂಸ್ಥೆಯನ್ನು ಕಟ್ಟಿರುತ್ತಾರೋ ಆ ಉದ್ದೇಶಗಳನ್ನು ಪೂರೈಸಬೇಕು. ಕರ್ನಾಟಕ ರಾಜ್ಯದಲ್ಲಿ ಇಂತಹದ್ದೊಂದು ಸಂಘಟನೆಯು ದೇವದಾಸಿಯರ ಬದುಕನ್ನು ಹಸನಾಗಿಸುವ ಉದ್ದೇಶದಿಂದ ಹುಟ್ಟಿಕೊಂಡಿದೆ, ಅದೇ ಕರ್ನಾಟಕ ರಾಜ್ಯ ದೇವದಾಸಿ ವಿಮೋಚನಾ ಸಂಘವಾಗಿದೆ.

ಕರ್ನಾಟಕ ರಾಜ್ಯದಲ್ಲಿ ೨೦೦೬ರಿಂದ ಕರ್ನಾಟಕ ರಾಜ್ಯ ದೇವದಾಸಿ ಮಹಿಳಾ ವಿಮೋಚನಾ ಸಂಘವು ದೇವದಾಸಿಯರ ವಿಮೋಚನೆಗಾಗಿ ಸಂಘಟಿತವಾಗಿ ಕಾರ್ಯನಿರ್ವಹಿಸುತ್ತಿದೆ. ಸಂಘದ ಅನೇಕ ಹೋರಾಟಗಳ ಫಲವಾಗಿ ಮೊದಲು ೧೦ ಜಿಲ್ಲೆಗಳಲ್ಲಿ ಮಾತ್ರ ದೇವದಾಸಿಯರಿದ್ದಾರೆಂದು ಸರ್ಕಾರ ಗುರುತಿಸಿದ್ದ ಪಟ್ಟಿಗೆ ಇತರ ನಾಲ್ಕು ಜಿಲ್ಲೆಗಳನ್ನು ಸೇರಿಸಲಾಗಿದೆ. ದೇವದಾಸಿಯರಿಗೆ ಮಾಸಾಶನ, ವಸತಿ ಸೌಲಭ್ಯ ಕಲ್ಪಿಸುವಲ್ಲಿ ಸಂಘವು ಮಹತ್ತರ ಪಾತ್ರ ವಹಿಸಿದೆ. ಅಲ್ಲದೆಯೇ ನಿರಂತರ ಹೋರಾಟಗಳು, ಜನಜಾಗೃತಿ, ಕಾನೂನು ಶಿಬಿರಗಳು, ದೇವದಾಸಿಯರಿಗೆ ಜನಪದ ಹಾಡು ಇತರೆ ಕಾರ್ಯಕ್ರಮಗಳ ಮೂಲಕ ಒಂದೆಡೆ ಸೇರಿಸಿ ದೇವದಾಸಿ ಪದ್ಧತಿಯ ನಿರ್ಮೂಲನೆ ಕುರಿತಾಗಿ ಮತ್ತು ದೇವದಾಸಿಯರ ವಿಮೋಚನೆಗೆ ಶ್ರಮಿಸುತ್ತಿರುವ ಸಂಘ ದೇವದಾಸಿಯರಿಗೆ ಸಂಬಂಧಿಸಿದಂತೆ ಹನ್ನೆರಡು ಪ್ರಮುಖ ಬೇಡಿಕೆಗಳನ್ನು ಸರ್ಕಾರದ ಮುಂದಿಟ್ಟಿದೆ. ಅಷ್ಟೇ ಅಲ್ಲದೆ ದೇವದಾಸಿ ಮತ್ತು ಅವರ ಮಕ್ಕಳ ಅಭಿವೃದ್ಧಿಯ ನಿಟ್ಟಿನಲ್ಲಿ ಅನೇಕ ಜಾಗೃತಿ ಮೂಡಿಸುವ ಜೊತೆಗೆ ಈ ಪದ್ಧತಿಯ ವಿರುದ್ಧ ಧ್ವನಿ ಎತ್ತುವಂತೆ ದೇವದಾಸಿ ಮಕ್ಕಳನ್ನು ಪ್ರೇರೇಪಿಸಿದ್ದಾರೆ. ಅಲ್ಲದೇ

ದೇವದಾಸಿ ಮಕ್ಕಳಿಗೆ ವಿಶೇಷವಾದ ಯೋಜನೆ ಮೂಲಕ ಸೌಲಭ್ಯ ಒದಗಿಸಿಕೊಡಬೇಕೆಂದು ಬೇಡಿಕೆಗಳನ್ನು ಮುಂದಿಟ್ಟಿದ್ದಾರೆ. ಈ ನಿಟ್ಟಿನಲ್ಲಿ ನಿರಂತರವಾಗಿ ಹೋರಾಟದಲ್ಲಿ ಜನಜಾಗೃತಿಯಲ್ಲಿ ಕಾರ್ಯನಿರ್ವಹಿಸುವ ಸಂಘ ಇದಾಗಿದೆ. ಹೀಗೆ ಈ ಸಂಘಟನೆಯು ಬಳ್ಳಾರಿ ಜಿಲ್ಲೆಯಲ್ಲಿ ಅನೇಕ ಕಾರ್ಯಕ್ರಮಗಳನ್ನು ಮಾಡುತ್ತಾ ಬಂದಿದೆ. ದೇವದಾಸಿಯರನ್ನು ಸಂಘಟಿಸುವುದು ಸುಲಭದ ಕೆಲಸವಲ್ಲ. ಯಾಕೆಂದರೆ ಸರ್ಕಾರ ಕೊಡುವ ಮಾಸಾಶನವನ್ನೇ ನಂಬಿ ಕುಳಿತರೆ ಹೊಟ್ಟೆ ತುಂಬುವುದು ಹೇಗೆ? ಅದಕ್ಕಾಗಿ ದೇವದಾಸಿ ಮಹಿಳೆಯರು ಕೂಲಿ ಕೆಲಸಕ್ಕೆ ತೆರಳುತ್ತಾರೆ. ಅವರನ್ನು ಸಂಘದ ಹೋರಾಟಕ್ಕೆ ಸಂಘಟಿಸಲು ಕರೆದರೆ ಆ ದಿನದ ಕೂಲಿ ಸಿಗುವುದಿಲ್ಲ. ಕೂಲಿ ಕೈ ತಪ್ಪಿದರೆ ಆ ದಿನ ಕುಟುಂಬದವರು ಉಪವಾಸ ಇರಬೇಕಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಸಂಘಕ್ಕೆ ಸೇರಿಸುವುದು ಸಾಹಸದ ಕಾರ್ಯವಾಗಿದೆ. ಆದರೂ ಸಂಘ ಈ ಮಹಿಳೆಯರನ್ನು ನಿರಂತರವಾಗಿ ಸಂಘಟಿಸುತ್ತಾ ಬಂದಿದೆ. ದೇವದಾಸಿ ಮಹಿಳೆಯರನ್ನು ಸಂಘಟಿಸುವುದು, ಹೋರಾಟಕ್ಕೆ ನಿಲ್ಲಿಸುವುದು ಮತ್ತು ಅವರಿಗೆ ಜಾಗೃತಿ ಮೂಡಿಸುವುದು ತುಂಬಾ ಕಷ್ಟದ ಕೆಲಸ ಎಂದು ದೇವದಾಸಿ ಮಹಿಳಾ ವಿಮೋಚನಾ ಸಂಘದ ರಾಜ್ಯಾಧ್ಯಕ್ಷೆ ಬಿ. ಮಾಳಮ್ಮನವರು ತಿಳಿಸಿದ್ದಾರೆ.

ಸರ್ಕಾರ ದೇವದಾಸಿ ಮಹಿಳೆಯರಿಗೆ ಮನೆ ಕಟ್ಟಿಸಿಕೊಳ್ಳಲು ೪೦,೦೦೦ ರೂಪಾಯಿ, ಪಡಿತರ(ರೇಷನ್)ಚೀಟಿ, ಸ್ವಯಂ ಉದ್ಯೋಗ ನೀಡುವುದಾಗಿ ಹೇಳುತ್ತಲೇ ಬಂದಿದೆ. ಆದರೆ ಇದುವರೆಗೂ ಈ ಯಾವ ಭರವಸೆಗಳೂ ಸಮರ್ಪಕವಾಗಿ ಜಾರಿಗೆ ಬಂದಿಲ್ಲ. ಮನೆಕಟ್ಟಿಕೊಳ್ಳಲು ನಿವೇಶನ ಇರಬೇಕು ಎಂದು ಕಾನೂನು ಹೇಳುತ್ತದೆ. ಆದರೆ ದೇವದಾಸಿಯರು ಬಹುತೇಕ ಬಡವರಾಗಿದ್ದಾರೆ. ಅವರು ಒಂದು ಹೊತ್ತಿನ ಊಟಕ್ಕೆ ಪರದಾಡುವ ಸ್ಥಿತಿಯಲ್ಲಿರುವಾಗ ಅವರಿಗೆ ನಿವೇಶನವು ಎಲ್ಲಿಂದ ಬರಬೇಕು? ಅದರಲ್ಲೂ ಕುಟುಂಬದಲ್ಲಿರುವ ಸಹೋದರರು ದೇವದಾಸಿ ಮಹಿಳೆಯ ಪಾಲಿಗೆ ಬರಬೇಕಾದ ಆಸ್ತಿಯನ್ನು ಪಡೆಯುವಲ್ಲಿಯೂ ಸಮಸ್ಯೆಗಳನ್ನು ಎದುರಿಸುತ್ತಾಳೆ. ಹಾಗಾಗಿ ನಿವೇಶನವನ್ನು ನೀಡಿ ಮನೆ ಕಟ್ಟಿ ಕೊಟ್ಟರೆ ನಿರ್ಗತಿಕರಾದ ದೇವದಾಸಿಯರಿಗೆ ಬದುಕಲು ಒಂದು ಸೂರು ಸಿಕ್ಕಂತಾಗುತ್ತದೆ ಎಂದು ಸಂಘಟನೆಯು ಅನೇಕ ಸಲ ಹೋರಾಟಗಳನ್ನು ಮಾಡುತ್ತಿದೆ. ಹೀಗೆ ತಾಳೂರಿನಲ್ಲಿ ಚಲುವಾದಿ ಸಮುದಾಯದ ದೇವದಾಸಿ ಮಹಿಳೆಯು ಆಸ್ತಿಯ ವಿಚಾರದಲ್ಲಿ ಮೋಸಹೋಗಿ ಸಂಘಟನೆಯ ಮೊರೆಹೋದಾಗ ಸಿರುಗುಪ್ಪ ತಾಲೂಕಿನ ದೇವದಾಸಿ ವಿಮೋಚನಾ ಸಂಘಟನೆಯ ಜಿಲ್ಲಾಧ್ಯಕ್ಷರಾದ ಅಡಿವೆಪ್ಪನವರು ಬಂದು ದೇವದಾಸಿ ಮಹಿಳೆಯ ಸಹೋದರನೊಂದಿಗೆ ಮಾತನಾಡಿದರು. ಮನೆಯಲ್ಲಿ ಭಾಗ ನೀಡದಿದ್ದರೆ ಕಾನೂನು ಪ್ರಕಾರ ಪಡೆಯುತ್ತೇವೆ ಎಂದೆಲ್ಲಾ ಮಾತನಾಡಿ ಅವಳಿಗೆ ನಿವೇಶನ ಪಡೆಯಲು ದಾರಿ ಮಾಡಿಕೊಟ್ಟಿದ್ದಾರೆ. ಇದು ಪ್ರಸ್ತಾಪಿಸಿದ ಒಂದು ಉದಾಹರಣೆ ಅಷ್ಟೇ. ಇಂತಹ ಅನೇಕ ಸಮಸ್ಯೆಗಳು ಬಳ್ಳಾರಿ ಜಿಲ್ಲೆಯ ಅನೇಕ ದೇವದಾಸಿಯರದ್ದಾಗಿದೆ.

ಸರ್ಕಾರ ದೇವದಾಸಿ ಪುನರ್ವಸತಿ ಯೋಜನೆಯನ್ನು ಹೆಸರಿಗಷ್ಟೇ ಜಾರಿಗೆ ತಂದು ಕೈತೊಳೆದುಕೊಂಡಿದೆ. ಆದರೆ ದೇವದಾಸಿಯರ ಸಾಮಾಜಿಕ – ಆರ್ಥಿಕ ಸಬಲೀಕರಣವನ್ನು ಕುರಿತು ಸರ್ಕಾರ ಇನ್ನೂ ಸಮಗ್ರವಾಗಿ ಚಿಂತನೆಯನ್ನು ನಡೆಸಿಲ್ಲ. ಆದರೆ ಸಂಘಟನೆಯು ದೇವದಾಸಿಯರ

ಸರ್ವತೋಮುಖ ಬೆಳವಣಿಗೆ ನಿಟ್ಟಿನಲ್ಲಿಯೇ ಆಲೋಚನೆ ನಡೆಸುತ್ತಾ ಅದೇ ರೀತಿಯಲ್ಲಿ ಕೆಲಸ ಮಾಡುತ್ತಾ ಬಂದಿದೆ ಮತ್ತು ಬರುತ್ತಿದೆ. ದೇವದಾಸಿ ಮಹಿಳೆಯರಿಗೆ ಮೊದಲಿಗೆ ೪೦೦ರೂಪಾಯಿ ನೀಡುತ್ತಿದ್ದರು. ಅದರಲ್ಲಿ ದೇವದಾಸಿ ಮಹಿಳೆಯರಿಗೆ ಜೀವನ ನಿರ್ವಹಣೆ ತುಂಬಾ ಕಷ್ಟಕರವಾಗಿದ್ದು ಈ ಕುರಿತಾಗಿ ಈಗಾಗಲೇ ದೇವದಾಸಿ ಮಹಿಳೆಯರ ಪುನರ್ವಸತಿ ಯೋಜನೆಯಲ್ಲಿ ಚರ್ಚಿಸಿದ್ದೇನೆ. ಹೀಗಿರುವಾಗ "ಬರುವ ಮಾಸಾಶನ ೪೦೦ ರೂಪಾಯಿಗಳಿಂದ ೧೫೦೦ ರೂಪಾಯಿಗಳಿಗೆ ಹೆಚ್ಚಿಸಬೇಕು. ಮಾಶಾಸನ ಮತ್ತು ಸಾಲ, ಸಹಾಯಧನ ಪಡೆಯಲು ಅಡ್ಡಿಯಾಗಿರುವ ವಯೋಮಾನದ ಮಾನದಂಡವನ್ನು ಕೂಡಲೇ ಕೈ ಬಿಡಬೇಕು" *(ವಿಜಯಕರ್ನಾಟಕ:ದಿ:೨೫.೦೨.೨೦೧೫:೧).* ಎಂದು ಕರ್ನಾಟಕ ರಾಜ್ಯ ದೇವದಾಸಿ ಮಹಿಳೆಯರ ವಿಮೋಚನಾ ಸಂಘವು ಜಿಲ್ಲಾ ಘಟಕದ ನೇತೃತ್ವದಲ್ಲಿ ರಾಜ್ಯಾಧ್ಯಕ್ಷರು ಸೇರಿದಂತೆ ಮೂರು ದಿನಗಳ ಅಹೋರಾತ್ರಿ ಧರಣಿಯನ್ನು ಮಾಡಿದ್ದಾರೆ. ಅದರ ಪ್ರತಿಫಲವಾಗಿ ೧೦೦೦ ರೂಪಾಯಿಗಳಿಗೆ ಮಾಸಾಶನ ಹೆಚ್ಚಿಸಲಾಯಿತು. ಪ್ರಸ್ತುತ ೧೫೦೦ ರೂಪಾಯಿ ಮಾಸಾಶನವನ್ನು ದೇವದಾಸಿಯರು ಪಡೆಯುತ್ತಿದ್ದಾರೆ. ಇದಕ್ಕೆ ಈ ಸಂಘಟನೆಯ ಹೋರಾಟವೇ ಕಾರಣವೆಂದು ಹೇಳಲಾಗುವುದು.

ದೇವದಾಸಿ ಪದ್ಧತಿಯು ಅನಿಷ್ಟ ಆಚರಣೆಯಾಗಿ ಸಮಾಜದಲ್ಲಿ ಪರಿಣಮಿಸಿದ್ದರಿಂದ ದೇವದಾಸಿ ಮಹಿಳೆಯರಿಗೆ ಈ ಪದ್ಧತಿಯ ಕುರಿತಾಗಿ ತಿಳುವಳಿಕೆ ನೀಡುತ್ತಾ ಅವರಲ್ಲಿ ಆತ್ಮಸ್ಥೈರ್ಯ ತುಂಬುವ ನಿಟ್ಟಿನಲ್ಲಿ ಸಂಘಟನೆಯು ಕಾರ್ಯನಿರ್ವಹಿಸುತ್ತಿದೆ. "ಸೌಲಭ್ಯಕ್ಕಾಗಿ ದೇವದಾಸಿಯರು ಸಂಘಟಿತರಾಗಿ ಹೋರಾಟ ಮಾಡುವುದು ಅನಿವಾರ್ಯವಾಗಿದೆ" *(ಪ್ರಜಾವಾಣಿ:ದಿ:೩೧.೧೧.೨೦೧೪:೩ಎ).* ಎಂದು ಅವರನ್ನು ಸಂಘಟಿಸಿ ದೇವದಾಸಿ ಪದ್ಧತಿಯ ವಿರುದ್ಧ ಧ್ವನಿ ಎತ್ತಿ ಮಾತನಾಡುವ ಹಾಗೆ ತಿಳುವಳಿಕೆಯನ್ನು ಮೂಡಿಸಿದ್ದಾರೆ. ಪ್ರತಿ ಗ್ರಾಮದಲ್ಲಿ ವಿಮೋಚನಾ ಸಂಘದ ಒಬ್ಬ ಕಾರ್ಯಕರ್ತರನ್ನಾಗಿ ದೇವದಾಸಿಯನ್ನೇ ನೇಮಕ ಮಾಡಿರುತ್ತಾರೆ. ಅವರು ಆ ಗ್ರಾಮದಲ್ಲಿ ಹೊಸದಾಗಿ ದೇವದಾಸಿಯನ್ನಾಗಿ ಮಾಡುವ ಯಾವುದೇ ಮಾಹಿತಿ ಕಂಡುಬಂದರೆ ನೇರವಾಗಿ ಅವರೆ ತಡೆಯುವ ಪ್ರಯತ್ನ ಮಾಡುತ್ತಾರೆ. ಇಲ್ಲವೇ ಸಂಘಟಕರಿಗೆ ಅಥವಾ ಪೋಲೀಸರಿಗೆ ತಿಳಿಸುತ್ತಾರೆ. ಹೀಗೆ ಆಯಾ ಗ್ರಾಮದಲ್ಲಿ ದೇವದಾಸಿ ಪದ್ಧತಿ ನಿರ್ಮೂಲನೆಗೆ ಕೈಜೋಡಿಸಿರುವುದು ಕಂಡುಬರುತ್ತದೆ. ಅದರಲ್ಲೂ ಈ ಪದ್ಧತಿಯ ಕುರಿತಾಗಿ ತಿಳುವಳಿಕೆ ಮೂಡಿಸಿ ಅವರನ್ನು ಪದ್ಧತಿಯ ನಿರ್ಮೂಲನೆಯ ಹಾದಿಯಲ್ಲಿ ಬೆಳೆಸುವ ಪ್ರಯತ್ನವನ್ನು ಮಾಡುತ್ತಿದೆ ಈ ಸಂಘಟನೆ.

ದೇವದಾಸಿ ಪದ್ಧತಿಯ ನಿರ್ಮೂಲನೆಗೆ ಇಷ್ಟೆಲ್ಲಾ ಪ್ರಯತ್ನಗಳನ್ನು ಮಾಡುತ್ತಿರುವಾಗಲೇ ಕೆಲ ಗ್ರಾಮಗಳಲ್ಲಿ ದೇವದಾಸಿ ಪದ್ಧತಿಗೆ ಬೆಂಬಲ ನೀಡುತ್ತಿರುವ'ವರ ಮೇಲೆ ಪ್ರತಿಭಟನೆಯ ಮೂಲಕ ದೂರು ನೀಡಿದ್ದಾರೆ. "ದೇವದಾಸಿ ವಿಮೋಚನಾ ಸಂಘದ ರಾಜ್ಯಾಧ್ಯಕ್ಷೆ ಬಿ. ಮಾಳಮ್ಮ ಮಾತನಾಡಿ ಬನ್ನಿಗೋಳ ಗ್ರಾಮದಲ್ಲಿ ಮುತ್ತು ಕಟ್ಟುವ ಪದ್ಧತಿ ಜರುಗಿದ್ದರೂ ಈ ವಿಷಯದಲ್ಲಿ ಪೋಲೀಸ್ ಇಲಾಖೆ ಹಾಗೂ ಮಕ್ಕಳ ಅಭಿವೃದ್ಧಿ ಯೋಜನಾಧಿಕಾರಿಗಳು (ಸಿ.ಡಿ.ಪಿ.ಒ) ಜಾಣ ಕುರುಡು ಪ್ರದರ್ಶಿಸುತ್ತಿದ್ದಾರೆ. ಈ ಕುರಿತು ಕೂಡಲೇ ಜಿಲ್ಲಾಡಳಿತ ಎಚ್ಚೆತ್ತುಕೊಂಡು ದೇವದಾಸಿ ಪ್ರಕರಣಗಳು

ಮರುಕಳಿಸದಂತೆ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಬೇಕು. ತಾಲೂಕಿನ ಹಲವು ಗ್ರಾಮಗಳಲ್ಲಿ ದೇವದಾಸಿ ಪದ್ಧತಿ ಕುಮ್ಮಕ್ಕು ನೀಡುತ್ತಿರುವವರ ವಿರುದ್ಧ ಕಾನೂನುಕ್ರಮ ಜರುಗಿಸಬೇಕೆಂದು ಒತ್ತಾಯಿಸಿದರು" *(ಉದಯವಾಣಿ:ದಿ.೨೩.೧೧.೨೦೧೭:೨).* ಇದು ಕಳೆದ ವರ್ಷದಲ್ಲಿ ನಡೆದಿರುವ ಘಟನೆಯಾಗಿದೆ. ದೇವದಾಸಿ ಪದ್ಧತಿಯ ನಿರ್ಮೂಲನೆಗಾಗಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಕಾನೂನು ಇಷ್ಟೆಲ್ಲಾ ಕೆಲಸ ಕಾರ್ಯ ಮಾಡುತ್ತಿರುವಾಗಲೂ ಕೂಡ ಹಗರಿಬೊಮ್ಮನಹಳ್ಳಿ ತಾಲೂಕಿನ ಬನ್ನಿಗೋಳದಲ್ಲಿ ದೇವದಾಸಿ ಪದ್ಧತಿಗೆ ಮಹಿಳೆಯನ್ನು ಒಳಪಡಿಸಿದ್ದಾರೆ. ಇವರ ವಿರುದ್ಧ ಮತ್ತು ಸದಾ ದೇವದಾಸಿಯರ ಕಲ್ಯಾಣ ಕಾರ್ಯಕ್ರಮಗಳಿಗಾಗಿ ಶ್ರಮಿಸುವ ಸಂಘಟನೆಯ ವಿರುದ್ಧ ದೋಷಾರೋಪವನ್ನು ಅಲ್ಲಿನ ಜನರು ಮಾಡುತ್ತಿರುವುದು ತಿಳಿದುಬಂದಿದೆ.

ದೇವದಾಸಿ ಮಹಿಳೆಯರು ಬಳ್ಳಾರಿ ಜಿಲ್ಲೆಯಾದ್ಯಂತ ೯,೭೩೩ ಜನರು ಕಂಡುಬರುತ್ತಾರೆ. ದೇವದಾಸಿಯರ ಗಣತಿಯ ಸಂದರ್ಭದಲ್ಲಿ ಮುಪ್ಪಿನ ನಿರ್ಬಂಧದಡಿ ಕೇವಲ ಅರ್ಧದಷ್ಟು ದೇವದಾಸಿಯರು ಮಾತ್ರ ಗುರುತಿಸಲ್ಪಟ್ಟಿದ್ದಾರೆ. ಹಾಗಾಗಿ ದೇವದಾಸಿಯರ ಗಣತಿಯನ್ನು ಮತ್ತೊಮ್ಮೆ ಸಮರ್ಪಕವಾಗಿ ಮಾಡಲು ಆಗ್ರಹಿಸಿ ರಾಜ್ಯ ದೇವದಾಸಿ ಮಹಿಳಾ ವಿಮೋಚನಾ ಸಂಘಟನೆಯವರು ಧರಣಿ ಮಾಡಿದ್ದಾರೆ. ದೇವದಾಸಿಯರ ಕುರಿತಾಗಿ ಅನೇಕ ಬೇಡಿಕೆಗಳನ್ನು ಇಟ್ಟುಕೊಂಡು ಸಂಘಟನೆ ಜಿಲ್ಲೆಯಾದ್ಯಂತ ಹೋರಾಟ ಮಾಡುತ್ತಲೇ ಬಂದಿದೆ. ಕರ್ನಾಟಕ ರಾಜ್ಯ ದೇವದಾಸಿ ಮಹಿಳಾ ವಿಮೋಚನಾ ಸಂಘಟನೆಯು ಕೇವಲ ಅವರನ್ನು ಹೋರಾಟಗಳಲ್ಲಿ ಅಷ್ಟೇ ತೊಡಗಿಸದೆಯೇ, ಗ್ರಾಮೀಣ ಪ್ರದೇಶದದಲ್ಲಿರುವ ದೇವದಾಸಿಯರಿಂದ ಜನಪದ ಗೀತೆ, ಭಕ್ತಿ ಗೀತೆ ಹೀಗೆ ಹಲವು ರೀತಿಯ ಹಾಡುಗಳನ್ನು ಹಾಡಿಸುವ ಕಾರ್ಯಕ್ರಮಗಳನ್ನು ಮಾಡುತ್ತಾರೆ. ಬೊಮ್ಮನಹಳ್ಳಿಯ ಸುತ್ತಮುತ್ತಲಿನ ದೇವದಾಸಿ ಮಹಿಳೆಯರಿಂದ "ಹೊಲಮನೆ ಪದಗಳು" ಎಂಬ ಸಾಂಸ್ಕೃತಿಕ ಕಾರ್ಯಕ್ರಮದ ವೇದಿಕೆ ಏರ್ಪಡಿಸಿ ದೇವದಾಸಿ ಮಹಿಳೆಯರಿಂದ ಹಾಡುಗಳನ್ನು ಹಾಡಿಸಿದರು. ನಂತರ ಹಾಡಿದ ಪ್ರತಿಯೊಬ್ಬ ದೇವದಾಸಿ ಮಹಿಳೆಯರಿಗೆ ಶಾಲು ಹಾಕುವ ಮೂಲಕ ಸನ್ಮಾನ ಮಾಡಿ ಗೌರವಿಸಿದರು. ದೇವದಾಸಿ ಮಹಿಳೆಯರು ಸಮಾಜದಲ್ಲಿ ಕಳಂಕಿತರಾಗಿ ಗೌರವ ಸ್ಥಾನಮಾನ ಕಳೆದುಕೊಂಡಿರುವ ಇವರಿಗೆ, ಸಂಘಟನೆಯು ಅವರ ಪ್ರತಿಭೆಯನ್ನು ಗುರುತಿಸಿ ವೇದಿಕೆ ನೀಡಿ ಸನ್ಮಾನ ಮಾಡಿದೆ. ಈ ಮೂಲಕ ನಾವು ಸಮಾಜದಲ್ಲಿ ಒಳ್ಳೆ ಸ್ಥಾನದಲ್ಲಿದ್ದೇವೆ ಎಂಬ ಮನೋಭಾವ ಬೆಳೆಯುತ್ತದೆ.

**ಕರ್ನಾಟಕ ರಾಜ್ಯ ದೇವದಾಸಿ ಮಹಿಳಾ ವಿಮೋಚನಾ ಸಂಘಟನೆಯ ಬೇಡಿಕೆಗಳು.**

೧. ಮಾಸಾಶನವನ್ನು ಮೂರು ಸಾವಿರ ರೂಪಾಯಿಗಳಿಗೆ ಹೆಚ್ಚಿಸಬೇಕು ಹಾಗೂ ನಿಗಧಿತವಾಗಿ ಪ್ರತಿ ತಿಂಗಳೂ ಅವರ ಖಾತೆಗೆ ಜಮಾ ಮಾಡಬೇಕು.

೨. ಪ್ರತಿಯೊಬ್ಬ ದೇವದಾಸಿ ಮಹಿಳೆಯರಿಗೆ ಎರಡು ಎಕರೆ ಕೃಷಿಯೋಗ್ಯ ಭೂಮಿಯನ್ನು ನೀಡಬೇಕು.

೩. ಸ್ತ್ರೀಶಕ್ತಿ ಸ್ವಸಹಾಯ ಗುಂಪುಗಳಲ್ಲಿ ಸದಸ್ಯತ್ವ ಪಡೆದ ದೇವದಾಸಿ ಮಹಿಳೆಯರಿಗೆ ಹೈನುಗಾರಿಕೆ ಕೈಗೊಳ್ಳಲು ಕನಿಷ್ಟ ೫ ಲಕ್ಷ ಸಾಲ ನೀಡಬೇಕು.

೪. ದೇವದಾಸಿ ಮಹಿಳೆಯರ ಮಕ್ಕಳ ಮದುವೆಗೆ ೧ ಲಕ್ಷ ಹಾಗೂ ಅವರನ್ನು ವಿವಾಹವಾದವರಿಗೆ ೧ ಲಕ್ಷ ಪ್ರೋತ್ಸಾಹಧನ ವಿತರಿಸಬೇಕು.

೫. ೨೫ ವರ್ಷ ಮೇಲ್ಪಟ್ಟ ಎಲ್ಲಾ ನಿರುದ್ಯೋಗಿಗಳಿಗೆ ಮಾಸಿಕ ೩೦೦೦ ರೂಪಾಯಿಗಳ ನಿರುದ್ಯೋಗ ಭತ್ಯೆಯನ್ನು ನೀಡಬೇಕು. ನಿರುದ್ಯೋಗಿಗಳಿಗೆ ಸ್ವ ಉದ್ಯೋಗ ಹೊಂದುವ ಸಲುವಾಗಿ ಹೋಬಳಿ ಕೇಂದ್ರಕ್ಕೊಂದು ವಸತಿ ಸಹಿತ ತರಬೇತಿ ಕೇಂದ್ರ ತೆರೆಯಬೇಕು.

ಈ ಮೇಲಿನ ಬೇಡಿಕೆಗಳ ಈಡೇರಿಕೆಗಾಗಿ ಕರ್ನಾಟಕ ರಾಜ್ಯ ದೇವದಾಸಿ ವಿಮೋಚನಾ ಸಂಘಟನೆಯು ನಿರಂತರವಾಗಿ ಹೋರಾಟ ಮತ್ತು ಪ್ರತಿಭಟನೆಗಳನ್ನು ಮಾಡುತ್ತಲೇ ಬಂದಿದೆ.

ಈ ಹೋರಾಟದಲ್ಲಿ ಭಾಗಿಯಾಗಲು ವಿಮೋಚನಾ ಸಂಘವು ದೇವದಾಸಿಯರನ್ನು ಸಂಘಟಿಸುತ್ತದೆ. ಸಂಘಟನೆಯಲ್ಲಿ ಕೆಲಸ ಮಾಡಲು ದೇವದಾಸಿ ಸಂಘಟಕರು ಮತ್ತು ವಿಮೋಚನಾ ಸಂಘದ ಕಾರ್ಯಕರ್ತರು ಪ್ರಮುಖರಾಗುತ್ತಾರೆ. ಇಲ್ಲಿ ಪ್ರತಿ ತಾಲೂಕುಗಳಲ್ಲಿ ಒಬ್ಬೊಬ್ಬ ಕಾರ್ಯಕರ್ತರು ಇರುತ್ತಾರೆ. ಮತ್ತು ಗ್ರಾಮಗಳಲ್ಲಿಯೂ ಸಂಘಟನಾ ಕಾರ್ಯಕರ್ತರು ಇರುತ್ತಾರೆ. ಇವರು ನಿರಂತರವಾಗಿ ಒಂದು ಸರಪಳಿಯ ರೀತಿಯಲ್ಲಿ ಕಾರ್ಯನಿರ್ವಹಿಸಬೇಕಾಗುತ್ತದೆ. ಆಗ ಮಾತ್ರ ಸಂಘದ ಧ್ಯೇಯೋದ್ದೇಶಗಳು ಈಡೇರಲು ಸಾಧ್ಯವಾಗುತ್ತದೆ. ಸಂಘಟನೆಯ ಪ್ರತಿಭಟನೆ, ಧರಣಿ, ಹೋರಾಟಗಳಲ್ಲಿ ಹೆಚ್ಚಾಗಿ ಪರಿಶಿಷ್ಟ ಜಾತಿ ಮತ್ತು ಪಂಗಡದ ದೇವದಾಸಿ ಮಹಿಳೆಯರು ಕಂಡುಬರುತ್ತಾರೆ. ಆದರೆ ಹಿಂದುಳಿದ ವರ್ಗಗಳ ದೇವದಾಸಿಯರು ಕಂಡುಬರುವುದಿಲ್ಲ. ಅದರಲ್ಲೂ ಅಧಿಕ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಯ ದೇವದಾಸಿಯರೇ ಇರುತ್ತಾರೆ. ಸರ್ಕಾರದಿಂದ ಸೌಲಭ್ಯ ಪಡೆಯಲು ನಿರಂತರ ಧರಣಿ ಹೋರಾಟಗಳಲ್ಲಿ ಇವರೇ ಪ್ರಮುಖರಾಗಿರುತ್ತಾರೆ. ಉಳಿದವರು ಫಲಾನುಭವಿಗಳಾಗಿರುತ್ತಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನೀವು ಏಕೆ ಸಂಘಟನೆಯ ಹೋರಾಟ ಇತರೆ ವಿಷಯಗಳಿಗೆ ಹೋಗುವುದಿಲ್ಲ ಎಂದು ಕೇಳಿದರೆ, 'ಅವರು ಕರೆಯುವುದಿಲ್ಲ ನಾವು ಹೋಗಲ್ಲ' ಎನ್ನುತ್ತಾರೆ. ಯಾವ ಸಮುದಾಯದ ದೇವದಾಸಿ ಮಹಿಳೆಯರು ಹೆಚ್ಚಾಗಿ ಹೋರಾಟ, ಸಭೆಗಳಲ್ಲಿ ಪಾಲ್ಗೊಳ್ಳುತ್ತಾರೆ ಎಂದು ಸಂಘಟನೆಯ ಪದಾಧಿಕಾರಿಗಳನ್ನು ಕೇಳಿದರೆ 'ಹಸಿದವರಿಗೆ ಅನ್ನ ಬೇಕು ಅಲ್ವಾ, ಅದಕ್ಕೆ ಕೆಳಜಾತಿಯ ಜನ ಹೆಚ್ಚು ಬರೋದು' ಎಂದು ಹೇಳುತ್ತಾರೆ.

ನಾನು ದೇವದಾಸಿ ಎಂದು ಗುರುತಿಸಿಕೊಳ್ಳದಂತಹ ಪರಿಸ್ಥಿತಿಯಲ್ಲಿ ಈ ಪದ್ಧತಿ ಬಂದು ನಿಂತಿದ್ದರೂ ಇವತ್ತಿನ ದಿನದಲ್ಲಿ ಪರಿಶಿಷ್ಟ ಜಾತಿಯ ದೇವದಾಸಿ ಮಹಿಳೆಯರು ಹೋರಾಟಗಳಲ್ಲಿ ಭಾಗವಹಿಸಿ ಪತ್ರಿಕೆಗಳಲ್ಲಿ ಫೋಟೋ ಬರುವ ಮಟ್ಟಗೆ ನಿಂತು ಹೋರಾಡುವುದು ಕಂಡರೆ ಅವರಲ್ಲಿ ಆತ್ಮಸ್ಥೈರ್ಯ ಮೂಡಿದೆ ಎಂದು ಹೇಳಬಹುದು. ದೇವದಾಸಿ ಪದ್ಧತಿಗೆ ನಾವಾಗಿಯೇ ಬಂದಿಲ್ಲ, ವ್ಯವಸ್ಥೆ ಮಾಡಿದ ತಪ್ಪಿಗೆ ನಮಗೆ ಸೌಲಭ್ಯ ಕೊಡಲಿ, ಈ ಮೂಲಕ ನಾವು ಸಮಾಜದಲ್ಲಿ ಗೌರವದಿಂದ ಬದುಕಲು ಅವಕಾಶವಾಗುತ್ತದೆ ಎಂದು ದೇವದಾಸಿ ಮಹಿಳೆಯರು ಹೇಳುತ್ತಾರೆ. ಇನ್ನೂ ಕೆಲವರು ಸೌಲಭ್ಯಗಳು ಮಾತ್ರ ಬೇಕು, ಹೋರಾಟ, ಧರಣಿ ಇಂತವುಗಳೇನು ಬೇಡ. ಅಷ್ಟೇ ಏಕೆ ಕೆಲವು ಸಂದರ್ಭಗಳಲ್ಲಿ ತಮ್ಮ ಹೆಸರನ್ನು ಕೂಡ ಹೇಳದಂತಹ ದೇವದಾಸಿಯರೂ ಕಂಡುಬರುತ್ತಾರೆ.

ಒಟ್ಟಾರೆಯಾಗಿ ಸರಕಾರ ದೇವದಾಸಿ ಪುನರ್ವಸತಿ ಯೋಜನೆಯನ್ನು ಹೆಸರಿಗಷ್ಟೇ ಜಾರಿಗೆ ತಂದು ಕೈತೊಳೆದುಕೊಂಡಿದ್ದಾರೆ. ಅವುಗಳು ಎಷ್ಟರಮಟ್ಟಿಗೆ ಉಪಯುಕ್ತವಾಗಿವೆ? ಇದರಿಂದ ಆರ್ಥಿಕವಾಗಿ ಸಾಮಾಜಿಕವಾಗಿ ಇವರು ಸಬಲರಾಗಿದ್ದಾರೆಯೇ? ಇವುಗಳು ನಿಜವಾಗಿಯೂ ದೇವದಾಸಿಯರಿಗೆ ಸರಿಯಾಗಿ ದೊರೆಯುತ್ತಿವೆಯೇ? ಎಷ್ಟು ಜನ ಸೌಲಭ್ಯ ಪಡೆದಿದ್ದಾರೆ, ಯಾರು ಪಡೆದಿಲ್ಲ? ಸೌಲಭ್ಯಗಳನ್ನು ಪಡೆಯುವಲ್ಲಿನ ಸಮಸ್ಯೆಗಳ ಕುರಿತಾಗಿ ಆಲೋಚನೆ ಮಾಡುತ್ತಿಲ್ಲ. ಇವುಗಳೆಲ್ಲವುಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಸಮಸ್ಯೆ ಸವಾಲುಗಳು ಕಂಡುಬರುತ್ತವೆ. ಹಾಗಾಗಿ ಬಡತನ, ಅನಕ್ಷರತೆ ಮತ್ತು ಮೌಢ್ಯತೆಯಿಂದ ಬಳಲುತ್ತಿರುವ ದೇವದಾಸಿಯರ ಸಬಲೀಕರಣ ಇನ್ನೂ ದೂರವೇ ಉಳಿದಿದೆ. ದೇವದಾಸಿಯರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಸಬಲೀಕರಿಸಲು ಸರ್ಕಾರ ಅಷ್ಟೇ ಅಲ್ಲ ಸಾಮಾಜಿಕ ನೆಲೆಯಲ್ಲೂ ಅನೇಕ ಮಹತ್ತರ ಬದಲಾವಣೆಗಳಾಗಬೇಕಿದೆ. ಸಮಾಜದಲ್ಲಿ ಮುಖ್ಯವಾಗಿ ಕರಾಳ ಆಚರಣೆಯಾಗಿ ಇನ್ನೂ ಅಸ್ಥಿತ್ವದಲ್ಲಿರುವಜಾತಿ ಪದ್ಧತಿಯನ್ನು ಮತ್ತು ದೇವದಾಸಿ ಪದ್ಧತಿಯನ್ನು ಬೇರು ಸಮೇತ ನಿರ್ಮೂಲನೆ ಮಾಡುವುದರ ಕಡೆಗೆ ಗಮನಹರಿಸಬೇಕಾಗಿದೆ. ಇದೆಲ್ಲದಕ್ಕೂ ಜನ ಜಾಗೃತಿಯೊಂದೆ ಮದ್ದಾಗಿದೆ. ಜನ ಜಾಗೃತರಾಗಬೇಕು ಮತ್ತು ಸರ್ಕಾರ ಇವರ ಕಡೆ ವಿಶೇಷ ಕಾಳಜಿ ವಹಿಸಬೇಕು. ಜನ ಜಾಗೃತಿಯು ಶೋಷಿತರಿಂದ ಮಾತ್ರವಲ್ಲದೇ ಸಮಾಜದ ಉನ್ನತ ಹಂತದಲ್ಲಿ ಇರುವಂತವ'ರಿಂದಲೂ ಆದಾಗ ಮಾತ್ರ ದೇವದಾಸಿ ಪದ್ಧತಿಯಂತಹ ಆಚರಣೆಗಳನ್ನು ಬೇರು ಸಮೇತ ಕಿತ್ತು ಹಾಕಲು ಸಾಧ್ಯವಾಗುತ್ತದೆ.

**ಆಧಾರ ಗ್ರಂಥಗಳು**

ಉದಯವಾಣಿ, *ಪೊಲೀಸರ ಸಿಡಿಪಿಒ ನಿರ್ಲಕ್ಷಯಕ್ಕೆ ಬೇಸರ*, ದಿನಾಂಕ: ೨೮.೧೧.೨೦೧೭

ಕಾರಣಿಕ ಸಿದ್ರಾಮ, *ದೇವದಾಸಿ ಮತ್ತು ಬೆತ್ತಲೆ ಸೇವೆ*, ಲಡಾಯಿ ಪ್ರಕಾಶನ, ೨೦೧೩.

ದು.ಸರಸ್ವತಿ (ಸಂ) ಮಂಜುಶ್ರೀ ಕಡಕೋಳ(ಲೇ), *ಮುತ್ತು ಕಟ್ಟಿಸಿಕೊಂಡವರ ತುತ್ತು ಕೂಳಿನ ಕಥೆ*, ಕವಿ ಪ್ರಕಾಶನ, ಉತ್ತರ ಕನ್ನಡ, ೨೦೧೪

ಪ್ರಜಾವಾಣಿ, *ಅನಿಷ್ಟ ಪದ್ಧತಿ ಆಚರಣೆ:ಮಾಳಮ್ಮ ವಿಷಾದ*, ದಿನಾಂಕ: ೩೧.೧೧.೨೦೧೪

ಪ್ರಸನ್ನ ಕುಮಾರ, *ಬದಲಾವಣೆಯ ಹಾದಿಯಲ್ಲಿ ದೇವದಾಸಿಯರು*, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪.

ವಿಜಯ ಕರ್ನಾಟಕ, *ನಮ್ಮ ಬಳ್ಳಾರಿ, ಮಾಸಾಶನ ಹೆಚ್ಚಳಕ್ಕೆ ಆಗ್ರಹಿಸಿ ಧರಣಿ, ಪು-೧*, ದಿನಾಂಕ:೨೫.೦೨.೨೦೧೫

*ಹೀಗೊಂದು ಪಯಣ*, ಕರ್ನಾಟಕ ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆ, ಬೆಳಗಾವಿ,

# ಅಧ್ಯಾಯ: ಏಳು

# ಸಮಾರೋಪ

ಧರ್ಮವು ಮಾನವ ಸಮಾಜದ ಎಲ್ಲಾ ಚಟುವಟಿಕೆಗಳ ಸ್ವಭಾವದ ಮೇಲೆ ಹಿಡಿತವನ್ನು ಹೊಂದಿದ್ದು, ಇದು ಮನುಷ್ಯರ ಮೇಲೆ ನಂಬಿಕೆಗಳನ್ನು ಹೇರುತ್ತಾ ತನ್ನ ಅಧಿಕಾರವನ್ನು ಸ್ಥಾಪಿಸುತ್ತದೆ. ಹೀಗೆ ಧರ್ಮದ ಹೆಸರಿನಲ್ಲಿ ಅನೇಕ ಮೂಢನಂಬಿಕೆಗಳು ಮತ್ತು ಶೋಷಣೆಗಳು ಜಾರಿಯಲ್ಲಿವೆ. ಭಾರತದಲ್ಲಿ ಧಾರ್ಮಿಕ ಆಚರಣೆಯ ರೂಪದಲ್ಲಿ ದೇವದಾಸಿ ಪದ್ಧತಿ ಈಗಲೂ ಚಾಲ್ತಿಯಲ್ಲಿದೆ. ದೇವದಾಸಿ ಎಂದರೆ ದೇವರ ದಾಸಿ ಎಂದು ಅರ್ಥ. ದೇವಾಲಯಗಳಲ್ಲಿನ ದೇವ-ದೇವತೆಯರ ಸೇವೆ ಮಾಡುವುದೇ ಅವರ ಇಡೀ ಜೀವನದ ಕೆಲಸವಾಗಿದೆ. ಇವರು ದೇವರ ಹೆಸರಿನಲ್ಲಿ ಸೇವೆಗೆಂದು ಮೀಸಲಿಟ್ಟ ಅವಿವಾಯಿತ ಮಹಿಳೆಯರಾಗಿದ್ದು, ಇವರು ದೇವರ ಪೂಜೆಗೆ ಸಲ್ಲುತ್ತಾರೆ. ದೇವಾಲಯಗಳಿಗೆ ದೇವದಾಸಿಯರನ್ನು ಬಿಡುವ ಪದ್ಧತಿಯೂ ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ರೂಢಿಯಲ್ಲಿರುವ ಹಳೆಯ ಸಂಪ್ರದಾಯ. ಈ ಪದ್ಧತಿಯನ್ನು ದೇಶದ್ಯಾಂತ ಕಾನೂನುಬದ್ಧವಾಗಿ ಪ್ರತಿಬಂಧಿಸಿದ್ದರೂ ಇದು ಸ್ಥಳೀಯ ಜನರಿಂದ ಮುಂದುವರೆಯುತ್ತಿದೆ. ಇಂದಿಗೂ ದೇವದಾಸಿ, ಬಸವಿ, ಜೋಗುತಿ ಮತ್ತು ಪಾತರದವರು ಎಂಬ ಹೆಸರಿನಲ್ಲಿ ಕರೆದು ಅವರನ್ನು ದೇವರ ಹೆಸರಿನಲ್ಲಿ ದುರುಪಯೋಗ ಪಡಿಸಿಕೊಳ್ಳಲಾಗುತ್ತಿದೆ. ಈ ವ್ಯವಸ್ಥೆ ಎಲ್ಲಾ ಜಾತಿಯ ಹೆಣ್ಣು ಮಕ್ಕಳಿಗೂ ಅನ್ವಯವಾಗಲಿಲ್ಲ. ಶ್ರೀಮಂತ, ಅನುಕೂಲಸ್ಥ ಮನೆತನದ ಮೇಲ್ಜಾತಿಯವರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ವರ್ಗದವರ ಹೆಣ್ಣುಮಕ್ಕಳು ಈ ಪದ್ಧತಿಗೆ ಒಳಗಾಗದಂತೆ ಮೇಲ್ಜಾತಿ ಪುರುಷವರ್ಗ ಎಚ್ಚರಿಕೆ ವಹಿಸಿತು. ಇವರೆಲ್ಲರು ದೇವದಾಸಿ ಪದ್ಧತಿಯನ್ನು ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳಲ್ಲಿ ಮಾತ್ರ ಉಳಿಸಿದರು. ಇವರನ್ನು ದೇವರು ಧರ್ಮದ ಹೆಸರಿನಲ್ಲಿ ಈ ಕಟ್ಟುಪಾಡಿಗೆ ಒಳಗಾಗಿಸಿದ್ದಾರೆ.

ಪ್ರಾರಂಭದಲ್ಲಿ ದೇವದಾಸಿ ಹೆಂಗಸರು ದೇವಾಲಯಗಳನ್ನು ಶುಚಿಯಾಗಿಡಲು ನೇಮಕವಾಗುತ್ತಿದ್ದರು. ಅಲ್ಲಿನ ದೀಪಗಳನ್ನು ಶುಚಿಗೊಳಿಸಿ ಅವುಗಳಿಗೆ ಎಣ್ಣೆ ಹಾಕುವುದು, ಮುಖ್ಯವಾಗಿ ದೇವ-ದೇವತೆಗಳಿಗಾಗಿ ನೈವೇದ್ಯ ತಯಾರಿಸುವುದು, ಪೂಜಾ ಕಾರ್ಯದಲ್ಲಿ ನೆರವಾಗುವುದು,

ಹಾಡುವುದು, ನರ್ತಿಸುವುದು, ಹೀಗೆ ದೇವರ ಮತ್ತು ದೇವಾಲಯದ ಕೆಲಸಗಳಲ್ಲಿ ತೊಡಗುತ್ತಿದ್ದರು. ಇವರು ಸಂಗೀತ ನೃತ್ಯಗಳಲ್ಲಿ ನುರಿತ ಕಲಾವಿದೆಯರಾಗಿದ್ದರು. ಸಾಮಾಜಿಕ ಬದಲಾವಣೆಗಳು ಆದಂತೆ ದೇವದಾಸಿ ಪದ್ಧತಿ ಕೂಡ ಬದಲಾವಣೆಗೊಳಪಟ್ಟಿತು. ದೇವದಾಸಿಯರ ಸೇವಾ ವಿಧಾನಗಳು ಕೂಡ ಬದಲಾದವು. ದೇವದಾಸಿಯರು ದೇವರ ನಂತರ ರಾಜನಿಗೆ ಸೇವೆ ಸಲ್ಲಿಸಲಾರಂಭಿಸಿದರು. ರಾಜನು ದೇವಾಲಯಗಳ ಮತ್ತು ದೇವದಾಸಿಯರ ಪೋಷಕನಾಗಿದ್ದರಿಂದ ಪ್ರತ್ಯಕ್ಷ ದೇವರೆಂದು ನಂಬಿದ್ದರು.

ರಾಜರು ದೇವದಾಸಿ ಪದ್ಧತಿಯನ್ನು ಈ ಹಿನ್ನೆಲೆಯಲ್ಲಿ ಪೋಷಿಸಿದರು. ದೇವಾಲಯಕ್ಕೆ ಮೀಸಲಿಟ್ಟ ದೇವದಾಸಿ ಮಹಿಳೆಯರು ದೇವಾಲಯದ ಆಚರಣೆಗಳೊಂದಿಗೆ ರಾಜನ ಸಭೆ – ಸಮಾರಂಭಗಳಲ್ಲಿಯೂ ಆಗಾಗ ತಮ್ಮ ಸೇವೆ ಮಾಡತೊಡಗಿದರು. ಕಾಲಕ್ರಮೇಣ ತಮ್ಮ ಸೇವೆಯನ್ನು ದೇವಾಲಯಗಳಿಂದ ಅರಮನೆಗಳಿಗೆ ಬದಲಾಯಿಸಿಕೊಳ್ಳಬೇಕಾಯಿತು. ಅಲ್ಲದೇ ರಾಜನಿಗೆ ರಾಜಕೀಯದಲ್ಲಿಯೂ ಬೇಹುಗಾರಿಕೆ ಮಾಡುತ್ತಿದ್ದರು. ರಾಜರುಗಳು ಹೆಚ್ಚು ದೇವಾಲಯಗಳನ್ನು ಕಟ್ಟಿಸಿ ಅಲ್ಲಿಗೆ ದೇವದಾಸಿಯರನ್ನು ನೇಮಕ ಮಾಡತೊಡಗಿದ್ದರು.

ರಾಜನ ನಂತರ ರಾಜನ ಕೆಳಗಿರುವ ಸಾಮಂತರು, ಇತರ ನಾಯಕ ಮುಖಂಡರು ಮತ್ತು ಜಮೀನ್ದಾರರೂ ರಾಜನನ್ನು ಈ ವಿಷಯದಲ್ಲಿ ಅನುಸರಿಸಿದರು. ಇದರಿಂದಾಗಿಯೂ ಈ ಪದ್ಧತಿಗೆ ಮತ್ತಷ್ಟು ಪೋಷಣೆ ದೊರೆಯಿತು. ಗ್ರಾಮೀಣ ಪ್ರದೇಶಗಳಲ್ಲಿನ ಜಮೀನ್ದಾರರು ವ್ಯವಸಾಯ ಯೋಗ್ಯ ಭೂಮಿಯ ಎಲ್ಲ ಒಡೆತನವನ್ನು ಹೊಂದಿದ್ದರು. ಇಡೀ ಗ್ರಾಮ ಸಮಾಜದ ಆರ್ಥಿಕ ವ್ಯವಸ್ಥೆ ಮತ್ತು ಜನ ಜೀವನವನ್ನೇ ನಿಯಂತ್ರಿಸಬಲ್ಲವರಾಗಿದ್ದರಿಂದ ಇತರ ದುರ್ಬಲ ವರ್ಗಗಳು ಅವರ ಅಧೀನದಲ್ಲಿದ್ದವು. ಸದರಿ ಭೂಮಾಲೀಕರು ಆ ಪ್ರದೇಶಗಳ ಜನರ ಹಾಗೂ ಸಕಲ ಆಸ್ತಿಯ ನಿಜವಾದ ಒಡೆಯರಾಗಿರುತ್ತಿದ್ದರು. ಬಡ ಹಾಗೂ ಕೆಳಜಾತಿಯ ಮಹಿಳೆಯರನ್ನು ಶೋಷಿಸಲು ದೇವದಾಸಿ ಪದ್ಧತಿ ಒಂದು ಸಾಧನವಾಯಿತು. ದೇವದಾಸಿಯರನ್ನು ಎಲ್ಲ ದೃಷ್ಟಿಯಿಂದಲೂ ಶೋಷಿಸಲೆಂದೇ ಜಮೀನ್ದಾರಿ ಮತ್ತು ಪುರೋಹಿತ ವರ್ಗವು ಅವರನ್ನು ಆರ್ಥಿಕ ಉತ್ಪದನಾ ಚಟುವಟಿಕೆಯಲ್ಲಿ ಅತ್ಯಂತ ಕಡಿಮೆ ಕೂಲಿ ಇಲ್ಲವೆ ಬಿಟ್ಟಿ ದುಡಿಮೆಗೆ ಬಳಸಿದೆ. ಆರ್ಥಿಕ ದುಡಿಮೆಯಲ್ಲಿ ಅವರಿಗೆ ಪಾಲಿಲ್ಲದಂತೆ ಮಾಡಲಾಗಿದೆ. ದೇವದಾಸಿ ಮಹಿಳೆಯರೆಲ್ಲರೂ ಕೃಷಿ ಕೂಲಿ ಕಾರ್ಮಿಕರೇ ಆಗಿರುವರು. ಏಕೆಂದರೆ ಭೂಹೀನರೇ ಗರಿಷ್ಠ ಸಂಖ್ಯೆಯಲ್ಲಿರುವರು. ಕೆಲವರಿಗೆ ಮಾತ್ರ ಅರ್ಧ ಎಕರೆ ಭೂಮಿ ಇರುವುದು. ಆದರೆ ಭೂಮಿಯಲ್ಲಿ ಏನನ್ನೂ ಬೆಳೆಯಲು ಸಾಧ್ಯವಿಲ್ಲದ ಪರಿಸ್ಥಿತಿ ದೇವದಾಸಿಯರದ್ದಾಗಿದೆ. ಏಕೆಂದರೆ ಕೃಷಿ ಮುಂದುವರೆಸಲು ನಿಭಾಯಿಸಲು ಬಂಡವಾಳ ಬೇಕು. ದೇವದಾಸಿಯರು ಅತ್ಯಂತ ಬಡವರಾಗಿದ್ದಾರೆ. ಆದ್ದರಿಂದ ದೇವದಾಸಿಯರು ಮೈಯಲ್ಲಿ ಶಕ್ತಿಯಿದ್ದಾಗ ದುಡಿದರೂ ಅವರ ಜೀವನದ ಕೊನೆಯ ಕಾಲದಲ್ಲಿ ಹಸಿವಿನಿಂದ ನರಳುವ ಸ್ಥಿತಿ ಎದುರಿಸುತ್ತಿದ್ದಾರೆ. ಆರೋಗ್ಯ ಕ್ಷೀಣಿಸಿ, ಒಂದು ಹೊತ್ತಿನ ಅನ್ನವೂ ಸಿಗದ ಸ್ಥಿತಿಯಲ್ಲಿ ಅಸಂಖ್ಯಾತ ದೇವದಾಸಿಯರು ಇರುವರು.

ಗ್ರಾಮಗಳಲ್ಲಿ ಅನೇಕ ಜನ ವೃದ್ಧ ದೇವದಾಸಿಯರು ಅನಾರೋಗ್ಯದಿಂದ ನರಳುತ್ತಿದ್ದಾರೆ. ಹೀಗಾಗಿ ದೇವದಾಸಿ ಪದ್ಧತಿಗೆ ಅನಿವಾರ್ಯವಾಗಿ ಒಪ್ಪಿಕೊಂಡು ದೇವದಾಸಿಯರು ತಮ್ಮನ್ನು ಮುಪ್ಪಾವಸ್ಥೆಯಲ್ಲಿ ನೋಡಿಕೊಳ್ಳಲು ತನ್ನ ಮಗಳನ್ನು ದೇವದಾಸಿಯಾಗಿಸಿ ಮನೆಯಲ್ಲಿ ಇಟ್ಟುಕೊಳ್ಳುವ ತೀರ್ಮಾನ ಮಾಡಿದ ಉದಾಹರಣೆಗಳು ದೊರೆತಿವೆ.

ಅನಕ್ಷರತೆ ಮತ್ತು ಬಡತನದಲ್ಲಿರುವ ಪರಿಶಿಷ್ಟ ಮತ್ತು ಹಿಂದುಳಿದ ವರ್ಗಗಳ ಸಮುದಾಯದಲ್ಲಿ ಯಾರಿಗಾದರೂ ರೋಗ-ರುಜಿನಗಳು ಬಂದಾಗ ಅವುಗಳಿಗೆ ಕಂದಾಚಾರ, ಮೂಢನಂಬಿಕೆಯ ಕಾರಣಗಳನ್ನು ಕೊಡಲಾಗಿದೆ. ಜೊತೆಗೆ ಇಂದಿಗೂ ಈ ಸಮುದಾಯಗಳಲ್ಲಿ ಬಹುಸಂಖ್ಯಾತ ಜನರು ಭೂಹೀನರು ಮತ್ತು ಕೃಷಿ ಕೂಲಿ ಕಾರ್ಮಿಕರೇ ಆಗಿದ್ದಾರೆ. ಹಾಗಾಗಿ ಧಾರ್ಮಿಕ ಮತ್ತು ಆರ್ಥಿಕ ಹಿಡಿತವಿರುವ ಉನ್ನತ ವರ್ಗದ ಪಾಳೆಗಾರರು ನಿರಂತರವಾಗಿ ಮೌಢ್ಯ ಹಾಗೂ ಬಡತನದಲ್ಲಿರುವ ದೇವರು ಮತ್ತು ಭಕ್ತಿಯನ್ನು ಬೆಳೆಸಿದರು. ಜೀವನದಲ್ಲಿ ನಡೆಯುವ ಎಲ್ಲಾ ಸಂಗತಿಗಳಿಗೆ ದೈವ ಮತ್ತು ದೇವರೇ ಕಾರಣ ಎಂಬ ಕಾರಣಗಳನ್ನು ಕೊಡುತ್ತಾರೆ. ಮನುಷ್ಯ ನಿರ್ಮಿತ ಮತ್ತು ಪ್ರಾಕೃತಿಕ ಕಷ್ಟಗಳೆಲ್ಲಕ್ಕೂ ದೇವರ ಕೋಪ ಶಾಪದ ಆಶ್ರಯ ಪಡೆದು ಜನರನ್ನು ನಂಬಿಸಲಾಗಿದೆ. ಆದ್ದರಿಂದಲೇ ದೇವದಾಸಿಯರ ಮನೆಯಲ್ಲಿನ ಪರಿಸ್ಥಿತಿಗೆ ಕಾರಣಗಳನ್ನು ಹುಡುಕಿದರೆ ಆರ್ಥಿಕ, ಧಾರ್ಮಿಕ ನಂಬಿಕೆಯ ಕಾರಣಗಳು ಪ್ರಧಾನವಾಗಿ ಕಂಡು ಬರುತ್ತವೆ. ಗಂಡು ಮಗ ಹುಟ್ಟಲೆಂದು ಇರುವ ಹೆಣ್ಣನ್ನು ದೇವರಿಗೆ ಮೀಸಲಿಸುತ್ತಾರೆ. ಅಲ್ಲದೆಯೇ ಹುಟ್ಟಿದ ಮಕ್ಕಳೆಲ್ಲಾ ಹೆಣ್ಣಾದರೆ, ಅವರಲ್ಲಿ ಒಬ್ಬಳನ್ನು ದೇವದಾಸಿಯಾಗಿ ಮಾಡಲಾಗಿದೆ. ರೋಗ ಮತ್ತಿತರೆಕಷ್ಟಗಳು ಕಾಡಿದ್ದಾದರೆ ಹೆಣ್ಣು ಮಗುವನ್ನು ದೇವರಿಗೆ ಬಿಡುತ್ತಾರೆ. ಮುಪ್ಪಾವಸ್ಥೆಯಲ್ಲಿ ನೋಡಿಕೊಳ್ಳಲು ಒಬ್ಬ ಮಗಳಿಗೆ ಮುತ್ತು ಕಟ್ಟಿಸುತ್ತಾರೆ. ಹೀಗೆ ದೇವದಾಸಿ ಪದ್ಧತಿಯ ಹೆಸರಿನಲ್ಲಿ ಮಹಿಳೆಯರನ್ನು ಧಾರ್ಮಿಕ ಮೌಢ್ಯಕ್ಕೆ ಬಲಿ ಮಾಡುವುದರೊಂದಿಗೆ ದಲಿತ ಮಹಿಳೆಯರನ್ನು ಎಲ್ಲಾ ರೀತಿಯಿಂದಲೂ ಶೋಷಿಸಲು ಮುಂದಾದರು.

ಆರಂಭದ ಕಾಲದಲ್ಲಿ ಸಮಾಜವು ದೇವದಾಸಿ ಮಹಿಳೆಯರನ್ನು ತುಂಬಾ ಒಳ್ಳೆಯ ಗೌರವ ಭಾವನೆಯಿಂದ ನೋಡುತ್ತಿತ್ತು. ಸಾವಿಲ್ಲದ ದೇವರೊಂದಿಗೆ ಇವರು ವಿವಾಹ ಮಾಡಿಕೊಂಡಿರುವ ಕಾರಣಕ್ಕೆ ಇವರು ನಿತ್ಯ ಮುತ್ತೈದೆಯರಾಗುತ್ತಾರೆ. ಹಾಗಾಗಿ ಇವರನ್ನು ಹಬ್ಬ, ಹುಣ್ಣಿಮೆ, ಮದುವೆ ಇತರೆ ಶುಭ ಕಾರ್ಯಗಳಿಗೆ ಕರೆಯುತ್ತಿದ್ದರು. ಅಲ್ಲದೆ ದೇವಾಲಯಗಳಲ್ಲಿ ಇವರ ಪಾತ್ರ ಬಹಳ ಮಹತ್ವದಾಗಿತ್ತು. ಹೀಗೆ ಶೋಷಣೆಯ ಮಧ್ಯದಲ್ಲಿಯೂ ಸಮಾಜ ಇವರನ್ನು ಗೌರವ ಭಾವನೆಯಿಂದಲೇ ನೋಡುತ್ತಿತ್ತು. ಕಾಲ ಕಳೆದಂತೆಲ್ಲ ಇದರ ಸ್ವರೂಪ ಬದಲಾಗುತ್ತಾ ಬಂದಂತೆಲ್ಲಾ ದೇವದಾಸಿಯರಿಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಗೌರವವಿಲ್ಲದೆ ಕೀಳಾಗಿ ಕಾಣಲು ಪ್ರಾರಂಭಿಸಿದ್ದಾರೆ. ದೇವದಾಸಿ ಮಹಿಳೆಯನ್ನು ಇಟ್ಟುಕೊಂಡವರು ಕೊನೆಯವರೆಗೆ ಇರುವುದಿಲ್ಲ. ಅಲ್ಲದೆ ಹಾಗೆಯೇ ಒಂಟಿಯಾಗಿ ಜೀವನ ನಡೆಸುವ ಛಲವಿದ್ದರೂ ಸಮಾಜವು ಅವಳನ್ನು ಕಾಮದೃಷ್ಟಿಯಲ್ಲಿಯೇ ನೋಡುವುದರಿಂದ ಯಾರಾದರೂ ನನ್ನ ಜೊತೆ ಇದ್ದರೆ ಹಲವರ ಕಣ್ಣು ನಮ್ಮ ಮನೆಯ ಮೇಲೆ ಇರುವುದಿಲ್ಲ ಎಂದು ಆ ದೇವದಾಸಿ ಮಹಿಳೆಯು ಇನ್ನೊಬ್ಬ ಪುರುಷನ ಸಹವಾಸ ಮಾಡುತ್ತಾಳೆ. ಅಷ್ಟೇ ಹೊರತಾಗಿ ಅವಳು ಹೆಚ್ಚಿನ

ಹಣ ಸಂಪಾದನೆ ಮತ್ತು ಲೈಂಗಿಕ ಬಯಕೆಯಿಂದ ಅಲ್ಲ ಎಂದೇ ಹೇಳಲಾಗುವುದು.

ದೇವದಾಸಿ ಮಹಿಳೆಯು ಒಬ್ಬ ಪುರುಷನೊಂದಿಗೆ ಲೈಂಗಿಕ ಸಂಬಂಧವಿಟ್ಟುಕೊಂಡು ಜೀವನ ನಡೆಸಿದರೂ ಅವಳನ್ನು ಸಮಾಜ ಸೂಳೆ ಎಂದು ಗುರುತಿಸುತ್ತದೆ. ದೇವದಾಸಿ ಮಹಿಳೆಯು ಊರೊಳಗೆ ತಲೆ ಮೇಲೆ ಸೆರಗು ಹಾಕಿಕೊಂಡು ಓಡಾಡಿದರೆ ಅವಳನ್ನು ನೋಡಿ "ಇವಳೇನು ಗಂಡುಳ್ಳ ಗರತಿ" ಎಂಬ ತುಟ್ಟಿ ಮಾತುಗಳನ್ನಾಡುತ್ತಾ ಅವಳನ್ನು ಅವಮಾನಕರವಾಗಿ ನಿಂದನೆ ಮಾಡುತ್ತಾರೆ. ವಿವಾಹ ಮಾಡಿಕೊಂಡ ಪತ್ನಿಯು ಸಹ ಗಂಡನಿಗೆ ಮಾರ್ಯದೆ ನೀಡುವುದಿಲ್ಲ. ಆದರೆ ದೇವದಾಸಿ ಮಹಿಳೆ ತನ್ನ ಜೊತೆ ಸಂಬಂಧ ಹೊಂದಿರುವ ಪುರುಷನನ್ನು ಪತ್ನಿಗಿಂತ ಹೆಚ್ಚಾಗಿ ಗೌರವಿಸಿ ನೋಡಿಕೊಳ್ಳುತ್ತಾಳೆ. ದೇವದಾಸಿಯರ ಮನೋಭಾವನೆ ಹೇಗಿದೆ ಎಂದರೆ ಸಮಾಜದ ಜನರು ತಮ್ಮನ್ನು ಬೆರಳು ಮಾಡಿ ತೋರಿಸಬಾರದು, ನಾವು ವಿವಾಹಿತ ಮಹಿಳೆಯರಿಗಿಂತ ಕಡಿಮೇ ಏನೂ ಇಲ್ಲ ಅನ್ನುವ ಹಾಗೆ ಪತಿವ್ರತೆಯರಂತೆ ಜೀವನ ಮಾಡಬೇಕು ಎಂಬ ಛಲ ಇವರಿಗಿದೆ. ಆದರೆ ಸಮಾಜ ಮಾತ್ರ ದೇವದಾಸಿ ಮತ್ತು ಅವರ ಮಕ್ಕಳನ್ನು ಕೀಳಾಗಿ ಕಾಣುತ್ತಿದೆ.

ಬಳ್ಳಾರಿ ಜಿಲ್ಲೆಯಾದ್ಯಂತ ಈ ದೇವದಾಸಿ ಪದ್ಧತಿಯನ್ನು ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ಸಮುದಾಯಗಳಲ್ಲಿ ಕಾಣಲಾಗಿದೆ. ಪರಿಶಿಷ್ಟ ಜಾತಿಯಲ್ಲಿ ಛಲುವಾದಿ, ಚೆನ್ನದಾಸರು, ಡೊಂಬರು, ವಡ್ಡರು, ಕೊರವರು ಮತ್ತು ವಿಶೇಷವಾಗಿ ಮಾದಿಗ ಸಮುದಾಯದಲ್ಲಿ ಹೆಚ್ಚಿನ ಸಂಖ್ಯೆಯ ದೇವದಾಸಿಯರು ಬಳ್ಳಾರಿ ಜಿಲ್ಲೆಯ ಏಳು ತಾಲೂಕುಗಳಲ್ಲಿ ಕಂಡು ಬಂದಿದ್ದಾರೆ. ಪರಿಶಿಷ್ಟ ಪಂಗಡಗಳಲ್ಲಿ ಅಥವಾ ಬುಡಕಟ್ಟುಗಳಲ್ಲಿ ಬೇಡ ಸಮುದಾಯದಲ್ಲಿ ಈ ಪದ್ಧತಿಯು ಕಂಡು ಬರುತ್ತದೆ. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹೊಸಪೇಟೆ, ಸಂಡೂರು ಮತ್ತು ಹಗರಿಬೊಮ್ಮನಹಳ್ಳಿ ಪ್ರದೇಶದಲ್ಲಿ ಹೆಚ್ಚಿನ ಜನಸಂಖ್ಯೆಯ ದೇವದಾಸಿಯರನ್ನು ಕಾಣಲಾಗಿದೆ. ಹಾಗೆಯೇ ಹಿಂದುಳಿದ ವರ್ಗಗಳಲ್ಲಿ ಗಂಗಮತಸ್ಥ ಮತ್ತು ಕುರುಬ ಸಮುದಾಯಗಳಲ್ಲಿ ದೇವದಾಸಿಯರು ಕಂಡು ಬಂದಿದ್ದಾರೆ. ಇವರಲ್ಲಿ ಗಂಗಮತಸ್ಥರಲ್ಲಿ ಅಧಿಕಸಂಖ್ಯೆಯಲ್ಲಿ ಕಂಡುಬಂದಿದ್ದಾರೆ. ಕುರುಬರಲ್ಲಿ ಅತ್ಯಂತ ಕಡಿಮೆ ಸಂಖ್ಯೆಯಲ್ಲಿದ್ದಾರೆ. ಇವರು ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲ್ಲೂಕನ್ನು ಬಿಟ್ಟರೆ ಉಳಿದ ಆರು ತಾಲ್ಲೂಕುಗಳಲ್ಲಿ ಕಂಡುಬರುತ್ತಾರೆ. ಅದರಲ್ಲಿ ಹೊಸಪೇಟೆ ತಾಲೂಕಿನಲ್ಲಿ ಅಧಿಕಸಂಖ್ಯೆಯ ಹಿಂದುಳಿದ ವರ್ಗದ ದೇವದಾಸಿಯರಿದ್ದಾರೆ.

ಜಿಲ್ಲೆಯಾದ್ಯಂತ ಈ ಸಮುದಾಯಗಳಲ್ಲಿ ದೇವದಾಸಿಯರು ಆರ್ಥಿಕ, ಶೈಕ್ಷಣಿಕ, ರಾಜಕೀಯಗಳಿಗೆ ಸಂಬಂಧಿಸಿದಂತೆ ಒಂದೇ ರೀತಿ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ. ಸಾಮಾಜಿಕ ಜೀವನದಲ್ಲಿ ಮತ್ತು ಧಾರ್ಮಿಕ ಜೀವನದಲ್ಲಿ ಹೋಲಿಕೆ ಮತ್ತು ವ್ಯತ್ಯಾಸಗಳು ಕಂಡುಬರುತ್ತವೆ. ಇಲ್ಲಿನ ಬಹುಸಂಖ್ಯಾತರಿಗೆ ಜೀವನೋಪಾಯಕ್ಕಾಗಿ ನಿರಂತರ ಆದಾಯ ಬರುವಂತಹ ಆರ್ಥಿಕ ಚಟುವಟಿಕೆಗಳನ್ನು ಜಾರಿಗೊಳಿಸಿ, ಬಡತನದ ರೇಖೆಯಿಂದ ಅವರನ್ನು ಮೇಲೆತ್ತಲು ಪ್ರಯತ್ನಿಸಬೇಕಾಗಿದೆ. ಇಲ್ಲದಿದ್ದರೆ ದೇವದಾಸಿ ಸಂಪ್ರದಾಯದಂತಹ ಅನಿಷ್ಟವೆಂದೇ ಪರಿಣಮಿಸಿದ ಸಂಪ್ರದಾಯಕ್ಕೆ ಜೋತುಬಿದ್ದು, ಸಮಾಜದ ಆರೋಗ್ಯಕ್ಕೆ ಮಾರಕ ಉಂಟಾಗುತ್ತದೆ. ಅಲ್ಲದೆಯೇ ಈ ಪದ್ಧತಿಯು ಸಮಾಜದ ನೈತಿಕತೆ ಮತ್ತು ಮಾನವೀಯ ಅಂಶಗಳಿಗೆ ಸವಾಲೊಡೆದು ಮೌಲ್ಯಗಳ ಬುಡವನ್ನೇ

ಅಲುಗಾಡಿಸುವ ಸಾಮಾಜಿಕ ಸಮಸ್ಯೆಯಾಗಿ ಕಾಡಲು ಕಾರಣವಾಗುತ್ತದೆ. ದೇವದಾಸಿ ಪದ್ಧತಿಯು ಸಮಾಜದಲ್ಲಿ ಅನಾರೋಗ್ಯದ ವಾತಾವರಣವನ್ನು ಉಂಟು ಮಾಡುವುದನ್ನು ತಡೆಯಬೇಕಾಗದ ಅಗತ್ಯವಿದೆ.

ದೇವದಾಸಿ ಸಂಪ್ರದಾಯ ನಿವಾರಣೆಗಾಗಿ ಪ್ರಾಚೀನ ಕಾಲದಿಂದ ಹಿಡಿದು ಇವತ್ತಿನ ಸಂಘಟನೆಗಳವರೆಗೆ ಹಲವಾರು ಕ್ರಮಗಳನ್ನು ಕೈಗೊಂಡಿದ್ದರೂ ಇದು ಇನ್ನೂ ಜೀವಂತವಾಗಿದ್ದು, ಹಲವಾರು ಕಾರಣಗಳಿಂದಾಗಿ ಉಳಿದು ಬೆಳೆಯುತ್ತಿದೆ. ಇದರಿಂದಾಗಿ ಸಮಾಜದಲ್ಲಿ ನಾನಾ ರೀತಿಯ ದುಷ್ಪರಿಣಾಮಗಳನ್ನು ದೇವದಾಸಿಯರು ಎದುರಿಸುತ್ತಿರುವುದು ಕಂಡುಬರುತ್ತದೆ. ದೇವದಾಸಿ ಸಂಪ್ರದಾಯದ ಪರಿಪೂರ್ಣ ನಿವಾರಣೆಗಾಗಿ ಸಮಾಜದ ಸಾರ್ವಜನಿಕರು ದೊಡ್ಡ ಯುದ್ಧವನ್ನೇ ಮಾಡಿ ಬದಲಾವಣೆಗೆ ತಮ್ಮ ಬದುಕನ್ನು ಮೀಸಲಿಡುವುದು ಅವಶ್ಯಕವಾಗಿದೆ. ಈ ಬಗ್ಗೆ ಮಹಿಳೆಯರಲ್ಲಿ ಜಾಗೃತಿ ಮೂಡಿಸಿ, ಅವರಿಗೆ ಉದ್ಯೋಗ ಭದ್ರತೆಯ ಜೊತೆಗೆ ಸಾಮಾಜಿಕ ಗೌರವ ಮನ್ನಣೆಗಳನ್ನು ಕಲ್ಪಿಸಬೇಕು. ದುಷ್ಟ ಆಚರಣೆಗಳ ನಿರ್ಮೂಲನೆಗಾಗಿ ಪ್ರಚಾರ ಕೈಗೊಂಡು ಅವರುಗಳ ಪುನರ್ವಸತೀಕರಣಕ್ಕೆ ವ್ಯವಸ್ಥೆ ಮಾಡಿ ಉತ್ತಮ ವಾತಾವರಣವನ್ನು ನಿರ್ಮಿಸಬೇಕು. ಅಲ್ಲದೆ ಸರ್ಕಾರ ತಂದಿರುವ ಕಾಯ್ದೆ ಕಾನೂನುಗಳನ್ನು ರಾಜಕಾರಣಿಗಳು, ಪೋಲೀಸ್ ಇಲಾಖೆ, ಇತರರು ಪ್ರಾಮಾಣಿಕ ಪ್ರಯತ್ನದ ಮೂಲಕ ಜಾರಿಗೊಳಿಸುವ ಪ್ರಯತ್ನ ಮಾಡಬೇಕು ಹಾಗೂ ಈ ಪದ್ಧತಿಗೆ ವಿಶೇಷ ಕಾಯ್ದೆ ರೂಪಿಸಲು ಕ್ರಮಕೈಗೊಳ್ಳಬೇಕು ಅಲ್ಲದೆಯೇ ಸರ್ಕಾರದೊಂದಿಗೆ ಸಮಾಜದ ಜನತೆ ಕೈ ಜೋಡಿಸಿದಾಗ ಸಂಪೂರ್ಣ ನಿರ್ಮೂಲನೆ ಸಾಧ್ಯ. ಹಾಗಾಗಿ ಇದರಲ್ಲಿ ಎಲ್ಲರ ಹೊಣೆಗಾರಿಕೆಯೂ ಇದೆ.

ಹೀಗೆ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳಲ್ಲಿನ ದೇವದಾಸಿ ಮಹಿಳೆಯರ ಬದುಕಿನಲ್ಲಿ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ, ಕಲಾ ಜೀವನವನ್ನೊಳಗೊಂಡಂತೆ ಅವರ ಆರೋಗ್ಯ ಕುರಿತು ತೌಲನಿಕವಾಗಿ ನೋಡುತ್ತಾ ಅವರಲ್ಲಿರುವ ಹೋಲಿಕೆ ವ್ಯತ್ಯಾಸಗಳನ್ನು ಕಂಡು ಕೊಳ್ಳಲಾಗಿದೆ. ಮತ್ತು ಪ್ರಸ್ತುತ ಬದಲಾದ ಸಮಾಜದಲ್ಲಿ ದೇವದಾಸಿ ಪದ್ಧತಿಯ ಸ್ವರೂಪವನ್ನು ಕಂಡು ಕೊಳ್ಳಲಾಗಿದೆ.

**ಅಧ್ಯಯನದ ಫಲಿತಗಳು**

- ದೇವದಾಸಿ ಪದ್ಧತಿಯು ಇತರ ನಾಗರಿಕತೆಗಳಾದ ಬ್ಯಾಬಿಲೋನಿಯ, ಸುಮೇರಿಯಾ ಮುಂತಾದ ನಾಗರಿಕತೆಗಳಲ್ಲಿ ಮಾತ್ರ ಪ್ರಧಾನವಾಗಿ ಕಂಡು ಬಂದಿರುವುದು. ಭಾರತದಲ್ಲಿ ಪ್ರಾಚೀನ ಕಾಲದಿಂದ ಇಲ್ಲಿಯವರೆಗಿನ ದೇವದಾಸಿ ಪದ್ಧತಿಯನ್ನು ಕುರಿತು ತಿಳಿಯಲಾಗಿದೆ.

- ದೇವದಾಸಿ ಪದ್ಧತಿಯು ದೇವಾಲಯಗಳು ದೇವರ ಸೇವೆಯಲ್ಲಿ ಬೇಳೆದು ಬಂದಿದ್ದು, ರಾಜರ ಆಳ್ವಿಕೆ ಕಾಲದಲ್ಲಿ ರಾಜಪೋಷಣೆಯಲ್ಲಿ ದೇವದಾಸಿಯರು ತುಂಬ ಗೌರವ ಸ್ಥಾನ ಮಾನಗಳನ್ನು ಹೊಂದಿದ್ದರು. ನಂತರ ಅರಸರ ಆಳ್ವಿಕೆಯ ಅವನತಿ ಹೊಂದುತ್ತಲೇ, ದೇವದಾಸಿಯರು ತಮ್ಮ

ರಕ್ಷಣೆಗಾಗಿ ದೇವಾಲಯಗಳನ್ನು ಬಿಟ್ಟು ಬೇರೆ ಬೇರೆ ಪ್ರದೇಶಗಳಿಗೆ ಸೇರಿದರು. ಆಗ ದೇವದಾಸಿಯರ ಸ್ಥಿತಿ ಬದಲಾವಣೆ ಹೊಂದಿ ಪ್ರಸ್ತುತ ಸಮಾಜದಲ್ಲಿ ಅನಿಷ್ಟವಾಗಿ ಪರಿಗಣಿಸಿದೆ.

• ಪರಿಶಿಷ್ಟರಲ್ಲಿ ಹಿಂದುಳಿದ ವರ್ಗಗಳಲ್ಲಿ ದೇವದಾಸಿ ಪದ್ಧತಿಯು ಮೌಢ್ಯ ಮತ್ತು ಮೂಢ ನಂಬಿಕೆಯ ಆಚರಣೆಯಲ್ಲಿ ಬಂದಿರುವುದನ್ನು ಕಂಡು ಕೊಳ್ಳಲಾಗಿದೆ. ಇವರಲ್ಲಿ ಮುಖ್ಯವಾಗಿ ಮನೆದೇವರಿಗೆ ಬಿಡುವ ಮತ್ತು ಗಂಡು ಮಕ್ಕಳಿದ ಕಾರಣಕ್ಕೆ ಈ ಪದ್ಧತಿಯು ಆಚರಣೆಯಲ್ಲಿರುವುದು ಕಂಡುಬಂದಿದೆ.

• ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡಗಳಲ್ಲಿ ಮಾತ್ರ ಮುದ್ರೆ ಹಾಕಿಸುವ ಮೂಲಕ ಬಸವಿ ಪದ್ಧತಿಗೆ ಒಳಪಡಿಸುತ್ತಾರೆ. ಆದರೆ ಹಿಂದುಳಿದ ವರ್ಗಗಳಲ್ಲಿ ಮುದ್ರೆ ಹಾಕಿಸಿಕೊಂಡ ಬಸವಿಯರನ್ನು ಕಾಣಲಾಗುವುದಿಲ್ಲ.

• ಪ್ರಸ್ತುತ ಪಾತರದವರು ಕಂಡು ಬರುವುದಿಲ್ಲ. ಆದರೆ ಪಾತರದ ವಂಶದವರು ಕಂಡು ಬಂದಿದ್ದಾರೆ. ನಾಯಕರು, ಹಿಂದುಳಿದ ವರ್ಗಗಳು ಪಾತರದ ಪರಂಪರೆಗೆ ಸೇರಿದವರಾಗಿದ್ದಾರೆ. ಪರಿಶಿಷ್ಟ ಜಾತಿಯಲ್ಲಿ ಇವರನ್ನು ಕಾಣಲು ಸಾಧ್ಯವಾಗುವುದಿಲ್ಲ.

• ಪರಿಶಿಷ್ಟ ಹಿಂದುಳಿದ ವರ್ಗಗಳಲ್ಲಿ ಹೆಚ್ಚಾಗಿ ಮುತ್ತು ಕಟ್ಟಿಸಿ ಕೊಂಡಿರುವುದು ಕಂಡು ಬರುತ್ತದೆ. ಹುಲಿಗೆಮ್ಮ, ಎಲ್ಲಮ್ಮ, ದುರುಗಮ್ಮ, ಮಾರೆಮ್ಮ ಮತ್ತು ಉಚ್ಚಂಗೆಮ್ಮ ಇತರೆ ಹೆಣ್ಣು ದೇವರಿಗೆ ಮುತ್ತು ಕಟ್ಟಿಸಿ ಕೊಂಡ ದೇವದಾಸಿಯರು ಕಂಡು ಬರುತ್ತಾರೆ.

• ಹಿಂದಿನ ಅಧ್ಯಯಗಳಲ್ಲಿ ಆಂಜನೇಯಸ್ವಾಮಿ ಗಂಡು ದೇವರಿಗೆ ಮಾತ್ರ ದೇವದಾಸಿಯರನ್ನು ಬಿಡುವುದು ತಿಳಿಸಿದ್ದಾರೆ. ಪ್ರಸ್ತುತ ಅಧ್ಯಯನವು ಇತರೆ ಗಂಡು ದೇವರುಗಳಿಗೆ ದೇವದಾಸಿಯರನ್ನು ಬಿಡುವುದನ್ನು ಕಂಡುಕೊಳ್ಳಲಾಗಿದೆ. ಉರಕುಂದಿಯ ಈರಣ್ಣ, ಮೈಲಾರದ ಮೈಲಾರಲಿಂಗೇಶ್ವರ, ಪೆನ್ನೋಬಳಂನ ಪೆನ್ನೋಬಳೇಶ್ವರ, ಕನಕಗಿರಿಯ ಕನಕರಾಯ, ತೆಕ್ಕಾಲಕೋಟೆಯ ಮಲ್ಲಯ್ಯ, ಕೂಲಹಳ್ಳಿಯ ಗೋಣಿಬಸಪ್ಪ ದೇವರಿಗೆ ಬಿಟ್ಟಿರುವುದು ಕಂಡು ಬಂದಿದೆ.

• ಈರಣ್ಣ, ಕನಕರಾಯ, ಮಲ್ಲಯ್ಯ, ಪೆನ್ನೋಬಳೇಶ್ವರ ದೇವರಿಗೆ ಮುದ್ರೆ ಹಾಕುವ ಮೂಲಕ ದೇವದಾಸಿಯರನ್ನಾಗಿ ಮಾಡಿದ್ದಾರೆ. ಅಲ್ಲದೆಯೇ ಈರಣ್ಣ, ಪೆನ್ನೋಬಳೇಶ್ವರ ದೇವರಿಗೆ ದೇವದಾಸಿಯರಿಗೆ ತಾಳಿಯನ್ನು ಕಟ್ಟುವುದು ಕೂಡ ಕಂಡು ಬಂದಿದೆ.

• ಬಳ್ಳಾರಿ ಜಿಲ್ಲೆಯಲ್ಲಿ ಸಿರುಗುಪ್ಪ ತಾಲೂಕು, ಬಳ್ಳಾರಿ ತಾಲೂಕು ಭಾಗಗಳಲ್ಲಿ ಮಲ್ಲಯ್ಯ ದೇವರಿಗೆ ದೇವದಾಸಿಯರನ್ನು ಬಿಟ್ಟಿರುವುದನ್ನು ಕಾಣಲಾಗುತ್ತದೆ. ಹೊಸಪೇಟೆ, ಕೂಡ್ಲಿಗಿ, ಎಚ್.ಬಿ.ಹಳ್ಳಿ, ಹೂವಿನ ಹಡಗಲಿಯಲ್ಲಿ ಮೈಲಾರಲಿಂಗೇಶ್ವರನಿಗೆ ದೇವದಾಸಿಯರನ್ನು ಬಿಟ್ಟಿರುವುದು ತಿಳಿಯಲಾಗಿದೆ.

• ಮೈಲಾರಲಿಂಗನಿಗೆ ಮತ್ತು ಗೋಣಿಬಸಪ್ಪ ದೇವರುಗಳಿಗೆ ಹೆಣ್ಣು ಮಕ್ಕಳಿಗೆ ಚೌರಿಹೊರಿಸುವ ಮೂಲಕ ದೇವದಾಸಿಯರನ್ನಾಗಿ ಮಾಡಿರುವುದು ತಿಳಿದು ಬಂದಿದೆ.

• ಮುತ್ತು ಕಟ್ಟಿಸಿಕೊಂಡ ದೇವದಾಸಿಯರನ್ನು ಮನೆದೇವರು, ಶಾಕಿಹರಿಯುವ ಕಾರ್ಯ, ಇತರೆ ಆಚಾರಣೆಗಳಲ್ಲಿ ಪಡಲಿಗೆ ತುಂಬಿಸಲು ಪಡಲಿಗೆ ಪೂಜೆಯಲ್ಲಿ ಜೋಗಾಕುವುದು ಇತರೆ ಆಚಾರಣೆಯಲ್ಲಿ

ಬಳಸಿಕೊಳ್ಳುತ್ತಾರೆ. ಹಾಗೆಯೇ ಮುದ್ರೆಹಾಕಿಸಿ ಕೊಂಡವರನ್ನು ಓಕುಳಿ ಆಟ ಇತರೆ ಆಚರಣೆಗಳಲ್ಲಿ ಬಳಸಿ ಕೊಳ್ಳುತ್ತಾರೆ.

• ಪರಿಶಿಷ್ಟ ಜಾತಿ ಸಮುದಾಯದಲ್ಲಿ ದೇವದಾಸಿ ಪದ್ಧತಿಯಿಂದಾಗಿ ಇಂದಿಗೂ ಅಸ್ಪೃಶ್ಯತೆಯನ್ನು ಅನುಭವಿಸುತ್ತಿರುವುದು ಕಂಡು ಬಂದಿದೆ. ಜೊತೆಗೆ ಈ ಸಮುದಾಯಗಳ ಹತ್ತಿರ ಉನ್ನತ ಸಮುದಾಯದವರು ಸಂಬಂಧ ಹೊಂದಿರುವುದು ತೀರ ಕಡಿಮೆ.

• ಪರಿಶಿಷ್ಟ ಜಾತಿ ಸಮುದಾಯಗಳು ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಬಹಳ ಹಿಂದುಳಿದಿದ್ದಾರೆ. ಅಲ್ಲದೆಯೇ ಪ್ರಸ್ತುತದಲ್ಲಿ ಈ ಸಮುದಾಯಗಳಲ್ಲಿ ಮಹಿಳೆಯರನ್ನು ದೇವದಾಸಿಯಾಗಿ ಬಿಡುವ ಪ್ರಸಂಗಗಳು ಕಂಡುಬಂದಿದೆ.

• ಪರಿಶಿಷ್ಟ ಪಂಗಡದ ದೇವದಾಸಿಯರು ಹಿಂದುಳಿದ ವರ್ಗಗಳ ದೇವದಾಸಿಯರಿಗಿಂತ ಕಡಿಮೆ ಸ್ಥಾನದಲ್ಲಿದ್ದು, ಪರಿಶಿಷ್ಟ ಜಾತಿಯವರಿಗಿಂತ ಹೆಚ್ಚಿನ ಸ್ಥಾನವನ್ನು ಹೊಂದಿರುವುದು ಸಮಾಜದಲ್ಲಿ ಕಂಡು ಬರುತ್ತದೆ. ಈ ಸಮುದಾಯದ ದೇವದಾಸಿಯರು ಆರ್ಥಿಕವಾಗಿ, ಶೈಕ್ಷಣಿಕವಾಗಿ ಸ್ವಲ್ಪ ಮಟ್ಟಿಗೆ ಸುಧಾರಣಾ ಜೀವನ ನಡೆಸುವುದು ಕಂಡು ಬಂದಿದೆ. ಕೆಲವರು ರಾಜಕೀಯದಲ್ಲು ತಮ್ಮನ್ನು ಗುರುತಿಸಿ ಕೊಂಡಿದಾರೆ.

• ಹಿಂದುಳಿದ ವರ್ಗಗಳ ಸಮುದಾಯಗಳು ಸಮಾಜದಲ್ಲಿ ಉನ್ನತವಾದ ಸ್ಥಾನವನ್ನು ಹೊಂದಿದ್ದರೂ, ದೇವದಾಸಿ ಪದ್ಧತಿಯನ್ನು ಆಚರಿಸುವುದು ಒಂದು ರೀತಿಯ ಕಪ್ಪು ಚುಕ್ಕೆ ಮೂಡಿಸಿದಂತೆ ಕಾಣುತ್ತದೆ. ಇವರಲ್ಲಿ ಬಹುತೇಕ ದೇವದಾಸಿಯರು ಉನ್ನತ ವರ್ಗದ ಪುರುಷರೊಂದಿಗೆ ಸಂಬಂಧವನ್ನು ಹೊಂದಿರುವುದು ಕಂಡು ಬರುತ್ತದೆ.

• ಪರಿಶಿಷ್ಟ ಜಾತಿ ಸಮುದಾಯದಲ್ಲಿ ದೇವದಾಸಿಯಾಗಿ ಮಾಡುವುದಕ್ಕೆ ಸಮುದಾಯದ ಒಳಗಿನ ಮತ್ತು ಹೊರಗಿನ ಒತ್ತಡಗಳು ಸಾಕಷ್ಟು ಕಂಡು ಬರುತ್ತವೆ. ಆದರೆ ಪರಿಶಿಷ್ಟ ಪಂಗಡ ಹಿಂದುಳಿದವರಲ್ಲಿ ಈ ರೀತಿಯ ಒತ್ತಡಗಳು ಕಡಿಮೆ ಪ್ರಮಾಣದಲ್ಲಿ ಕಂಡು ಬರುತ್ತಾವೆ.

• ಪುನರ್ವಸತಿ ಯೋಜನೆಗಳು ದೇವದಾಸಿ ಮಹಿಳೆಯರಿಗೆ ಸಮರ್ಪಕವಾಗಿ ದೊರೆಯುತ್ತಿಲ್ಲ. ಈ ಯೋಜನೆಗಳನ್ನು ಪಡೆದವರು ಅವುಗಳನ್ನು ಸರಿಯಾಗಿ ಬಳಸಿಕೊಳ್ಳದೆ ಇನ್ನೂ ದುರಂತದ ಜೀವನ ಸಾಗಿಸುತ್ತಿದ್ದಾರೆ.

• ಯೋಜನೆಗಳ ಕುರಿತಾದ ಸಂಪೂರ್ಣವಾದ ಮಾಹಿತಿಯು ದೇವದಾಸಿ ಮಹಿಳೆಯರಿಗೆ ಇಲ್ಲ. ಕೇವಲ ಪಿಂಚಣಿ ಮತ್ತು ಲೋನ್ ಸೌಲಭ್ಯಗಳನ್ನು ಮಾತ್ರ ದೇವದಾಸಿಯರು ಪಡೆಯುತ್ತಿದ್ದಾರೆ.

• ಸರ್ಕಾರದ ಯೋಜನೆಗಳಿಂದ ಪಡೆದ ಸೌಲಭ್ಯಗಳು ನೇರವಾಗಿ ದೇವದಾಸಿ ಮಹಿಳೆಯರು ಉಪಯೋಗಿಸದೆಯೇ, ಇವರ ಮೂಲಕ ಆ ಕುಟುಂಬದ ಪುರುಷರು ಸಮರ್ಪಕವಾಗಿ ಪಡೆಯುತ್ತಿದ್ದಾರೆ.

• ಪರಿಶಿಷ್ಟ ಜಾತಿಯ ಸಮುದಾಯಗಳಲ್ಲಿ ಪ್ರೇಮ ವಿವಾಹ ಮಾಡಿ ಕೊಂಡು ಮಕ್ಕಳಾದ ನಂತರ ಮದುವೆಯಾದ ಪುರುಷ ಕೈ ಕೊಟ್ಟು ಹೋದಾಗ ಅವರು ಮತ್ತೆ ಮುತ್ತು ಕಟ್ಟಿಸಿಕೊಂಡು ದೇವದಾಸಿ ಪದ್ಧತಿಗೆ ಒಳಗ್ಗಾಗಿದ್ದಾರೆ. ಹಾಗಾಗಿ ದೇವದಾಸಿ ಪದ್ಧತಿಯು ಈ ಮೊದಲಿದ್ದ ಪವಿತ್ರೆಯನ್ನುಕಳೆದುಕೊಂಡಿದೆ. ಹಿಂದೆ ಋತುಮತಿಯಾಗುವ ಮೊದಲು ದೇವರಿಗೆ ಬಿಡುತ್ತಿದ್ದರು. ನಂತರ ಋತುಮತಿಯಾದ ಮೇಲೆ ದೇವರಿಗೆ ಬಿಡುತ್ತಿದ್ದರು ಪ್ರಸ್ತುತ ವಿವಾಹ, ಮಕ್ಕಳಾದ ನಂತರ ದೇವದಾಸಿ ಪದ್ಧತಿಗೆ ಬರುತ್ತಿರುವುದು ಕಂಡು ಬಂದಿದೆ.

• ಬಳ್ಳಾರಿ ಜಿಲ್ಲೆಯ ದೇವದಾಸಿಯರ ಜೀವನ ಸುಧಾರಣೆಗೆ ಈ ಪದ್ಧತಿಯ ನಿರ್ಮೂಲನೆಯ ಹಾದಿಯಲ್ಲಿ ಕರ್ನಾಟಕರಾಜ್ಯ ದೇವದಾಸಿ ಮಹಿಳಾ ವಿಮೋಚನಾ ಸಂಘಟನೆಯು ಶ್ರಮಿಸುತ್ತಿದೆ. ಇವರು ದೇವದಾಸಿಯಲ್ಲಿ ಜಾಗ್ರತಿ ಮೂಢಿಸುವ, ಪುನರ್ವಸತಿ ಯೋಜನೆಯಲ್ಲಿ ಹೆಚ್ಚಿನ ಸೌಲಭ್ಯ ದೊರೆಯುವಂತೆ ಹೋರಾಟಗಳನ್ನು ಮಾಡುತ್ತಿದ್ದಾರೆ. ಅಲ್ಲದೆ ಹೋರಾಟಗಳಲ್ಲಿ ದೇವದಾಸಿ ಮಹಿಳೆಯರನ್ನು ಸಂಘಟಿಸಿದ್ದಾರೆ. ಅವರಲ್ಲಿ ಪರಿಶಿಷ್ಟ ಜಾತಿ ಸಮುದಾಯದವರೇ ಹೆಚ್ಚಾಗಿ ಭಾಗವಹಿಸುತ್ತಾರೆ.

• ಬಳ್ಳಾರಿ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ಸಮುದಾಯಗಳಲ್ಲಿ ಅಧಿಕ ಸಂಖ್ಯೆಯಲ್ಲಿ ದೇವದಾಸಿ ಮಹಿಳೆಯರು ಇರುವುದು ಕಂಡು ಬಂದಿದೆ. ಅದರಲ್ಲೂ ವಿಶೇಷವಾಗಿ ಮಾದಿಗ ಮತ್ತು ಚಲುವಾದಿ ಸಮುದಾಯಗಳಲ್ಲಿಯೇ ಹೆಚ್ಚಿನ ಸಂಖ್ಯೆಯಲ್ಲಿ ದೇವದಾಸಿಯರಿದ್ದಾರೆ. ಇವರು ಹೆಚ್ಚಾಗಿ ಧಾರ್ಮಿಕ ಭೀಕ್ಷಾಟನೆಯಲ್ಲಿ ತೊಡಗಿದ್ದಾರೆ.

• ಮಾದಿಗ ಸಮುದಾಯದ ಹುಲಿಗೆಮ್ಮ, ಪೇನೋಬಳೇಶ್ವರ ಮತ್ತು ಈರಣ್ಣ ದೇವರಿಗೆ ಬಿಟ್ಟಿರುವ ದೇವದಾಸಿಯರು ಮತಾಂತರವಾಗಿದ್ದಾರೆ. ಇವರು ತಮ್ಮನ್ನು ಅರ್ಪಿಸಿಕೊಂಡು ದೇವರ ಆರಾಧಕರಾಗುವಬದಲು ಕ್ರೀಸ್ತನ ಆರಾಧಕರಾಗಿ ಕ್ರೈಸ್ತ ದೀಕ್ಷೆಯನ್ನು ಪಡೆದು ಕೊಂಡಿದ್ದಾರೆ.

• ಮಾದಿಗ ಮತ್ತು ಚಲುವಾದಿ ಸಮುದಾಯಗಳಲ್ಲಿ ಮೊದಲು ಮುದ್ರೆ ಹಾಕಿಸಿ ಕೊಳ್ಳುವ ಮೂಲಕ ಬಸವಿಯಾಗಿ, ನಂತರ ಯೌವನ ಮುಗಿದ ಮೇಲೆ ಮುತ್ತು ಕಟ್ಟಿಕೊಂಡು ಜೋಗತಿಯಾಗಿರುವುದು ಕಂಡು ಬಂದಿದೆ.

• ಹಿಂದುಳಿದ ವರ್ಗಗಳಲ್ಲಿ ಮತ್ತು ಅಲ್ಪಸಾಂಖ್ಯಾತರಾದ ಮುಸ್ಲಿಂ ಸಮುದಾಯದ ಪಿಂಜಾರರಲ್ಲೂ ಮುತ್ತು ಕಟ್ಟಿಸಿಕೊಂಡವರು ಕಂಡು ಬರುತ್ತಾರೆ. ಇವರು ಮದುವೆ ಆದ ನಂತರ ರತಿ ಮುತ್ತು ಕಟ್ಟಿಕೊಂಡಿದ್ದಾರೆ.

**ಸಲಹೆಗಳು**

• ದೇವರು – ಧರ್ಮದ ಹೆಸರಿನಲ್ಲಿ ದೇವದಾಸಿಯಾಗಿ ಮಾಡಿ ಶೋಷಣೆ ಮಾಡುತ್ತಿರುವ ಈ ಪದ್ಧತಿಯು ಸಮಾಜಕ್ಕೆ ಅನಿಷ್ಟದಂತೆ ಪರಿಣಮಿಸಿರುವ ಕುರಿತಾಗಿ ಜನರಿಗೆ ಮನವರಿಕೆ ಮಾಡಬೇಕು.

ದೇವದಾಸಿಯಾಗಿಯೇ ದೇವರ ಸೇವೆ ಮಾಡಬೇಕು ಎನ್ನುವ ನಿಯಮಗಳೇನೂ ಇಲ್ಲ. ಮದುವೆಯಾಗಿ ಕೂಡ ದೇವರ ಸೇವೆ ಮಾಡಬಹುದೆಂದು ಜಾಗೃತಿ ಮೂಡಿಸಬೇಕು.

- ಗ್ರಾಮೀಣ ಪ್ರದೇಶದಲ್ಲಿ ದೇವದಾಸಿ ಬಿಡುವ ಕಾರ್ಯವನ್ನು ತಡೆಗಟ್ಟಲು ಗ್ರಾಮದ ಪೋಲೀಸ್ ಪಾಟೀಲ ಇನ್ನಿತರ ಉನ್ನತವರ್ಗದವರಿಗೆ ಅಧಿಕಾರವನ್ನು ನೀಡಬೇಕು.
- ದೇವದಾಸಿಯೊಂದಿಗೆ ಲೈಂಗಿಕ ಸಂಬಂಧ ಹೊಂದಿರುವ ಪುರುಷನ ಆಸ್ತಿಯಲ್ಲಿ ದೇವದಾಸಿಗೂ ಪಾಲು ಸಿಗಬೇಕು ಮತ್ತು ಆತನಿಗೆ ಹುಟ್ಟಿದ ಮಕ್ಕಳಿಗೂ ಅದು ಸಿಗುವಂತಾಗಬೇಕು.
- ದೇವದಾಸಿಗೆ ಯಾರಿಂದ ಮಕ್ಕಳಾಗುತ್ತವೆಯೋ ಅಂಥವರ ಹೆಸರುಗಳನ್ನು ದೇವದಾಸಿ ಮಕ್ಕಳ ತಂದೆಯ ಹೆಸರನ್ನಾಗಿ ಗುರುತಿಸುವ ಕಡ್ಡಾಯವಾದ ಕಾಯ್ದೆ ಜಾರಿಯಾಗಬೇಕು.
- ದೇವದಾಸಿಯಾಗಿ ಬಿಡುವ ಧಾರ್ಮಿಕ ಕೇಂದ್ರಗಳಾದ ಹುಲಿಗಿ, ಸವದತ್ತಿ ಮತ್ತು ಉಚ್ಚಂಗಿದುರ್ಗಗಳಲ್ಲಿ ದೇವದಾಸಿ ಸಮರ್ಪಣೆಯ ನಿಷೇಧ ಮತ್ತು ಈ ಪದ್ಧತಿಯ ಜಾಗೃತಿ ಮೂಡಿಸುವ ಕಾರ್ಯಕ್ರಮಗಳನ್ನು ಮಾಡುತ್ತಿದ್ದಾರೆ. ಹಾಗೆಯೇ ಅಧ್ಯಯನದಲ್ಲಿ ಕಂಡುಬಂದಿರುವ ಇತರ ಧಾರ್ಮಿಕ ಕೇಂದ್ರಗಳಲ್ಲೂ ನಡೆಯಬೇಕು.
- ಪ್ರತಿಯೊಂದು ಸರ್ಕಾರಿ ಆಸ್ಪತ್ರೆಯಲ್ಲಿ ಹುಡುಗಿಯರಿಗೆ ಜಡೆ ಕತ್ತರಿಸುವ ಮತ್ತು ಇದು ಯಾಕೆ ಬರುತ್ತದೆ ಎಂಬ ಕುರಿತು ತಿಳುವಳಿಕೆ ಮೂಡಿಸುವ ಕೆಲಸಗಳಾಗಬೇಕು. ಹಾಗೆಯೇ ಉಚಿತ ಚಿಕಿತ್ಸೆ ವಿಶೇಷವಾಗಿ ಪ್ಯಾಕೇಜ್‌ನಲ್ಲಿ ತರಬೇಕು.
- ದೇವದಾಸಿ ಪದ್ಧತಿ ಬಗ್ಗೆ ಮತ್ತು ಮೂಢನಂಬಿಕೆಗಳ ಕುರಿತಾಗಿ ಜಾಹೀರಾತುಗಳನ್ನು ತಯಾರಿಸಿ ಅವುಗಳನ್ನು ಮನೆ ಮನೆಗೆ ಹಂಚಬೇಕು. ಈ ಮೂಲಕ ನಂಬಿಕೆ ಮತ್ತು ಮೂಢನಂಬಿಕೆಗಳ ಕುರಿತಾಗಿ ಮನವರಿಕೆ ನೀಡಬೇಕು.
- ಪ್ರತಿಯೊಂದು ಸಂಘಟನೆಗಳು ದೇವದಾಸಿ ಪದ್ಧತಿಯ ನಿರ್ಮೂಲನೆಯ ಕಾರ್ಯದಲ್ಲಿ ಸಹಭಾಗಿಯಾಗಬೇಕು. ಈ ಮೂಲಕ ದೇವದಾಸಿಯರನ್ನು ಸಂಘಟಿಸಿ ಅವರಲ್ಲಿ ಆತ್ಮಸ್ಥೈರ್ಯ ತುಂಬಿಕೊಳ್ಳುವ ಕೆಲಸಗಳನ್ನು ಮಾಡಬೇಕು.
- ದೇವದಾಸಿ ಪದ್ಧತಿ ವಿರುದ್ಧ ನಿರಂತರವಾಗಿ ಚಳುವಳಿ ಮಾಡುವ ಸಂಘಟನೆಗಳಿಗೆ ಸರ್ಕಾರವು ಆರ್ಥಿಕ ಸಹಾಯವನ್ನು ನೀಡಬೇಕು ಮತ್ತು ಅವಶ್ಯಕವಾದ ಸಾಧನ ಸಾಮಗ್ರಿಗಳನ್ನು ಒದಗಿಸುವ ಮೂಲಕ ಸಂಘಟನೆಗಳಲ್ಲಿ ಬಲ ತುಂಬುವ ಕೆಲಸಗಳಾಗಬೇಕು.
- ಸರ್ಕಾರದ ಸೌಲಭ್ಯಗಳು ದೇವದಾಸಿಯರ ಆರ್ಥಿಕ ಬದುಕಿಗೆ ಸಹಾಯವಾಗುವ ರೀತಿಯಲ್ಲಿ ಹೊಸದಾಗಿ ರೂಪಿಸಬೇಕಾಗಿದೆ.
- ಇಂದಿಗೂ ದೇವದಾಸಿ ಪದ್ಧತಿಗಳು ನಡೆಯುತ್ತಿರುವುದಕ್ಕೆ ಉದಾಹರಣೆಯಾಗಿರುವ ಮಾದಿಗ ಸಮುದಾಯದವರಿಗೆ ವಿಶೇಷ ಜಾಗೃತಿ ಕಾರ್ಯಕ್ರಮಗಳು ಮತ್ತು ಸಾಮಾಜಿಕ ಬದುಕಿಗೆ ಬೇಕಾದ ಸೌಲಭ್ಯಗಳು ದೊರೆಯಬೇಕು.

- ದೇವದಾಸಿ ಮಕ್ಕಳ ಮನಸ್ಸನ್ನು ಸದೃಢಗೊಳಿಸಿ, ನಾವು ಕೀಳೆಂಬ ಭಾವನೆಯನ್ನು ತೆಗೆದು ಹಾಕಬೇಕು. ಇದಕ್ಕೆ ಶಿಕ್ಷಣವೇ ಮಾರ್ಗವಾಗಿದೆ.
- ಉನ್ನತ ಶಿಕ್ಷಣ ಪಡೆಯುವಲ್ಲಿ ದೇವದಾಸಿ ಮಕ್ಕಳಿಗೆ ಮೀಸಲಾತಿ ಮತ್ತು ವಿಶೇಷ ಸೌಲಭ್ಯವನ್ನು ನೀಡಬೇಕು.
- ವಿದ್ಯಾಭ್ಯಾಸದ ಆಧಾರದ ಮೇಲೆ ದೇವದಾಸಿ ಮತ್ತು ದೇವದಾಸಿ ಮಕ್ಕಳಿಗೆ ಸರ್ಕಾರಿ ಉದ್ಯೋಗಳಿಗೆ ಅವಕಾಶ ಮಾಡಿಕೊಡಬೇಕು.
- ದೇವದಾಸಿಯರೊಂದಿಗೆ ಮದುವೆಯಾಗುವವರಿಗೆ ಆರ್ಥಿಕ ಅನುದಾನದೊಂದಿಗೆ ನೌಕರಿಯಲ್ಲಿ ಪ್ರಾಧಾನ್ಯತೆ ನೀಡಬೇಕು. ಇಲ್ಲವೆ ಸ್ವಯಂ ಉದ್ಯೋಗ ಮಾಡಲು ಆರ್ಥಿಕ ನೆರವು ನೀಡಬೇಕು.
- ದೇವದಾಸಿ ಮಹಿಳೆಯರು ೨೦೦೭-೦೮ನೇ ಸಾಲಿನ ಸಮೀಕ್ಷೆಯಿಂದ ಹೊರಗುಳಿದವರು ಬಹಳಷ್ಟು ಪ್ರಮಾಣದಲ್ಲಿ ಕಂಡು ಬರುತ್ತಾರೆ. ಹಾಗಾಗಿ ಮತ್ತೆ ಮರುಸಮೀಕ್ಷೆಯಾಗಬೇಕು.
- ವಿಶೇಷವಾಗಿ ರಾಜಕೀಯ ಕ್ಷೇತ್ರದಲ್ಲಿ ದೇವದಾಸಿ ಮಹಿಳೆಯರಿಗೆ ಮೀಸಲಾತಿಯನ್ನು ಕಲ್ಪಿಸಬೇಕು.
- ದೇವದಾಸಿ ಮಹಿಳೆಯರಿಗೆ ವಿಶೇಷ ಆರೋಗ್ಯದ ಅನುದಾನದಲ್ಲಿ ಸೌಲಭ್ಯಗಳು ದೊರೆಯಬೇಕು.
- ಕೃಷಿಗೆ ಬೇಕಾದ ಭೂಮಿಯನ್ನು ನೀಡಬೇಕು. ಈ ಮೂಲಕ ತಮ್ಮನ್ನು ತಾವು ಭದ್ರಗೊಳಿಸಿಕೊಳ್ಳುತ್ತಾರೆ.
- ದೇವದಾಸಿ ಮಹಿಳೆಯರಿಗೆ ಜಾಗ ನೀಡಿ ಮನೆ ಕಟ್ಟಿ ಕೊಡಬೇಕು.
- ಯೋಜನೆಗಳನ್ನು ಸಮರ್ಪಕವಾಗಿ ಬಳಕೆ ಮಾಡಿಕೊಳ್ಳುವ ಕುರಿತಾಗಿ ದೇವದಾಸಿ ಮಹಿಳೆಯರಿಗೆ ಮನವರಿಕೆ ಅಥವ ತಿಳುವಳಿಕೆಯನ್ನು ಮೂಡಿಸುವ ಕೆಲಸವನ್ನು ಯೋಜನೆಯ ಘಟಕ ನಿರ್ವಹಿಸಬೇಕು.

## ಪರಾಮರ್ಶನ ಗ್ರಂಥಗಳು


ಅನುಸೂಯ ಎಂ ಕದಂ, *ಮಹಿಳಾ ಶೋಷಣೆಯ ನೆಲೆಗಳು*, ಸಖಿ ಪ್ರಕಾಶನ, ಹೊಸಪೇಟೆ–೨೦೧೧

ಅರವಿಂದ ಮಾಲಗತ್ತಿ, *ಕನ್ನಡ ವಿಷಯ ವಿಶ್ವಕೋಶ 'ಜಾನಪದ'*, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಮೈಸೂರು –೨೦೦೬

ಅಲ್ಲಗಿರಿರಾಜ್ (ಸಂ), *ಮುತ್ತು ಒಡೆವ ಬನ್ನಿ*, ದೇವದಾಸಿ ಸಂಪನ್ಮೂಲ ಕೇಂದ್ರ ಸಮೂಹ ಕನಕಗಿರಿ ಕೊಪ್ಪಳ–೨೦೧೫

ಇರ್‌ಫಾನ್ ಹಬೀಬ್, *ಪ್ರಾಚೀನ ಭಾರತದಲ್ಲಿ ಜಾತಿಗಳ ಉಗಮ*, ನವಕರ್ನಾಟಕ ಪ್ರಕಾಶನ, ಬೆಂಗಳೂರು – ೨೦೧೩

ಈರಣ್ಣ ಎನ್‌ಕೋಸಗಿ, *ಕೊರವರು*, ಕೋಸಗಿ ಪ್ರಕಾಶನ, ರಾಯಚೂರು–೧೯೯೧.

ಉಷಾ ಎಂ, *ಸುರಬಿ*, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು –೨೦೦೪

ಕಮಲಾಕ್ಷ ಪಿ, *ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನ ಸಾಮಾಜಿಕ ಇತಿಹಾಸ*, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು –೧೯೯೪

ಕಲ್ಲಿನಾಥ ಎನ್ ಕಾತ್ರಾಳೆ, *ಜನಪದ ಕಲೆಗಳು*, ಸಾಗರ್ ಪ್ರಕಾಶನ, ಬೆಂಗಳೂರು–೨೦೧೭

ಕುಶಾಲ್ ಬರಗೂರು, *ಮಾಲೇಯರು ಬುಡಕಟ್ಟು ಸಂಸ್ಕೃತಿ*, ರೂಪ ಪ್ರಕಾಶನ, ಮೈಸೂರು–೨೦೧೧

ಗುಡಿಹಳ್ಳಿ ನಾಗರಾಜ, *ರಂಗಸಿರಿ*, ಬರಹ ಪಬ್ಲಿಕೆಷನ್ ಹೌಸ್, ಬೆಂಗಳೂರು– ೨೦೧೩

ಗುರುಮೂರ್ತಿ ಕೆ ಜಿ, *ಕರ್ನಾಟಕ ಜನಪದ ಹಬ್ಬಗಳು ಮತ್ತು ಅವುಗಳ ಸಂಸ್ಕೃತಿಕರಣ*

ಚಂದ್ರಪೂಜಾರಿ ಎಂ, *ಸಂಶೋಧನೆ ಏನು? ಏಕೆ? ಹೇಗೆ?*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ –೨೦೧೧

ಚಂದ್ರಪೂಜಾರಿ ಎಂ, *ಸಮಾಜ ಸಂಶೋಧನೆ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ – ೨೦೧೧

ಚಂದ್ರಪ್ಪ ಸೊಬಟಿ, ಮಂಜಮ್ಮ ಜೋಗತಿ, ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಶಿಗ್ಗಾವಿ– ೨೦೧೪

ಚಂದ್ರಶೇಖರ ಕಂಬಾರ (ಸಂ), *ಕನ್ನಡ ಜಾನಪದ ವಿಶ್ವಕೋಶ ಸಂ.೩(೨)*, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು–೧೯೮೫

ಚಂದ್ರಶೇಖರ್ ಟಿ ಆರ್, *ಮಹಿಳೆ: ಆರ್ಥಿಕತೆ ಮತ್ತು ಅಭಿವೃದ್ಧಿ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ – ೨೦೦೧

ಚಿನ್ನಸ್ವಾಮಿ ಸೋಸಲೆ ಎನ್, *ಸಾಮ್ರಾಜ್ಯ ಮತ್ತು ಸಂಸ್ಥಾನ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ –೨೦೦೪

ಚಿನ್ನಸ್ವಾಮಿ ಸೋಸಲೆ ಎನ್, *ದಲಿತರ ಮೇಲಿನ ದೌರ್ಜನ್ಯ ಮತ್ತು ಸಾಮಾಜಿಕ ನ್ಯಾಯ ಪ್ರಶ್ನೆಗಳು*, ಯಾಜಿ ಪ್ರಕಾಶನ, ಹೊಸಪೇಟೆ–೨೦೧೩

ಚೆನ್ನಕ್ಕ ಎಲಿಗಾರ, *ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ*, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ –೧೯೯೦

ಚೆನ್ನಣ್ಣ ವಾಲೀಕಾರ, *ಕರ್ನಾಟಕ ದೇವಾದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ, ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ*, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ ಗುಲಬರ್ಗಾ–೨೦೦೦

ಜಗದೀಶ ವಿ, *ಮಾನವಶಾಸ್ತ್ರ*, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು–೨೦೦೫

ಜೋಗನ್ ಶಂಕರ್, *ದೇವದಾಸಿ ಸಂಪ್ರದಾಯ*, ವಿಮೋಚನ ಪ್ರಕಾಶನ, ಅಥಣಿ–೧೯೯೩

ತಾರಿಹಳ್ಳಿ ಹನುಮಂತಪ್ಪ (ಸಂ), *ಕರ್ನಾಟಕದ ಬುಡಕಟ್ಟು ಸಮುದಾಯಗಳು ಸಂಚಿಕೆ–೧ ಸಂ–೨*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ –೨೦೦೮

ತಿಪ್ಪೇಸ್ವಾಮಿ ಎಚ್, *ಕನ್ನಡ ಶಾಸನಗಳಲ್ಲಿ ವೇಶ್ಯೆಯರು*, ಗೌತಮ ಬುಕ್‌ಹೌಸ್, ಕಮಲಾಪುರ– ೨೦೧೬

ದಿವಾಕರ್ ಆರ್ ಬಿ, *ಬಳ್ಳಾರಿ ಜಿಲ್ಲೆಯ ಜನಪದ ಕಾವ್ಯ ಪ್ರಕಾರಗಳು*, ಗಂಗೋತ್ರಿ ಪ್ರಕಾಶನ, ರಾಮಸಾಗರ–೨೦೧೪

ದುರುಗಪ್ಪ ಎಂ ಕೆ, *ವಿಜಯನಗರೋತ್ತರ ಕಾಲೀನ ಬೇಡ ಜನಾಂಗ: ಚಾರಿತ್ರಿಕ ಅಧ್ಯಯನ*, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ–೨೦೧೦

ದು. ಸರಸ್ವತಿ (ಸಂ), ಮಂಜುಶ್ರೀ ಕಡಕೋಳ(ಲೇ), *ಮುತ್ತು ಕಟ್ಟಿಸಿಕೊಂಡವರ ತುತ್ತು ಕೂಳಿನ ಕಥೆ*, ಕವಿ ಪ್ರಕಾಶನ, ಉತ್ತರ ಕನ್ನಡ–೨೦೧೪

ನಾರಾಯಣ ಎಂ, *ಸಾಮಾಜಿಕ ಸಮಸ್ಯೆಗಳು*, ಚೇತನ್ ಬುಕ್ ಹೌಸ್, ಮೈಸುರು–೨೦೦೩

ನಾಗಯ್ಯ ಜೆ ಎಂ, *ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ*, ಲೋಹಿಯಾ ಪ್ರಕಾಶನ, ಬಳ್ಳಾರಿ–೨೦೦೨.

ನೇಗಿನಹಾಳ ಎಂ ಬಿ, *ಮೈಲಾರಲಿಂಗ–ಖಂಡೋಬಾ*, ಪ್ರಸಾರಾಂಗ ಕರ್ನಾಟಕ ಕನ್ನಡ ವಿಶ್ವವಿದ್ಯಾಲಯ, ಧಾರವಾಡ–೧೯೯೨

ನೇತ್ರಾವತಿ ಕೆ ವಿ, *ದಲಿತ ಮಹಿಳಾ ಸಂಕಥನ*, ಸಖಿ ಪ್ರಕಾಶನ, ಹೊಸಪೇಟೆ–೨೦೧೨

ಪೂರ್ವಾಚಾರ್ ಎಂ (ಪ್ರ. ಸಂ), *ಸ್ತ್ರೀ ಸಂವೇದನೆ*, ಅನ್ನಪೂರ್ಣ ಪಬ್ಲಿಷಿಂಗ್ ಹೌಸ್, – ೨೦೧೪.

ಪುರುಷೋತ್ತಮ ಬಿಳಿಮಲೆ, *ಹುಲಿಗೆಮ್ಮ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ–೧೯೯೯

ಪೋತೆ ಎಚ್ ಟಿ, *ದಲಿತ ಲೋಕ*, ಕುಟುಂಬ ಪ್ರಕಾಶನ, ಗುಲಬರ್ಗಾ–೨೦೧೨

ಭಾರತಿ ಜೀವಿ., *ದೇವದಾಸಿ: ಪ್ರಸಂಗ ದೀಪ್ತಿ*, ವಚನ್ ಗ್ರಾಫಿಕ್ಸ್, ಧಾರವಾಡ –೨೦೧೧

ಬೈರಪ್ಪ ಕೆ, *ಸಮಗ್ರ ಸಮಾಜಿಕ ಸಮಸ್ಯೆಗಳು*, ಸಪ್ನ ಬುಕ್‌ಹೌಸ್, ಬೆಂಗಳೂರು–೨೦೦೬

ಮರುಳಸಿದ್ದಯ್ಯ ಎಚ್. ಎಂ (ಸಂ), *ಭಾರತ ಸಮಾಜ ಕಾರ್ಯ ವಿಶ್ವಕೋಶ ಸಂಪುಟ–೧*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ –೧೯೯೮.

ಮಲ್ಲೇಪುರಂ ಜಿ. ವೆಂಕಟೇಶ್, *ತೌಲನಿಕ ಸಾಹಿತ್ಯಾಧ್ಯಯನ, ತತ್ತ್ವ – ವ್ಯಾಪ್ತಿ – ಜಿಜ್ಞಾಸೆ*, ತ.ವೆಂ.ಸ್ಮಾರಕ ಗ್ರಂಥಮಾಲೆ, ಮೈಸೂರು–೨೦೦೮

ಮೀರಾಸಾಬಿಹಳ್ಳಿ ಶಿವಣ್ಣ (ಸಂ), *ವ್ಯಾಸ ಮಂಡಲ*, ಕನ್ನಡ ಪುಸ್ತಕ ಪ್ರಾಧಿಕಾರ ,ಬೆಂಗಳೂರು – ೨೦೦೩

ಮೂಡ್ನಾಕೂಡು ಚಿನ್ನಸ್ವಾಮಿ, *ಒಂದು ಕೊಡ ಹಾಲಿನ ಸಮರ, ಸಾಮಾಜಿಕ ಚಳುವಳಿಗಳು, ಬುದ್ಧ, ಬಸವ, ಬಾಬಾ ಸಾಹೇಬ*, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್, ಬೆಂಗಳೂರು–೨೦೦೮

ಮೇತ್ರಿ ಕೆಎಂ, *ಎಲ್ಲಮ್ಮನ ಕಥನಕಾವ್ಯ*, ವಿದ್ಯಾನಿಧಿ ಪ್ರಕಾಶನ, ಗದಗ–೨೦೦೫

ಮೇತ್ರಿ ಕೆಎಂ, *ಸುಗಮ ವರದಿ*, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦

ಮೇತ್ರಿ ಕೆ ಎಂ, ಗುರುಲಿಂಗಯ್ಯ ಎಂ (ಸಂ), *ಅಲಕ್ಷಿತರ ಸಮಾಜಶಾಸ್ತ್ರ*, ದೂರಶಿಕ್ಷಣ ನಿರ್ದೇಶನಾಲಯ ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೧೦

ಯರ್ರಿಸ್ವಾಮಿ ಈ, *ಮಹಿಳೆ ಜಾತಿ ಶ್ರೇಣೀಕರಣ: ಅಂಬೇಡ್ಕರ್ ದೃಷ್ಟಿಕೋನ*, ಗೀತಾಂಜಲಿ ಪುಸ್ತಕ ಪ್ರಕಾಶನ, –೨೦೧೦

ರಾಮಯ್ಯ ಬಿ.ಪಿ, *ದಕ್ಷಿಣ ಕರ್ನಾಟಕದ ಕೊರಮರು: ಒಂದು ಸಾಂಸ್ಕೃತಿಕ ಅಧ್ಯಯನ*, ಮಾನಸ ಪ್ರಕಾಶನ, ಕುಮಟಾ –೨೦೦೨

ಲೀಲಾ ಸಂಪಿಗೆ, *ಬುದ್ಧನಿಲ್ಲದ ಅಮ್ರಪಾಲಿ,* ಚಾರುಮತಿ ಪ್ರಕಾಶನ, ಬೆಂಗಳೂರು –೨೦೧೪

ವಿರೂಪಾಕ್ಷಿ ಪೂಜಾರಹಳ್ಳಿ, *ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ,* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ –೨೦೦೮

ವೀರೇಂದ್ರ ಶೀಲವಂತ, *ಕೃಷಿ ಆಚರಣೆಗಳು,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ –೨೦೧೦.

ವೆಂಕಟಸ್ವಾಮಿ ಎಂ, *ಅಸ್ಪೃಶ್ಯರು,* ನವಕರ್ನಾಟಕ ಪ್ರಕಾಶನ, ಬೆಂಗಳೂರು –೨೦೦೩

ಶಿವಾರೆಡ್ಡಿ ಕೆ ಸಿ, *ತೌಲನಿಕ ಸಾಹಿತ್ಯ,* ಅಧ್ಯಯನ ಮಂಡಲ ಬೆಂಗಳೂರು–೨೦೦೮

ಶೈಲಜ ಹಿರೇಮಠ, *ಪಾತರದವರು,* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ –೧೯೯೯.

ಶೈಲಜ ಹಿರೇಮಠ, *ಸ್ತ್ರೀಕಥನ,* ಭುವನ ಪ್ರಕಾಶನ, ಹೊಸಪೇಟೆ –೨೦೦೩

ಸಂಗಳದ ಎನ್.ಬಿ, *ಭೋವಿ ಸಮುದಾಯದ ಸಾಮಾಜಿಕ ಅಧ್ಯಯನ,* ಶಶಿ ಪ್ರಕಾಶನ, ಗದಗ–೨೦೧೪.

ಸಂಧ್ಯಾರೆಡ್ಡಿ ಕೆ.ಆರ್ (ಸಂ), *ಮಹಿಳಾ ಜಾನಪದ,* ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು –೨೦೦೩

ಸಿದ್ಧಲಿಂಗಯ್ಯ, *ಗ್ರಾಮ ದೇವತೆಗಳು,* ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು–೨೦೦೯

ಸಿದ್ರಾಮಕಾರಣಿಕ, *ದೇವದಾಸಿ ಮತ್ತು ಬೆತ್ತಲೆ ಸೇವೆ,* ಲಡಾಯಿ ಪ್ರಕಾಶನ, ಗದಗ–೨೦೧೩

ಸೀತಮ್ಮ ಕೆ, *ಮಹಿಳಾ ಅಧ್ಯಯನದ ಮಜಲುಗಳು,* ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು –೨೦೦೩

ಹಾಲಿಗೇರಿ ಹನುಮಂತ, ಕೆಂಗುಲಾಬಿ, ಸಹಜ ಪುಸ್ತಕ ಪ್ರಕಾಶನ, ಬೆಂಗಳೂರು –೨೦೧೨

ಹುರಕಡ್ಲಿ ಶಿವಕುಮಾರ, *ಮರೆಯಬಾರದ ಬಾಚಿಗೊಂಡನಹಳ್ಳಿ ಶ್ರೀಸಾಮಾನ್ಯರು,* ಶ್ರೀ ಗುರುಚರಂದೇಶ್ವರ ಪ್ರಾಸಾರಾಂಗ, ನಂದಿಪುರ ಹಗರಿಬೊಮ್ಮನಹಳ್ಳಿ–೨೦೧೨

ಹೆಬ್ಬಾಳೆ ಕೆ ನಾಗೇಶ್, *ಮುಕ್ತ ಸಂಸ್ಕೃತಿ ಮತ್ತು ಹಂಪಿ ಪರಿಸರ,* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೧೨

ಹೇಮಲತಾ ಎಚ್ ಎಮ್, *ಮಹಿಳಾ ಸಶಕ್ತೀಕರಣ: ಒಂದು ಪರಿಕಲ್ಪನೆ,* ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು–೨೦೧೬.

**ನಿಯತಕಾಲಿಕೆಗಳು**

ಜೆನಿಗೆ, *ತ್ರೈಮಾಸಿಕ ಪತ್ರಿಕೆ (ಸಂ–೧ ಸಂಪುಟ–೪ ಮೇ–ಆಗಸ್ಟ್–೨೦೧೬)* ಗಣೆ ಪ್ರಕಾಶನ, ಬೆಂಗಳೂರು

ಮೋಹನ್‌ಕೃಷ್ಣ ರೈ ಕೆ, *ಸಮಾಜ ಅಧ್ಯಯನ ಸಂ–೧ ಸಂ–೨,* ಸಮಾಜವಿಜ್ಞಾನಗಳ ಸಂಶೋಧನಾ ಪತ್ರಿಕೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೧೫

ಪಿಚ್ಚಳ್ಳಿ ಶ್ರೀನಿವಾಸ (ಸಂ), *ಲೋಕ ಜಾನಪದ*, ಕರ್ನಾಟಕ ಜಾನಪದ ಅಕಾಡೆಮಿ ತ್ರೈಮಾಸಿಕ, ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು–೨೦೧೪

ಯರ್ರಿಸ್ವಾಮಿ ಈ (ಸಂ), *ಅಚಲ–ಮಹಿಳಾ ಅಧ್ಯಯನ ತ್ರೈಮಾಸಿಕ ಪತ್ರಿಕೆ*, ಮಹಿಳಾ ಅಧ್ಯಯನ ಮಂಡಲ ಮೈಸೂರು, ಜೂಲೈ–ಸೆಪ್ಟೆಂಬರ್–೨೦೧೪

ವಿರಕ್ತಮಠ ಶಿವಾನಂದ ಎಸ್ (ಸಂ), *ಮಹಿಳಾ ಅಧ್ಯಯನ ಸಂಚಿಕೆ–೧ ಸಂ–೨*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ –೨೦೦೮

**ಅಪ್ರಕಟಿತ ಗ್ರಂಥಗಳು**

ಉಳ್ಳೇಶ್ವರಪ್ಪ ಎಂ, *ಸ್ವಾತಂತ್ರ್ಯ ನಂತರ ಹೊಸಪೇಟೆ ತಾಲೂಕಿನ ಸಾಂಘಿಕ ನೆಲೆಗಳು*, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

ಉಮೇಶ ಬಸಪ್ಪ ಕಾತರಕಿ, *ಬಿಸರಳ್ಳಿಯ ದೇವದಾಸಿ ಪದ್ಧತಿ: ಒಂದು ಅಧ್ಯಯನ*, ಎಂ.ಫಿಲ್ ಪ್ರೌಢ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ –೨೦೦೬.

ಕೃಷ್ಣವೇಣಿ ಆರ್, *ಹುಲಿಗೆಮ್ಮ ಜಾನಪದದಲ್ಲಿ ಮಹಿಳಾ ಪ್ರತಿನಿಧೀಕರಣ*, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೭.

ಕೊಟ್ರೇಶ ಎಂ, *ಉಚ್ಚಂಗಿದುರ್ಗ*, ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ – ೧೯೯೬

ಕೊತ್ಲಮ್ಮ, *ಬಳ್ಳಾರಿ ಜಿಲ್ಲೆಯ ಬುಡಕಟ್ಟು ದೇವದಾಸಿಯರ ಅಧ್ಯಯನ (ಕೂಡ್ಲಿಗಿ ಪಟ್ಟಣದ ಬೇಡಬುಡಕಟ್ಟು ದೇವದಾಸಿ ಸಮುದಾಯವನ್ನು ಅನುಲಕ್ಷಿಸಿ)*, ಪಿಎಚ್.ಡಿ. ಮಹಾಪ್ರಬಂಧ,ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೮

ಜ್ಯೋತಿ ಡಿ.ಬಿ., *ಡೊಂಬರಸಮುದಾಯದ ಮಹಿಳೆಯರ ಸಮಕಾಲೀನ ಅಧ್ಯಯನ*, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೮

ನಾರಾಯಣ ಗಿರಿಯಪ್ಪ, *ಕನಕಗಿರಿ ಸಂಕಥನ*, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ – ೨೦೦೯

ಪುತ್ತಿ ವಂಸತಕುಮಾರ, *ಬಸ್ರೂರಿನ ದೇವದಾಸಿ ಪದ್ಧತಿ*, (ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂಫಿಲ್ ಪ್ರೌಢಪ್ರಬಂಧ ೨೦೦೨), ಹಂಪಿ

ಪ್ರಸನ್ನಕುಮಾರ್, *ಬದಲಾವಣೆ ಹಾದಿಯಲ್ಲಿ ದೇವದಾಸಿಯರು: ಒಂದು ಸಮಾಜಶಾಸ್ತ್ರೀಯ ಅಧ್ಯಯನ (ಬೆಳಗಾವಿ ಜಿಲ್ಲೆಯನ್ನು ಅನುಲಕ್ಷಿಸಿ)*, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೧೪

ಯಲ್ಲಪ್ಪ ಭೀಮಪ್ಪ, *ರಾಯಚೂರು ಜಿಲ್ಲೆಯ ದೊಡ್ಡಿಗಳ ತೌಲನಿಕ ಅಧ್ಯಯನ*, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೬.

